# ಶಿವಾನುಭವ.

ಸಂಪುಟ ೨೫ ] ( ಮಾಸಪತ್ರಿಕೆ ) [ ಸಂಚಿಕೆ ೨



ಫೆಬ್ರುವಾರಿ ೧೯೫೧] ವಿಜಾಪೂರ [ ಮಾಘ ೧೮೭೨

ವಾ. ಚಂ. ೫-೧೨-೦

# ವಿಷಯಾನುಕ್ರಮಣಿಕೆ




**ಶಿವಾನುಭವ ಪತ್ರಿಕೆ, ವಿಜಾಪುರ.**

ಮಾಸಿಕ ೬೪ ಪುಟಗಳು.

**ವಾರ್ಷಿಕ ಚಂದಾ ೫-೧೨-೦**

# ಶಿವಾನುಭವ

| ವರ್ಷ ೨೫ | ಫೇಬ್ರುವಾರಿ ೧೯೫೧ | ಸಂಚಿಕೆ ೨ |
|---|---|---|

## ಮಕರ ಸಂಕ್ರಾಂತಿ ಅಥವಾ ಲಿಂಗಾಂಗ ಸಾಮರಸ್ಯ.

( ಲೇಖಕ: ಶ್ರೀ ಸಿ. ನಾ. ಮಹಾಂತಣ್ಣವರ, ಹುನ್ನೂರು )

ಪರಮ ಜೀವಿಯಾದ ಲಿಂಗಾಂಗಿಯು ಸತ್ಕಾಯಕದೊಳಿದ್ದು, ಸದ್ವಾಸನೆಯನಾಂತು, ಸದ್ಧರ್ಮಾಚಾರದ ನೆಲೆಕಲೆಗಳನರಿತು, ಚಿದಂಗ ಚಿಲ್ಲಿಂಗಗಳ ಸ್ಥಳ ಕುಳ ಸಂಧಾನದೊಳಿರುತ ಸದಯಾಂತಃಕರಣಿಯಾಗಿ, ಸಚ್ಛೀಲ, ವ್ರತ, ನೇಮನಿಷ್ಠೆಯೊಳು ನಿಂದು, ಅಂಗಗುಣಗಳನತಿಗಳೆದು, ಕೇವಲ ಲಿಂಗಾಂಗಿಗಳಲ್ಲಿಯೇ ಹೆಚ್ಚು ಸಂಬಂಧವನಿಟ್ಟು, ನಡೆನುಡಿಗಳ ಸಮರಸದೊಳು ಸುಳಿಯುತ್ತ, ಶಾಂತವೃತ್ತಿಯಿಂದಳೆದು, ಪೂರ್ವ ಪುರಾತನರ ಸನ್ಮಾರ್ಗ ಪದ್ಧತಿಯ ಪರಿಚಯಸ್ಥನಾಗಿ ಪರಿಶೋಭಿಸುತ್ತಿರುವದನ್ನು ನಾವೆಲ್ಲರು ಅಲ್ಲಲ್ಲಿ ನೋಡುತ್ತ ಬಂದಿರುವೆವು. ಲಿಂಗಾಂಗಿಯಾದ ಹಡಪಿಗನು ಲಿಂಗಾಂಗಿಗಳ ಕ್ಷೌರವನ್ನೂ, ಲಿಂಗಾಂಗಿಯಾದ ಮಡಿವಾಳನು ಲಿಂಗಾಂಗಿಗಳ ಮೈಲಿಗೆ ಬಟ್ಟೆಗಳ ಮಡಿಮಾಡುವದನ್ನೂ, ಲಿಂಗಾಂಗಿಯಾದ ಪೂವಡಿಗನು ಶಿವಪೂಜೆಗೂ ಇನ್ನಿತರ ಕಾರ್ಯ ಕಲಾಪಗಳಿಗೂ ಬೇಕಾದ, ಪುಷ್ಪ, ಹಾರ, ದಂಡೆ ಮೊದಲಾದವುಗಳನ್ನೀಯುವದನ್ನೂ, ಲಿಂಗಕ್ಕೆ ಬೇಕಾದ ಅಂಗವಸ್ತ್ರ ( ತಾಪ್ತಿಯ ವಸ್ತ್ರ ) ಗಳನ್ನು ಲಿಂಗಾಂಗಿಗಳೇ ನೆಯ್ದುವುಗಳನ್ನುಪಯೋಗಿಸುವದನ್ನೂ, ನೋಡುತ್ತಲಿದ್ದೆವು. ಇದರಂತೆ ಲಿಂ

ಗಾಂಗಿ ಶೀಲವಂತ ಪತ್ರಾರರು ಕಾಷ್ಠಿಯು ವಸ್ತ್ರದ ಉಪಯೋಗವು ರಹಿತವಾದಂತೆ ಲಿಂಗದ ಕಾಯಿ, ಚೌಕ, ಗುಂಡಗಡಿಗೆಗಳನ್ನು ಮಾಡಿ, ಮಾರುವದನ್ನೂ ನೋಡಿದ್ದಲ್ಲದೆ ಪ್ರತಿಯೊಬ್ಬ ಲಿಂಗಾಂಗಿಯು ಆದಷ್ಟು ಮಟ್ಟಿಗೆ ತನ್ನ ಶಿವಪ್ರಪಂಚವನ್ನು ಲಿಂಗಾಂಗಿಗಳ ಕೂಡ ಸಾಗಿಸಿ, " ತನ್ನ ಅಂಗವನ್ನು ಲಿಂಗದೊಳು ಸಂಬಂಧವಿಟ್ಟಂತೆ,, ಲಿಂಗಾಂಗಿ ಸಮಾಜದೊಡನೆ ಸಂಬಂಧವಿಡುವ ಪದ್ಧತಿಯು ಪುರಾತನರಿಂದ ಪ್ರಚಾರದಲ್ಲಿ ಬಂದಿರುವದೆಂಬುದು ಭಕ್ತಗಣವೃಂದಕ್ಕೆಲ್ಲ ಅನುಭವದ ಸಂಗತಿಯಾಗಿದೆ. ವಿಶ್ವಧರ್ಮವೆಂದೆನಿಸುವ ಜಾತಿ ಭೇದ ವಿರಹಿತವಾದ ವೀರಶೈವ ಮತದಲ್ಲಿ ವರ್ಣಾಶ್ರಮಗಳನತಿಗಳೆದ ಅತ್ಯಾಶ್ರಮಿಗಳಾದ ಹದಿನೆಂಟು ಜಾತಿಗಳು ನೂರೊಂದು ಕುಲಗಳು ಸಂಕಲನವಾಗಿ ಸದಯಾಂತಃಕರಣಗಳ ಕಟ್ಟೆನೊಳು ನಿಟ್ಟುಗೊಂಡು ಗಟ್ಟಿಯಾಗಿ ನೆಲೆಗೊಂಡು ನಿಂತ ಸಮಾಜವೆಂದು ಸಹಜವೇ ಗೋಚರವಾಗುವದು.

ಈ ಪುರಾತನರ ಪದ್ಧತಿಯು ಇತ್ತಿತ್ತಲಾಗಿ ಎತ್ತಲೋ ಮಾಯವಾದದ್ದು ಲಿಂಗಾಂಗ ಸಂಗಿಗಳಿಗೆ ಅಸಮಾಧಾನವಾದರೂ ಜಾಗ್ರತಾವಸ್ಥೆಯು ವಿಶ್ವರೂಪನಿಗೆ ಕಠಿಣವಾದರೂ ತೈಜಸ ಸ್ವರೂಪದೊಳಿದ್ದು ಸಾವಧಾನಿಯಾಗಿ ಬಹಿರಂಗ ದೃಷ್ಟಿಯೊಳು ತೋರಿಬರುವ ವಿಶ್ವದ ನಾಮರೂಪಕ್ರಿಯಾದಿಗಳಲ್ಲಿ ಅನಿಷ್ಟಗಳನ್ನು ಕಿತ್ತೊಗೆದು ಅಳಿದುಳಿದ ಈ ಜಗವೆಂಬ ಮಹಾಮಂದಿರದೊಳು ಹೊಕ್ಕು ಸಚೇತನಗಳಲ್ಲಿ ತೋರಿಬರುವ ಲಿಂಗದೇಹ ( ಸೂಕ್ಷ್ಮಾಂಗ ) ಗಳನ್ನು ನಿರೀಕ್ಷಿಸುತ್ತ " ಲಿಂಗಮಧ್ಯೇ ಜಗತ್ ಸರ್ವಂ " ಎಂದೆನಿಸುವ ಪರತತ್ವದೊಡನಾಟವಾಡಿ ಸಮರಸಾನಂದವನ್ನು ಹೊಂದುವದು ಇಂದಿನ ವಿಶ್ವಬಂಧುವೆನಿಸಿದ ಲಿಂಗಾಂಗಿಯ ಸತ್ಕ್ರಿಯೆಗಳ ಸಾಧನವಾಗಿದೆ. ಇದನ್ನರಿತ ಶ್ರೀ ದೇವರ ದಾಸಿಮಾರ್ಯರು " ಮೊಲೆಮುಡಿ ಬಂದರೆ ಹೆಣ್ಣೆಂಬರು. ಗಡ್ಡ ಮೀಸೆ ಬಂದರೆ ಗಂಡೆಂಬರು. ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥಾ, ಎಂದು ತಮ್ಮ ಅನುಭವವನ್ನು ಬಿಚ್ಚಿ ಭದ್ರವಾಗಿ ಪ್ರತಿಭಟಿಸಿರುವರು. ಹಾಗೂ " ಕರಣಮಥನವಿಲ್ಲದುದೇ ಅನುಭಾವ ಎಂಬ ಶ್ರೀ ಚನ್ನಬಸವೇಶ್ವರರ ಉಕ್ತಿಯಂತೆ ಶಿವಾನುಭವಿಯು ಅರ್ಥಾತ್ ಲಿಂಗಾಂಗ ಸಮರಸಿಯು ತನ್ನ ಎಲ್ಲ ಕರಣಾದಿಗಳನ್ನು ಹರಿಗೊಡದೆ ಕಲ್ಲಾವಿ ( ಕಲ್ಲು+ಆವಿ )

ಯಂತೆ ಆಹಾರಾರ್ಥನಾಗಿ ತನ್ನ ಎಲ್ಲ ಅವಯವಗಳನ್ನು ಹೊರಹೊಮ್ಮಿ ಸಿದಾಗ ಸ್ವಲ್ಪ ಸಪ್ಪಳವಾದರೆ ಚಲ್ಲನೆ ಅವಯವಗಳನ್ನು ಆಕುಂಚಿಸಿ ಆಕರ್ಷಿಸುವಂತೆ, ವಿಶ್ವದೊಳು ಈಸಾಡಿದರೂ ತನ್ನ ಮನವನ್ನು ಇಷ್ಟ ಪ್ರಾಣ ಭಾವಲಿಂಗಗಳಲ್ಲಿ ಅನುದಿನದೊಳು ಉಪಚರಿಸುತ್ತಿರುವರು. ಲಿಂಗಾಂಗ ಸಮರಸಿಗೆ ಹಳ್ಳಿ ಗ್ರಾಮ ಪಟ್ಟಣಗಳೆಲ್ಲ ಹಾಳಾದ ಹಳುವುಗಳೆಂದೇ ಭಾವನೆ. ಇದನ್ನರಿತ ಶರಣರು " ಅಡವಿಯಾರಣ್ಯದೊಳು ಮಡಿವನಕ ತಪವಿದ್ದು ಮಡಿವಾಗ ವ್ಯಾಡನ ಮರೆದೊಡೆ ತುಂಬಿದ ಸಕ್ಕರೆಯು ಮಡು ವಿನೊಳು ಹೊಕ್ಕಂತೆ ಕಾಣಾ ರಾಮನಾಥಾ,, ಎಂದೂ ಕರಣಾದಿಗಳು ಕೈಯಲ್ಲಿ ಉಳಿಯದೆ ಸಿಕ್ಕತ್ತ ಹರಿದ ಹೊತ್ತಿನಲ್ಲಿ " ತನು ತನ್ನ ದೆಸೆ ಯಲೇಸು ದಿನವಿದ್ದಡೇನು? ಮನ ತನ್ನ ಹರಿದತ್ತ ಹರಿದ ಬಳಿಕ? ಕೆನೆಯಿಲ್ಲದ ಮಸರು ಕಡಿದರೆ ಹನಿತುಪ್ಪವಿಲ್ಲ ನೋಡಾ ರಾಮನಾಥಾ,, ಎಂದೂ ಸಿಡಿಮಿಡಿಗೊಂಡಿದ್ದಾರೆ. ಮನವು ಓಡಿದಾಗ ಅದು ಎಲ್ಲಿ ಹೋಗುವದೋ ಅಲ್ಲಿ ಲಿಂಗವನ್ನು ನೆಲೆಗೊಳಿಸಿ ತನ್ನ ಅಂಗವನ್ನು ಸಮರ ಸಗೊಳಿಸುವ ಅನುವನ್ನು ಹುಡುಕಿ ರಾಮನಾಥನ ಕೃಪೆಗೆ ಪಾತ್ರವಾದ ಸಂಗತಿಯು ಅನುಕರಣೀಯವಾಗಿದೆ. " ಕುಲಸ್ವಾಮಿ ನೀ ನಿಂದ ಹೆಜ್ಜೆ ಯಲ್ಲದೆ ನಾನೊಂದು ಹೆಜ್ಜೆಯನಿಡೆನಯ್ಯಾ. ಎನಗೊಂದು ಹೆಜ್ಜೆ ಇಲ್ಲ. ನಿನ್ನ ಹೆಜ್ಜೆ ನನ್ನ ಹೆಜ್ಜೆ ಒಂದಾದ ಭೇದವ ಜಗದ ಅನ್ಯಾಯಿಗಳೆತ್ತ ಬಲ್ಲರೈ ರಾಮನಾಥಾ,, ಎಂದು ಅಂಗ ಲಿಂಗಗಳ ಕರುಣಾರಸ ಪೂರಿತ ಸಮರಸ ಜ್ಞಾನಾನಂದವನ್ನು ಸ್ಪಷ್ಟಗೊಳಿಸಿದ್ದಾರೆ.

ಸರ್ವಾಚಾರ ಸಂಪತ್ತಿನ ಆಚರಣೆಯು ಗೋಚರವಾದ ಮಹನೀಯರು ಬಹಿರ್ಮುಖಿಗಳಾದ ವೇಳೆಯೊಳು ಪೃಥ್ವ್ಯಂಗದ ಸುಗಂಧ ಪದಾರ್ಥಗಳನ್ನೂ ಅವುಗಳ ಉಪಾಂಗಗಳನ್ನೂ ಅರಿತು ಆಚಾರಲಿಂಗಕ್ಕೆ ಆಘ್ರಾಣಿಸಿ, ಅಪ್ಪ್ವಂಗದ ಷಡ್ರುಚಿ ( ಸುರುಚಿ ) ಯ ಪದಾರ್ಥಗಳನ್ನು ಗುರುಲಿಂಗಕ್ಕೆ ಆಸ್ವಾದಿಸಿ, ತೇಜಾಂಗದ ಆಕಾರ ವರ್ಣಗಳಿಂದೊಡಗೂಡಿದ ಸುರೂಪ ಪದಾರ್ಥಗಳನ್ನು ಶಿವಲಿಂಗಕ್ಕೆ ಆದರ್ಶಿಸಿ, ವಾಯ್ವಾಂಗದ ಸುಸ್ಪರ್ಶನ ಪದಾರ್ಥಗಳನ್ನು ಜಂಗಮ ಲಿಂಗಕ್ಕೆ ಆಲಿಂಗಿಸಿ ಆಕಾಶಾಂಗದ ಸುನಾದ ಪದಾರ್ಥಗಳನ್ನು ಪ್ರಸಾದ ಲಿಂಗಕ್ಕೆ ಆಮೋದಿಸಿ, ಆತ್ಮಾಂಗದ ಸರ್ವಾಂಗಗಳ ಸುತೃಪ್ತಿ ಪ್ರಸಾದವನ್ನು ಮಹಾಲಿಂಗದೊಳ

ಗಳವಡಿಸಿಕೊಂಡು, ಇಂತೀ ಸರ್ವಾಂಗ ಶುಪ್ರಸಾದಗಳ ಸಂಗ ಸಮರಸಗ ಳಿಂದ ಚಿದಾಂಗಗಳನ್ನಾಗಿಸಿ ಚಿಲ್ಲಿಂಗಗಳೊಡನೆ ಏಕರಸಗೈವ ಪ್ರಸಾದಿ ಪ್ರಾಣಲಿಂಗಿಗಳು ( ಅಂಗಲಿಂಗ ಸ್ಥಳಕುಳವರಿತು ) ಆಚರಿಸುವ ಪರಿಯು ಸ್ಥೂಲ ಸೂಕ್ಷ್ಮತರಂಗಳಾಗಿರುವವೆಂದು ಆಯಾ ಕ್ರಿಯಾಜ್ಞಾನ ತಾರತಮ್ಯ ಲಿಂಗಾಂಗಿಗಳಿಗೆ ಅವರವರ ಯೋಗ್ಯತೆಯಂತೆ ಲಿಂಗಾಂಗಾನುಭವವು, ಇರುವದಾಗಿ ಕಂಡುಬರುತ್ತದೆ. ಅಂಗಲಿಂಗಗಳ ಸಂಬಂಧವು ತಿಳಿಯದೆ ಲಿಂಗಾಂಗಗಳ ನೋಟ, ಮಾಟ, ಕೂಟ, ಪ್ರಾಣ, ಸಮರಸೈಕ್ಯಗಳು ಸಮನಿಸವು. ಶಿವಾರ್ಚನೆ ಶಿವಪೂಜೆ ಶಿವಭಕ್ತಿ ಶಿವಧ್ಯಾನ ಶಿವಜ್ಞಾನ ಶಿವಯೋಗಗಳು ಅಂತರ್ಮುಖಿಗಳ ಅನುಸಂಧಾನದಲ್ಲಿ, ನೋಟ ಮಾಟ ಕೂಟ ಸಮರತಿಗಳ ಅನುವು ದೊರೆತು, ಅಂಗಲಿಂಗಗಳ ಸಂಬಂಧವು ಹೆಚ್ಚುತ್ತ ಸಮರಸಾನುಭವದ ಸವಿಯು ತಲೆದೋರುತ್ತ ಹೋಗುವದು. ಇಂಥ ಅನುಭವದ ಸಮರಸಿಯು “ ಮನದ ಕಾಲು ಅತ್ತಲು ತನುವಿನ ಕಾಲು ಇತ್ತಲು, ಅನುಭಾವದ ಅನುವನು ನೆನೆವುತ್ತ ಗಮನಗೆಟ್ಟದೋ. ಲಿಂಗಮುಖದಲಾದ ಸೂಚನೆಯ ಸುಖ ಕಂಡು ಗಮನಗೆಟ್ಟದೋ. ಅನು ವಾಯಿತ್ತು ! ಅನುವಾಯಿತ್ತು !! ಅಲ್ಲಿಯೇ ತಲ್ಲೀಯವಾಯಿತ್ತು ಶ್ರೀ ಗುಹೇಶ್ವರನೆಂಬ ಮಹಲಿಂಗೈಕ್ಯಂಗೆ ಎಂದು ಏಕಕಂಠದಿಂದ ಹಾಡಿಕೊಂ ಡಿದ್ದಾನೆ.

ತನುತ್ರಯಂಗಳಲ್ಲಿ ಕ್ರಿಯಾ ಗುರು ಜ್ಞಾನ ಗುರು ಮಹಜ್ಞಾನ ಗುರು ಸಂಬಂಧವ ಮಾಡಿಕೊಂಡು, ಮನತ್ರಯಂಗಳಲ್ಲಿ ಕ್ರಿಯಾಲಿಂಗ ಜ್ಞಾನಲಿಂಗ ಮಹಾಲಿಂಗದ ಸಂಬಂಧ ಮಾಡಿಕೊಂಡು, ಭಾವತ್ರಯಂ ಗಳಲ್ಲಿ ಕ್ರಿಯಾಜಂಗಮ ಜ್ಞಾನಜಂಗಮ ಮಹಾಜ್ಞಾನ ಜಂಗಮದ ಸಂಬಂ ಧಮಾಡಿಕೊಂಡು, ಆತ್ಮತ್ರಯಂಗಳಲ್ಲಿ ಕ್ರಿಯಾ ಪಾದೋದಕ ಜ್ಞಾನ ಪಾದೋದಕ ಮಹಾಜ್ಞಾನ ಪಾದೋದಕವ ಸಂಬಂಧ ಮಾಡಿಕೊಂಡು, ಅವಸ್ಥಾತ್ರಯಂಗಳಲ್ಲಿ ಕ್ರಿಯಾಪ್ರಸಾದ ಜ್ಞಾನಪ್ರಸಾದ ಮಹಾಜ್ಞಾನಪ್ರ ಸಾದವ ಸಂಬಂಧ ಮಾಡಿಕೊಂಡು, ಕರಣತ್ರಯಂಗಳಲ್ಲಿ ಕ್ರಿಯಾಭಸಿತ, ಜ್ಞಾನಭಸಿತ, ಮಹಾಜ್ಞಾನಭಸಿತವ ಸಂಬಂಧ ಮಾಡಿಕೊಂಡು, ಜೀವ ತ್ರಯಂಗಳಲ್ಲಿ ಕ್ರಿಯಾರುದ್ರಾಕ್ಷಿ, ಜ್ಞಾನರುದ್ರಾಕ್ಷಿ, ಮಹಾಜ್ಞಾನರುದ್ರಾಕ್ಷಿ ಗಳ ಸಂಬಂಧವ ಮಾಡಿಕೊಂಡು, ಗುಣತ್ರಯಂಗಳಲ್ಲಿ ಕ್ರಿಯಾ ಮಂತ್ರ, ಜ್ಞಾನಮಂತ್ರ, ಮಹಾಜ್ಞಾನಮಂತ್ರಂಗಳ ಸಂಬಂಧವ ಮಾಡಿಕೊಂಡರು

ನೋಡಾ. ಅದೆಂತೆಂತೊಡೆ " ತ್ರಿತನುಂ ಗುರುಸಂಬಂಧಂ ತ್ರಿಮನಂ ಲಿಂಗ ಸಂಯುತಂ ! ತ್ರಿಭಾವಜಂಗಮಶ್ಚೈವ ತ್ರಿಯಾತ್ಮಾ ತೀರ್ಥರೂಪಕಂ ||೧|| ತ್ರಿಯಾವಸ್ಥೇ ಶೇಷರೂಪಂ ಕರಣಂ ಭೂತಿರೂಪಕಂ | ತ್ರಿಜೀವ ಅಕ್ಷ್ಯಮಾಲಿಕ್ಯಂ ತ್ರಿಗುಣಂ ಮಂತ್ರರೂಪಕಂ ॥ ೨ || ಆಗಮಾಚಾರ ಲಿಂಗಂಚ ಆತ್ಮಂಚ ಗುರುಲಿಂಗಕಂ | ತತ್ಪ್ರಾಣ ಶಿವಲಿಂಗಂಚ ಇಂದ್ರಿಯಂ ಚರಲಿಂಗಕಂ || ೩ || ವಿಷಯಂಚ ಪ್ರಸಾದಾಖ್ಯಂ ತೃಪ್ತಿಶ್ಚ ಮಹಾಲಿಂಗಕಂ । ಸರ್ವಾಂಗ ಷಡುಲಿಂಗಂಚ ಷಟ್‌ಸ್ಥಲ ಬ್ರಹ್ಮಉಚ್ಯತೆ ||೪|| ಶಿವಾಂಗ ಇಷ್ಟಲಿಂಗಂಚ ಮನಸ್ತತ್ಪ್ರಾಣಲಿಂಗಯೋಃ । ಆತ್ಮಾನಂ ಭಾವಲಿಂಗಶ್ಚ ತ್ರಿವಿಧಂ ಜ್ಯೋತಿರೂಪಕಂ ॥ ೫ ॥ ಇಂತೆಂದುದಾಗಿ ಕಾರಣ ಕಂಥೆಯ ಧರಿಸಿ ತ್ರಿವಿಧ ವಿಚಾರವಿಡಿದು ಆಚರಿಸುವಡೆ ಅನಾದಿ ಸದ್ಭಕ್ತ ಶಿವಶರಣಂಗಳು ನೋಡಾ ಸಂಗನಬಸವೇಶ್ವರಾ.

ವಿಶ್ವಕ್ಕೆ ಅಷ್ಟಾವರಣಗಳೇ ಅಂಗವಾದಂತೆ, ವೀರಶೈವ ಪರಮ ಭಕ್ತನಿಗೆ ಅಷ್ಟಾವರಣಗಳೇ ಅಂಗವಾಗಿರ್ಪುವು. ವಿಶ್ವರೂಪಿಯಾದ ಲಿಂಗದೇವನು ಆಯಾ ಅಂಗಗಳಿಗೆ ಸಮರಸಾನಂದಗೊಡಲು ಸಿದ್ಧನಾಗಿರುವನು. ಕಾರಣ ಅಂಗ ಲಿಂಗಗಳ ಸಂಬಂಧವನರಿಯುವದು ಎಷ್ಟು ಅವಶ್ಯವೆಂಬುವದು ವಾಚಕರಿಗೆ ಗೋಚರವಾಗಬಹುದು. ಶಿವಶಕ್ತಿಗಳ ವಿಲಾಸವೇ ವಿಶ್ವವು. ಅಗ್ನಿಯೊಳು ದಾಹಕತ್ವವೂ ಸೂರ್ಯನೊಳು ಪ್ರಕಾಶವೂ ಇದ್ದಂತೆ ಶಿವನಲ್ಲಿ ಶಕ್ತಿಯು ಅವಿನಾಭಾವದಿಂದ ಇರುವದು. ಶಕ್ತಿಮಯವೇ ವಿಶ್ವವು. ಶಕ್ತಿಯು ಪ್ರಸಾದವಿಲ್ಲದೆ ವಿಕಸಿಸುವದಿಲ್ಲ. ವೃಕ್ಷಗಳು ಬೇರುಗಳ ಮುಖದಿಂದ ಪ್ರಾಣಿಗಳು ಸ್ವಮುಖದಿಂದ ಅದೇ ಬಿತ್ತಿದ ಬೀಜಗಳು ದೇವರು ಅವುಗಳಲ್ಲಿ ಸ್ವಾಭಾವಿಕವಾಗಿಟ್ಟ ತಿಳಲುಗಳ ತುದಿಯಂಕುರದಿಂದ ಪ್ರಸಾದ ರೂಪಾದ ಆಹಾರವನ್ನು ಅರಗಿಸಿಕೊಂಡು ಸತೇಜವಾಗಿ ತಮ್ಮ ಜೀವನ ಕ್ರಮವನ್ನು ನಡೆಯಿಸುತ್ತವೆ. ಅಂಬಬಳಿಕ ವಿಶ್ವವು ಪ್ರಸಾದರೂಪಾಗಿರುತ್ತದೆಂಬದು ವಿಚಾರಿಗಳಿಗೆ ವಿದಿತವಾಗದೆ ಇರದು. ಅಂತೆಯೇ ಅವಸ್ಥಾ ತ್ರಯಂಗಳಲ್ಲಿ ಪ್ರಸಾದತ್ರಯಗಳನ್ನರಿಯುವದು ಎಷ್ಟು ಮಹತ್ವವಾದ ಮನನೀಯವಾದ ಅವಶ್ಯವಾದ ವಿಷಯವಾಗಿದೆ ಯೆಂಬುದು ಲಿಂಗಾಂಗಿಗಳಿಗೆ ಹೊಳೆಯದೆ ಇರದು. ರುಚಿಪ್ರಸಾದವನ್ನು ಗುರುಲಿಂಗಕ್ಕೆ ಅರ್ಪಿಸುವದನ್ನು ಬಿಟ್ಟು ಪ್ರಸಾದ ಲಿಂಗಾ

ರ್ಪಣ ಮಾಡಿದರೆ ಅರ್ಪಿತವಾಗಬಲ್ಲದೊ ? ಕಾರಣ ಲಿಂಗಾಂಗಿಯು ಅಷ್ಟಾವಧಾನಿಯಾಗಲೇಬೇಕಾಗುತ್ತದೆ. ವ್ಯವಹಾರದಲ್ಲಿ ಸಹ ಕ್ರಮ ತಪ್ಪಿದವನಿಗೆ "ತುತ್ತು ಕಿವಿಯಲ್ಲಿಟ್ಟಿದ್ದಿಯೋ ? ಎಂಬ ಉಕ್ತಿಯು ಉರಿಯು ಎದುರು ನಿಲ್ಲುವದು. ಆದ್ದರಿಂದ ಅಂಗ ಲಿಂಗ ಸ್ಥಳದ ಇಂಗಿತವನ್ನೂ ಅರ್ಪಿತಾವಧಾನಗಳನ್ನೂ ಅರಿಯುವದು ಅತಿ ಮಹತ್ವ ವಿಷಯವಾಗಿದೆ. ಪ್ರಸಾದಾನುಭಾವಿಗಳು ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ, ಭರಿತಾರ್ಪಣ, ಮಿಶ್ರಾರ್ಪಣಗಳನ್ನು ಪ್ರಸಾದಿ ಸ್ಥಲದಲ್ಲಿ ಸವಿಸ್ತಾರವಾಗಿ ಸುಗಮವಾಗಿ ವಿವರಿಸಿದ್ದಾರೆ. ಇದರಿಂದ "ಪ್ರಸಾದಂ ಪರಮಂ ಪದಂ" ಪ್ರಸಾದವೇ ಕಾಯ, ಪ್ರಸಾದವೇ ಪ್ರಾಣ, ಪ್ರಸಾದವೇ ಜ್ಞಾನ, ಪ್ರಸಾದವೇ ಪರಿಪೂರ್ಣರಾಗಿದ್ದ ಶ್ರೀ ಪ್ರಭುದೇವರು "ಅಮೃತ ಸಾಗರದೊಳಗಿದ್ದು ಆಕಳ ಚಿಂತೆಯೇಕೆ ? ಮೇರು ಮಂದಿರದೊಳಗಿದ್ದು ಜಲಗರದ ಚಿಂತೆ ಏಕೆ ? ಶ್ರೀ ಗುರುವಿನೊಳಗಿರ್ದು ತತ್ವ ಪದ್ಯದ ಚಿಂತೆಯೇಕೆ ? ಶ್ರೀಮತ್ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆ ಯೇಕೆ ಹೇಳಾ ಗುಹೇಶ್ವರಾ "ಎಂಬ ವಚನಾನುಭವವನ್ನು ಅನುವುಗೊಳಿಸಿದ್ದಾರೆ.

ಪ್ರಸಾದದೊಳು ಪರವಸ್ತು ನೆಲೆಗೊಂಡು ನಿಂತ ನಿಲವ ಅರಿತ ಪ್ರಸಾದಿಯು ಮೂಗಿನೊಳು ರಸನೆಯೊಳು ಕಣ್ಣಿನೊಳು ತ್ವಕ್ಕಿನೊಳು ಕಿವಿಯೊಳು ಸ್ವಾಭಾವಿಕವಾಗಿರುವ ಪಂಚ ಮಲಗಳನೋಕರಿಸುವಂತೆ ಆಯಾ ಇಂದ್ರಿಯಗಳ ದುರ್ಗುಣಗಳನ್ನು ದೂರೀಕರಿಸಿ, ಮಿತಾಹಾರಿಯಾಗಿ ಮಲಗಳು ತಲೆದೋರದೆ ನಿರ್ಮಲ ಮುಖಿಯಾಗಿ ಘ್ರಾಣವು ದುಷ್ಟ ವಾಸನೆಗಳ ನಷ್ಟಗೊಳಿಸಿ ಸದ್ವಸ್ತುಗಳೊಳು ಮಾತ್ರ ವಾಸನೆಯನಿಟ್ಟು ರಸನೆಯು ಷಡ್ರಸ ಪೂರಿತ ಪಾನ್ಯ ಪ್ರಸಾದವನ್ನು ತಾನು ಗ್ರಹಿಸುತ್ತ ಇತರ ಮಿಶ್ರಾರ್ಪಣದ ಪ್ರಸಾದಗಳನ್ನು ಆಯಾ ಅಂಗಗಳಿಂದ ಆಯಾ ಲಿಂಗಗಳಿಗರ್ಪಿಸುತ್ತ, ಹಾಗು ಯಾವಾಗಲೂ ದುಷ್ಟ ಶಬ್ದಗಳನ್ನು ನುಡಿಯದೆ ಸನ್ನೀತಿಯ ಸನ್ಮಂತ್ರ ಪೂರಿತವಾದ ವರ್ಣಾರ್ಥ, ಪದಾರ್ಥ ಮಂತ್ರಾರ್ಥಗಳನ್ನನುಸರಿಸುತ್ತ, ನಯನವು ಅನಿಷ್ಟವಾದವುಗಳನ್ನು ಆಕರ್ಷಿಸದೆ, ಇಷ್ಟವಾದವುಗಳನ್ನು ಕರುಣಾದೃಷ್ಟಿಯಿಂದ ನೋಡುತ್ತ, ಸ್ಪರ್ಶೇಂದ್ರಿಯವು ಗುರುಲಿಂಗ ಜಂಗಮೋಪಚಾರದ ಪದಾರ್ಥಗಳನ್ನೂ ಸತ್ಕಾರ್ಯಕದ ಸಾಧನೋಪಸಾಧನಗಳನ್ನೂ ಮಾತ್ರ ಮುಟ್ಟುತ್ತ, ಕರ್ಣವು ದುಶ್ಶಬ್ದ

ಗಳನ್ನು ದೂರೀಕರಿಸಿ ಅಕ್ಷರಗಳನ್ನೆಲ್ಲ ಮಂತ್ರಾಕ್ಷರಗಳೆಂದು ಭಾವಿಸಿ ಕೇಳಿದವುಗಳಲ್ಲಿ ಶಾಂತತೆಯಿಂದ ಅಪಶಬ್ದಗಳನ್ನು ಆದರಿಸದೆ ಸುಶಬ್ದ ಗಳನ್ನು ಕೇಳುತ್ತ, ಈ ಪಂಚೇಂದ್ರಿಯಗಳಿಂದ ಬರಮಾಡಿಕೊಂಡ ವಿಷಯ ಗಳನ್ನು ಪಂಚ ಪ್ರಸಾದಗಳನ್ನಾಗಿ ಮಾಡಿಕೊಂಡು ಸುಸಂಸ್ಕೃತಿಯ ಆಯಾ ಚಿದಂಗಗಳಿಂದ ಚಿಲ್ಲಿಂಗಗಳಿಗರ್ಪಿಸಿ ಉಂಟಾದ ತೃಪ್ತಿ ಪ್ರಸಾದ ವನ್ನು ಜ್ಞಾನಾತ್ಮನಿಂದ ಮಹಾಲಿಂಗ ತೃಪ್ತಿಗೆಯ್ದು ಸುಖಿಸುವ ಸುಗ್ಗಿಯೇ ಪ್ರಸಾದಿಯ ಜೀವನವಾದ ಪ್ರಾಣಲಿಂಗಿಯ ಅಂಗ ಲಿಂಗಸ್ಥಳಾನುಭವ ವೆನಿಸುವದು. ಇದನ್ನರಿತ ಶರಣನು " ಅಂಗಕ್ಕೆ ಕುರುಹು ಎಂಬು ದೊಂದು ಲಿಂಗ, ಆತ್ಮಕ್ಕೆ ಅರುಹು ಎಂಬುದೊಂದು ಲಿಂಗ, ಪರುಷ ಲೋಹದಂತೆ ಕೂಡುವನ್ನಬರ ( ಕೂಡುವತನಕ ) ಉಭಯ ನಾಮ ರೂಪಾಯಿತ್ತು. ಕೂಡಿದ ಮೇಲೆ ಪರುಷವೆಂಬ ನಾಮವಿಲ್ಲ. ಲೋಹ ವೆಂಬ ಕುರುಹಿಲ್ಲ. ಹೇಮವೆಂಬ ನಾಮವಾಯಿತ್ತು. ಇಷ್ಟ ( ಅಂಗ ) ಪ್ರಾಣ ( ಲಿಂಗ ) ಹಾಗಾದಲ್ಲಿ ಮನ ಸಂದಿತ್ತು ಮಾರೇಶ್ವರಾ "

ಏಕಮೇವಾದ್ವಿತೀಯ ಬ್ರಹ್ಮವೆನಿಸುವ ಒಂದೇ ಪರತತ್ವದಲ್ಲಿ ಅಂಗ ತತ್ವ, ಲಿಂಗ ತತ್ವಗಳೆಂದು ದ್ವಿವಿಧವು. ಅಂಗ ತತ್ವದಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗಗಳೆಂದೂ, ಲಿಂಗ ತತ್ವಗಳಲ್ಲಿ ಇಷ್ಟಪ್ರಾಣ ಭಾವಲಿಂಗಗಳೆಂದೂ ತ್ಯಾಗಾಂಗದಲ್ಲಿ ಭಕ್ತ ಮಹೇಶ, ಭೋಗಾಂಗದಲ್ಲಿ ಪ್ರಸಾದಿ, ಪ್ರಾಣಲಿಂಗಿ, ಯೋಗಾಂಗದಲ್ಲಿ ಶರಣ ಐಕ್ಯರೆಂದೂ, ಇಷ್ಟ ದಲ್ಲಿ ಆಚಾರ-ಗುರುಲಿಂಗ, ಪ್ರಾಣದಲ್ಲಿ ಶಿವಲಿಂಗ - ಜಂಗಮಲಿಂಗ, ಭಾವದಲ್ಲಿ ಪ್ರಸಾದ, - ಮಹಾಲಿಂಗಗಳಾಗಿ ಈ ಒಬ್ಬೊಬ್ಬರಲ್ಲಿ ಮೂರು ಮೂರು ಭೇದಗಳಾಗಿ ಅಂಗಸ್ಥಳ ಹದಿನೆಂಟರಲ್ಲಿ ಲಿಂಗಸ್ಥಳ ಹದಿನೆಂಟನ್ನು ಒಂದುಗೂಡಿಸಿ ಒಂದಾಗಿರುವದೇ ಸಮರಸವು.

ಒಂದು ರಸಭರಿತವಾದ ಕಬ್ಬಿನ ಗಳವನ್ನು ಬುಡಿಯಿಂದ ಕಿತ್ತು ತಂದು ಜೋಡು ಗಣಿಗಳನ್ನಾಗಿ ಕತ್ತರಿಸಲು ಆ ಗಣಿಕೆಗಳಲ್ಲಿ ತೀರ ಬೊಡ್ಡೆ ತೀರ ತುದಿ ಗಣಿಕೆಗಳನ್ನು ಬಿಟ್ಟು ಉಳಿದವುಗಳಲ್ಲಿ ಜೋಡು ಗಣಿಕೆಯುಳ್ಳ ಖಂಡಿನೊಳು ತೊನಸೆಯ ಆಕಾರದ ಗಣ್ಣು ಇರುವದಷ್ಟೇ. ಅದವೇ ಬೀಜ ಶಕ್ತಿಯು. ಅಂಗ ಲಿಂಗವೆನಿಸುವ ಅಥವಾ ಶಿವಶಕ್ತಿ

ಯೆನಿಸುವ ಆ ಜೋಡು ಗಣಿಕೆಗಳನ್ನು ಪರ್ಯಾಲೋಚಿಸಿದರೆ ಗಣಿಕೆಗಳೆರಡಾದರೂ ರಸ ಒಂದೇ. ಆ ಎರಡೊಂದಾದ ತುಂಡನ್ನು ತೋಟಿಗನು ಸಕಾಲದಲ್ಲಿ ಸರಿಯಾದ ಮಡಿಯಲ್ಲಿ ಭಕ್ತಿರಸವೆಂಬ ನೀರನ್ನುಣಿಸಿ ನಿಡುಗಣ್ಣ ( ತೊನಸೆಯಾಕಾರದ ಕಣ್ಣ ) ನ್ನು ಮೇಲುಮಾಡಿ ನಿಡುಗಾಲಿನಿಂದ ತುಳಿದು ಆಗಾಗ್ಗೆ ನೀರೆರೆಯುತ್ತ ಹೋಗಲು ಕೆಲದಿನಗಳಲ್ಲಿ ನಿಡುಗಣ್ಣಿಂದ ಮೊಳಕೆಯೊಡೆದು, ಒಂದು ಸಸಿಯಾಗಿ ಮೆರತೊಂದು ಬೇರಾಗಿ ನೆಲಿಸಿ ಆ ಮೊಳಕೆ ಹೊಳಿಕೆಗಳು ದಿನದಿಸಕೆ ಸತೇಜವಾಗುತ್ತ ಜೋಳದ ದಂಟಿನಂತೆ ಬೆಳೆಯುತ್ತ ವರ್ಷಾವಧಿಯಲ್ಲಿ ರಸದುಂಬಿ ಕಬ್ಬಿನಿಂದ ಹುಟ್ಟಿದ್ದು ಕಬ್ಬಾಗಿ ನಿಲ್ಲುತ್ತದಲ್ಲ ! ಅದರ ಪೃಥ್ವ್ಯಂಗವಾದ ಸಿಬಿರನ್ನು ತೆಗೆದರೆ ಅಪ್ಪವೇ ಅಂಗವಾದ ಮಾಧುರ್ಯವುಳ್ಳ ರಸವು ಹಲ್ಲಿದ್ದವನಲ್ಲಿ ಅಥವಾ ಕಬ್ಬಿನ ಗಾಣದಲ್ಲಿ ಹೊರಹೊಮ್ಮಿ ಅದರ ಕಂಪು ಇಂಪುಗಳು ಆಚಾರಲಿಂಗಕ್ಕೂ ಗುರುಲಿಂಗಕ್ಕೂ ಅರ್ಪಿಸಲು ಅನುವಾಗುವವು. ಕಬ್ಬಿನ ಗಾಣದ ಬಹಳಷ್ಟು ರಸವನ್ನು ಕಬ್ಬಿಣದ ಖಡಾವಿಗೆಯಲ್ಲಿ ಕಾಸಿ ಬೆಲ್ಲಾಗುವ ಮೊದಲೇ ತೆಗೆದರೆ ತೇಜಾಂಗವಾದ ಕಾಕವಿಯಾಗುವದು. ಅದು ಶಿವಲಿಂಗಾರ್ಪಣಕ್ಕೆ ಯೋಗ್ಯ. ಮುಂದೆ ಹದಕ್ಕೆ ಸರಿಯಾಗಿ ಕಾಸಿ ಬೆಲ್ಲದ ಪೆಂಟಿಯಾಕಾರದ ಪಾತ್ರೆಯಲ್ಲಿ ಕಾವ ರಸವನ್ನು ಸುರುವಿದರೆ ಗಾಳಿಯಿಂದ ತಂಪಾದಂತೆ ರಸವು ಗಟ್ಟಿಗೊಳ್ಳಲು ತಕ್ಕದ್ದಾಗುವದು. ಆ ತಂಪು ರಸವು ಬೆಲ್ಲದ ಅಣಾಗಿ ಜೇನುತುಪ್ಪದಂತಿದ್ದು ವಾಯ್ವಂಗವಾಗಿ ಜಂಗಮ ಲಿಂಗಾರ್ಪಣಕ್ಕೆ ಯೋಗ್ಯ. ಆ ಬೆಲ್ಲದ ಅಣವೇ ಗಟ್ಟಿಗೊಂಡು ಬೆಲ್ಲದ ಪೆಂಟಿಯಾಗಿ ಬಾರಿಸಿದರೆ ನಾದಾಂಶವು ಆಕಾಶಾಂಗವಾಗಿ ಪ್ರಸಾದ ಲಿಂಗಾರ್ಪಣಕ್ಕೆ ಯೋಗ್ಯವಾಗುವದು. ಆ ಬೆಲ್ಲದ ಪೆಂಟಿಯನ್ನು ಎತ್ತ ಕಡಿದರೂ ಸವಿಯೇ ಆಗಿ ಅಖಂಡವಾದ ಅದ್ವಿತೀಯವಾದ ಪಂತತ್ವವಾದ ನಿಜಲಿಂಗವನ್ನು ಅನುಕರಿಸುವದು. ಈ ಕಬ್ಬಿನ ಆಗು ಹೋಗುಗಳಂತೆ ಷಡಂಗಗಳಲ್ಲಿ ಅಡಗಿದ ಅನುಭವವು ವ್ಯಕ್ತವಾಗುತ್ತದೆ. ಇಂಥ ಅನುಭವ ಜನ್ಯವಾದ ಮಂತ್ರಗೋಪ್ಯವು “ ಅಷ್ಟಕುಳಗಳ ಮೆಟ್ಟಿ ಸುಟ್ಟು ಶುದ್ಧಯಿಸಲಾ । ಬಟ್ಟ ಬಯಲಿನ ಗಟ್ಟಿ ದೃಷ್ಟವಾಗಿ ॥ ನೆಟ್ಟನೆಯಾ ದೃಷ್ಟಿ ತನ್ನಿಷ್ಟವೆಂದಗ್ರಜನ । ಷಷ್ಠದಳ ಪೀಠಗಳ ಮೆಟ್ಟಿ ನಿಂದೆ ॥ ಎಂಬದಾಗಿ ಶ್ರೀ ಪ್ರಭುದೇವರಿಂದ ಪ್ರಸಿದ್ಧವಾಗಿದೆ.

ಪರತತ್ತ್ವವು ಎಳ್ಳು ಮನೆ ಮುಳ್ಳುಕೊನೆಯಲ್ಲಿ " ಅಣೋರಣೀಯಾನ್". ಎಂಬ ಶ್ರುತಿಯಂತೆ ಅಡಗಿ ಅಡಗದಂತಿರ್ದುದಲ್ಲವೇ ? ಸದ್ಯಕ್ಕೆ ನಾವೆಲ್ಲರು ನಡೆಯುವ ವರ್ಷದ ಆರು ತಿಂಗಳ ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಬಂದೆವಲ್ಲವೇ ? ದಕ್ಷಿಣಾಯನದ ಆರು ತಿಂಗಳಲ್ಲಿ ನವ ಧಾನ್ಯಗಳನ್ನು ಬಿತ್ತಿ ಬೆಳೆದು ಮುಂಗಾರಿಯ ಸುಗ್ಗಿ ಮಾಡಿ ಲಿಂಗಕ್ಕೆ ಅಂಗವಾದ ಪ್ರಸಾದ ರೂಪಾದ ಧನ ಧಾನ್ಯಗಳನ್ನು ನಾವೆಲ್ಲರು ಪಡೆದಿರುವೆವಲ್ಲವೇ ? ಈ ಎಲ್ಲ ಧಾನ್ಯಂಗಳೊಳು ಶಕ್ತಿರೂಪಾದ ಎಳ್ಳು ತನ್ನ ಪ್ರಕಾಶಶಕ್ತಿ ( ಚಿಚ್ಛಕ್ತಿ ) ಯಿಂದ ಜ್ಯೋತಿಯನ್ನೂ, ಪರಾ ಶಕ್ತಿಯಿಂದ ನಾದವನ್ನೂ, ಆದಿ ಶಕ್ತಿಯಿಂದ ಸ್ನಿಗ್ಧತೆ ( ಸ್ನೇಹ ) ಯನ್ನೂ, ಇಚ್ಛಾ ಶಕ್ತಿಯಿಂದ ವರ್ಣ ಆಕಾರಗಳನ್ನೂ, ಜ್ಞಾನ ಶಕ್ತಿಯಿಂದ ರಸರೂಪವನ್ನೂ ಕ್ರಿಯಾ ಶಕ್ತಿಯಿಂದ ದೃಢತ್ವವನ್ನೂ ಕೊಡುವದರಿಂದ ಮಾನವನು ಕಳೆದ ಆರು ತಿಂಗಳಲ್ಲಿ ಜೀವ ಭಾವದ ಕಡೆಗೆ ಹೊರಳಿ ಜೀವನೋಪಾಯದ ಕಾಳುಕಡಿಗಳನ್ನು ಸಂಗ್ರಹಿಸಿ, ಇನ್ನು ಉತ್ತರ ಮುಖಿಯಾದ ಉತ್ತರಾಯಣದ ಆರು ತಿಂಗಳಲ್ಲಿ ಪಾರಮಾರ್ಥ ಪ್ರಪಂಚಿಯಾಗಿ ಎಳ್ಳಾವಾಸ್ಯೆಯಲ್ಲಿ ಶಕ್ತಿರೂಪಾದ ಅಂಗವನ್ನು ಶಿವರೂಪಾದ ಲಿಂಗದಲ್ಲಿ ಸಂಗೊಳಿಸುವಂತೆ ಎಳ್ಳು ಬೆಲ್ಲ ಕೂಡಿಸಿ ಪಿಷ್ಟ ( ದೇಹ ) ರೂಪಾದ ಗೋದಿ ಕಣಕಿನ ಕಂಚಿಕಾಯಿ ಮಾಡುವ ಭೂಮಿ ತಾಯಿಗೆ ನೀಡುವ ಪದ್ಧತಿಯು ಪ್ರಪಂಚದಲ್ಲಿ ಉಂಟಾಗಿದೆ. ಹಾಗು ಎಳ್ಳು ಕರಚಿಕಾಯಿಯು ಒಳಗೂ ಕರಿಯುವದರಿಂದ ಹೊರಗೂ ಪ್ರಕಾಶಿಸುತ್ತ ಲಿಂಗಾಂಗಗೆ ( ಪ್ರಸಾದಿಗೆ ) ರಚನೆಯೊಳು ಗುರುಲಿಂಗಾನು ಸಂಧಾನದಿಂದ ಲಿಂಗಾಂಗ ಸಾಮರಸ್ಯದ ಪರಿಯನು ಪರಿಭಾವಿಪುದು. ಈ ಅಂಗಲಿಂಗಗಳ ಸಂಗ ಸುಖದ ಸ್ವರೂಪವನು ಸುಜ್ಞಾನಿಗಳು ಸುಗಮವಾಗಿ ವರ್ಣಿಸಿದ್ದಾರೆ. " ಜ್ಯೋತಿ ಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪವಯ್ಯಾ. ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯಾ. ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯಾ. ಲಿಂಗವ ಮುಟ್ಟಿದ ಅಂಗವೆಲ್ಲ ಲಿಂಗವಪ್ಪವಯ್ಯಾ. ಸಕಳೇಶ್ವರ ದೇವ ? ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯಾ. ॥ಮತ್ತಂ॥
" ದೇಹವೆಂಬ ಅರಮನೆಯಲ್ಲಿ ಮಹಾಲಿಂಗವೆಂಬ ಅರಸು ಮನವೆಂಬ ಸಿಂಹಾಸನದ ಮೇಲೆ ಮೂರ್ತಿಗೊಂಡು ಅಂತಃಕರಣಗಳೆಂಬ ಪರಿಚಾರಕರ ಕೈಯಿಂದ ಪಂಚೇಂದ್ರಿಯಗಳೆಂಬ ಪರಿವಾಣದಿಂದ ಶಬ್ದ ಸ್ಪರ್ಶರೂಪ

ರಸಗಂಧಗಳೆಂಬ ಪದಾರ್ಥಗಳನ್ನು ಎಡೆಮಾಡಿಸಿಕೊಂತು ಸವಿಯುತ, ಆನಂದವೇ ಮೂರ್ತಿಯಾಗಿದ್ದ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನು,,

ಕೇವಲ ಪ್ರವೃತ್ತಿಮಾರ್ಗದ ಜೀವಭಾವಿಯರ ಅಷ್ಟಮದ, ಸಪ್ತ ವ್ಯಸನ, ಅಸತ್ಯ, ದುರ್ಭಾವ, ಕುಚಿತ್ತ, ಕುಬುದ್ಧಿ, ಕುಮನ, ದುರಹಂ ಕಾರ, ಅಜ್ಞಾನ ಅರಿಷಡ್ವರ್ಗಂಗಳೊಳು ಸುಳಿದು ಸಂಸಾರ ಪಾಶದಲ್ಲಿ ಜನ್ಮಜರೆ ಮರಣಗಳಿಗೊಳಗಾಗಿರುವುದೇ ಅಧೋಕುಂಡಲಿಯು.

ಸದ್ಭಕ್ತಿ, ಸಚ್ಚಿದಾನಂದ, ಸನ್ಮಾರ್ಗಾಚಾರ, ಸುಸತ್ಯ, ದಯಾಂತಃ ಕರಣ, ಸುಚಿತ್ತ, ಸುಬುದ್ಧಿ, ಸುಮನ, ನಿರಹಂಕಾರ, ಸುಜ್ಞಾನ, ಸದ್ಭಾವ, ನಿತ್ಯನಿಜದಲ್ಲಿ ನಿಲವು, ನಿರಾಶೆ, ನಿಃಕಾಮ್ಯ, ನಿಃಸಂಸಾರಿಯಾದ ಸಜ್ಜೀವವೇ ಊರ್ಧ್ವ ಕುಂಡಲಿ.

ಸರ್ವಾಚಾರ ಸಂಪತ್ತಿನಾಚರಣೆಯೇ ಪ್ರಾಣವಾಗಿ, ಚತುರ್ದಶ ಪ್ರಣವುಗಳೇ ತತ್ಸಂಗವಾಗಿ ಭಕ್ತಿ-ಜ್ಞಾನ-ವೈರಾಗ್ಯ-ಷಟ್‌ಸ್ಥಲವೇ ವಸ್ತ್ರಾ ಭರಣವಾಗಿ ಹರಗುರು ವಾಕ್ಯವೇ ನಡೆನುಡಿಯಾಗಿ, ಪಂಚಾಚಾರಗಳೇ ವಾಹನವಾಗಿ, ಕರುಣ, ವಿನಯ, ಸಮತೆ, ಪ್ರಸಾದ ತ್ರಯಂಗಳೇ ಪಿತಮಾತೆಯರಾಗಿ ಚತುರ್ವರ್ಣ ಮೊದಲಾಗಿ ಐವತ್ತೆರಡು ವರ್ಣಗಳೇ ಬಂಧು ಬಳಗಾಗಿ, ಷಡಕ್ಷರಮಂತ್ರ ಮೊದಲಾಗಿ ನೂರೆಂಟುಮಂತ್ರಮಾಲಿ ಕೆಯೇ ಒಡಹುಟ್ಟಿದವರಾಗಿ, ಷೋಡಶ ಭಕ್ತಿಗಳೇ ಅರ್ಧಾಂಗಿಯರಾಗಿಪ್ಪ ರಯ್ಯ, ಸಕೀಲಂಗಳೇ ಮಂದಿರವಾಗಿ, ನಿಃಪ್ರಪಂಚವೇ ಧನಧಾನ್ಯವಾಗಿ ಪ್ಪರ್ದಯ್ಯ. ಇಂತು ನಿಃಕಳಂಕ ಪರಮಾನಂದವೆಂಬ ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪದಿಂದ ಕನ್ನಡಿಯ ಪ್ರತಿಬಿಂಬದಂತೆ, ಇಹಪರಗಳೆಂಬ ಅಧೋಕುಂಡಲಿ ಉರ್ಧ್ವಕುಂಡಲಿ ಯೆಂಬುಭಯ ಮಧ್ಯದಲಿ ನೆಲಸಿರ್ಪ ಪರತತ್ವವೇ ಶಿವಭಕ್ತನೆಂಬ ಮಧ್ಯ ಕುಂಡಲಿ ನಾಮವುಳ್ಳ ಮಹಾಶೇಷ ನೋಡಾ ಸಂಗನಬಸವೇಶ್ವರಾ.

ಮಧ್ಯಕುಂಡಲಿಯನಾಶ್ರಯಿಸಿದ ಭಕ್ತನು ನವಧಾನ್ಯ ನವರಸಂಗ ಳೊಳು ಅನುದಿನದೊಳು ವಿಶ್ವಕ್ಕೆಲ್ಲ ಉಪಯುಕ್ತವಾದ ಹುಳಿ-ಬೆಲ್ಲ, ಖಾರ-ಉಪ್ಪು ಎಳ್ಳೆಣ್ಣೆಗಳಾದ ಪಂಚಪದಾರ್ಥಗಳಲ್ಲಿ ಶಿವಶಕ್ತಿರೂಪಾದ ಎಳ್ಳು ಬೆಲ್ಲವನೆ ಮಕರ ಸಂಕ್ರಾಂತಿಯೊಳು ಸುರುಚಿ, ಸುರೂಪು ಸುಸ್ನೇಹ

ಸೌಹಾರ್ದವಾದವುಗಳೆಂದು ಭಾವಿಸಿ, ಶಿವಭಾವಿಗಳೊಳಷ್ಟೇ ಅಲ್ಲದೆ ವಿಶ್ವಾತ್ಮಕರಲ್ಲೆಲ್ಲ ಸದಯಾಂತಃಕರಣ ಸಮರಸಗಳು ಕಾಯಾ ವಾಚಾ ಮನಸಾ ನೆಲೆಗೊಂಡು ನಿಲ್ಲವೆಂದು ತಲೆವಾಗಿ ಸಂಕ್ರಮಣದೊಳು ಸ್ನಾನಪಾನಾದಿ ಭಕ್ಷ್ಯ ಭೋಜ್ಯಗಳಲ್ಲಿ ಎಲ್ಲರೂ "ಎಳ್ಳು ಬೆಲ್ಲಾಗಿರೋಣ" ಎಂಬಕರುಣಾರಸಪೂರಿತ ಸಂತೋಷೋದ್ರೇಕರ ಸನಾತನ ಸದ್ಧತಿಯೇ ಲಿಂಗಾಂಗ ಸಾಮರಸ್ಯವೆಂದು ಏಕೆ ಅನ್ನಬಾರದು?

ಇರಲಿ, ಒಬ್ಬಾನೊಬ್ಬ ಸಚ್ಛಿಷ್ಯನು ತನ್ನ ಸದ್ಗುರುವಿನೊಳು ಲಿಂಗಾಂಗ ಸಮರಸದ ವಿವರವನ್ನು ಕೃಪೆಯಿಟ್ಟು ಕರುಣಿಸಬೇಕೆನ್ನಯು ಗುರುವು ವಿವರಿಸಿದ ವಚನ:— ಮುಖಪ್ರಕ್ಷಾಲನವ ಮಾಡುವಾಗ ಲಿಂಗಕ್ಕೆ ಮಜ್ಜನವ ನೀಡಿದ್ದು ಇಷ್ಟಲಿಂಗದ ಮಜ್ಜನ। ಮತ್ತೆ ಲಿಂಗಾರ್ಚನೆ ಮಾಡುವಾಗ ಕ್ರಿಯೆವಿಟ್ಟು ಮಜ್ಜನವ ನೀಡುವದು ಪ್ರಾಣಲಿಂಗದ ಮಜ್ಜನ। ಲಿಂಗಾರ್ಚನೆ ಮುಗಿದ ಬಳಿಕ ನೀಡಿದ್ದು ಭಾವಲಿಂಗದ ಮಜ್ಜನವೆಂದರಿವುದು। ಇನ್ನು ವಿಭೂತಿ ಧರಿಸುವ ಕ್ರಮ। ಸ್ನಾನ ಧೂಳನ ಧಾರಣ। ವಿಭೂತಿ ಸ್ನಾನ ಮಾಡಿದ್ದು ಇಷ್ಟಲಿಂಗಕ್ಕೆ। ಧೂಳನ ಮಾಡಿದ್ದು ಪ್ರಾಣಲಿಂಗಕ್ಕೆ ಧಾರಣ ಮಾಡಿದ್ದು ಭಾವಲಿಂಗಕ್ಕೆಂದರಿವುದು। ಹೊರಗಣ ಪುಷ್ಪದ ಪೂಜೆ ಇಷ್ಟಲಿಂಗಕ್ಕೆ। ಒಳಗಣ ಕಮಲದ ಪುಷ್ಪ ಪ್ರಾಣಲಿಂಗಕ್ಕೆ। ಬಯಲ ಪುಷ್ಪ ಭಾವಲಿಂಗಕ್ಕೆ। ಎಂದರಿವುದು। ಇನ್ನು ಜಪದ ಕ್ರಮ। ಹನ್ನೆರಡು ಪ್ರಣವ ಮೊದಲಾದ ಪಂಚಸ್ಥಲವಿಡಿದ ಜಪ ಇಷ್ಟಲಿಂಗಕ್ಕೆ। ಒಳಗಣ ಜಪ ಇಪ್ಪತ್ತೊಂದು। ಸಾವಿರದಾ ಆರುನೂರು ಪ್ರಾಣಲಿಂಗಕ್ಕೆ। ಬಯಲ ಜಪ ಭಾವಲಿಂಗಕ್ಕೆಂದರಿವುದು। ಇನ್ನು ತ್ರಿಕಾಲದ ಪೂಜೆ। ಉದಯದ ಪೂಜೆ ಇಷ್ಟಲಿಂಗಕ್ಕೆ। ಮಧ್ಯಾಹ್ನದ ಪೂಜೆ ಪ್ರಾಣಲಿಂಗಕ್ಕೆ। ಸಾಯಂಕಾಲದ ಪೂಜೆ ಭಾವಲಿಂಗಕ್ಕೆಂದರಿವುದು। ಇನ್ನು ಪ್ರಸಾದ। ಶುದ್ಧ ಪ್ರಸಾದ ಇಷ್ಟಲಿಂಗಕ್ಕೆ। ಸಿದ್ಧ ಪ್ರಸಾದ ಪ್ರಾಣಲಿಂಗಕ್ಕೆ। ಪ್ರಸಿದ್ಧ ಪ್ರಸಾದ ಭಾವಲಿಂಗಕ್ಕೆಂದರಿವುದು। ಇನ್ನು ಉಂಬ ಊಟ ಇಷ್ಟಲಿಂಗಕ್ಕೆ। ತನ್ನ ಸ್ತ್ರೀಸಂಭೋಗದ ಸುಖ ಪ್ರಾಣಲಿಂಗಕ್ಕೆ। ವಸ್ತ್ರಾಭರಣ ಭಾವಲಿಂಗಕ್ಕೆಂದರಿವುದು। ಮತ್ತಂ। ನಿಂದಿರ್ದುದು ಇಷ್ಟಲಿಂಗ। ಕುಳ್ಳಿರ್ದುದು ಪ್ರಾಣಲಿಂಗ। ಮಲಗಿರ್ದುದು ಭಾವಲಿಂಗಕ್ಕೆಂದರಿವುದು। ಇನ್ನು ನಡೆಯುವದು ಇಷ್ಟಲಿಂಗ। ನೋಡುವದು

ಪ್ರಾಣಲಿಂಗವು । ಪಿಡಿದು ನೋಡುವ ಸುಖ ಭಾವಲಿಂಗಕ್ಕೆಂದರಿವುದು । ಇನ್ನು ಇಷ್ಟಲಿಂಗದ ಗರ್ಭದಲ್ಲಿ ತನ್ನ ಶರೀರವನ್ನು ಇಟ್ಟು ಬ್ರಹ್ಮರಂಧ್ರ ದಲ್ಲಿರ್ದ ಸಹಸ್ರದಳ ಕಮಲದೊಳಗೆ ಆ ಇಷ್ಟಲಿಂಗವ ಮುಳುಗಿಸುವದೀಗ ಲಿಂಗಾಂಗವು । ಇನ್ನು ವಿಶ್ವ-ನೇತ್ರ ಸ್ಥಾನದಲ್ಲಿರ್ದ ಜಾಗ್ರದಾವಸ್ಥೆಯು ಸ್ಥೂಲ ತನುವಿನ ವ್ಯವಹಾರ ಇಷ್ಟಲಿಂಗವೆಂದರಿವುದು । ತೈಜಸ ಕಂಠ ಸ್ಥಾನದಲಿರ್ದ ಸೂಕ್ಷ್ಮತನುವಿನ ವ್ಯವಹಾರ ಪ್ರಾಣಲಿಂಗವೆಂದರಿವುದು । ಪ್ರಾಜ್ಞನ ಹೃದಯಸ್ಥಾನದಲ್ಲಿರ್ದ ಸುಷುಪ್ತಿ ಕಾರಣ ತನುವಿನ ವ್ಯವಹಾರ ಭಾವಲಿಂಗವೆಂದರಿವುದು । ಇನ್ನು ಆಯತ ಇಷ್ಟಲಿಂಗವು । ಸ್ವಾಯತ ಪ್ರಾಣಲಿಂಗವು । ಸನ್ನಿಹಿತ ಭಾವಲಿಂಗವೆಂದರಿವುದು । ಇನ್ನು ಪಾತಾಳ ಲೋಕವನೊಳಕೊಂಡದ್ದು ಇಷ್ಟಲಿಂಗವು । ಮೃತ್ಯುಲೋಕವನೊಳಕೊಂ ಡದ್ದು ಪ್ರಾಣಲಿಂಗವು । ಸ್ವರ್ಗಲೋಕವನೊಳಕೊಂಡದ್ದು ಭಾವಲಿಂಗ ವೆಂದರಿವುದು । ಈರೇಳು ಲೋಕವನೊಳಕೊಂಡ ಪ್ರಾಣಲಿಂಗವು ಚರ್ಮ ಚಕ್ಷುವಿಗೆ ಅಗೋಚರವು । ಮನೋನೇತ್ರಕ್ಕೆಂದೆರಡಾಗಿ ಕಾಣಲ್ಪಟ್ಟು ದೀಗ ಪ್ರಾಣಲಿಂಗವು । ಆ ಪ್ರಾಣಲಿಂಗಕ್ಕೆರಡು ನೇತ್ರಪುಷ್ಪವಾಗಿಪ್ಪುದೇ ಲಿಂಗಾಂಗಸಂಗವು । ಇನ್ನು ರೂಪಾಗಿ ಬಂದ ಪದಾರ್ಥವನು ಭೋಗಿ ಸುವದೀಗ ಇಷ್ಟಲಿಂಗವು । ರುಚಿಯಾಗಿ ಬಂದ ಪದಾರ್ಥವನು ಭೋಗಿ ಸುವದೀಗ ಪ್ರಾಣಲಿಂಗವು । ತೃಪ್ತಿಯಾಗಿ ಬಂದ ಪದಾರ್ಥವ ಭೋಗಿ ಸುವದೀಗ ಭಾವಲಿಂಗವು । ಅಂಗವೆಂದರೆ ರೂಪ । ಮನವೆಂದರೆ ರುಚಿ ಸಂತೋಷವೆಂದರೆ ತೃಪ್ತಿಯೆಂದರಿವುದು । ಕ್ರಿಯೆವಿಡಿದು ಕಾಯಾರ್ಪಣ ಮಾಡುವದು । ಷಡ್ವಿಧದ ಲಿಂಗ ಸುಖ ಭೋಗಿಸುವ ಇಷ್ಟಲಿಂಗ । ಜ್ಞಾನವಿಡಿದು ಕರಣಾರ್ಪಣ ಮಾಡುವ ಛತ್ತೀಸ ಲಿಂಗದ ಸುಖವ ಭೋಗಿ ಸುವ ಪ್ರಾಣಲಿಂಗ । ಭಾವವಿಡಿದು ಪರಿಣಾಮಾರ್ಪಣ ಮಾಡುವ ಇನ್ನೂರಾ ಹದಿನಾರು ಲಿಂಗದ ಸುಖವ ಭೋಗಿಪ ಭಾವಲಿಂಗವು ತಾನೇ । ಸಾವಿ ರದಾ ಇನ್ನೂರು ತೊಂಭತ್ತಾರು ಲಿಂಗ । ಇಂಥ ಬಯಲು ಲಿಂಗವು ಲೆಕ್ಕಕ್ಕೆ ನಿಲುಕದು । ಬಯಲ ಹಸ್ತದಿಂದ ಪೂಜಿಸಿ । ಆ ಬಯಲ ಲಿಂಗ ದೊಳಗೆ ತಾನಾ । ತನ್ನೊಳಗೆ ಬಯಲ ಲಿಂಗ ಬೆರೆದದು । ಇದು ಲಿಂಗಾಂಗ ಸಮರಸವು । ಇದು ಶರಣ ಸತಿಲಿಂಗ ಪತಿನ್ಯಾಯವು । ಈ ತ್ರಿವಿಧ ಲಿಂಗಕ್ಕೆ ಅರ್ಪಿಸುವ ಕ್ರಮವನೊಳಕೊಂಡ ಇಷ್ಟ ಬ್ರಹ್ಮವು ತಾನೆಂದರುಹಿದಾತ ನಮ್ಮ ಶಾಂತ ಕೂಡಲ ಸಂಗಮ ದೇವಾ ॥

॥ಕಂದ॥ ಋತುಗಳು ಸೂರ್ಯನ ಸುತ್ತಲು ।
ಗತಿಸುವ ಭೂಗೋಲದಿಂದ ಸಂಜನಿಸುವವೋಲ್ ॥
ಹಿತವಾಗಿಹ ಷಟಚಕ್ರಂ ।
ಮತಮಾರ್ಗಂ ಬಿಡದೆ ಚರಿಸುತಿರ್ಪುದೆ ಧರ್ಮಂ ॥ ೧ ॥

ಸುವಿಚಾರಿಸಲಯನಂಗಳ ।
ನವರೋಹಣ ದಕ್ಷಿಣಮುಖಿಯಾರೋಹಣವೇ ॥
ಸುವಿಧಾನೋತ್ತರ ಮುಖಿ ತಾಂ ।
ಸವೆಯದ ಸುಖ ಸುರಿವುದೂರ್ಧ್ವಮುಖಿಯಾಗುತ್ತಂ ॥ ೨ ॥

ಉಲಿಯಲಿ ಮನದೊಳ್ ಮಂತ್ರಂ ।
ಬಲಿಯಲಿ ಭಾವಾಂಬುಧಿಯೊಳು ಲಿಂಗಾಂಗ ಸುಖಂ ॥
ನಲಿಯಲಿ ನಮ್ಮೊಳು ಪ್ರೇಮಂ ।
ತಿಲಗುಡಗೂಡಿದ ಸವಿಸುಖ ಸಮನಿಪ ತೆರದಿಂ ॥ ೩ ॥

ಬೆಲೆಬಾಳುವ ಬೆಳಸು ಬರಲ್ ।
ಸಲೆ ಸಂಗ್ರಹಿಸುತಿರ್ದ ಮಕರಸಂಕ್ರಮಣದೊಳಂ ॥
ಸಲಿಸುವ ಶಿವಪ್ರಸಾದಮೆ ।
ತಿಲಗುಡವಾಗಿರೆ ಶಿವಾನುಭವಿಗಳಿಗೀವೆಂ ॥ ೪ ॥

ತಿಲಮಿಶ್ರಂ ಮಜ್ಜನದೊಳ್ ।
ತಿಲಗುಡ ಸಮ್ಮಿಶ್ರ ಲಿಂಗ ಸಂತೃಪ್ತಿಯೊಳಂ ॥
ತಲೆವಾಗಿ ಶರಣ ಮಾಳ್ಪೆಂ ।
ನೆಲಿಸಲಿ ಕರುಣಾರಸಪ್ರಸಾದಂ ನಮ್ಮೊಳ್ ॥ ೫ ॥

ಮತ್ತಂ ॥ **ವಚನ:—**

ತಿಳುವಿನ ಬೆಳಗಿನೊಳು ಸುಳಿವ ಚಿದಂಗಗಳು,
ತೊಳಗಿ ಬೆಳಗಿ ಹೊ
ಳೆಯುವ ಚಿಲ್ಲಿಂಗಗಳೊಳು ಚಿನ್ಮಯವಾಗಿ ನಿಂದು,
ಹಾಲಿನೊಳು ಹಾಲು,

ನದಿಯೊಳು ನದಿಯು ಒಳಗೊಂಡಂತೆ
ಅಂಗ ಲಿಂಗಗಳು ಏಕರಸಮಯ
ವಾಗಿ ಉಳಿಯದಿರವೇ ಹೇಳಾ ಸಿದ್ಧೇಶ್ವರಾ ॥ ೧ ॥

ಭುವನಾಧ್ವವನು ಪಿಡಿದು, ತತ್ತ್ವಾಧ್ವದೊಳು ನಡೆದು
ಕಲಾಧ್ವವನು ಕಡೆಗಂಡು
ನಳನಳಿಪ ಕಳೆಯೊಳು ಮೊಳೆದೋರಿದ ಮಹಾ ಬೆಳಗಿನೊಳು
ಮುಳು ಮುಳುಗಿ
ತಳವೆಳಗಾದೆನು ಕಾಣಾ ಸಿದ್ಧೇಶ್ವರಾ ॥ ೨ ॥

ವರ್ಣಾಧ್ವದೊಳು ಓದುಗಲಿತು, ಪದಾಧ್ವದೊಳು
ಅರ್ಥವನಳವಡಿಸಿ
ಕೊಂಡು ಮಂತ್ರಾಧ್ವದೊಳು ಮನ ಮುಳುಗಿ
ತನು ಮನ ಭಾವಂಗಳ
ನರಿಯದೆ ಇದ್ದೆನಯ್ಯ ಸಿದ್ಧೇಶ್ವರಾ ॥ ೩ ॥

ಮುಂದೆಸೆದಿರ್ದ ಮೂಲೋಕದ ಗರ್ಭದೊಳು ಸಂದಿರ್ದ
ಸರ್ವಾಂತರ್ಯಾಮಿಯು
ಸಂಗ ಸಮರಸದ ಸುಖದ ಸೊಬಗನೇನು ಹೇಳಲಯ್ಯ
ಸಿದ್ಧೇಶ್ವರಾ ॥ ೪ ॥

ಕಣ್ಣಮುಂದಿನ ಕತ್ತಲೆಕಳೆದು, ಮನದ ಮುಂದಿನ ಆಶೆಯ
ತೊರೆದು ಕಣ್ಣೊಳಗಿಹ ಕಣ್ಣಿನಿಂದ ಕಡು ಬೆಡಗಿನ ಮೃಡನ
ಕಳೆಯ
ಕಂಡು ಕಾತರಿಸಿ ಕಡೆಗಾಗದೆ ಒಡಗೊಂಡೆನಯ್ಯ
ಸಿದ್ಧೇಶ್ವರಾ ॥ ೫ ॥

# ಷಟ್ ತ್ರಿಂಶತ್ ಲಿಂಗಾರ್ಪಿತ ಪಟವು.

| ಲಿಂಗಗಳು | ಆಚಾರಲಿಂಗದ | ಗುರುಲಿಂಗದ | ಶಿವಲಿಂಗದ | ಪ್ರಾಣಲಿಂಗದ | ಪ್ರಸಾದಲಿಂಗದ | ಮಹಾಲಿಂಗದ |
|---|---|---|---|---|---|---|
| ಆಚಾರಲಿಂಗಕ್ಕೆ | ಮೂಲದ (ಬೇರಿನ) ಗಂಧ | ಮಧುರ ರಸ | ಪೀತ ರೂಪ | ಕಠಿಣ ಸ್ಪರ್ಶ | ಜಾಗಟೆಯ (ಘೋರ) ನಾದ | ಸರ್ವದರ ನಾದ |
| ಗುರುಲಿಂಗಕ್ಕೆ | ಹಗಿನದ (ಬೊಡ್ಡೆಯ) ಗಂಧ | ಒಗರು ರಸ | ಶ್ವೇತ ರೂಪ | ಮೃದು ಸ್ಪರ್ಶ | ತಂತುವಾದ್ಯದ (ಸೂಕ್ಷ್ಮ) ನಾದ | ,, |
| ಶಿವಲಿಂಗಕ್ಕೆ | ವರ್ಣದ (ಎಲೆಯ) ಗಂಧ | ಕ್ಷಾರ ರಸ | ರಕ್ತ ರೂಪ | ಉಷ್ಣ ಸ್ಪರ್ಶ | ಭೇರಿ (ಕಾಸಿಬಾರಿಸುವ) ನಾದ | ,, |
| ಪ್ರಾಣಲಿಂಗಕ್ಕೆ | ಪುಷ್ಪದ (ಹೂವಿನ) ಗಂಧ | ಆಮ್ಲ ರಸ | ಹರಿತ ರೂಪ | ಶೀತ ಸ್ಪರ್ಶ | ಮುರಲಿ (ಊದುವದರ) ನಾದ | ,, |
| ಪ್ರಸಾದಲಿಂಗಕ್ಕೆ | ಫಲದ (ಕಾಯಿಯ) ಗಂಧ | ಕಹಿ ರಸ | ಕಪೋತ ರೂಪ | ಮಿಶ್ರ ಸ್ಪರ್ಶ | ಕಂಠ (ನುಡಿಯ) ನಾದ | ,, |
| ಮಹಾಲಿಂಗಕ್ಕೆ | ಇವೆಲ್ಲದರ ಗಂಧ | ಇವೆಲ್ಲದರ ರಸ | ಇವೆಲ್ಲದರ ರೂಪ | ಇವೆಲ್ಲದರ ಸ್ಪರ್ಶ | ಇವೆಲ್ಲದರ ನಾದ | ,, |

# ಷಟ್ ಸ್ಥಲಗಳೂ ಏಕೋತ್ತರ ಶತಸ್ಥಲಗಳೂ

## ಐಕ್ಯಸ್ಥಳ

### ಲೇಖಾಂಕ ೬

( ಲೇ:- ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ ವಂಟಮುರಿ)

ಇದು ಷಟ್ ಸ್ಥಳಗಳಲ್ಲಿ ಕಡೆಯ ಸ್ಥಳವು. ಏಕ+ಯ= ಐಕ್ಯ ಎಂದು ಇದರ ಉತ್ಪತ್ತಿಯು. ಜಗತ್ತಿನ ನಾನಾ ರೂಪವೆಲ್ಲ ಅಡಗಿ ಅವುಗಳಲ್ಲಿ ಏಕತ್ವವೇ ( ಶಿವಸ್ವರೂಪವೇ ) ಇವನಿಗೆ ಗೋಚರಿಸುವದು. ಅಂತೇ ಈ ಕೊನೆಯ ಅಂಗನಿಗೆ ಐಕ್ಯನೆಂದು ಹೆಸರು ಪ್ರಾಪ್ತವಾಗಿದೆ.

ಶರಣನೇ ಇಡಿಯ ಜಗತ್ತನ್ನೆಲ್ಲ, ಪ್ರಸಾದ ರೂಪ ಲಿಂಗವೆಂದು ಕಂಡುಕೊಂಡಿರುವಾಗ ಈ ಐಕ್ಯನ ವೈಶಿಷ್ಟ್ಯವೇನು ? ಎಂದು ಕೇಳಬಹುದು. ಆದರೆ ಶರಣನು ತಾನೂ ಸಂಪೂರ್ಣ ಜಗತ್ತು ಪ್ರಸಾದ ರೂಪವೆಂದು ಮನಗಂಡಿರುತ್ತಾನೆ. ಆತನು ವಸ್ತುಗಳ ನಾಮ ರೂಪ ಗುಣಗಳನ್ನೆಲ್ಲ ಬದಿಗಿರಿಸಿ ( ಹೋಗಲಾಡಿಸಿ ) ನೋಡಲು, ಅಲ್ಲಿ ಸಚ್ಚಿದಾನಂದ ಸ್ವರೂಪವೇ ( ಲಿಂಗವೇ ) ಅವನಿಗೆ ತೋರುವದು. ಆ ತುಣು ತುಣುಕು ಲಿಂಗಗಳನ್ನೆಲ್ಲ ಕೂಡಿಸಿ ಒಂದೇ ಒಂದು ಅಖಂಡ ಲಿಂಗ ( ಮಹಾಲಿಂಗ ) ಸ್ವರೂಪದಲ್ಲಿ ನೋಡುವದು ಉಳಿದಿರುತ್ತದೆ. ಅದನ್ನೇ ಐಕ್ಯನು ಪೂರೈಸುತ್ತಾನೆ.

ಐಕ್ಯನ ಲಿಂಗವು ಮಹಾಲಿಂಗವು. ಅತ್ಯಂತ ದೊಡ್ಡ ಲಿಂಗವಿದು. ಅಖಂಡವೂ ತ್ರಿಕಾಲಾಬಾಧಿತವಾದುದೂ ಪರಿಪೂರ್ಣತೆಯುಳ್ಳದ್ದೂ, ಪರಮ ತೇಜೋಮಯವೂ, ಆಗಿರುವದು. " ಲೀಯತೆ ಗಮ್ಯತೆ ಯತ್ರ ಜಗದೇ

ತಚ್ಚರಾಚರಮ್ ॥ ತದೇವಂ ಲಿಂಗಮಿತ್ಯಾಹುಃ ॥ ಲಿಂಗ ತತ್ತ್ವ ವಿಶಾರದಾಃ ॥ ಎಂದು ವರ್ಣಿಸಿಕೊಂಡಿರುವದು ಈ ಲಿಂಗವೇ. ಇದನ್ನೇ ಸುಜ್ಞಾನ ಇಲ್ಲವೆ ಸಮ್ಯಕ್ ಜ್ಞಾನ ಅಥವಾ ಪ್ರಜ್ಞಾನವೆಂದು ತಮ ತಮಗೆ ತಿಳಿದಂತೆ ವರ್ಣಿಸಿದ್ದಾರೆ ಇದೇ ಜಗತ್ತಿನ ಮೂಲ ಕಾರಣವು. ಇದು ಚಿನ್ನಾದ, ಚಿದ್ಬಿಂದು ಚಿತ್ಕಳೆಗಳೂ, ಚಿಚ್ಛಕ್ತಿಯೂ ಕೂಡಿ, ಒಂದಾಗಿರುವದೆಂದು, ಹೇಳುವರು. ಚಿತ್ ( ಸಮ್ಯಕ್ ಜ್ಞಾನ ) ಶಕ್ತಿಯೇ ಅತ್ಯಂತ ತೇಜೋಮಯ ಸ್ವರೂಪವು. ಅದು ನಾದ ಬಿಂದು ಕಲೆಗಳಿಂದ, ಅಂದರೆ ನಾಮ ರೂಪ ಗುಣಗಳಿಂದಲೂ, ಉತ್ಪತ್ತಿ ಸ್ಥಿತಿ ಲಯಗಳಿಂದಲೂ ಕೂಡಿಕೊಂಡು, ಈ ವಿಶ್ವ ನಿರ್ಮಾಣ ಮಾಡಿದುದರಿಂದ ಅದೆಲ್ಲ ಅಸತ್ತು ( ನಾಶವಂತ ) ಆಗಿರುವದು. ಅವುಗಳಲ್ಲಿ ಸತ್ (ನಿಜವಾದ ತತ್ ) ಸ್ವರೂಪವನ್ನು ಶಿವರೂಪವನ್ನು ಕಾಣುವ ಸಲುವಾಗಿಯೇ ನಾಮ ರೂಪ ಗುಣಗಳನ್ನು ತೊಡೆದುಹಾಕಿ, ಒಳಹೊಕ್ಕು ನೋಡುವದೊಂದೇ ಸಾಧನವು. ಇದಕ್ಕಾಗಿಯೆ ಭಸಿತವನ್ನು ( ಚಿದ್ಭಸಿತವನ್ನು ) ಯಾವಾಗಲೂ ಪದಾರ್ಥಗಳಿಗೆ ಸೋಂಕಿಸಬೇಕಾಗುವದು. ಆ ಸೋಂಕಿಸುವದರೊಡನೆಯೇ ತನ್ನ ಭಾವದಲ್ಲಿ ಅವುಗಳ ಒಳಗಿನ ಲಿಂಗ ರೂಪವನ್ನು ತರಲಿಕ್ಕೇಬೇಕು. ಹೀಗೆ ಭಾವಪನ್ನು ಬಲಿಸದೇ ಹೋದರೆ, ಆ ತೇಜಃಪುಂಜ ಮಹಾಲಿಂಗ ಸ್ವರೂಪವನ್ನು ನಾವು ಎಂದೂ ಕಾಣಲಾರೆವು. ಭಾವಲಿಂಗ ಪೂಜಕರಾದ ಶರಣರೂ ಐಕ್ಯರೂ ಈ ಕಾರ್ಯವನ್ನು ತಿಲಮಾತ್ರವೂ ಅಂತರಿಸದೆ ನಡೆಸುವದರಿಂದಲೇ, ಅವರು ಕೃತಾರ್ಥರಾಗುವರೆಂಬುದನ್ನು ನಾವು ಸದಾ ನೆನೆಸುತ್ತಿರಬೇಕು.

ಮಹಾಲಿಂಗವು ತೀರ ಸುಪ್ರಕಾಶಮಾನವಾದುದೆಂದೂ, ಅದು ಸೂರ್ಯ ಕೋಟಿ ಪ್ರಕಾಶ ಉಳ್ಳದ್ದೆಂದೂ ಹೇಳಿರುತ್ತಾರೆ. ನಮಗೆ ಇದರಮೇಲೆ ಒಮ್ಮೆಲೇ ವಿಶ್ವಾಸ ಕೂಡ್ರುವದಿಲ್ಲ. ಯಾಕೆಂದರೆ ನಾವು ಬಹಿರ್ದೃಷ್ಟಿಯವರು. ಸೂರ್ಯನಿಗಿಂತಲೂ ಹೆಚ್ಚಿನ ಸ್ವಪ್ರಕಾಶಿತ ವಸ್ತುವನ್ನು ಕಂಡವರಲ್ಲ. ಇಂತಹರಿಗೆ ಜ್ಞಾನವು ಸೂರ್ಯಕೋಟಿ ಪ್ರಕಾಶ ಉಳ್ಳದ್ದೆಂದರೆ ಏನೋ ಒಂದು ಬಂಡು ( ದೊಡ್ಡ ಸುಳ್ಳು ) ಹೇಳಿರುವರೆಂದು ಸಕೃದ್ದರ್ಶನದಲ್ಲಿ ತೋರಿ ಬಿಡುವದು. ಇದಕ್ಕೊಂದು ಉದಾಹರಣೆ ತಕ್ಕೊಳ್ಳುವಾ. ಈಗ ಮೂರನೆಯ ಮಹಾಯುದ್ಧದ ಕಾರ್ಮೋಡ

ಗಳು ಕಾಣಹತ್ತಿವೆ." ಎಂದು ಬಲ್ಲವರು ತರ್ಕಿಸುತ್ತಾರೆ. ಅದು ಯಾತರ ಯೋಗದಿಂದ ? ಸೂರ್ಯನ ಬೆಳಕಿನಿಂದಲೋ ? ಮುಂದೋರಣೆಯ ಜ್ಞಾನದೃಷ್ಟಿಯಿಂದಲೋ ? ಜ್ಞಾನದೃಷ್ಟಿಯಿಂದ ಎಂದೊಪ್ಪಲೇ ಬೇಕು. ಕೋಟ್ಯವಧಿ ಇಲ್ಲವೆ ಅಬ್ಜಾವಧಿ ಸೂರ್ಯ ಪ್ರಕಾಶದಿಂದ ಅದನ್ನು ಕಾಣಬಹುದೋ ? ಎಂದೂ ಶಕ್ಯವಿಲ್ಲ. ಅಂದಮೇಲೆ ಜ್ಞಾನವು ಅದರಲ್ಲಿಯೇ ಮಹಾಜ್ಞಾನವು ( ಮಹಾಲಿಂಗವು ) ಸೂರ್ಯ ಕೋಟಿ ಪ್ರಕಾಶ ಎಂದು ವರ್ಣಿಸಿದುದರಲ್ಲಿ ಅತಿಶಯೋಕ್ತಿಯು ಬೆರೆದಿದೆಯೆ ! ಇಲ್ಲೇ ಇಲ್ಲ ! ಇದೊಂದು ಸಿದ್ಧವಾದಮೇಲೆ ನಿತ್ಯವೂ, ಪವಿತ್ರವೂ, ಅತ್ಯಂತ ಪರಿಪೂರ್ಣವೂ ಅದೆಂಬುದು ಸಹಜವಾಗಿ ಮನವರಿಕೆಯಾಗುವದು.

ಮಹಾಲಿಂಗದ ತಲೆ ಪಾದಂಗಳನ್ನು ಕಾಣುವ ಶರ್ತಹಾಕಿ ಬ್ರಹ್ಮ ವಿಷ್ಣುಗಳು ಕ್ರಮವಾಗಿ ಹಂಸ ವರಾಹ ರೂಪಗಳನ್ನು ಧರಿಸಿ ಅದೆಷ್ಟು ಕಾಲ ಗಮನಿಸಿದರೂ ಅವು ಕಾಣದೆ ಇಬ್ಬರೂ ಸೋತರೆಂದು ಪುರಾಣದಲ್ಲಿ ವರ್ಣನೆ ಇದೆ. ಏಕೆಂದರೆ ಅದು ಅನಂತ ರೂಪ ಧರಿಸಿರುವದು. ವೇದಾಂತಿಗಳು ಅನಂತ ವೆನ್ನಿಸುವ ಆಕಾಶದ ಹತ್ತುಮಡಿ ಪರಮಾತ್ಮ ಸ್ವರೂಪವಿರುವದೆಂದು ಹೇಳಿದ್ದಾರೆ. ಇದರಿಂದ ಮಹಾಲಿಂಗದ ಸ್ವರೂಪದ ವಿಸ್ತಾರವನ್ನು ತರ್ಕಿಸಲಿಕ್ಕೆ ಸಹ ಬರಲಾರದೆಂಬುದು ಸಿದ್ಧವಾಗುವದು. ಇಂತಹ ಅಗಾಧ ಮಹಾಲಿಂಗದ ಸ್ವರೂಪವನರಿತು ಐಕ್ಯನು ಅದರಲ್ಲಿ ಸಮರಸವಾಗುವದಿದೆ.

ಶ್ರೀ ಬಸವಣ್ಣನವರು–"ಹುಟ್ಟು ಸಾವುಗಳಿರುವನ್ನಕ್ಕ ಐಕ್ಯನೆಂತೆಂಬೆ" ಎಂದು ನುಡಿದಿದ್ದಾರೆ. ಮೇಲೆ ವಿವರಿಸಿದ ಮಹಾಲಿಂಗದಲ್ಲಿ ಸಮರಸತೆ ಪಡೆದವನಿಗೆ ಅದೇತರ ಭಯವು? ಅವನು ತಾನೇ ಮಹಾಲಿಂಗವಾಗಿರುವನು. ಅವನು ಹುಟ್ಟುವದೂ ಇಲ್ಲ ಸಾಯುವುದೂ ಇಲ್ಲ ! ಆದರೆ ಈಗ ಜಗತ್ತಿನಲ್ಲಿ ನರಮಾನವರಾಗಿ ಉದ್ಭವಿಸಿದವರು ಶಿವಾನುಭವ ಮಹಾನುಭವ ಪಡೆದ ಮಹಾ ಜ್ಞಾನಿಗಳೂ ಸತ್ಪುರುಷರೂ ಎಂದು ಹೇಳಿಕೊಳ್ಳುವವರಲ್ಲಿ ನಿಜವಾದ ಆ ಭಾವನೆಯು ಒಡಮೂಡಿರದಿದ್ದರೆ ಅಂತಹರಿಗೆ ಮಾತ್ರ ಸಾವಿನ ಅಂಜಿಕೆ ಇರುವದು. ಇಂತಹ ಹಸಿಬಿಸಿ ಮಾಡಿಕೆಗಳ ವಿಷಯದಲ್ಲಿ ಜಗದಣ್ಣನವರ ವಚನವಿದೆ.

ಶ್ರೀ ಪ್ರಭುದೇವರೂ, ಬಸವಣ್ಣನವರೂ ಚನ್ನಬಸವಣ್ಣನವರೂ ಅಕ್ಕ ಮಹಾದೇವಿಯವರೂ, ಸಿದ್ಧರಾಮೇಶ್ವರರೂ ಮೊದಲಾದ ಪ್ರಮಥರನೇಕರು ಮಹಾಲಿಂಗದಲ್ಲಿ ಬೆರೆದು ಐಕ್ಯ ಪಡೆದಿರುವರು. ಶರಣರೆಲ್ಲರೂ ಐಕ್ಯಭಾಜನರೇ! ಶರಣತ್ವದ ಪರಿಣತಿಯೇ ಐಕ್ಯತ್ವದಲ್ಲಿ ಪರಿಣಮಿಸುವದು. ಇನ್ನು ಚನ್ನ ಬಸವಣ್ಣನವರು ನೂರೊಂದು ಸ್ಥಳಗಳಲ್ಲಿ ಐಕ್ಯನ ವಿಷಯವಾಗಿ ಏನು ಹೇಳಿರುವರೆಂಬುದನ್ನು ನೋಡೋಣ.

ಐಕ್ಯನ ಅಂಗಸ್ಥಳಗಳು ನಾಲ್ಕು, ಲಿಂಗಸ್ಥಳಗಳು ಒಂಬತ್ತು ಎಂದು ಹೇಳಿದ್ದಾರೆ. ಅವನ್ನು ಕೆಳಗೆ ಕ್ರಮವಾಗಿ ವಿವೇಚಿಸುವಾ.

## ಅಂಗಸ್ಥಳಗಳು.

(೧) ಐಕ್ಯಸ್ಥಳ :— ಇದರಲ್ಲಿ ಸಾಮಾನ್ಯವಾಗಿ ಐಕ್ಯನು ಆಚರಿಸತಕ್ಕ ಆಚಾರಗಳನ್ನು ಹೇಳಿರುತ್ತದೆ. ಅವೆಲ್ಲ ಮೇಲೆ ತಿಕ್ಕಮಟ್ಟಿಗೆ ಬಂದಿರುವವು.

(೨) ಸರ್ವಾಚಾರ ಸಂಪತ್ತಿ ಸ್ಥಳ :— ಇವನಿಗೆ ಆದಾವ ಆಚಾರವಾದರೂ ನಿಷೇಧದಲ್ಲಿ ಬರಲಾರದು. ಸರ್ವವೆಲ್ಲವೂ ವಿಧಿ (ಆಚರಿಸತಕ್ಕವು) ಗಳೇ ಆಗಿರುವವು. ಅವನು ಮಹಾಲಿಂಗ ರೂಪವೇ ಆಗಿರುವದರಿಂದ, ಭೇದ ಭಾವನೆಯು ಸಂಪೂರ್ಣ ಅಳಿದು ಹೇಳ ಹೆಸರಿಲ್ಲದಾಗಿ ಬಿಟ್ಟಿರುವದು. ಆಗ ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು! ಎಲ್ಲವೂ ಸಹಜ ಭಾವನೆಯಿಂದಲೇ ನಡೆಯುವವು. ಅವನಿಗೆ ಜಾತಿಯೂ ಇಲ್ಲ. ಲಿಂಗ ಧ್ಯಾನ, ಧಾರಣಾದಿಗಳ ಪರವೆಯೂ ಇಲ್ಲ. ಸ್ನಾನ ಮೊದಲಾದ ಯಾವ ನಿತ್ಯ ಕರ್ಮವೂ ಇಲ್ಲ. ತಪದಲ್ಲಿದ್ದ ಪಾರ್ವತಿ ದೇವಿಯವರ ಪರೀಕ್ಷಾರ್ಥವಾಗಿ ಬಂದ ಬ್ರಹ್ಮಚಾರಿ ರೂಪಿ ಶಿವನನ್ನು “ ಶಾಸ್ತ್ರಕ್ರಮಮಂ ಮಿಕ್ಕವನು, ಪಿತೃವನದೊಳ್ ಪೊಕ್ಕವನು ” ಎಂದು ಗಿರಿಜಾ ಕಲ್ಯಾಣದಲ್ಲಿ ವರ್ಣಿಸಿರುವರಲ್ಲವೇ ? ಅಂತೆಯೇ ಈ ಮಹಾಲಿಂಗ ರೂಪಿಯಾದ ಐಕ್ಯನು ಸಹ ಎಲ್ಲ ವಿಧಿ ನಿಷೇಧಗಳಿಗೆ ದೂರಾದವನಾಗಿರುವನು. ಅವನಿಗೆ ಒಳಿತೂ ಇಲ್ಲ. ಕೆಡಕೂ

ಇಲ್ಲ. ಸುಖವೂ ಇಲ್ಲ. ದುಃಖವೂ ಇಲ್ಲ. ಸಾರಾಂಶ ಯಾವ ದ್ವಂದ್ವವೂ ಇಲ್ಲೇ ಇಲ್ಲ. ಸ್ವತಃ ಏಕಮೇವಾದ್ವಿತೀಯನಾಗಿರುವನು. ಅಂತೇ ಅವನಲ್ಲಿ ಸರ್ವಾಚಾರ ಸಂಪತ್ತಿಯು ಯೋಗ್ಯತೆಯು ತಾನಾಗಿಯೇ ನೆಲೆಸಿ ಇಟ್ಟಿರುವದು.

( ೩ ) ಏಕ ಭಾಜನ ಸ್ಥಳ :— ಭಾಜನವೆಂದರೆ ಒಳಗಿರುವ ಪದಾರ್ಥವು. ಭಾಂಡ ಭಾಜನವೆಂದು ಹೇಳುವಲ್ಲಿ, ಪಾತ್ರೆಯು ಸ್ವರೂಪ ಭಾಂಡದಲ್ಲಿ ಯಾವದಾದರೊಂದು ಪದಾರ್ಥವನ್ನು ಹಾಕಿಟ್ಟರೆ ಅದು ಭಾಜನವಾಗುವದು. ಶರೀರದಲ್ಲಿ ಆತ್ಮವು ವಾಸಿಸುವದರಿಂದ ಶರೀರವು ಭಾಂಡ, ಆತ್ಮವು ಭಾಜನ. ಅನ್ನಪೂರ್ಣೆಯ ಸ್ತೋತ್ರವನ್ನು ಶ್ರೀ. ಶಂಕರಾಚಾರ್ಯರು ಮಾಡುವಾಗ, ಆಕೆಯನ್ನು "ಬ್ರಹ್ಮಾಂಡ ಭಾಂಡೋದರಿ" ಎಂದು ಹೊಗಳಿರುವರು ಈ ಜಗತ್ತೆ ಅಲ್ಲಿ ಭಾಂಡಾರವು ( ಶಕ್ತಿದೇವಿಯ ಉದರವು ) ಅದರಲ್ಲಿ ಲಿಂಗವು ಭರಿತವಾಗಿರುವದರಿಂದ ಅದು ಭಾಜನವು. ಈ ರೀತಿ ಸಂಪೂರ್ಣ ಜಗತ್ತಿನ ಅಂತರಂಗದಲ್ಲಿ ಭರಿತವಾದ ಮಹಾಲಿಂಗವು ಭಾಜನವಾಗುವದು. ಇದು ಏಕಮೇವ ವಸ್ತುವಾಗಿರುವದರಿಂದ ಅದು ಏಕಭಾಜನವೆನಿಸುವದು.

( ೪ ) ಸಹ ಭೋಜನ ಸ್ಥಳವು :— ವಿಶ್ವವೆಲ್ಲ ಒಂದೇ ಒಂದು ವಸ್ತು ಸ್ವರೂಪವಾದುದರಿಂದ, ಅದನ್ನು ಯಾವದೆಂದು ಭಾವಿಸಬೇಕು.? ಮಹಾ ಲಿಂಗವೆಂದೊ ? ಸ್ವ ಸ್ವರೂಪವೆಂದೊ ? ವಸ್ತುತ: ಇವೆರಡೂ ಒಂದೇ! ಮಹಾಲಿಂಗವೇ ಸರಿ! ಆದರೆ ಜಂಗಮದ ವ್ಯಾಖ್ಯೆಯನ್ನು ಹೇಳುವಾಗ, "ವಿಶ್ವ ಪ್ರಕಾಶಕಂ ಶಿವಂ ಯೇ ಸ್ವ ಸ್ವರೂಪತಯಾ ಅತಿಶಯಾ ಜ್ಞಾನಂತಿ ತೇ ಜಂಗಮಾಃ ಇತಿ ಕೀರ್ತಿತಾಃ ।" ಎಂದಿರುವದರಿಂದ, ಸ್ವ ಸ್ವರೂಪದಲ್ಲಿಯೇ ಶಿವನನ್ನು ಸಹ ಸಮಾವೇಶಗೊಳಿಸಬೇಕೆಂಬ ಆಶಯವು ತೋರುತ್ತದೆ. ಇದಲ್ಲದೆ "ಆರು ನಾನೆಂದು ವಿಚಾರಿಸು" ಮತ್ತು 'ತಾನಾರೆಂಬರಿವಾಗೆ ಸಾಕು," ಹಾಗೂ ಕಸ್ತ್ವಂ, ಸೋಹಂ, ಇವುಗಳ ಬಲವಾದರೂ, ಶಿವನನ್ನೂ, ಇಡಿಯ ವಿಶ್ವವನ್ನೂ ತನ್ನಲ್ಲಿಯೇ ಕಾಣಬೇಕೆಂಬಂತೆ ಉಂಟು. "ಸೋಽಹಂ ಶಿವೋಽಹಂ" ಎಂಬವುಗಳಂತೂ ಸ್ಪಷ್ಟವಾಗಿ ತನ್ನಲ್ಲಿಯೇ ಎಲ್ಲವನ್ನು ಏಕೀಭವಿಸಿರುತ್ತವೆ. ತಾನೂ

ಜಗತ್ತೂ, ಶಿವನೂ ಇವು ಮೂರೂ ಒಂದೇ ಎಂದು ತಿಳಿದರೂ ಅವೆಲ್ಲ ತನ್ನ ಸ್ವರೂಪವೇ! ಎಂಬುದು ಹೆಚ್ಚು ಸಮಂಜಸವಾಗಿ ಕಾಣುತ್ತದೆ. ಆದುದರಿಂದ ಸಹ ಭೋಜನವೆಂದರೆ, ಎಲ್ಲವನ್ನು ತನ್ನಲ್ಲಿಯೇ ಒಕ್ಕಟ್ಟು ಗೊಳಿಸುವದು, ಎಂದರಿಯು ಬೇಕಾಗುವದು. ಅಕಾರಣ ಸಹಭೋಜನ= ಕೂಡಿ ಭೋಗಿಸುವದು ಅಥವಾ ತನ್ನಲ್ಲಿಯೇ ಎಲ್ಲವನ್ನೂ ನಿಲಯು ಪಡಿಸಿಕೊಳ್ಳುವದು, ಎಂದಿರುವದು. ಐಕ್ಯನು ಎಲ್ಲವನ್ನೂ ತನ್ನ ರೂಪವಾಗಿಯೇ ಭಾವಿಸುವದರಿಂದ ಸರ್ವಾಚಾರ ಸಂಪತ್ತಿಯೂ, ಏಕಭಾಜನತ್ವವೂ, ಸಹಭೋಜನವೂ ಸಹಜವಾಗಿಯೇ ಸಂಭವಿಸುವವು.

## ಲಿಂಗಸ್ಥಳಗಳು

( ಸ್ವೀಕೃತ ಪ್ರಸಾದಿ :— ಏಕಾದಶ ಪ್ರಸಾದದ ಧೋರಣೆಯು ಬರಿಯ ಆಹಾರ ದ್ರವ್ಯಗಳನ್ನು ಅಷ್ಟೇ ಅಲ್ಲ. ತನ್ನಸಲುವಾಗಿ ಉಪಯೋಗಿಸುವ ವಸ್ತ್ರ, ವಾಹನ, ಅಲಂಕಾರಗಳು, ತನು, ಮನ, ಧನ, ಸ್ತ್ರೀ ಮೊದಲಾದವನ್ನೆಲ್ಲ ಸಹ ಲಿಂಗಾರ್ಪಿತ ಮಾಡಿಯೇ ಬಳಿಕ ಆ ಪ್ರಸಾದದಲ್ಲಿಯೇ ತೃಪ್ತಿಸಬೇಕೆಂಬುದುಂಟು. ಹೀಗೆ ಕೈಕೊಂಡುವೆಲ್ಲ ಸ್ವೀಕೃತ ಪ್ರಸಾದ, ಮತ್ತು ಸ್ವೀಕರಿಸಿದವನು ಸ್ವೀಕೃತ ಪ್ರಸಾದಿ ಎಂದರಿಯುಬೇಕು.

( ೨ ) ಶಿಷ್ಟೋದನ ( ಶಿಷ್ಟ+ಓದನ ) ಪ್ರಸಾದಿ :— ಮೇಲೆ ಹೇಳಿದುವೆಲ್ಲ ಸ್ವೀಕೃತವಾದವು. ಸರಿ! ಆದರೆ ಇನ್ನೂ ಸ್ವೀಕೃತವಾಗದೆ ಅನೇಕ ವಸ್ತುಗಳು ಉಳಿದಿವೆ. ಅವೇನೂ ಪ್ರಸಾದವಾಗಿಲ್ಲ. ಅಂದಮೇಲೆ ಐಕ್ಯನು ಸರ್ವಾಚಾರಿಯಾಗುವದೆಂತು? ಏಕ ಭಾಜನತ್ವ ಪಡೆಯುವದೆಂತು ? ಅವು ಹೊರಗೇ ಉಳಿದರೆ ಸಹಭೋಜನವನಕ ಇಲ್ಲವೇ ಇಲ್ಲವಾಯಿತು. ಹಾಗೆ ಉಳಿದ ಪದಾರ್ಥಗಳು ಅನೇಕವಿರುವವು. ಅವುಗಳಲ್ಲಿ ಭವಿಗಳು, ಮಲತ್ರಯಗಳು, ನೆಟ್ಟಲಿಂಗಾದಿ ಮೂರ್ತಿಪೂಜಾ, ಅಜ್ಞಾನ, ಮೈಲಿಗೆ, ಸೂತಕಗಳು, ಅರಿಷಡ್ವರ್ಗ ಮುಂತಾದವೆಲ್ಲ, ಶರಣನು ಪೂಜಿಸುವ ಪ್ರಸಾದ ಲಿಂಗದಲ್ಲಿ ಸಮಾವಿಷ್ಟವಾದುದರಿಂದ, ಅವು ಸ್ವೀಕೃತದಲ್ಲಿ ಬಂದವು. ಇನ್ನು ಮುಖ್ಯವಾಗಿ ಮಾಯೆಯೊಂದು ಮಾತ್ರ ಉಳಿದಿದೆ.

ಮಾಯೆ:— ಸತ್ಯದ್ದರ್ಶನಕ್ಕೆ ಮನುಷ್ಯನ ಮನವನು ಪದಾರ್ಥಗಳ ರೂಪ ಗುಣಾದಿ ವಿಷಯಗಳು, ಸಂಪೂರ್ಣವಾಗಿ ಸೆಳೆದುಕೊಂಡು ಅವನನ್ನು ತಮ್ಮ ದಾಸನನ್ನಾಗಿ ಮಾಡಿಬಿಡುವದೊಂದು ಇಂದ್ರಜಾಲವಿದು. ಜಗತ್ತು ಅದರೊಳಗಿನ ಪ್ರತಿಯೊಂದು ವಸ್ತುವೂ ಮಾಯಾ ವಿಶಿಷ್ಟವಾಗಿದೆ. ತನ್ನ ದೇಹ ಜೀವಗಳು ಹೆಂಡಿರು ಮಕ್ಕಳು, ಹೊನ್ನು ಹೆಣ್ಣು ಮಣ್ಣು ಮೊದಲಾದವು ಹೆಚ್ಚಾದ ಮಾಯೆಯುಳ್ಳವಾಗಿವೆ. "ಜಗತ್ತು ಮಾಯೆಯ ಬೇಡಿಯಿಂದ ಬಿಗಿಯಲ್ಪಟ್ಟಿದೆ" ಎಂದು ಗೌತಮಬುದ್ಧ ಮಹಾತ್ಮರು ಹೇಳಿದ್ದಾರೆ. ಶ್ರೀ ಪ್ರಭುಸ್ವಾಮಿಯು ಮಾತ್ರ ಮಾಯೆಯ ವಶವಾಗದೆ ಅದನ್ನು ಜಯಿಸಿದ್ದು ಅವರ ಪುರಾಣದಲ್ಲಿ ವರ್ಣಿಸಲ್ಪಟ್ಟಿದೆ. ಅವನು ಪೂರ್ಣ ಜ್ಞಾನಿಯಾದುದರಿಂದಲೇ ಅದು ಸಾಧ್ಯವಾಯಿತು. ಜಗತ್ತು ನಾನಾ ವಿಧವಾದ ಅನೇಕ ವಸ್ತುಗಳಿಂದ ವ್ಯಾಪ್ತವಾಗಿದ್ದರೂ ಬಲ್ಲವರು ಅವುಗಳ ಹೊರಗಿನ ರೂಪ (ಆಕಾರ) ವನ್ನು ನೋಡದೆ ಒಳಗಿನ ಗುಣಗಳತ್ತ ಲಕ್ಷಿಸಿ, ಆ ಗುಣಗಳಲ್ಲಿ ಐದೇ ಭೇದ ಮಾಡಿರುವರು. ಅವೇ ನಮ್ಮ ಪಂಚ ಜ್ಞಾನೇಂದ್ರಿಯಗಳಿಗೆ ಗೋಚರವಾಗುವ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚ ಗುಣಗಳು (ವಿಷಯಗಳು.) ಮತಿಮಂದರು ಅವುಗಳಿಗೆ ಮೋಹಿಸಿ, ಮನಸೋತು, ಅಮಿತವಾಗಿ ಅವನ್ನು ಸೇವಿಸುವ ಮಬ್ಬಿಗೆ ಬಿದ್ದು, ವಿನಾಶಹೊಂದುವರು. ಈ ಮಬ್ಬೇ ಮಾಯೆ! ನಿಜವಾಗಿ ನೋಡಿದರೆ ಈ ಗುಣಗಳೇನೂ ಕೆಡಕಾದುವಲ್ಲ. ಅಸತ್ತೂ ಅಲ್ಲ. ಪದಾರ್ಥಗಳ ಹೊರಗಿನ ಆಕಾರವು ಅಸತ್ತು. ಒಳಗಿರುವ ಈ ಗುಣಗಳು ಸತ್ತು (ಲಿಂಗರೂಪ) ಅಂತೇ ಅವನ್ನು ತನ್ಮಾತ್ರ [ತತ್ (ಶಿವರೂಪ) ಮಾತ್ರ] ಎಂದು ಹೇಳಿದ್ದಾರೆ. ನಮ್ಮ ಲಿಂಗಾರ್ಪಿತ ಕ್ರಮವು ಈ ಗುಣಗಳನ್ನು ಅದೆಂತು ಪ್ರಸಾದವಾಗಿ ಮಾಡಿಕೊಳ್ಳಬೇಕೆಂಬುದನ್ನು ಬಹು ಸರಸವಾಗಿ ಬೋಧಿಸುತ್ತಾರೆ. ಏಕಾದಶ ಪ್ರಸಾದಗಳ ಮರ್ಮವಾದರೂ ಇದೇ ಉಂಟು. ಸದ್ಭಕ್ತರೂ ಸತ್ಯಶರಣರೂ ಇವುಗಳನ್ನು ಸರಿಯಾಗಿ ಆಕಲನ ಮಾಡಿಕೊಂಡು, ಲಿಂಗತೃಪ್ತಿಯಲ್ಲಿಯೇ ತಾವೂ ಸದಾ ಆನಂದಿಸುತ್ತ ಲಿಂಗಲೋಲುಪರಾಗಿರುವರು. ಹಿಂದಣ ಪ್ರಾಣಲಿಂಗಿ ಲೇಖದ ಕೊನೆಯಲ್ಲಿ ಕೊಟ್ಟಿರುವ, ಕಂದ ಪದ್ಯವನ್ನು ಮತ್ತೊಮ್ಮೆ ಇಲ್ಲಿ ಉದಾಹರಿಸುವದು ಅಪ್ರಸ್ತುತವಾಗದೆಂದು ತಿಳಿದು ಮುಂದೆ ಕೊಟ್ಟಿದೆ

|| ಕಂದ || ನೊಳೆ ಬೆಳೆ ಯುಳಿವಳಿವುಗಳುಂ | ತಳಿವುಗು ಸಮರಸತೆ
ಸರ್ವಾಂಗಂ ಲಿಂಗದೊಳಂ ||
ತಿಳಿವಿನ ಲಿಂಗಾಂಗಿಗಳಿಗೆ | ಹಳಹಳಿ ಶೋಕಂಗಳಿಂಗದೆಲ್ಲಿಹು
ದನುವು || ೧ ||

ಇಲ್ಲಿ ಹೇಳಿದ ಹಳಹಳಿ ಶೋಕಗಳೆಂದರೇನೇ ಮಾಯೆಯು. "ಮರಣ ವೆಂಬುದು "ಮಾನಾಮಿ ಹಬ್ಬ" ವೆಂದು ಶ್ರೀ ಬಸವಣ್ಣನವರು ಹೇಳಿದುದು ಇದಕ್ಕಾಗಿಯೇ. ಮಾಯೆಯ ಬಲೆಯಲ್ಲಿ ಬಿದ್ದು ಒದ್ದಾಡುವ ತಿಳಿಗೇಡಿ ಗಳಿಗೇ ಆ ಹಳಹಳಿ ಶೋಕಾದಿಗಳು ಸಂಭವಿಸುವವು. ಅಂತಹರು ಅಲಿಪ್ತ ಸಂಸಾರಿಗಳಾಗಿ, ನಿಜವಾದ ಲಿಂಗವಂತರಾಗಬೇಕೆಂದು ಬಿನ್ನಹ. ಈ ಮೇರೆಗೆ ಓದನ (ಅನ್ನ) ವೆಂದು ಬಿಟ್ಟಿರುವ ಮಾಯೆಯನ್ನು ಸಹ ಪ್ರಸಾದ ರೂಪಕ್ಕೆ ತಂದುಕೊಂಡವನೇ ಶಿಷ್ಯೋದನ ಪ್ರಸಾದಿ ಎನಿ ಸುವನು.

(೨) ಚರಾಚರ ಲಯಸ್ಥಳಃ— ಮಾಯೆಯೂ ಸಹ ಪ್ರಸಾದ ವಾದಮೇಲೆ ಇನ್ನಾವುದೂ ಪ್ರಸಾದದ ಹೊರಗೆ ಉಳಿಯಲಿಲ್ಲ. ಲೋಕ ದಲ್ಲಿ ಸಾಧಾರಣವಾಗಿ ಅಸಂಖ್ಯ ವಸ್ತುಗಳು ತೋರುತ್ತಿದ್ದರೂ ಅವನ್ನು ಚರ ಮತ್ತು ಅಚರವೆಂಬೆರಡೇ ವರ್ಗಗಳಲ್ಲಿ ಎಣಿಸಿಬಿಟ್ಟಿರುವನು ಎಲ್ಲ ರಿಗೂ ಗೊತ್ತಿದೆ. ತಮ್ಮ ಸ್ವಂತ ಶಕ್ತಿಯಿಂದ ಸಂಚರಿಸುವ ವಸ್ತುಗಳೆಲ್ಲ ಚರವೆನ್ನಿಸುವವು. ಅವುಗಳಿಗೆ ಜೀವವಿರುತ್ತದೆ. ಅಂತೆಯೇ ಇವಕ್ಕೆ ಪ್ರಾಣಿಕೋಟಿ ಎಂದೆನ್ನುವರು. ಮಾನವ, ಪಶು, ಪಕ್ಷಿ, ಕ್ರಿಮಿ, ಕೀಟಕ ಗಳೆಲ್ಲ ಇಂತಹವಾಗಿವೆ. ಇವುಗಳಲ್ಲಿ ಚೈತನ್ಯವು ಹೆಚ್ಚು ಪ್ರಮಾಣದಲ್ಲಿ ರುವದರಿಂದ, ಅದು ಸಹಜವಾಗಿ ದೃಷ್ಟಿಗೆ ಬೀಳುವದು. ಆದರೆ ಬೇರೆ ಕಲ್ಲು ಮಣ್ಣು ಮೊದಲಾದವುಗಳಲ್ಲಿ ಅದು ಕಡಿಮೆ ಇರುವಕಾರಣ ಅವು ಬಿದ್ದಲ್ಲೇ ಬಿದ್ದಿರುವವು. ಬರೇ ಅನ್ಯ ಪ್ರೇರಣೆಯಿಂದ ಮಾತ್ರ ಸ್ಥಲಾಂತ ರಿಸಬಹುದು. ವ್ಯವಹಾರದಲ್ಲಿ ಇವು ಜಂಗಮ ವಸ್ತುಗಳೆನ್ನಿಸುವವು. ನೆಲ, ಮನೆ, ಮೊದಲಾದವು ಸ್ಥಾವರ ವೆನ್ನಿಸುವವು. ಈ ಸ್ಥಾವರ ಜಂಗಮ ವಸ್ತುಗಳೇ ಅಚರವಾದವುಗಳು.

ಐಕ್ಯನು| ಏಕಮೇವಾ ದ್ವಿತೀಯನಾಗಿರುವದರಿಂದ, ಅವನ ದೃಷ್ಟಿಗೆ ಚರವೂ ಅಚರವೂ, ಒಂದೇ ಒಂದು ಮಹಾಲಿಂಗವಾಗಿರುವದರಿಂದ,

ಎಲ್ಲೆಲ್ಲಿಯೂ ಅವನು ಚರ ಅಚರವೆಂಬ ದ್ವಂದ್ವವನ್ನು ಅವನು ಕಾಣು ವದೇ ಇಲ್ಲ. ಇದೇ ಚರಾಚರ ಲಯಸ್ಥಳವು.

(೪) ಭಾಂಡಸ್ಥಳ:— ಕುಂಬಾರರೂ, ಕಂಚುಗಾರರೂ ಮಾಡಿದ ಮಣ್ಣಿನ ಹಾಗೂ ಧಾತುಗಳ ಭಾಂಡಗಳನ್ನು (ಪಾತ್ರೆಗಳನ್ನು) ಮಾತ್ರ ನಾವು ಬಲ್ಲೆವು. ಆದರೆ ದೇವರಿಂದ (ಸೃಷ್ಟಿಯಿಂದ) ನಿರ್ಮಿತವಾದ ಈ ವಿಶ್ವದಲ್ಲಿ ಹೊರಗೆ ತೋರುವ ಈ ರೂಪವೇ ಭಾಂಡವು. ಈ ಭಾಂಡ ಗಳ ನಿರ್ಮಾಣದ ಉದ್ದೇಶವು ಅವುಗಳಲ್ಲಿ ಏನಾದರೂ ತುಂಬಿಡುವ ದಿರುತ್ತದೆ. ಪ್ರಾಣಿಗಳ ದೇಹ, ಹಣ್ಣು ಕಾಯಿಗಳ ಹೊರಗಿನ ಸೊಟ್ಟೆ ಅಥವಾ ಚಿಪ್ಪು ಇತ್ಯಾದಿಗಳು ಭಾಂಡಗಳು. ನಮ್ಮ ದೇಹವನ್ನು ನಾವು ಅಂಗವೆನ್ನುವೆವು. ಈ ಪ್ರಕಾರ ಹೊರಗೆ ರೂಪವಾಗಿ ಕಾಣುವದೇ ಭಾಂಡ ಸ್ಥಳವು.

(೫) ಭಾಜನ ಸ್ಥಳ:— ಭಾಂಡದಲ್ಲಿ ಒಳಗೆ ಹಾಕಿಟ್ಟ ವಸ್ತುವೇ ಭಾಜನವು. ಮಾನವನ ದೇಹದಲ್ಲಿ ಒಳಗಿದ್ದ ವಸ್ತು (ಪ್ರಾಣ, ಮನ ಜ್ಞಾನ) ಗಳೇ ಭಾಜನವಾಗಿರುವವು. ಅವನ್ನು ನಾವು ಲಿಂಗವೆನ್ನುತ್ತೇವೆ. ಕೊಡದಲ್ಲಿ ನೀರು ತುಂಬಿದರೆ ಅದೇ ಭಾಜನವಾಗುವದು. ಹಣ್ಣು ಕಾಯಿ ಗಳ ಸಿಪ್ಪೆ (ಚಿಪ್ಪು) ಗಳ ಒಳಗಿರುವ ತಿನ್ನತಕ್ಕ ಮೃದುವಾದ ಭಾಗವು, (ತೊಡವೆಯು) ಭಾಜನವು. ಸಕ್ಕರೆಯಲ್ಲಿ ಹೊರಗೆ ತೋರುವ ಅದರ ಮೈಯು ಭಾಂಡ. ಒಳಗಿರುವ ಮಧುರತೆಯು ಭಾಜನ. ಹೂಗಳಲ್ಲಿ ಅವು ಗಳ ಆಕಾರವೇ ಭಾಂಡ, ಒಳಗಿನ ಸುವಾಸನೆಯೇ ಭಾಜನ. ಸುಗಂಧ ದೆಣ್ಣೆಗಳಲ್ಲಿ ಹೊರಗೆ ತೋರುವ ಎಣ್ಣೆಯೇ ಭಾಂಡ. ಒಳಗಿರುವ ಸುಗಂಧವೇ ಭಾಜನ, ಕಾಳುಗಳೆಲ್ಲ ಭಾಂಡ. ಅವುಗಳಲ್ಲಿರುವ ಪೋಷಕ ತನವೇ ಭಾಜನ. ಹೀಗೆ ಎಲ್ಲೆಡೆಗೂ ಅರಿಯುವದು ಇದೇ ಭಾಜನ. (ಒಳಗಿನ) ಸ್ಥಳವು

(೬) ಅಂಗಾಲೇಪನ ಸ್ಥಳ :— ಅಂಗ+ಆಲೇಪನ = ಅಂಗಾ ಲೇಪನ. ಅಂಗ (ಭಾಂಡ) ವೆಂದರೇನೆಂಬುದು ಮೇಲೆ ಬಂದಿದೆ. ಈ ಅಂಗವು ಒಳಗಿನ ವಸ್ತುವಿನ ರಕ್ಷಣಾರ್ಥವಾಗಿರುವದು. ಆದರೆ ಅದೇನೂ

ಸ್ವತಂತ್ರವಾದುದಲ್ಲ. ಒಳಗಿನ ವಸ್ತುವೇ ಬೆಳೆದು ಈ ಅಂಗವಾಗಿದೆ. ಅಂತೇ ಇದಾದರೂ ಆ ಭಾಜನದ ಭಾಗವೇ. ಆದುದರಿಂದ ಇದು ಒಳಗಿನದರ ಲೇಪನ ( ಮೇಲಿರುವ ವಸ್ತು ) ವಲ್ಲ. ಆ ಲೇಪನವು ಅಂದರೇ ಅದರಲ್ಲಿಯೇ ಬೆಳೆದಿರುವ ಪದಾರ್ಥವು. ಅಂತೇ ಭಾಂಡ ಭಾಜನಗಳ ಐಕ್ಯವೇ ಅಂಗಾಲೇಪನವೆಂದು ಹೇಳುವ ಸ್ಥಳವಾಗಿದೆ.

( ೭ ) ಸ್ವ-ಪರಾಜ್ಞ ಸ್ಥಳ :— ಸ್ವ-ಪರ+ಅಜ್ಞ=ಸ್ವ-ಪರಾಜ್ಞ ಇದು ಮೂರು ಶಬ್ದಗಳ ಸಂಯೋಗವು. ಸ್ವ ಅಂದರೆ ಆತ್ಮವು ಇಲ್ಲವೆ ತಾನು ಪರ ಅಂದರೆ ತನ್ನ ಹೊರತಾಗಿರುವ ಬೇರೆ ಪದಾರ್ಥಗಳು. ಅಜ್ಞ= ತಿಳಿಯದಿರೋಣ. ಆದುದರಿಂದ ಸ್ವ ಪರಾಜ್ಞ ಅಂದರೆ ತಾನು ( ಆತ್ಮ ) ಹಾಗೂ ತನ್ನಿಂದಿತರವಾದ ಬೇರೆ ವಸ್ತು. ( ಅನಾತ್ಮ ) ಎಂದು ತಿಳಿಯುವದೇ ಐಕ್ಯನಲ್ಲಿ ಉಳಿದಿರುವದೇ ಇಲ್ಲ. ಸಮಯೋಜನದಿಂದ, ಎಲ್ಲವನ್ನು ತನ್ನಲ್ಲಿಯೇ ಅವನು ಸಮಾವೇಶಗೊಳಿಸಿರುವನು. ಎಲ್ಲೆಲ್ಲಿಯೂ ತಾನೇ ತಾನಾಗಿ ಬಿಟ್ಟಿರುವನು. ಇಲ್ಲಿಯೂ ಏಕಮೇವಾದ್ವಿತೀಯತ್ವವೇ ಅದೆ. ಇದೇ ಸ್ವ ಪರಾಜ್ಞ ಸ್ಥಳವು.

( ೮ ) ಭಾವಾಭಾವ ನಷ್ಟ ಸ್ಥಳ :— ಭಾವ+ಅಭಾವ=ಭಾವಾಭಾವ. ಭಾವ ಅಂದರೆ ಇರುವ ವಸ್ತು. ಅಭಾವ ವೆಂದರೆ ಇಲ್ಲದಿರುವ ವಸ್ತು. ಇವಕ್ಕೆ ಉಂಟು ಇಲ್ಲ ಎಂದು ಬಗೆಯುವ ವಸ್ತುಗಳೆಂದೂ ಅನ್ನಬಹುದು. ಇವನ್ನೇ ಸತ್ತು ಅಸತ್ತು ಎಂದು ಸಹ ಹೇಳಬಹುದು. ಜಗತ್ತಿನೊಳಗಿನ ಎಲ್ಲ ವಸ್ತುಗಳು ನಷ್ಟವಾಗಿ, ( ರೂಪಾಂತರವಾಗಿ ) ಹೋಗುವದರಿಂದ, ಅವುಗಳ ಅಷ್ಟರ ಮಟ್ಟಿಗಿನ ರೂಪವು ಅಭಾವವೆನಿಸುವದು. ಆದರೆ ಅವುಗಳಲ್ಲಿ ನಿತ್ಯವಾಗಿರುವ ವಸ್ತುವು ಒಂದಿರುವದಷ್ಟೇ! ಅದೇ ಆತ್ಮವು. ಹೊರಗಿನದಾದರೂ ಒಳಗಿನದರ ಭಾಗವೇ ಎಂದು ಭಾಂಡ ಭಾಜನದಲ್ಲಿ ಬಂದಿದೆ. ಆದಕಾರಣ ಈ ಭಾವಾಭಾವಗಳು ನಷ್ಟವಾಗಿ ಒಂದೇ ಒಂದು ಆತ್ಮತ್ವವು ತೋರುವದು. ಇದೇ ಭಾವಾಭಾವ ನಷ್ಟ ಸ್ಥಳವು.

( ೯ ) ಜ್ಞಾನ ಶೂನ್ಯ ಸ್ಥಳ :— ಇದು ಮಹಾಲಿಂಗದ ಲಿಂಗ ಸ್ಥಳಗಳಲ್ಲಿ ಕಡೆಯದು. ಜ್ಞಾನವೆಂಬುದೇ ಚಿತ್ತು ( ಚಿತ್‌ಶಕ್ತಿ ) ಈ

ಚಿಚ್ಛಕ್ತಿಯೇ ಪರಶಿವನ ಲೀಲೆಯನ್ನು ನಿರ್ವಹಿಸಲಿಕ್ಕೆ ನಿರ್ಮಿಸಲ್ಪಟ್ಟವಳು. ಆ ಪರಶಿವ (ಸ್ಥಳ) ನಿಂದಲೇ ಉದ್ಭವಿಸಿದಳು. ಐಕ್ಯನ ಈ ಲೋಕದೊಳಗಿನ ಲೀಲೆ ಎಲ್ಲ ತೀರಿತು. ಅವನು ಅನಂತ ಜ್ಞಾನದ (ಸ್ಥಳದ) ನಿಜಸ್ವರೂಪವನರಿತು ತಾನೂ ತತ್ (ಚಿಚ್ಛಕ್ತಿ-ಮಹಾಜ್ಞಾನ) ಸ್ವರೂಪನಾದನು. ಇನ್ನು ಆ ಚಿತ್ತು ಸ್ಥಳ (ಅನಂತ ಜ್ಞಾನ) ದಲ್ಲಿ ಸೇರಿದರೆ, ಕಡೆಯ ಕಾರ್ಯವು ಮುಗಿಯಿತು. ಆದುದರಿಂದ ಈ ಜ್ಞಾನ ಶೂನ್ಯವೆಂದರೆ, ಐಕ್ಯನ ಚಿತ್ತು ಸ್ಥಳದಲ್ಲಿ ಸಮರಸ ಹೊಂದುವದೇ ಆಗಿರುವದು. ಇದೇ ಜ್ಞಾನ ಶೂನ್ಯ ಸ್ಥಳವು.

ಹೀಗೆ ಒಂಭತ್ತು ಬಗೆಯಿಂದ, ಐಕ್ಯನು ತನ್ನ ಮಹಾಲಿಂಗದೊಡನೆ ಐಕ್ಯಹೊಂದುವನು. ಇದೇ ಆತನ ಲಿಂಗ ಪೂಜೆಯು. ಈ ಮೇರೆಗೆ ಷಟ್ ಸ್ಥಳ ಹಾಗೂ ಏಕೋತ್ತರ ಶತಸ್ಥಳಗಳ ಸಂಕ್ಷಿಪ್ತ ವಿವರಣೆಯಿದೆ. ಶಿವನು ಒಳಗಿನಿಂದ ನನ್ನನ್ನು ಪ್ರೇರೇಪಿಸಿದಂತೆ ಈ ವಿಷಯವನ್ನು ಬರೆದಿರುವೆನು. ಬಲ್ಲವರು, ಅದನ್ನು ಮನಸ್ಸುಹಾಕಿ ತಿದ್ದಿ ನನ್ನನ್ನು ಉದ್ಧರಿಸುವರೆಂದೂ ನಂಬಿರುವೆನು.

ಈ ಪ್ರಕಾರ ಷಟ್ ಸ್ಥಳಗಳ ಸಕ್ರಮ ವಿಚಾರವುಂಟು. ಆದರೆ ಇದನ್ನು ಕ್ರಮಕ್ರಮವಾಗಿ ಪಡೆಯಲು, ಶ್ರೀ ಬಸವಣ್ಣನವರ ಅನುಮತಿ ಇಲ್ಲ. ಅವರು- "ಕ್ರಮ ಕ್ರಮವಾಗಿ ಪಡೆಯುವೆನೆಂದರೆ ನಾನು ಚಿರಜೀವಿಯೇ? ಅಮೃತವ ಸೇವಿಸಿದವನೇ? ಮರು ಜೀವಣಿಯ ಸ್ವಿಕರಿಸಿದವನೇ? ಇಲ್ಲ! ಆದುದರಿಂದ ನಾನು ಆವ ಸ್ಥಳದಲ್ಲಿ ನಿಂತಿದ್ದರೂ ಅಲ್ಲಿಯೇ ಷಡ್ ಸ್ಥಳಗಳು ಬಂದು ಕೂಡಿಕೊಳ್ಳದಿದ್ದರೆ ಸುಡುವೆನು ಈ ತನುವನು" (ಜನ್ಮವು ನಿರರ್ಥಕ ಎಂಬ ಭಾವ) ಎಂದು ನುಡಿದಿದ್ದಾರೆ. ಅವರ ಈ ಅಭಿಪ್ರಾಯವು ಸಮಂಜಸವಾದುದಾಗಿದೆ. ಒಂದು ಸಾಧ್ಯವಾದ ಮೇಲೆ ಮತ್ತೊಂದನ್ನು ಪಡೆಯಲು ಆಶಿಸಿದರೆ, ನಮಗೆ ಒಂದೇ ಏಕೆ ಇಂತಹ ಅನೇಕ ಜನ್ಮಗಳಾದರೂ ಸಾಲವು. ಆ ಕಾರಣ ಭಕ್ತನು ಯಾವದೇ ಸ್ಥಳದಲ್ಲಿರಲಿ. (ಮಹೇಶ್ವರನೇ ಇರಲಿ, ಪ್ರಸಾದಿ ಪ್ರಾಣಲಿಂಗಿಯೇ ಇರಲಿ) ಅವನು ಷಟ್ ಸ್ಥಳಗಳನ್ನು ಅನುಭೋಗಿಸುವದು ಅವಶ್ಯವದೆ. ಅಂತೇ ಅವರು ಪ್ರತಿಯೊಂದು ಸ್ಥಳದಲ್ಲಿ ಆರಾರು ಸ್ಥಳವೆಣಿಸಿ (೬×೬=೩೬)

ಮೂವತ್ತಾರು ಸ್ಥಳಗಳನ್ನು ತಮ್ಮ ವಚನದಲ್ಲಿ ವಿವರಿಸಿರುವರು. ಶಕ್ಯವಾದಮಟ್ಟಿಗೆ ಇದೇ ದಾರಿ ಹಿಡಿದು ಭಕ್ತರೆಲ್ಲರೂ ನಡೆಯುವದು ವಿಹಿತವಾಗಿದೆ.

ಇಲ್ಲಿ ಒಂದು ಶಂಕೆಯು ಅನೇಕರಲ್ಲಿ ಉದ್ಭವಿಸುವದು. ಅದು:— ಒಂದೊಂದೇ ಸ್ಥಳ ( ಪಟ್ಟಲ ) ವನ್ನು ಏರುವದು ಬಹು ಕಠಿಣವಾಗಿರುವಾಗ ಅವನ್ನೆಲ್ಲ ಒಮ್ಮೆಲೇ ಆಚರಿಸ ಹೇಳುವದಾದರೆ "ಎತ್ತಲ ರದ ಹಾಸುಗಲ್ಲು ಕಟ್ಟಿಕೊಂಡು ತಿರುಗಣಿ ಮಡುವಿನಲ್ಲಿ ಈಜಬೇಕೆಂದು ಹೇಳಿದಂತೆಯೇ ಸರಿ." ಎಂದು ಉದ್ಗಾರವೆತ್ತಬಹುದು. ಈ ಸಂಗತಿಯು ಸಕೃದ್ದರ್ಶನಕ್ಕೆ ಸತ್ಯವೆನ್ನಿಸುವಂತಿದ್ದರೂ, ತಿಳಿದುನೋಡಲು ಅಷ್ಟೇನೂ ಕಠಿಣವಾದುದಿರುವದಿಲ್ಲ. ಹಾಗಿದ್ದರೆ ಅಣ್ಣನವರು ಮೇಲಿನ ವಚನವನ್ನು ಸಾರುತ್ತಲೇ ಇರಲಿಲ್ಲ! ಹೇಗಾದರೂ ಮಾರ್ಗಕ್ರಮಣ ಮಾಡುವದೇ ಅದೆ. ಆಗ ಒಂದು ವಸ್ತ್ರವನ್ನು ಧರಿಸಿಕೊಂಡು ಹೋದರೂ ಅಷ್ಟೇ, ೫।೬ ಉಡುಪು ಧರಿಸಿಕೊಂಡು ಹೋದರೂ ಅಷ್ಟೇ. ಅವುಗಳಿಂದ ಹೆಚ್ಚಿಗೆ ಭಾರವನ್ನು ಹೊತ್ತುಕೊಂಡಂತೆ ಭಾಸವಾಗುವದಂತೂ ಇಲ್ಲೇ ಇಲ್ಲ. ಅನೆಲ್ಲ ಒಯ್ಯಲ್ಪಡುವದರಿಂದ, ಪ್ರವಾಸದಲ್ಲಿ ಅವುಗಳ ಉಪಯುಕ್ತತೆಯಿಂದ, ಅನುಕೂಲತೆಯು ಹೆಚ್ಚಿ ಸುಖಕ್ಕೆ ಮಾತ್ರ ಕಾರಣವಾಗುವದು ಷಟ್ ಸ್ಥಳಗಳನ್ನು ಒಮ್ಮೆಲೇ ಅನುಸರಿಸುವಲ್ಲಿಯೂ ಹೀಗೇ ಆಗುವದು. ಆದರೆ ಮೊದಲು ಷಟ್ ಸ್ಥಲಗಳ ಸ್ವರೂಪವನ್ನು ಸರಿಯಾಗಿ ಆಕಲನ ಮಾಡಿಕೊಳ್ಳಬೇಕಾಗುವದು. ಬಳಿಕ ಆಚರಿಸುವಾಗ ತುಸು ಹೆಚ್ಚು ಸಾವಧಾನವನ್ನು ವಹಿಸಬೇಕಾಗುವದು ಇಷ್ಟೇ. ಮನವಿದ್ದರೆ ಎಲ್ಲವೂ ಸಾಧ್ಯವಾಗುವದು. ಅಸಾಧ್ಯವೆಂಬುದು ಜಗದಲ್ಲಿ ಆದಾವುದೂ ಇಲ್ಲ. ಯುರೋಪ ಅಮೇರಿಕಾ ಮೊದಲಾದಕಡೆಯ ಸಾಹಸೀ ಜನರ ಕೃತಿಗಳನ್ನು ಸ್ವಲ್ಪ ಲಕ್ಷಕ್ಕೆ ತರಬೇಕೆಂದು ಕೇಳಿಕೊಳ್ಳುವೆನು. ಕಾಲ ಪರಿಸ್ಥಿತಿಯನ್ನು ಬಗೆದು ಶಕ್ಯವಿದ್ದಮಟ್ಟಿಗೆ ಒಟ್ಟಾಗಿ ಷಟ್ ಸ್ಥಲಾಚರಣೆ ಮಾಡುವದೇ ಒಳ್ಳೆಯದೆಂದು ನನ್ನ ಈ ಕಿರಿಯನ ಅಲ್ಪ ಅನುಭವವದರೂ ಉಂಟು.

ಷಡ್ಲಿಂಗಗಳ ಬದಲು ಇಲ್ಲಿ ಷಟ್ ತ್ರಿಂಶತ್ ಲಿಂಗಗಳಾಗುವವು ಇಲ್ಲಿ ಅರ್ಪಿತವು ಅದು ಹೇಗೆ ಸಂಭವಿಸುವದೆಂದು ಕೇಳಬಹುದು. ಆ ಪಟವನ್ನು ಕೆಳಗೆ ಕೊಡಲಾಗಿದೆ.

## ಸಿಂಹಾವಲೋಕನ

ಷಟ್ ಸ್ಥಲದ ಲೇಖಗಳು ಇಲ್ಲಿಗೆ ಮುಗಿದವು. ಇವುಗಳ ಸರಿಯಾದ ಜ್ಞಾನವನ್ನು ತಂದು ಕೊಡುವ ಗೊಸೆಯಿಂದಲೇ ಶ್ರೀ ಚನ್ನಬಸವೇಶ್ವರ ದೇವರು ಅವನ್ನು ೧೦೧ ಸ್ಥಳಗಳಾಗಿ ವಿಭಾಗಿಸಿ ಸೂಕ್ಷ್ಮರೀತಿಯಿಂದ ವಿಸ್ತರಿಸಿರುವರು. ಇವನ್ನು ನಿರೀಕ್ಷಿಸಿದರೆ ಮುಖ್ಯವಾಗಿ ಕೆಳಗೆ ತೋರಿಸಿದ ಸಂಗತಿಗಳಿಗೆ ಮಹತ್ವವಿದ್ದುದು ಕಂಡುಬರುತ್ತದೆ. ಅವಾವುವೆಂದರೆಃ-

(೧) ಈಶ್ವರ ಸ್ಥಳಃ-- ಸಂಸಾರ ಹೇಯು ( ಪ್ರಪಂಚ ಪರಾಂಙ್ಮುಖತೆ ) ನಿಜವಾಗಿ ಉಂಟಾಗದಿದ್ದವನು ( ಆ ಭಕ್ತನು ) ಈಶ್ವರನೆನಿಸುವದು ವ್ಯರ್ಥ ಅವನಿಗೆ ಲಿಂಗಧಾರಣ ಮಾಡುವದರಿಂದ ಪ್ರಯೋಜನವಾಗಲಾರದು. ಶ್ರೀ ಬಸವೇಶ್ವರ ದೇವರು– " ಬಗರ ಬೆಟ್ಟಕ್ಕೆ ಒಂದು ಕಲ್ಲು ಒಗೆದರೆ ಅದು ಅದನ್ನು ಬಿಡದೆ ಹಿಡಿದುಕೊಳ್ಳುವದು. ಆದರೆ ಅದರಿಂದ ಆ ಬೆಟ್ಟವೇನು ಭಕ್ತನಾಗಬಲ್ಲುದೇ ? ಆ ಕಲ್ಲೇನು ಲಿಂಗವೆನಿಸೀತೇ ? ಒಗೆದವನು ಗುರುವೆನಿಸುವನೇ ? " ಇತ್ಯಾದಿ ನುಡಿದಿರುವರು. ಇಂತಹರ ಸಲುವಾಗಿಯೇ ಇರುವದು

(೨) ಮಹೇಶ್ವರ ಸ್ಥಳಃ – ಆಗಮತ್ರಯು ( ಸತ್ ಕ್ರಿಯಾಗಮ ಸದ್ ಭಾವಾಗಮ ವಿಹಿತ ಜ್ಞಾನಾಗಮ ) ಲಿಂಗವು ಚನ್ನಾಗಿ ನೆಲಿಸದಿದ್ದವನು ಮಹೇಶ್ವರನಾಗಲಾರನು. ಅವನಿಗೆ ಇಷ್ಟ ( ಆಚಾರ )ಲಿಂಗವು ಇಲ್ಲವೆ ಸದಾಚಾರವು ಪ್ರಾಪ್ತವಾಗಲಾರದು. ಈತನು ಬರಿಯ ಹೆಸರಿನ ಮಹೇಶ್ವರನು ಮಾತ್ರ. ಶ್ರೀ ಬಸವಣ್ಣನವರು— " ತೊರೆಯ ಮೀವ ಅಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ, ಪರಧನ ಪರಸತಿ ತುಂಬ ಬಿಡದೆ ನೀವು ತೊರೆಯ ಮಿಂದರೆ, ಆ ತೊರೆ ಬರುದೊರೆ ಕಾಣಾ "ಎಂದು ಹೇಳಿದುದು, ಈ ಅದ್ದ ಹೆಸರಿನ ಮಹೇಶ್ವರರನ್ನು ಕುರಿತೇ. ( ಇಲ್ಲಿ ಆಗಮವೆಂದರೆ, ಮನಃಪೂರ್ವಕ ಪ್ರಯತ್ನದಿಂದ ಬರಮಾಡಿಕೊಳ್ಳೋಣ ಇಲ್ಲವೇ ಪಡೆಯೋಣವೆಂದರಿಯಬೇಕು.

( ೩ ) ಪ್ರಸಾದಿ ಸ್ಥಳಃ— ಅರ್ಪಿತತ್ರಯ ( ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತ ) ಲಿಂಗವು ದೃಢಪಡದಿದ್ದವನು ಪ್ರಸಾದಿ ಸ್ಥಳಕ್ಕೆ ಅಯೋಗ್ಯನು. ಅಂತಹನಿಗೆ ಶಿವತ್ವವು ( ಶಿವಲಿಂಗದಲ್ಲಿ ಬೆರೆಯುವದು ) ಸಹಸಾ ಸಂಭವಿಸದು, ನಿರಹಂಕಾರವಂತೂ ಇಲ್ಲವೇ ಇಲ್ಲ. [ ಇಲ್ಲಿ ಅರ್ಪಿತವೆಂದರೆ ಅರ್ಪಿಸುವ ಪದಾರ್ಥಗಳೆಲ್ಲ ಶಿವನವೇ ಎಂದು ದೃಢವಾಗಿ ಭಾವಿಸಿಕೊಂಡು ತಾನು ಅವುಗಳಿಗೆ ಬಾಹ್ಯವಾಗಿರುವದು ಎಂದು ತಿಳಿಯಬೇಕು. ]

ಪ್ರಾಣಲಿಂಗಿ ಸ್ಥಳಃ— ನಿರಾಗಮತ್ರಯ ( ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ ) ಲಿಂಗವು ಅಳವಡದಿದ್ದವನು, ತಾನು ಪ್ರಾಣಲಿಂಗಿ ಎಂದು ಹೇಳುವದು ತೀರ ನಿರರ್ಥಕ! ಅವನಿಗೆ ಪ್ರಸಾದಿತ್ವವು ( ಜಂಗಮಲಿಂಗೈಕ್ಯವು ) ಒದಗಲಾರದು. [ ಇಲ್ಲಿ ನಿರಾಗಮವೆಂದರೆ ದೇಹ, ಭಾವ, ಪ್ರಪಂಚಗಳು ಕನಸು ಮನಸಿನಲ್ಲಿ ಸಹ ಎಷ್ಟು ಮಾತ್ರವೂ ಸುಳಿಯದಂತೆ ಮಾಡಿಕೊಳ್ಳೋಣ. ನಷ್ಟಾಗಮವೆಂದರೆ ಹೆಂಡಿರು ಮಕ್ಕಳು, ಧನಧಾನ್ಯಾದಿ ತನ್ನ ಎಲ್ಲ ಸಂಸಾರದಲ್ಲಿ ಪರಿಪೂರ್ಣ ಅಲಿಪ್ತತೆ ಹೊಂದೋಣ, ಇಲ್ಲವೆ ಅವುಗಳ ನಾಮ ರೂಪ ಗುಣಾದಿಗಳನ್ನೆಲ್ಲ ಹೋಗಲಾಡಿಸಿ ಅವನ್ನು ಕೇವಲ ಶಿವರೂಪ, ( ಪ್ರಸಾದರೂಪ ) ವೆಂದು ಬಗೆಯೋಣ. ]

( ೫ ) ಶರಣ ಸ್ಥಳಃ—ನಿಷ್ಪತ್ತಿ ತ್ರಯ ( ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನ ನಿಷ್ಪತ್ತಿ, ) ಲಿಂಗವು ಸ್ಥಿರ ಪಡದಿದ್ದವನು, ಶರಣನಾಗುವದು ದುರಾಪಾಸ್ತವೇ ಸರಿ! ಅವನಿಗೆ ಪ್ರಸಾದ ಲಿಂಗವು ಸಾಧಿಸಲಾರದು. ಸಾಹಜಿಕತೆಯ ಪ್ರಕಾಶವೂ ತೋರಲಾರದು. [ ಇಲ್ಲಿ ನಿಷ್ಪತ್ತಿ ಎಂದರೆ, ಕ್ರಿಯಾಭಾವ ಜ್ಞಾನಗಳನ್ನು ತನಗೆ ಎಷ್ಟು ಮಾತ್ರವೂ ಸಂಬಂಧಿಸದಂತೆ ಮಾಡಿಬಿಡುವದು. ಅವೆಲ್ಲ ಕೇವಲ ಶಿವಲೀಲಾ ಸ್ವರೂಪದಲ್ಲಿಯೇ ಸಾಗುತ್ತಿರುವಂತೆ ಸಾಧಿಸುವದು. ]

( ೬ ) ಐಕ್ಯಸ್ಥಳ :— ಈ ಐದು ಸ್ಥಳಗಳಲ್ಲಿ ಸರಿಯಾಗಿ ಪ್ರಗತಿ ಪಡೆಯುತ್ತ ಮುಂದು ವರಿದವನಲ್ಲಿ ಐಕ್ಯತ್ವವು ತನ್ನಿಂದ ತಾನೇ ಬೇರೂರುವದು. ಅವನಿಗೆ ಆ ವಿಷಯದಲ್ಲಿ ಬೇರೆ ಕಷ್ಟ ಪಡಬೇಕಾಗಿಲ್ಲ.

ಷಟ್ ಸ್ಥಳಗಳನ್ನನುಸರಿಸುವ, ಲಿಂಗಾಂಗಿಗಳು, ಈ ಸಂಗತಿಗಳ ಕಡೆಗೆ ಒಳಿತಾಗಿ ಲಕ್ಷ್ಯವೀಯಬೇಕೆಂದು ಬಿನ್ನವಿಸುವೆನು.

ಕಂದ :- ಪರಿಪೂರಕವಾದುವು ಸದ್ |
ಗುರುಕೃಪೆಯಿಂ ಮುಖ್ಯ ಷಟ್ ಸ್ಥಲದ ಲೇಖಗಳು ||
ಅರಿತವನನಿತಲ್ಲದೊಡಂ |
ಪರಮಾತ್ಮನು ಪ್ರೇರಿಸಿದ ತೆರದಿ ಪೊರಟಹವು ||೧||

ಪೂರಕವಾಗಿವುಗಳಿಂದು |
ಸೇರುವ ಕೆಲಬೇರೆ ವಿಷಯಗಳ್ ನೂತನನುಡಿಯಲ್ ||
ಕೋರಿಹನಾಮನದೊಡೆಯಂ |
ಕಾರುಣ್ಯದಿನೋದುಗರು ಪರಾಮರ್ಶಿಪರೇ ||೨||

# ಮಾಯಾವಾದದ ಅಂಧ ತಮಸ್ಸು

ಲೇ:- ಶ್ರೀ ಅನ್ನದಾನೀಶ್ವರ ವಿರಕ್ತಮಠ. ಶಿಕ್ಷಕರು:- ಶ್ರೀ ಬಸವೇಶ್ವರ ಟ್ರೇನಿಂಗ ಕಾಲೇಜ ಬಾಗಲಕೋಟೆ

---

ಜಗತ್ತು ಮಿಥ್ಯೆ ಎಂದು ಹೇಳುವವರು ಮಿಥ್ಯಾವಾದಿಗಳು. ಮಿಥ್ಯಾವಾದಿಗಳ ನಡೆನುಡಿಗಳು ಮಿಥ್ಯಾಚಾರದಲ್ಲಿಯೇ ಪರಿಣಮಿಸುತ್ತವೆ. ತಾನು ಕಂಡದ್ದು ಮಾತ್ರ ಸತ್ಯವೆಂದು ಹೇಳುವದು ಭ್ರಮಾತ್ಮಕ ತತ್ವವಾಗಿರುವಂತೆಯೇ ಜಗತ್ತು ಮಾಯೆಯಿಂದ ತೋರುವದೆಂದೂ, ಅದು ಸತ್ಯವಲ್ಲವೆಂದು ಪ್ರತಿಪಾದಿಸುವದೂ ಭ್ರಾಂತಿಮೂಲಕವಾದುದಾಗಿಯೇ ಇದೆ.

“ಸರ್ವವೂ ಶಿವಮಯವು. ಜಗತ್ತು ಶಿವಶಕ್ತಿ ವಿಲಾಸವು. ಶಿವನ ಲೀಲಾ ವಿನೋದವೇ ಈ ವಿಶ್ವವು. ತಾನು ಮೊದಲ್ಗೊಂಡು ಚರಾಚರ ಸೃಷ್ಟಿಯೆಲ್ಲ ವಿಭೂತಿಮಯವು. ಈಶ್ವರ ಲೀಲಾ ವೈಭವದ ಅನುಭೂತಿಯೇ ಆನಂದದ ಸೆಲೆಯು” ಇತ್ಯಾದಿಯಾಗಿ ಶರಣರು, ಮಹಾತ್ಮರು, ಶಿವಯೋಗಿಗಳು, ತಮ್ಮ ದಿವ್ಯಾನುಭವದ, ದಿವ್ಯ ಆನಂದದ, ಅಮರ ಜೀವನ ಸಂದೇಶವನ್ನು ಜಗದ್ಹಿತಾರ್ಥವಾಗಿ ಸಾರಿರುವರು.

ಸೌಂದರ್ಯಮಯವಾದ, ಶಿವಮಯವಾದ, ಸತ್ಯವಾದ, ಶ್ರೇಯೋಮಯವಾದ, ದಿವ್ಯವಾದ ಈ ಬ್ರಹ್ಮಾಂಡವನ್ನು ನೋಡಿ ನಲಿಯುವ ದಿವ್ಯ ದರ್ಶನವಿಲ್ಲದೇ, ದಿವ್ಯ ದೃಷ್ಟಿಯಿಲ್ಲದೇ, ನಾನು ಮಾತ್ರ ಬ್ರಹ್ಮ ಎಂಬ ಸಂಕುಚಿತ ತತ್ವವು ಏಕಪಕ್ಷೀಯವಾಗಿಯೂ, ಅಪೂರ್ಣವಾಗಿಯೂ ಇದೆ.

ಮಾಯಾವಾದದ ಅನಿಷ್ಟ ಪರಿಣಾಮವು ಮಾನವ ಜೀವನದ ಮೇಲೆ ಬಹು ಭಯಂಕರವಾಗಿ ಆಯಿತು. ರಾಷ್ಟ್ರೀಯ ಅಂತಃಸತ್ವ ಕರ್ತೃತ್ವ ಶಕ್ತಿಗಳೇ ಮಾಯಾವಾದದಿಂದ ಹ್ರಾಸಹೊಂದುತ್ತ ಬಂದವು

ಸಾಹಿತ್ಯ, ತತ್ವ, ಕಲೆ, ವಿಜ್ಞಾನ, ಸಮಾಜವಾದ, ಇತ್ಯಾದಿಗಳ ಬೆಳೆವಣಿಗೆಯು ಮಾಯಾವಾದದಿಂದ ಕುಂಠಿತವಾಗಲಿಕ್ಕೆ ಅನುವು ಸಿಗುತ್ತದೆ. ಹೀಗೇ ಅವನತಿಗೆ ಅನುವು ಸಿಗುವದು ಮನಸ್ಸಿನ ಸರ್ವತೋಮುಖ ವಿಕಾಸಕ್ಕೆ, ವ್ಯಕ್ತಿಯ ನಾನಾ ಮುಖವಾದ ವಿಕಾಸಕ್ಕೆ. ಧಾರಾಳವಾದ ಗಂಡಾಂತರವೇ ಸರಿ. ಮಾಯಾವಾದದಿಂದ ಪ್ರಪಂಚ ಬಿಟ್ಟು ಅರಣ್ಯಕ್ಕೆ ಓಡಿಹೋಗುವ ಪ್ರವೃತ್ತಿಯು ಪ್ರಾರಂಭವಾಗುತ್ತದೆ. ಸಂಘ ಪ್ರವೃತ್ತಿಗೆ ವಿಘ್ನಬಂದರೆ ಮನುಷ್ಯನ ಸಹಜ ಪ್ರವೃತ್ತಿಗಳ ಉದಾತ್ತೀಕರಣವಿಲ್ಲವೆಂದೂ, ಸಂಸ್ಕೃತಿಯ ತೇಜ ಓಜಗಳು ಗುಪ್ತಗಾಮಿನಿ ಗಂಗೆಯಂತೆ ನಿರುಪಯೋಗಿಯೆಂದೂ ಮಾನಸ ಶಾಸ್ತ್ರವು ಘಂಟಾಘೋಷವಾಗಿ ಸಾರುತ್ತದೆ. ಸನ್ಯಾಸಿಯ ಕಾವೀ ವಸ್ತ್ರ ಧಾರಣೆಗೆ ಇಲ್ಲದ ಸಲ್ಲದ ಮಹತ್ವ ಬಂದು ಪ್ರಪಂಚ ಯೋಗಿಯ ಸಾದಾ, ಸರಳ, ರಮ್ಯ, ಸುಂದರ, ಸಹಜ, ಸಂಯಮ ಪೂರ್ಣ, ಅನಾಸಕ್ತ ಜೀವನಕ್ಕೆ ಪ್ರಾಮುಖ್ಯತೆ ಬರುವದಿಲ್ಲ.

ಬರಬರುತ್ತ ಡಾಂಭಿಕ ತನಕ್ಕೂ, ಗುಪ್ತ ವ್ಯಭಿಚಾರಕ್ಕೂ, ಕರ್ಮ ಸನ್ಯಾಸಕ್ಕೂ ಮಹತ್ವ ಬರುತ್ತದೆ. ರಾಷ್ಟ್ರದ ವೀರ್ಯವತ್ತಾದ ವಾತಾವರಣವೇ ಮಾಯವಾಗುತ್ತ ಬರುತ್ತದೆ. ಇದು ರಾಷ್ಟ್ರಕ್ಕೆ ಅಪಾರ ಹಾನಿಯೇ ಸರಿ.

ಮಾಯಾವಾದವು ವೈಯಕ್ತಿಕ ಮೋಕ್ಷಕ್ಕೆ ಮಾತ್ರ ಉತ್ತೇಜನ ಕೊಡುವದರಿಂದ ಸಾಮೂಹಿಕ, ಜಾಗತಿಕ ಬ್ರಹ್ಮಾನಂದಕ್ಕೆ ಚ್ಯುತಿ ಬರುತ್ತದೆ.

ಅಧ್ಯಾತ್ಮವಾದದ ಸಹಜ ಕ್ರಿಯಾಶಕ್ತಿಗೆ, ರಚನಾತ್ಮಕ ಶಕ್ತಿಗೆ, ಮಾಯಾವಾದವು ವಿರೋಧವಾಗಿದೆ. ಸುಡುವ ಕಟ್ಟಿಗೆಯು ಉಳಿದ ಕಟ್ಟಿಗೆಗಳನ್ನು ಸುಡುತ್ತ ತಾನು ವಿಭೂತಿಯಾಗುತ್ತ ಸಾಗುವಂತೆ ಅಧ್ಯಾತ್ಮ ಯೋಗಿಯು ತಾನು ಪರಮಾನುಭಾವದಿಂದ ಮಿನುಗುತ್ತ ಹಿಂಬಾಲಕರನ್ನು ಮಿನುಗಿಸುತ್ತ ಇಡೀ ಜಗತ್ತನ್ನು ಜಗ್ಗುತ್ತ ಸಾಗುವನು. ಮಾಯಾವಾದದಿಂದ ಪ್ರಪಂಚ ಬೇರೆ ಮತ್ತು ಪರಮಾರ್ಥ ಬೇರೆ ಎಂಬ ಭೇದ ಭ್ರಾಂತಿಯು ರೂಢ ಮೂಲವಾಗುತ್ತದೆ.

ಈ ಭೇದವು ಮಾನವರಲ್ಲಿ ಕೃತ್ರಿಮ ವರ್ಗೀಕರಣಕ್ಕೆ ಇಂಬು ಮಾಡಿಕೊಡುತ್ತದೆ. ಪ್ರಪಂಚ ಪರಮಾರ್ಥ ಸಮನ್ವಯ ದೃಷ್ಟಿ ಅಥವಾ ಅಂಗ ಲಿಂಗ ಸಾಮರಸ್ಯ ದೃಷ್ಟಿಯು ಹೃದಯ ಪಲ್ಲಟಕ್ಕೂ ವಿಶ್ವ ಸಮೀಕರಣಕ್ಕೂ ಭದ್ರ ತಳಹದಿಯನ್ನು ಹಾಕಬಲ್ಲದು. ಭೇದವು ವಿಶ್ವ ಸಮೀಕರಣದ ಭವ್ಯ ಕನಸನ್ನು ಕನಸನ್ನಾಗಿಯೇ ಉಳಿಸುತ್ತದೆ, ನನಸನ್ನಾಗಿ ಮಾಡುವದಿಲ್ಲ.

ಜಗನ್ಮಿಥ್ಯೆ ಎಂದು ವೇದಾಂತಿಯು ಹೇಳಿದರೆ ಬ್ರಹ್ಮ ಮಿಥ್ಯೆ ಎಂದು ಭೌತಿಕವಾದಿಯು ಹೇಳಬಹುದು. ಆದರೆ ಆಧ್ಯಾತ್ಮಯೋಗಿಯು ಎಲ್ಲವೂ ಶಿವಮಯವೆಂದು ಪೂರ್ಣ ದರ್ಶನಕ್ಕೆ, ಪ್ರತಿಭಾನ್ವಿತ ದರ್ಶನಕ್ಕೆ ಭೌತಿಕವಾದಿಯನ್ನು ವೇದಾಂತಿಯನ್ನು ಕರೆದು ತರಿಸುತ್ತಾನೆ. ವಿಶ್ವವ್ಯಾಪಕ ದಿವ್ಯ ದರ್ಶನವೇ ಆಧ್ಯಾತ್ಮಯೋಗಿಯ ದರ್ಶನವು. ಇದೇ ದಿವ್ಯ ಪ್ರತಿಭೆಯು.

ರಚನಾತ್ಮಕ ವಿಜ್ಞಾನದ ಸಾಹಸ, ಉತ್ಸಾಹ, ಧೈರ್ಯ, ಸಂಶೋಧನೆ, ರಚನಾವಿಲಾಸ, ಕಲ್ಯಾಣದೃಷ್ಟಿ ಮುಂತಾದ ಗುಣಗಳು ಮಾಯಾವಾದದಿಂದ ಕಳೆಗುಂದುತ್ತಾ ಹೋಗುತ್ತವೆ. ಮಾಯಾವಾದವನ್ನು ಶಕ್ತಿವಾದವನ್ನಾಗಿ ಪರಿವರ್ತಿಸುವ ದಿವ್ಯಶಕ್ತಿ ನಮ್ಮ ಶರಣರ ತತ್ವಜ್ಞಾನದಲ್ಲಿದೆ.

ಶರಣರ ತತ್ವಜ್ಞಾನವು ಜೀವಜಾಲವನ್ನು ಶಿವಲೀಲೆಯಾಗಿಯೂ, ಭವಿಜಗತ್ತನ್ನು ಭಕ್ತನಾಗಿಯೂ, ಮರಣಿಗಳನ್ನು ಶರಣರಾಗಿಯೂ ದಿವ್ಯವಾಗಿ ಪರಿವರ್ತಿಸುತ್ತದೆ. ಏತರಿಂದ? "ಸರ್ವಂ ಶಿವಮಯಂ ಜಗತ್" ಎಂಬ ದಿವ್ಯ ದೃಷ್ಟಿಯಿಂದ, ಅಂಥ ದಿವ್ಯಸಾಧನದಿಂದ.

ಶರಣರ ಕಾಲದಲ್ಲಿ ಜನಜೀವನವು ಉತ್ಸಾಹ, ಸಾಹಸ, ಧೈರ್ಯ, ಶಾಂತಿ, ಸಂಯಮ, ಬುದ್ಧಿ ಶಕ್ತಿ, ಸಂಶೋಧನೆ ಇತ್ಯಾದಿ ಉನ್ನತಗುಣಗಳಿಂದ ಶೋಭಿಸುವಂತೆ ಅವರ ತತ್ವವು ವಿಶ್ವವ್ಯಾಪಕವಾಗಿತ್ತು. ಇಡೀ ಬ್ರಹ್ಮಾಂಡವನ್ನೇ ಒಳಗೊಳ್ಳುವದಾಗಿತ್ತು. ಮಾಯಾವಾದದ ಅಂಧ ಮನಸ್ಸು ಶರಣ ಜೀವನದಲ್ಲಿ ಎಷ್ಟೂ ಆವರಿಸಿದ್ದಿಲ್ಲ. ಶಿವ-ಶಕ್ತಿ ಲಿಂಗಾಂಗ

ಸಾಮರಸ್ಯ, ಪ್ರಸಾದ, ಲಿಂಗಭೋಗ, ಅರ್ಪಣ ಇತ್ಯಾದಿ ಪಾರಿಭಾಷಿಕ ಶಬ್ದಗಳಲ್ಲಿ ಉನ್ನತ ಜೀವನದ ಉಚ್ಚ ಸಂಸ್ಕೃತಿಯ ಪರಿವರ್ತನ ಶೀಲ ಭಾವದ ಹೃದಯ ಪಲ್ಲಟಗೆಯ್ದು ಜ್ಞಾನದ ಬೆಳಕು ತುಂಬಿರುವದು ಕಂಡು ಬರುತ್ತದೆ.

ಶರಣತತ್ತ್ವದ ಪ್ರಕಾರ ಭಕ್ತನು ಅನಾಸಕ್ತಯೋಗಿಯು. ಪ್ರಾಣಲಿಂಗಿಯು ಸಮದರ್ಶಿಯು ಶರಣನು ಸರ್ವಾರ್ಪಣದ ಮೂಲಕ ನಿರಹಂಕಾರ ಮೂರ್ತಿಯಾದ ಅರ್ಪಣ ಯೋಗಿಯು. ಈ ಅನಾಸಕ್ತಿ ಈ ಸಮದರ್ಶಿತ್ವ, ಈ ಅರ್ಪಣ ತತ್ತ್ವಗಳು ಮಾಯಾವಾದವನ್ನೂ ಅದರ ಅಂಧ ತಮಸ್ಸಿನ ವಾತಾವರಣವನ್ನೂ ಶಿವಶಕ್ತಿಯನ್ನಾಗಿಯೂ ಶಿವತೇಜಸ್ಸನ್ನಾಗಿಯೂ ಪರಿಣಮಿಸುವಂತೆ ದಿವ್ಯ ಅಂತಃಸತ್ತ್ವವುಳ್ಳವುಗಳಾಗಿವೆ.

ಈ ಪ್ರಪಂಚವು ಮಾಯೆಯಲ್ಲ. ಹೊನ್ನು, ಹೆಣ್ಣು, ಮಣ್ಣು ಮಾಯೆಯಲ್ಲ.

ಈ ಬ್ರಹ್ಮಾಂಡವು ಪರಶಕ್ತಿಯ ವ್ಯಕ್ತಸ್ವರೂಪವು. ಪರಬ್ರಹ್ಮನ ಸುವ್ಯಕ್ತ ಸ್ವರೂಪವು. ಶಿವ-ಶಕ್ತಿಯರು ಚಂದ್ರ-ಚಂದ್ರಿಕೆಯಂತೆ ಭಿನ್ನರಲ್ಲ. ಅವಿನಾಭಾವಸಂಬಂಧವುಳ್ಳವರು ಶಿವನಿಗೆ ಶಕ್ತಿಯಿದ್ದಂತೆ, ಅನ್ನ, ಪ್ರಾಣ, ಮನೋಕೋಶಗಳನ್ನು ಆವರಿಸಿ ವ್ಯವಹರಿಸುವ ಜೀವನಿಗೆ ಭಕ್ತಿ ಸರ್ವಾರ್ಪಣಪೂರ್ಣಭಕ್ತಿಯು ಶಕ್ತಿಯಾಗಿದೆ ಈ ಸರ್ವಾರ್ಪಣ ಭಕ್ತಿಯಲ್ಲಿ ಅನಾಸಕ್ತಿ, ಸಮದರ್ಶಿತ್ವ, ಅರ್ಪಣತತ್ತ್ವಗಳು ಸಮರಸವಾಗಿವೆ. ಜ್ಞಾನದ ದಿವ್ಯತೇಜಸ್ಸೂ ಇದೆ.

ಈ ವಿಶ್ವವು ವ್ಯಕ್ತಶಿವನು. ವಿಶ್ವದ ಪಂಚಭೌತಿಕ ಪಂಚ ವಿಷಯಗಳು ಪ್ರಸಾದರೂಪವಾಗಿಯೂ, ಜೀವನು ಶಿವನಾಗಿಯೂ, ವಿಶ್ವವೆಲ್ಲ ದಿವ್ಯವಾಗಿಯೂ ಪರಿಣಾಮವಾಗಬೇಕಾದರೆ ಮನದ ಮುಂದಣ ಆಶೆಯೇ ಮಾಯೆಯೆಂದು ತಿಳಿದು ಆ ಆಶೆಯನ್ನು-ಮಾಯೆಯನ್ನು-ದಿವ್ಯಸಂಕಲ್ಪಶಕ್ತಿಯನ್ನಾಗಿ ಪರಿವರ್ತಿಸಬೇಕು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳ ಗುಟ್ಟನ್ನು ಅರಿತು ಆಚರಿಸುವದು ಅಪರಿಹಾರ್ಯವು. ಬಸವಣ್ಣನು ಸಾಧನ ಮಾಡಿದಂತೆ ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋ ಪಾದಬಾಹು ನೀನೇದೇವಾ, ಎಂದು

ಸಾಧನ ಮಾಡಿ ದಿವ್ಯಾನುಭಾವ ಹೊಂದಿ ಶಿವಲೀಲೆಯಿಂದ ಜೀವಗಳನ್ನು ಶಿವನನ್ನಾಗಿ ಮಾಡುತ್ತ ಜಗತ್ತಿಗೆ ಶಿವಶಕ್ತಿಯ ದಿವ್ಯಬೆಳಕನ್ನು ತೋರಿದ ಜಗದಂಣ ಬಸವಣ್ಣನ ಸಾಮರಸ್ಯದ ಮಹಾ ಪಥದ ಯಾತ್ರಿಕರಾಗೋಣ.

---

# ವಿಶ್ವ-ಲಿಂಗ ಪೂಜೆ

( ಲೇಖಕಃ— ಶ್ರೀಯುತ. ಲಿ. ನಾ. ಜಮಖಂಡಿ )
ಬಿ. ಎ. ಎಲ್ ಎಲ್. ಬಿ ಗದಗ

ಚಂದಿಮರಸನು "ಘನಗಂಭೀರ ಮಹಾವಾರಿಧಿಯಲ್ಲಿ ಫೇನ-ತರಂಗ ಬುದ್ಬುದಗಳುದಯವಲ್ಲದೆ ಬೇರಾಗಬಲ್ಲವೇ ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಕೋಟಿಗಳಾದವಲ್ಲದೆ ಬೇರಾಗಬಲ್ಲವೇ ? ಇದು ಬೇರೆಂಬ ಅರಿಮರುಳಗಳನೇನೆಂಬೆ ? ವಿಶ್ವವನಂದು ನೋಡಲು ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗವು ಬೇರೆಯಲ್ಲ" ಈ ಪ್ರಕಾರ ಹೇಳಿರುವನು. ಅಲ್ಲಮಪ್ರಭುಗಳ, "ಗಗನವೆ ಗುಂಡಿಗೆ, ಆಕಾಶವೆ ಅಗ್ಗವಣಿ, ಬ್ರಹ್ಮ ಧೂಪ, ವಿಷ್ಣು ದೀಪ, ರುದ್ರನೋಗರ ಸುಯಿಧಾನ ನೋಡಾ! ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ!" ಈ ವಚನಕ್ಕೆ ವಚನಶಾಸ್ತ್ರರಹಸ್ಯದಲ್ಲಿ ಬರೆದ ಟಿಪ್ಪಣಿಯಲ್ಲಿ ಶ್ರೀಯುತ ದಿವಾಕರರು, 'ಇದು ದಿವ್ಯ ಭವ್ಯ ವಿರಾಟ-ಪುರುಷನ ದಿವ್ಯಭವ್ಯ ಪೂಜೆ.' ಹೀಗೆ ಬರೆದದ್ದು ನೋಡಿದರೆ, ವಿಶ್ವಲಿಂಗ ಪೂಜೆ, ವಿರಾಟ್‌ಪುರುಷನ ಪೂಜೆ,

ಇವುಗಳಲ್ಲಿ ಕೆಲವು ಅನುಭಾವಿಗಳು ಅಭೇದವನ್ನು ಸಾರುವರೆಂದು ಕಾಣುವದು. ಸೂಕ್ಷ್ಮಾಗಮದ ೮ ನೇ ಪಟಲದಲ್ಲಿ "ಪೀಠಿಕಾ ಪೃಥಿವೀ ಲಿಂಗಮಾಕಾಶಂ ಸೃಷ್ಟಿಕಾರಣಮ್, ನಿಃಸಂದೇಹಮಿದಂ ಜ್ಞಾನಮಂಡಜಂ ಲಿಂಗಮೀರಿತಮ್." ಎಂದು ಬರೆದುದರ ಮೇಲಿಂದ ವಿಶ್ವಲಿಂಗವು ಅಂಡಜಲಿಂಗವೆಂದು ಹೇಳಬಹುದು

ವಿಶ್ವಲಿಂಗ ಪೂಜೆ ಮತ್ತು ವಿರಾಟ ಪುರುಷನ ಪೂಜೆಯು ವಿಷಯವಾಗಿ ಹೇಳುವದರ ತಾತ್ಪರ್ಯವು ವಿಶ್ವಲಿಂಗ ಪೂಜೆಯಲ್ಲಿ ತೊಡಗಿದವರಲ್ಲ, ವಿರಾಟ ಪುರುಷನ ವಿರಾಟ ದೇಹದ ಪೂಜೆಯಲ್ಲಿ ನಿರತರಾಗಿರುವರೆಂಬುದನ್ನು ಹೇಳುವದೇ ಇರುವದು. ಈ ಸಂದರ್ಭದಲ್ಲಿ ಓದುಗರು, ಅಕ್ಕಮಹಾದೇವಿಯವರ, "ಅಯ್ಯಾ ಪಾತಳವಿತ್ತತ್ತ, ಶ್ರೀಪಾದವತ್ತತ್ತ. ಬ್ರಹ್ಮಾಂಡವಿತ್ತತ್ತ, ಮಣಿಮುಕುಟವತ್ತತ್ತ. ಅಯ್ಯ ದಶದಿಕ್ಕು ಇತ್ತತ್ತ, ದಶಭುಜಗಳತ್ತತ್ತ. ಚನ್ನಮಲ್ಲಿಕಾರ್ಜುನಯ್ಯ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ" ಮತ್ತು, ಶ್ರೀ ಅರವಿಂದರ, "The Universe was not now this senseless whirl borne round inert on an immense machine. It cast away its grandiose lifeless front, a mechanism no more or work of chance, but a living movement of the body of God ( Savitri B K I. Canto 3 )"

ಈ ವಾಕ್ಯಗಳನ್ನು ನೆನೆನೆನೆದು, ವಿಶ್ವಲಿಂಗ ಪೂಜೆಯು ಹೇಗೆ ವಿರಾಟ ಪುರುಷನ ಜೀವಂತ ವಿರಾಟ ದೇಹದ ಪೂಜೆಯಲ್ಲಿ ಪರಿಣಮಿಸುವದೆಂಬುದನ್ನು ಮನನ ಮಾಡಬೇಕು.

ಧರೆಯ ಪೀಠಕ್ಕೆ, ಅಷ್ಟದಿಕ್ಕುಗಳನ್ನು ಗೋಮುಖವನ್ನಾಗಿ ಮಾಡಿ, ಬಯಲನ್ನು ಗೋಳಕವನ್ನಾಗಿ ಮಾಡಿ, ವಿಶ್ವನನ್ನೊಳಗೊಂಡ ಲಿಂಗವನ್ನು ಅರಿವೆಂಬ ಕರಮಾರುಹದೊಳಗಿರಿಸಿ, ಶರಧಿ ಸಪ್ತಕದಿಂದ ಅಭಿಷೇಕವೆರೆದು ಇಂದು ತರಣಿತಾರಕೆಗಳ ಕುಸುಮವ ಧರಿಸಿ, ಸ್ಫುರಿಸುವ ಔಷಧಗಳೆಲ್ಲವ ನೈವೇದ್ಯವ ಮಾಡಿ, ಅಜಾಂಡದ ವಸ್ತ್ರವನು ಬಾಸಣಿಸಿ, ಭಾವಲಿಂಗ

ಪೂಜೆಯ ರಹಸ್ಯವನ್ನು ತಿಳಿದುಕೊಳ್ಳಲು, ಸರ್ಪಭೂಷಣರು ನಮಗೆ ಉಪದೇಶಿಸುವರು.

ಸೃಷ್ಟಿ-ಲಿಂಗವನ್ನು ಅಷ್ಟವಿಧ್ಯಾರ್ಚನೆಯಿಂದ ಪೂಜಿಸಲು ಮಾನಸ್ಸು ವಿಶ್ವವನ್ನೊಳಗೊಂಡ ಲಿಂಗವನ್ನು ಅಪ್ಪಿ ಅಗಲದೆ ತಲ್ಲೀಯವಾಗಿಪ್ಪುದು. ಸಹ 'ಭಾವ ಲಿಂಗ ಪೂಜೆ' ಎಂದು ಸರ್ಪಭೂಷಣರ ವಾಣಿಯಲ್ಲಿ ಕೇಳಬಹುದು.

## ವಿಶ್ವಲಿಂಗಪೂಜೆ

ಧರೆಯೆ ಪೀಠವು ಅಷ್ಟದಿಕ್ಕುಗಳು ಗೋಮುಖವು
ಪರಿಪೂರ್ಣವಾಗಿರ್ಪ ಬಯಲೆ ಗೊಳಕವು
ವರಚಾರು ವಿಶ್ವವನ್ನೊಳಗೊಂಡ ಲಿಂಗವನು
ಅರಿವೆಂಬ ಕರವಾರಿರುಹದೊಳಗಿಡುವದು ॥ ೧ ॥

ಮಳೆಯು ಮಜ್ಜನವು ಮಲಯಾಗರುವೆ ಸಿರಿಗಂಧ
ಕಲಕಂಠ ಶಿಶುಗಳೇ ತಳೆದಕ್ಷತೆಗಳು
ಹೊಳೆವ ತಾರೆಗಳೆ ಹೂ ದಾವಾಗ್ನಿ ಧೂಪ
ಎಳೆ ರವಿಯು ಪೂರ್ಣೇಂದುವಿನಖಂಡ ದೀಪ ॥ ೨ ॥

ಮೆರೆವಜಾಂಡದ ವಸ್ತ್ರ ಮಳೆಬಿಲ್ಲು ಅಭರಣ
ಚರಿಚರಿಪ ವಾಯುವೇ ಚಾಮರವು ಕಾಣ
ಆರು ಋತುಗಳ ಆರು ರಸ ಪಾಕ ನೈವೇದ್ಯ
ಆರಕ್ತ ಸಾಂಧ್ಯತಾ ತೇಜ ತಾಂಬೂಲ ॥ ೩ ॥

ಮೆಲ್ಲ ಮೆಲ್ಲನೆ ಗುಡುಗು ಕೊಳ್ಳದೊಳು ಗುಡುಗುಡಿಸೆ
ಸಲ್ಲಲಿತ ಸೆಳೆಮಿಂಚು ಮಂಗಳಾರತಿಯು
ಮಲ್ಲಿಕಾರ್ಜುನ ಪೂಜೆಯಲ್ಲಿ ಮನ ಲಯವಾಗೆ
ಎಲ್ಲೆಲ್ಲಿಯೂ ಪೂಜೆ ಭಾವಲಿಂಗಕ್ಕೆ ॥ ೪ ॥

# ಶಾಲ್ಯದ ಅರಸಿನವರ ವಚನ

( ಸಂಗ್ರಾಹಕಃ— ಶ್ರೀಯುತ. ಬಿ. ನಂಜುಡಪ್ಪ. ಕಾನಕಾನಹಳ್ಳಿ. )

ರಾಗ—ಗೌರಿ

ಜ್ಯೋತಿರ್ಲಿಂಗದೊಳಗೆ ನಮಗೈಕ್ಯ ಕಾಣಿರೋ । ಪಂಚ
ಸೂತಕದ ಭ್ರಾಂತಿ ನಮಗಿಲ್ಲ ಕಾಣಿರೋ ॥ ಪಲ್ಲವಿ

ಉರಿಯು ಕರ್ಪೂರವು ಕೂಡಿ
ಎರಡು ಭಾವವಳಿದ ತೆರದಿ
ಪರಮ ಲಿಂಗದೊಳಗೆ ನಮಗೈಕ್ಯ ಕಾಣಿರೋ ।
ಪರಿಮಳ ರಸವ ಕೊಂಡು
ಹರಿದು ಪವನ ಪೋಪ ತೆರದಿ
ಸ್ವರಸ ಭಾವದಲ್ಲಿ ಯೋಗ ಸ್ಫುರಣೆ ಕಾಣಿರೋ ॥ ॥ ೧ ॥

ಕೊನೆಯಿಂದ ತೋರಿದ ದಳ
ಕೊನೆ ಹೇಳ ಹೋದಂತೆ
ತನುವಿನೊಳಗೆ ಬೆರಕೆ ನಮಗಿಲ್ಲ ಕಾಣಿರೋ ।
ಘನ ಕ್ಷೀರ ದಂತಸ್ಸಾರವೇ
ಕೆನೆಯಾಗಿ ತುಪ್ಪವಾದಂತೆ
ಮನದ ಮೂಲ ನಮ್ಮ ಸತ್ಪ್ರಮಾಣ ಕಾಣಿರೋ ॥ ॥ ೨ ॥

ಒಡನೆ ಹುಳಿಯು ಕೂಡಿ ಹಾಲು
ಒಡೆದು ಹೋದಂತೆ ಪರಮ
ನೊಡನೆ ಬೆರೆದತ್ತಲಾಗಿ ಹೋಯ್ತು ಕಾಣಿರೋ ।

ಕಡೆದು ಮೊಸರು ಬೆಣ್ಣೆಯೆತ್ತಿ
ಮಡಗಲದನು ಬೆರೆಯದಂತೆ
ಜಡಗುಣ ಸಂಬಂಧ ನಮಗಿಲ್ಲ ಕಾಣಿರೋ ॥ ॥ ೩ ॥

ಮತ್ತೆ ಕಪ್ಪೆ ಚಿಪ್ಪಿನಲ್ಲಿ
ಮುತ್ತಾದಂತೆ ನೀರು ಬಿದ್ದು
ತತ್ವಮಸ್ಯರ್ಥದಿ ನಿತ್ಯತ್ವ ಕಾಣಿರೋ ।
ಕತ್ತಲೆಯು ತೊಳೆದು ಸಕಲ
ವಸ್ತುಗಳ ತೋರ್ಪ ರವಿಯ
ದೀಪ್ತಿಯಂತೆ ಜ್ಞಾನವೆಂಬ ದೀಪ ಕಾಣಿರೋ ॥ ॥ ೪ ॥

ಸಾರ ಸುಧೆಯೊಳಗೆ ಸುಧೆ
ಸಂಸರ್ಗಗೈದಂತೆ ನಮಗೆ
ಪರಮ ಹಂಸನೊಳಗೆ ( ಬೆರೆವ ) ಬಾಳು ಕಾಣಿರೋ ।
ತಾರಕ ರೂಪನು ಸಾಕೇತಾ
ಧೀಶ ತಾನೆ ಯೆಂಬಲ್ಲಿ ಯಾರೇ
ನೆಂದರೇನು ( ಅದುವೆ ) ವೇದ ವಾಕ್ಯ ಕಾಣಿರೋ ॥ ॥ ೫ ॥

ಇಲ್ಲಿಂದ ಜಂಗಮರು ಕಾಂಚೀಪುರದ ವರೆಗೆ ಹೋಗಿ ಅದು ಶೈವ ಧರ್ಮಕ್ಕೆ ಮುಖ್ಯ ಸ್ಥಾನವಾಗಿದ್ದದರಿಂದ ಅಲ್ಲಿ ಅವರು ಹೆಚ್ಚಿಗೆ ಕಾಲ ಕಳೆಯುವರು. ಅಲ್ಲಿಂದ ಅವರು ಪಶ್ಚಿಮಕ್ಕೆ ಕೇರಳದೇಶ ಅಂದರೆ ಮಲಯಾಳ ದೇಶವನ್ನು ಪ್ರವೇಶಿಸುವರು. ಇಲ್ಲವೆ ಅವರು ಮುಂದೆ ರಾಮೇಶ್ವರದ ವರೆಗೂ ಹೋಗುವರು. ಈ ದೇಶಗಳಲ್ಲೆಲ್ಲ ಪುರಾತನ ಪ್ರಸಿದ್ಧ ಶಿವಕ್ಷೇತ್ರಗಳಿರುತ್ತವೆ. ಈ ಪ್ರಕಾರ ಹಿಂದಿನ ಕಾಲದಲ್ಲಿ ಜಂಗಮರು ಕಾಶ್ಮೀರದಿಂದ ರಾಮೇಶ್ವರದ ವರೆಗೂ ತಮ್ಮ ಹೆಸರಿಗೆ ತಕ್ಕಂತೆ ಪ್ರವಾಸ ಮಾಡುತ್ತ ಜನತೆಯಲ್ಲಿ ಶಿವಧರ್ಮವನ್ನು ಪ್ರಸಾರಮಾಡುತ್ತ ನಾಡಿನಲ್ಲಿ ಧರ್ಮ ಜಾಗ್ರತಿಯನ್ನು ಮಾಡುತ್ತಿದ್ದರೆಂದು ತೋರುತ್ತದೆ. ನಾವು ವಿವರಿಸಿದ ಸಂಚಾರ ಮಾರ್ಗಗಳು ಕೆಳಗೆ ಕಾಣಿಸಿದ ಶಿವಶರಣರ ಚರಿತ್ರೆಗಳಿಂದಲೂ ದೃಢಪಡುತ್ತವೆ.

ಉದ್ಭಟ ಕಾವ್ಯವನ್ನು ಸೋಮರಾಜ ಕವಿಯು ೧೨೨೨ ರಲ್ಲಿ ಬರೆದಿದ್ದಾನೆ. ಅದರಿಂದ ತಿಳಿಯುವದೇನೆಂದರೆ — ಉದ್ಭಟ ರಾಜನು ಗುಜರಾಥ ದೇಶವನ್ನು ಆಳುತ್ತಿರುವಾಗ್ಗೆ ಪಂಪಾಕ್ಷೇತ್ರದಲ್ಲಿ ವಾಸಿಸುತ್ತಿದ್ದ ದೇವಲ ಮಹರ್ಷಿಯನ್ನು ವಿರೋಧಿಗಳು ಪೀಡಿಸುತ್ತಿರುವದನ್ನು ಕೇಳಿ ಅವನನ್ನು ಸಂರಕ್ಷಿಸಬೇಕೆಂದು ತನ್ನ ದಂಡಿನೊಡನೆ ಪಂಪಾಕ್ಷೇತ್ರಕ್ಕೆ ಹೊರಟನು. ಹಾದಿಯಲ್ಲಿ ಅವನಿಗೆ ರೇವಾನದಿ ಅಂದರೆ ನರ್ಮದಾ ನದಿಯು ಹತ್ತಿತು. ಅದನ್ನು ದಾಟಿ ಮುಂದೆ ವಿಂಧ್ಯ ಪರ್ವತದೊಳಗಿಂದ ಹಾಯ್ದು ಗೋದಾವರೀ ನದಿಯನ್ನು ದಾಟಿ ಪಂಪಾಕ್ಷೇತ್ರಕ್ಕೆ ಬಂದನು. ಇದರಿಂದ ಅವನು ಯಾವ ಮಾರ್ಗದಿಂದ ಬಂದನೆಂಬುದು ತಿಳಿಯುತ್ತದೆ.

ಸೋಮನಾಸಿಕಾರನೆಂಬ ಮತ್ತೊಬ್ಬ ಶಿವಶರಣನು ಕಾಶ್ಮೀರ ದೇಶದವನಾಗಿದ್ದು ಅವನು ಅಲ್ಲಿಂದ ಹೊರಟು ಮೊದಲು ಸ್ಥಾನಪುರ ಅಂದರೆ ಸ್ಥಾನೇಶ್ವರಕ್ಕೆ ಬಂದು ಅಲ್ಲಿಂದ ಕಾಶೀಕ್ಷೇತ್ರಕ್ಕೆ ಬರುವನು. ಅಲ್ಲಿಂದ ದಕ್ಷಿಣಕ್ಕೆ ತೆರಳಿ ಶ್ರೀಶೈಲ ಕ್ಷೇತ್ರವನ್ನು ಸಂದರ್ಶಿಸಿ ಪಂಪಾಕ್ಷೇತ್ರಕ್ಕೆ ಬರುತ್ತಾನೆ. ಅಲ್ಲಿಂದ ಅವನು ದಕ್ಷಿಣದೇಶಕ್ಕೆ ಹೊರಟು ಪೊನ್ನಾಂಬಲಕ್ಕೆ ಬಂದು ಅಲ್ಲಿ ತನ್ನ ಪೊವಾಡವನ್ನು ಮಾಡುತ್ತಾನೆ.

ಶಂಕರ ದಾಸಿಮಯ್ಯನು ಈಗ ಇಳಕಲ್ಲಿನ ಹತ್ತರವಿರುವ ಕಂದಗಲ್ಲಿ ( ಕಂದಶಿಲೆ ) ನಲ್ಲಿ ವಾಸಿಸುತ್ತಿದ್ದು ಅವನು ಮೊದಲು ನವಿಲೆ, ಅಲ್ಲಿಂದ ಉತ್ತರಕ್ಕೆ ಮುದನೂರು, ಅಲ್ಲಿಂದ ಕಲ್ಯಾಣಕ್ಕೆ ಬರುತ್ತಾನೆ. ಅಲ್ಲಿ ಜಯಸಿಂಹ ರಾಜನಮುಂದೆ ತನ್ನ ಪೊವಾಡವನ್ನು ಮಾಡಿ ಉತ್ತರಕ್ಕೆ ತೆರಳಿ ಉಜ್ಜಯಿನಿಗೆ ಬಂದು ಅಲ್ಲಿದ್ದ ಸಿದ್ಧರನ್ನು ಜಯಿಸುತ್ತಾನೆ. ಆಮೇಲೆ ಅವನು ದಕ್ಷಿಣಕ್ಕೆ ಮಹಾರಾಷ್ಟ್ರ ದೇಶದೊಳಗಿಂದ ಹಾಯ್ದು ಈಗ ಸಾತಾರಾ ಜಿಲ್ಲೆಯಲ್ಲಿರುವ ಪೆಂಬೇರಕ್ಕೆ ಬಂದು ಅಲ್ಲಿಂದ ಅವನು ಕೊಲ್ಹಾಪುರಕ್ಕೆ ಹೋಗಿ ಅಲ್ಲಿಯ ಸಿದ್ಧರನ್ನು ಜಯಿಸಿ ನವಿಲೆ ಗ್ರಾಮಕ್ಕೆ ಬರುತ್ತಾನೆ.

ವರದಾನಿ ಗುಡ್ಡವ್ವೆಯು ವಿಜಾಪುರ ಪಟ್ಟಣದ ಪಶ್ಚಿಮಕ್ಕೆ ೬೫ ಮೈಲುಗಳ ಮೇಲೆ ಇರುವ ಗುಡ್ಡಾಪುರದವಳು. ಅವಳು ಮೊದಲು ಕಲ್ಯಾಣಕ್ಕೆ ಬಂದು ಅಲ್ಲಿಂದ ಆದವಾನಿ, ಅಲ್ಲಿಂದ ಅಲಂಪುರ ( ರಾಯಚೂರ ಜಿಲ್ಲೆ ) ದಲ್ಲಿ ವೈರಿಗಳನ್ನು ಸೋಲಿಸಿ, ಅಲ್ಲಿಂದ ದಕ್ಷಿಣಕ್ಕೆ ತೆರಳಿ ಕಪಿಲಾ ಕಾವೇರೀ ಸಂಗಮಸ್ಥಾನಕ್ಕೆ ಬರುತ್ತಾಳೆ. ಅಲ್ಲಿ ಅವಳು ಕೆಲವು ಕಾಲ ಕಳೆದು ರಾಮೇಶ್ವರಕ್ಕೆ ಹೋಗಿ ಅಲ್ಲಿಂದ ಹಿಂದಿರುಗಿ ಕಂಚೀಪಟ್ಟಣಕ್ಕೆ ಬರುತ್ತಾಳೆ. ಆಮೇಲೆ ಅವಳು ಕಾಶೀ ಪಟ್ಟಣಕ್ಕೆ ಹೋಗಿ ಅಲ್ಲಿಂದ ಸೊಲ್ಲಾಪುರ, ಆಮೇಲೆ ಕಪ್ಪಡಿಸಂಗಮ, ಆಮೇಲೆ ಬಸವೇಶ್ವರನು ಜನಿಸಿದ ಬಾಗೇವಾಡಿ, ಆಮೇಲೆ ಮಂಗೂಳಿ ಈ ಸ್ಥಳಗಳಿಗೆ ಹೋಗಿ ಪುನಃ ಸ್ವಗ್ರಾಮಕ್ಕೆ ಬರುತ್ತಾಳೆ.

ಏಕಾಂತದ ರಾಮಯ್ಯನು ಈಗ ಕಲಬುರ್ಗಿ ಜಿಲ್ಲೆಯಲ್ಲಿರುವ ಆಲಂದೆ ( ಆಲ್ದಿ ) ಯವನು. ಅವನು ತೀರ್ಥಾಟನ ಮಾಡಬೇಕೆಂದು ಬಯಸಿ ಮೊದಲು ಕಲ್ಯಾಣಕ್ಕೆ ಬರುತ್ತಾನೆ. ಅಲ್ಲಿ ಪಟ್ಟಣಕ್ಕೆ ಸಮೀಪವಿದ್ದ ಶಿವಪುರವೆಂಬ ಅದರ ಶಾಖಾ ನಗರಕ್ಕೆ ಬಂದು ಅಲ್ಲಿಂದ ಪುಲಿಗೆರೆ ( ಲಕ್ಷ್ಮೇಶ್ವರ ) ಆಮೇಲೆ ಅಬ್ಬಲೂರಿಗೆ ಬರುತ್ತಾನೆ.

ರೇವಣಸಿದ್ಧನು ಮೊದಲು ಬಹಳ ದಿವಸ ಮಂಗಳವಾಡದಲ್ಲಿ ಇದ್ದು ಈ ಭಾಗದಲ್ಲಿ ಅವನು ವಾಸಿಸಿದ ಸ್ಥಳಗಳಾದ ಇಂಗುಳೇಶ್ವರ, ಹೊರ್ತಿ ( ಇಂಡಿತಾಲೂಕು ) ರೇಣಾವಿ ( ಸಾತಾರಾಜಿಲ್ಲಾ ) ಈ ಗ್ರಾಮಗಳಲ್ಲಿ

ಈಗಲೂ ಅವನ ಹೆಸರಿನ ಕುರುಹುಗಳು ಇವೆ. ಆಮೇಲೆ ಅವನು ಬನವಾಸೀ ಪ್ರಾಂತಕ್ಕೆ ಬಂದು ಅಲ್ಲಿಂದ ದಕ್ಷಿಣಕ್ಕೆ ತೆರಳಿ ಬೆಂಗಳೂರು ಜಿಲ್ಲೆಯಲ್ಲಿರುವ ಕ್ಲೋಸಪೇಟಕ್ಕೆ ಬಂದು ಅಲ್ಲಿಂದ ಕಂಚಿಗೆ ಆಗಮಿಸಿ ಮುಂದೆ ಅವನು ಸಿಂಹಲ ದ್ವೀಪಕ್ಕೆ ಹೋಗಿ ತಿರುಗಿ ಮಂಗಳವಾಡಕ್ಕೆ ಬಂದು ಅಲ್ಲಿಂದ ಸೊನ್ನಲಿಗೆ ( ಸೊಲ್ಲಾಪುರ ), ಆಮೇಲೆ ತಾನು ಜನಿಸಿದ್ದ ಕೊಲ್ಲಿಪಾಕಿಗೆ ಬರುತ್ತಾನೆ.

ದೇವರ ದಾಸಿಮಯ್ಯನು ಮುದನೂರಿನವನು. ಅವನು ಮೊದಲು ಶ್ರೀಶೈಲಕ್ಕೆ ಬಂದು ಅಲ್ಲಿ ಉಪದೇಶವನ್ನು ಹೊಂದಿ, ಅಲ್ಲಿಂದ ಪೊಟ್ಟಲಕೆರೆ ಆಮೇಲೆ ಪುನಃ ತನ್ನ ಗ್ರಾಮವಾದ ಮುದನೂರಿಗೆ ತೆರಳಿ ಅಲ್ಲಿಯ ಸುತ್ತಲಿನ ಪ್ರದೇಶಗಳಲ್ಲಿ ತನ್ನ ಪವಾಡಗಳನ್ನು ನಡಿಸುತ್ತಾನೆ.

ಶಿವಲೆಂಕ ಮಂಚಣ್ಣನು ಕಾಶೀಪಟ್ಟಣದವನಿದ್ದು ಅಲ್ಲಿಂದ ಕಲ್ಯಾಣಕ್ಕೆ ಬರುತ್ತಾನೆ. ಮೋಳಿಗೆ ಮಾರಯ್ಯನು ಕಾಶ್ಮೀರ ದೇಶದವನಾಗಿದ್ದು ಅವನು ಮುಂದೆ ಕಲ್ಯಾಣಕ್ಕೆ ಬರುವವನಾದನು. ಸಕಳೇಶ ಮಾದರಸನು ಕಲ್ಲುಕುರಿಕೆಯ ರಾಜನಾಗಿದ್ದು, ಅವನು ಮೊದಲು ಶ್ರೀಶೈಲ, ಆಮೇಲೆ ಕಲ್ಯಾಣಕ್ಕೆ ಬರುವವನಾದನು.

ಪಂಡಿತಾರಾಧ್ಯನು ಆಂಧ್ರದೇಶದಲ್ಲಿರುವ ದ್ರಾಕ್ಷಾರಾಮದವನು. ಅವನು ಮೊದಲು ಆಂಧ್ರ ಮತ್ತು ತಮಿಳು ದೇಶಗಳಲ್ಲಿ ಸಂಚರಿಸುತ್ತ ಪೋರಾಂಡಲಕ್ಕೆ ಬರುತ್ತಾನೆ. ಇಲ್ಲಿಂದ ಪಾಲ್ಕುರಿಕೆಗೆ ಬಂದು ಪೇಮಯ್ಯನನ್ನು ಕಂಡು, ಆ ಮೇಲೆ ಅನಂತಪುರ ಜಿಲ್ಲೆಯಲ್ಲಿರುವ ಕದಿರಿ ಗ್ರಾಮದಲ್ಲಿ ರೇಮಯ್ಯನ ಸ್ಥಾನವನ್ನು ಸಂದರ್ಶಿಸಿ, ಶ್ರೀಶೈಲ, ಆ ಮೇಲೆ ಸ್ವಗ್ರಾಮವಾದ ದ್ರಾಕ್ಷಾರಾಮಕ್ಕೆ ತಿರುಗಿ ಬರುತ್ತಾನೆ.

ಹೀಗೆ ಶಿವಶರಣರ ಸಂಚಾರಗಳಿದ್ದು ಇವೆಲ್ಲವುಗಳನ್ನು ನಾವು ಪರೀಕ್ಷಿಸಿದಲ್ಲಿ, ಹಿಂದಿನ ಕಾಲದಲ್ಲಿ ಕಾಶ್ಮೀರದೇಶದಿಂದ ಶಿವಶರಣರು ಮುಖ್ಯವಾಗಿ ಜಂಗಮರು ಕಾಶಿ, ಉಜ್ಜಯಿನಿ, ಕಲ್ಯಾಣ, ಬನವಸೆ, ಕಂಚೀ ಮಾರ್ಗವಾಗಿ ನಾಡುಗಳಲ್ಲಿ ಸಂಚರಿಸುತ್ತ ಅಲ್ಲಲ್ಲಿ ಶಿವಭಕ್ತರನ್ನು ಕಾಣುತ್ತ

ನಾವು ಹಿಂದೆ ಹೇಳಿದಂತೆ ಶಿವಕ್ಷೇತ್ರಗಳಿಗೆ ಆಗಿಂದಾಗ್ಗೆ ಸಂಚಾರಮಾಡು ತ್ತಿದ್ದರೆಂದು ತಿಳಿದುಬರುತ್ತದೆ.

ಸಾಂಪ್ರತ ಕಾಲದಲ್ಲಿ ವೃತ್ತ ಪತ್ರಿಕೆಗಳು ಯಾವ ಕಾರ್ಯಗಳನ್ನು ಮಾಡುತ್ತವೆಯೋ ಅವೇ ಕಾರ್ಯಗಳನ್ನು ಜಂಗಮರು ಪುರಾತನಕಾಲ ದಲ್ಲಿ ಮಾಡುತ್ತಿದ್ದರೆಂದು ಹೇಳಬಹುದು. ವೃತ್ತಪತ್ರಿಕೆಗಳು ಹೇಗೆ ನಾಡಿ ನಲ್ಲಿ ನಡೆದ ವೃತ್ತಾಂತಗಳನ್ನು ತಿಳಿಸುತ್ತವೆಯೋ ಹಾಗೆಯೇ ಜಂಗ ಮರು ಹಿಂದಿನಕಾಲದಲ್ಲಿ ಒಂದು ದೇಶದಲ್ಲಿ ಶಿವಭಕ್ತರಿಗೆ ಉಂಟಾದ ಹಿತಾಹಿತದ ಸಂಗತಿಗಳನ್ನು ಇತರ ನಾಡಿನವರಿಗೂ ತಿಳಿಯಪಡಿಸುತ್ತಿ ದ್ದರು. ಇದರಿಂದ ಭರತಖಂಡದಲ್ಲಿರುವ ದೇಶಗಳಲ್ಲಿ ವಾಸಮಾಡುತ್ತಿದ್ದ ಶಿವಭಕ್ತರಲ್ಲಿ ಪರಸ್ಪರ ಸಂಬಂಧಗಳು ಬೆಳೆಯಲು ಸಂಚಾರದಲ್ಲಿರುತ್ತಿದ್ದ ಈ ಜಂಗಮರೇ ಕಾರಣರಾಗಿದ್ದರೆಂದು ತಿಳಿಯಲು ಪ್ರತ್ಯವಾಯವಿಲ್ಲ.

ಜಂಗಮರು ಶಿವಧರ್ಮವನ್ನು ತಿಳಿದವರಾಗಿ ಧರ್ಮಬೋಧೆಮಾಡು ತ್ತಿದ್ದುದು ನಿಃಸಂಶಯವು. ಅವರು ಧರ್ಮಜ್ಞಾನವನ್ನು ಜನರಿಗೆ ಹೇಗೆ ಮಾಡಿಕೊಡುತ್ತಿದ್ದರೆಂಬುದನ್ನು ಶಿವಶರಣರ ಚರಿತ್ರೆಗಳಿಂದ ಊಹಿಸಬ ಹುದಾಗಿದೆ. ಅಲ್ಲಯ್ಯನೆಂಬ ಶಿವಶರಣನು ಮತ್ತು ನಿಂಬಾಣದ ಗಣೇ ಶ್ವರನು ಗಾಯನದ ಮೂಲಕವಾಗಿಯೂ ಇಂಡಿಯ ಶಾಂತಯ್ಯನು ಪಾಠ ಹೇಳುವದರ ಮೂಲಕವಾಗಿಯೂ ವೀರದೇವಯ್ಯನು ಉಕ್ತಿಗಳನ್ನು ಉಚ್ಚ ಟಿಸುವದರ ಮೂಲಕವಾಗಿಯೂ ಧರ್ಮಬೋಧೆ ಮಾಡುತ್ತಿದ್ದ ಇದೇ ಪದ್ಧ ತಿಯನ್ನು ಜಂಗಮರು ಪ್ರವಾಸಕಾಲದಲ್ಲಿ ಕೈಕೊಂಡಿರಬಹುದೆಂದು ತೋರು ತ್ತದೆ. ಉಕ್ತಿಗಳನ್ನು ಹೇಳುವ ಜಂಗಮರನ್ನು 'ಸಾರುವ ಅಯ್ಯ'ಗ ಳೆಂದು ಕೆಲವು ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಕೆಲವು ಜಂಗಮರು ಸಿದ್ಧರಸವನ್ನು ಸಿದ್ಧಮಾಡುವಲ್ಲಿ ಪ್ರವೀಣರಾಗಿ ಅದರ ಮೂಲಕ ಅವರು ವಸ್ತುಗಳ ರೂಪಾಂತರ ಮಾಡುವರು ( ಮೋರನ ಮೇಮಯ್ಯನ ಚರಿತ್ರೆ ನೋಡಿರಿ ). ಢಕ್ಕೆಯ ಮಾರಯ್ಯ, ಕಂಕರೀ ಕಕ್ಕಯ್ಯ ಈ ಶಿವಶರಣ ರಂತೆ ಕೆಲವೊಂದು ಕಾಯಕವನ್ನುಅವರು ಕೈಕೊಂಡು ಬಾರಿಸುತ್ತ ಹಾಡುತ್ತ ಶಿವಶರಣರ ತತ್ವಗಳನ್ನು ಜನರಿಗೆ ತಿಳಿಸಿ ಹೇಳುವರು.

ಕೆಲವು ಜಂಗಮರು ಶಿವಜ್ಞಾನವನ್ನು ಚೆನ್ನಾಗಿ ಹೊಂದಿದವರಾಗಿ ತಮ್ಮ ಪ್ರವಾಸದಲ್ಲಿ ರಾಜರನ್ನು ಸಹ ಕಾಣುವರು ಮತ್ತು ಅವರ ಸನ್ನಿಧಿಯಲ್ಲಿ ಧರ್ಮತತ್ವಗಳನ್ನು ಕುರಿತು ಇತರ ಮತೀಯರೊಡನೆ ಚರ್ಚೆ ನಡಿಸುವರು. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಶಿವನಿದ್ದಾನೆಂದು ಪ್ರಮಥರ ತತ್ವವಿದೆ. ಇದನ್ನು ಜೈನರೂ ಬೌದ್ಧರೂ ಅಲ್ಲಗಳೆಯುವವರಾಗಿದ್ದರು. ಆಗ ಜಂಗಮರು ತಮ್ಮ ಸಿದ್ಧಿಯ ಮೂಲಕ ಪರಮಾತ್ಮನನ್ನು ಜಡ ವಸ್ತುಗಳಲ್ಲಿ ಸಹ ಪ್ರಕಟಗೊಳಿಸಿದ್ದಾರೆ. ಹಾಗೆಯೇ ಹರಿಹರರ ವಿಷಯವಾಗಿ ವಾಗ್ವಾದಗಳಾಗುತ್ತಿದ್ದವು. ಆಗ ಜಂಗಮರು ಹರನೇ ಸರ್ವೋತ್ತಮನೆಂದು ಪ್ರತಿಪಾದಿಸುವರು. ಚಾತುರ್ವರ್ಣಗಳ ಸಂಬಂಧವಾಗಿಯೂ ಚರ್ಚೆಗಳೇಳುವವು. ಇವು ಮುಖ್ಯವಾಗಿ ಬ್ರಾಹ್ಮಣರೊಡನೆ. ಆಗ ಜಂಗಮರು ವರ್ಣಗಳೆಂಬುವಿಲ್ಲ, ಶಿವಭಕ್ತರೇ ಶ್ರೇಷ್ಠರೆಂದು ಪ್ರತಿಪಾದಿಸುವರು. ಹೀಗೆ ಜಂಗಮರು ತಾವು ಹೋದಲ್ಲೆಲ್ಲ ವೀರಶೈವ ಮತತತ್ವಗಳ ವಿಷಯವಾಗಿ ವಾದಗಳನ್ನು ಮಾಡುತ್ತ ನಾಡಿನಲ್ಲಿ ಒಂದು ಉಚ್ಚ ಧಾರ್ಮಿಕ ವಾತಾವರಣವನ್ನು ಹುಟ್ಟಿಸುತ್ತಿದ್ದರು.

ಜಂಗಮರು ಅವಶ್ಯ ತೋರಿದಲ್ಲಿ ಸ.ಜ್ಞಾನಿದೇವ, ದೇವರದಾಸಿಮಯ್ಯಗಳಂತೆ ಭವಿಗಳಿಗೆ ತತ್ವವನ್ನು ಬೋಧಿಸಿ ಅವರಿಗೆ ದೀಕ್ಷೆಯನ್ನು ಕೊಡುವರು. ಲಿಂಗದ ನೆಲೆಕಲೆಗಳನ್ನು ತಿಳಿಸಿ ಹೇಳುವರು. ಯೋಗ್ಯ ಮಾರ್ಗದಲ್ಲಿ ತಪ್ಪಿ ದಿಶೆಯಿಂದ ಅನುಸರಿಸುವವರಿಗೆ ಲಿಂಗಾಂಗದ ರೀತಿ ನಡೆಗಳನ್ನು ತಿಳಿಸಿ ಹೇಳುವರು.

ಈ ಪ್ರಕಾರ ಜಂಗಮರು ಬಹು ಪುರಾತನಕಾಲದಿಂದಲೂ ಹಿಂದು ಸ್ಥಾನದಲ್ಲಿ ಸಂಚರಿಸುತ್ತ ಬಂದಿದ್ದಾರೆ. ಇದರಿಂದ ಅವರು ಜನರ ಮನ್ನಣೆಗೆ ಪಾತ್ರರಾದರು. ಬಸವೇಶ್ವರನ ವಚನಗಳಲ್ಲಿ ಜಂಗಮರ ವಿಷಯವಾಗಿ ಅಸಂಖ್ಯವಚನಗಳು ಇದ್ದು ಅವುಗಳಮೇಲಿಂದ ಅವನು ಅವರಲ್ಲಿ ಎಷ್ಟು ದೃಢವಾದ ಭಕ್ತಿ ವಿಶ್ವಾಸವುಳ್ಳವನಾಗಿದ್ದನೆಂಬುದು ಒಡೆದು ಕಾಣುತ್ತಿದೆ. ಅದರಂತೆಯೇ ದೇವರ ದಾಸಿಮಯ್ಯ, ಬಹುರೂಪಿ ಚೌಡಯ್ಯ ಮೊದಲಾದ ಅನೇಕ ಶಿವಶರಣರು ಸಹ ಆಚರಿಸಿದ್ದುದು ತಿಳಿದು ಬರುತ್ತದೆ. ಇದಕ್ಕೆ ಜಂಗಮರು ಮಾಡುತ್ತಿದ್ದ ಸಾಮಾಜಿಕ ಕಾರ್ಯಗಳೇ ಕಾರಣವಾಗಿವೆ.

ಜಂಗಮರು ಕೆಲವೊಂದು ವರ್ಗ ಅಥವಾ ಒಂದೇ ಪ್ರಾಂತದವರಿರದೆ ಅವರಲ್ಲಿ ಎಲ್ಲ ವರ್ಗದವರೂ ನಾಡಿನವರೂ ಸಮಾವೇಶವಾಗುತ್ತಿದ್ದರು. ಇದರಿಂದ ಅವರಲ್ಲಿ ಮಾಂಸಾಹಾರಿಗಳೂ ಕೂಡ ಇದ್ದರೆಂಬುದು ಕಂಡುಬರುತ್ತದೆ. ತೆಲುಗು ಜೊಮ್ಮಯ್ಯ, ಗಾಣದ ಕನ್ನಪ್ಪ, ಶ್ವಪಚಯ್ಯ ಬೇಡರ ಕನ್ನಪ್ಪ, ಶಿರಿಯಾಳ -ಚಂಗಳೆ ಇವರಲ್ಲಿ ಯಾರೂ ಶಾಕಾಹಾರಿಗಳಲ್ಲ. ಆದರೂ ಅವರು ಶ್ರೇಷ್ಠತರದ ಶಿವಶರಣರೆಂದು ವೀರಶೈವರಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ.

ಜಂಗಮರು ಲಗ್ನವಾಗದವರಿರಲೇಬೇಕೆಂಬ ನಿಯಮವಿದ್ದ ಹಾಗೆ ತೋರುವದಿಲ್ಲ. ಲಗ್ನವಾಗುವದು ಅಥವಾ ಬಿಡುವದು ಅವರವರ ಇಷ್ಟದ ಮೇಲೆ ಇದ್ದಿತು. ರೇವಣಸಿದ್ಧ, ಪಂಡಿತಾರಾಧ್ಯ ಇವರು ಉಚ್ಚತರಗತಿಯ ಜಂಗಮರೆಂದು ಈಗಲೂ ಭಾವಿಸಲ್ಪಟ್ಟಿರುತ್ತಾರೆ. ಆದರೆ ಇವರೆಲ್ಲರೂ ಲಗ್ನವಾದವರಿದ್ದರು. ಆದರೂ ಅವರು ನಾಡಿನಲ್ಲಿ ಶ್ರೇಷ್ಠ ಶಿವಾನುಭವಿಗಳೆಂದು ಹೆಸರಾದರು. ಹಾಗೆಯೇ ಸೋಮನಾರಾಧ್ಯ, ದೇವರ ದಾಸಿಮಯ್ಯ, ವರದಾನಿ ಗುಡ್ಡಮ್ಮ, ಬಸವೇಶ್ವರ, ಉರಿಲಿಂಗಪೆದ್ದಿ, ಇವರೆಲ್ಲರೂ ಲಗ್ನವಾದವರಿದ್ದರು. ಇವರಲ್ಲಿ ಕೆಲವರು ಭಕ್ತ ಸ್ಥಲದವರೂ ಕೆಲವರು ಜಂಗಮಸ್ಥಲದವರೂ ಇದ್ದಾರೆ. ಆದರೆ ಜನತೆಯ ದೃಷ್ಟಿಯಲ್ಲಿ ಅವರೆಲ್ಲರೂ ಉಚ್ಚತರಗತಿಯವರೆಂದು ಭಾವಿಸಲ್ಪಟ್ಟಿರುತ್ತಾರೆ.

ಈ ಜಂಗಮರ ಮೂಲಕವಾಗಿ ಹಿಂದಿನಕಾಲದಲ್ಲಿ ಲಿಂಗಾಂಗಿಗಳಾದ ವೀರಶೈವರಲ್ಲಿ ಒಂದು ಸಂಘಟನೆ ಉಂಟಾಗಿತ್ತೆಂದು ತೋರುತ್ತದೆ. ಈ ಸಂಘಟನೆಗೋಸ್ಕರ ಕೆಲ ಕೇಂದ್ರಸ್ಥಾನಗಳಾಗಿದ್ದು ಅವು ಕಾಶ್ಮೀರದಲ್ಲಿದ್ದ ಮಾಂಡವ್ಯಪುರ, ಕಾಶೀಪಟ್ಟಣ, ಗುಜರಾಥದಲ್ಲಿ ಸೋಮೇಶ್ವರ, ಕರ್ನಾಟಕದಲ್ಲಿ ಕಲ್ಯಾಣ, ಪಟ್ಟದಕಲ್ಲು, ಪುಲಿಗೆರೆ, ಬನವಾಸಿ, ಮಂಗಳವಾಡ, ಮುದನೂರು, ಸಿದ್ಧಗಂಗಾ, ಆಂಧ್ರದೇಶದಲ್ಲಿ ದ್ರಾಕ್ಷಾರಾಮ, ಶ್ರೀಪರ್ವತ ಮತ್ತು ದ್ರಾವಿಡ ದೇಶದಲ್ಲಿ ಕಂಚಿ ಈ ಸ್ಥಳಗಳು ಇದ್ದಹಾಗೆ ಕಂಡುಬರುತ್ತದೆ. ಜಂಗಮರ ದೊಡ್ಡ ಮಸಾಹತುಗಳು ಈ ಸ್ಥಳಗಳಲ್ಲಿದ್ದು ಅಲ್ಲಿ ಅವರು ಶಿವಧರ್ಮವನ್ನು ಕುರಿತು ಯಾವಾಗಲೂ ಚರ್ಚಿಸುವರು.

ುತ್ತು ಆಗಿಂದಾಗ್ಗೆ ದೇಶ ಸಂಚಾರ ಮಾಡುತ್ತ ವೀರಶೈವ ಧರ್ಮವನ್ನು ಎಲ್ಲಕಡೆಗೂ ಪ್ರಸಾರ ಮಾಡುವರು. ಈ ಕಾರ್ಯವು ಬಸವೇಶ್ವರನ ನಂತಲೂ ಕೆಲವು ಶತಮಾನಗಳ ಹಿಂದೆಯೇ ನಡೆದು ಬಂದಿತ್ತು.

ಯಾವ ಸ್ಥಳದಲ್ಲಾದರೂ ವೀರಶೈವರಿಗೆ ಗಂಡಾಂತರಗಳು ಉಂಟಾಗಿದ್ದುದು ಕಂಡುಬಂದರೆ ಅಲ್ಲಿಯ ಜನರು ತಿಳಿಸಿದಕೂಡಲೇ, ಸುತಲಿನ ಪ್ರದೇಶಗಳಲ್ಲಿಯ ಜಂಗಮರು ಕೂಡಲೆ ಅಲ್ಲಿ ನೆರೆದು ಸ್ಥಳೀಯ ಜನರ ಸಹಾಯವನ್ನು ಹೊಂದಿ ಎಲ್ಲರೂ ಕೂಡಿ ಒಕ್ಕಟ್ಟಿನಿಂದ ಇದಿರಾಳಿಗಳನ್ನು ಇದಿರಿಸುವರು. ಪ್ರಸಂಗಬಂದರೆ ಕಾಳಗಮಾಡುವರು, ಇಲ್ಲವೇ ತಮ್ಮ ಧರ್ಮತತ್ವಗಳನ್ನು ಬಹಿರಂಗವಾಗಿ ಚರ್ಚಿಸಿ ಅವುಗಳನ್ನು ಪ್ರಸ್ಥಾಪಿಸುವರು. ಆಗ ಪೋವಾಡಗಳು ಹೇಳಲ್ಪಡುವದುಂಟು. ಇಂಥ ಪ್ರಸಂಗಗಳಲ್ಲಿ ಭಕ್ತಜಂಗಮರು ಶಸ್ತ್ರವನ್ನುಸಹ ಧರಿಸಿ ವೈರಿಗಳೊಡನೆ ಹೋರಾಡಿದ್ದುಂಟು. ಇಂಥ ಉದಾಹರಣೆಗಳು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಕೆಳಗೆ ಉದಹರಿಸುತ್ತೇವೆ.

**ಬಾಳೇಹಳ್ಳಿಯ ಕಾಳಗ :—** ಮಲೆನಾಡಿನಲ್ಲಿದ್ದ ಈ ಗ್ರಾಮದಲ್ಲಿ ಸೋಮೇಶ ದೇವಾಲಯವಿದ್ದು ಅದರಲ್ಲಿಯ ಲಿಂಗವನ್ನು ಪರಧರ್ಮಿಗಳು ಕಿತ್ತು ಹೊಳೆಯಲ್ಲಿ ಬಿಸುಟಬಿಟ್ಟಿದ್ದರು. ಆಗ ರೇವಣ ಸಿದ್ಧೇಶ್ವರನ ಮಗನಾದ ರುದ್ರಮುನಿಯ ಶಿಷ್ಯನಾದ ಮುಕ್ತಿಮುನಿಯು ಶ್ರೀಶೈಲದಲ್ಲಿದ್ದು ಅವನು ಇದನ್ನು ಕೇಳಿ ತನ್ನ ಶಿಷ್ಯನಾದ ದಿಗಂಬರಸು ಮುಕ್ತಿಮುನಿಯನ್ನು ಈ ಮಲೆದೇಶಕ್ಕೆ ಕಳುಹಿಸಲು ಅವನು ಅನೇಕ ಚರಮೂರ್ತಿಗಳನ್ನು ಕೂಡಿಕೊಂಡು ಅಲ್ಲಿಗೆ ಬಂದು ಹೊಳೆಯಲ್ಲಿ ಬಿಸಾಟಿದ ಸೋಮೇಶನನ್ನು ಹೊನ್ನೂರಿನ ಬಳಿಯಲ್ಲಿ ಎತ್ತಿತಂದು ಅಲ್ಲಿ ಗುಡಿಯಲ್ಲಿ ಪ್ರತಿಷ್ಠಿಸಿದನು. ಆಗ ಅವನು ಕಾಳಗದಲ್ಲಿ ವೈರಿಗಳನ್ನು ಸೋಲಿಸಬೇಕಾಯಿತು. ಆಮೇಲೆ ಅವನು ಬಾಳೆಹಳ್ಳಿ ಎಂಬ ಪುರವನ್ನು ಕಟ್ಟಿಸಿ ಅಲ್ಲಿ ೀವನು ಸಿಂಹಾಸನಾಧೀಶನಾದನು ಈ ದಿಗಂಬರ ಮುಕ್ತಿಮುನಿಯ ತರುವಾಯ ಸುಕುಮಾರ ಚೆನ್ನಬಸವೇಶ್ವರನು ಸಿಂಹಾಸನಾಧೀಶನಾಗಿ ಶರಣರನ್ನು ಪಾಲಿಸುತ್ತ ಬಂದನು.

**ಮಾರುಡಿಗೆಯ ಕಾಳಗ :—** ವಿಜಾಪೂರ ಜಿಲ್ಲೆಯಲ್ಲಿರುವ ಸಿಂದಿಗಿ ಗ್ರಾಮದ ಪೂರ್ವಕ್ಕೆ ೨೪ ಮೈಲುಗಳ ಮೇಲೆ ಶಿವಪುರವೆಂಬ ಗ್ರಾಮ ವಿದೆ. ಅಲ್ಲಿಂದ ಮಾರುಡಿಗೆಯು ೨೦ ಮೈಲುಗಳಿದ್ದು ಅಲ್ಲಿ ಪುರಾತನ ಕಾಲದಲ್ಲಿ ಜೈನರ ದೊಡ್ಡ ವಸಾಹತುವಿತ್ತು. ಅವರು ವೀರಶೈವರನ್ನು ಬಹಳ ಹಿಂಸೆಮಾಡುತ್ತಾ ಇದ್ದರು. ಇದನ್ನು ಶಿವಪುರದಲ್ಲಿದ್ದ ವೀರ ಶೈವರು ತಿಳಿದು ಜೈನರು ಮೊದಲು ಈ ಗ್ರಾಮದಲ್ಲಿದ್ದ ಶಿವಾಲಯುವನ್ನು ತೆಗೆದು ಹಾಕಿದ್ದು ಅದನ್ನು ಪುನಃ ಪ್ರತಿಷ್ಠಿಸಬೇಕೆಂದು ನಿಶ್ಚಯಿಸಿ ಆ ಪುರವನ್ನು ಪ್ರವೇಶಿಸಿದರು. ಆದರೆ ಮೊದಲು ಅಲ್ಲಿಗೆ ಹೋದವರು ಜೈನರಿಂದ ಘಾತಿಸಲ್ಪಟ್ಟರು. ಇದನ್ನು ಸುತ್ತಲಿನ ಪ್ರದೇಶಗಳಲ್ಲಿದ ಭಕ್ತ ಜಂಗಮರು ತಿಳಿದು ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ಮಾರುಡಿ ಗೆಯ ಗ್ರಾಮವನ್ನು ಪ್ರವೇಶಿಸಲಾಗಿ ಅಲ್ಲಿ ತುಮುಲ ಯುದ್ಧವು ಉಭ ಯಪಕ್ಷಗಳಲ್ಲಿ ಎಸಗಿತು. ಅದರಲ್ಲಿ ಭಕ್ತರು ಜಯಶೀಲರಾದರು. ಮಾರುಡಿಗೆಯಲ್ಲಿದ್ದ ಮೊದಲಿನ ಶಿವದೇವಾಲಯುಗಳನ್ನು ಪುನಃ ಪ್ರತಿ ಷ್ಠಿಸಿದರು. ಅಲ್ಲದೆ ಈ ಭಾಗದಲ್ಲಿದ್ದ ಅನೇಕ ಬಸದಿಗಳು ಶಿವಾಲಯ ಗಳಾಗಿ ಮಾಡಲ್ಪಟ್ಟವು. ಹೀಗೆ ಭಕ್ತರಿಗೆ ಮುಂದಾಳುವಾಗಿ ಯುದ್ಧ ಮಾಡಿದವನು ನಾಚಿದೇವನು. ಅವನು ವಚನಕಾರನಿದ್ದಾನೆ ಈ ಪ್ರಕಾರ ಭಕ್ತ ಜಂಗಮರು ಕೂಡಿಕೊಂಡು ಈ ಭಾಗದಲ್ಲಿ ವೀರಶೈವ ಮತವನ್ನು ಪ್ರತಿಷ್ಠಾಪಿಸಿದ್ದಾರೆ.

**ಅಲಂಪುರದ ಕಾಳಗ:–** ಈ ಕಾಳಗದಲ್ಲಿ ಮುಖ್ಯಸ್ಥಳಾಗಿ ತುಮುಲ ಯುದ್ಧವನ್ನೆಸಗಿದವಳು ಒಬ್ಬ ಸ್ತ್ರೀಯುಳು. ಅವಳ ಹೆಸರು ವರದಾನಿ ಗುಡ್ಡಮ್ಮೆಯು. ಅವಳ ವಾಸಸ್ಥಳವು ವಿಜಾಪುರ ಪಟ್ಟಣದ ಪಶ್ಚಿಮಕ್ಕೆ ೩೫ ಮೈಲುಗಳಮೇಲೆ ಇರುವ ಗುಡ್ಡಾಪುರವು. ರಾಯಚೂರ ಜಿಲ್ಲೆ ಯಲ್ಲಿರುವ ಅಲಂಪುರವು ಒಂದು ಪ್ರಸಿದ್ಧ ಕ್ಷೇತ್ರಸ್ಥಳವಾಗಿದೆ. ಅಲ್ಲಿ ಜಾಲಬ್ರಹ್ಮೇಶ ಲಿಂಗವು ಬಹು ಪ್ರಸಿದ್ಧವಾದದ್ದು. ಈ ದೇವಸ್ಥಾನವು ಈಗಲೂ ಅಲ್ಲಿ ಇದೆ. ಅದರಲ್ಲಿಯ ಲಿಂಗವನ್ನು ವೈಷ್ಣವರು ಕಿತ್ತುಹಾಕಿ ತುಂಗಭದ್ರಾ ನದಿಯಲ್ಲಿ ಬೀಸಾಟಿದ್ದರು. ಆಗ ಈ ದೇವಾಲಯುದ ಪೂಜಾರಿಯಾದ ವೀರ ಮಾಚಯ್ಯನು ವರದಾನಿ ಗುಡ್ಡಮ್ಮೆಯಲ್ಲಿಗೆ ಹೋಗಿ ಅವಳಿಗೆ ಈ ಸಂಗತಿಯುನ್ನು ಅರುಹಿದನು. ಅಷ್ಟರಲ್ಲಿ ಈ

ಭಾಗದಲ್ಲಿ ಅವಳಿಗೆ ಬಹುಜನ ಭಕ್ತರಾಗಿದ್ದರು. ಅವಳು ಅವರದೊಂದು ಸೇನೆಯನ್ನು ಅಣಿಮಾಡಿಕೊಂಡು ಅಲಂಪುರ ಗ್ರಾಮದಮೇಲೇರಿಹೋದಳು. ಆಗ ಅಲ್ಲಿ ಉಭಯ ಪಕ್ಷಗಳಲ್ಲಿ ಕಡುತರವಾದ ಕಾಳಗವೆಸಗಿತು. ಅದರಲ್ಲಿ ಭಕ್ತರು ಜಯಶೀಲರಾದರು. ಆಗ ಅವರು ಬಾಲ ಬ್ರಹ್ಮೇಶ ಲಿಂಗವನ್ನು ಪುನಃ ಸ್ವಸ್ಥಳದಲ್ಲಿ ಪ್ರತಿಷ್ಠಾಪಿಸಿದರು. ಇದರಿಂದ ವರದಾನಿಯಮ್ಮನು ಒಬ್ಬ ಶ್ರೇಷ್ಠ ಶಿವಶರಣೆಯು ಎಂಬ ಕೀರ್ತಿಯು ಸುತ್ತಲೂ ಹಬ್ಬಿತು. ಮತ್ತು ಅವಳಿಂದ ಬಹಳ ಜನರು ಲಿಂಗ ದೀಕ್ಷೆಯನ್ನು ಹೊಂದಿದರು.

ವರದಾನಿಯಮ್ಮನ ಸ್ಮರಣಾರ್ಥವಾಗಿ ದೇವಗಿರಿ ಯಾದವರ ವಂಶದವನಾದ ಮಹಾದೇವ ರಾಜನ ಮಾಂಡಲಿಕನಾದ ಸಾಯಿದೇವನು 'ವಾತಾಖ್ಯಪುರ' ಎಂಬ ಪಟ್ಟಣವನ್ನು ಭೀಮಾನದೀ ತೀರದಲ್ಲಿ ಹೊಸದಾಗಿ ಕಟ್ಟಿಸಿದನು. ಈ ಗ್ರಾಮಕ್ಕೆ ಈಗ 'ವಾಡಪುರ' ಎಂಬ ಹೆಸರು ಇದೆ. ಇದು ವಿಜಾಪುರ ಪಟ್ಟಣದ ಉತ್ತರಕ್ಕೆ ೫೦ ಮೈಲುಗಳ ಮೇಲೆ ಇದೆ. ಹೀಗೆ ಈ ಕಾಲದಲ್ಲಿ ಸ್ತ್ರೀಯರೂ ಭಕ್ತ ಜಂಗಮರೂ ಕೂಡಿಕೊಂಡು ಧರ್ಮಯುದ್ಧದಲ್ಲಿ ಎಸಗಿದ್ದಾರೆ.

**ಸಗರದ ಕಾಳಗ:—** ಸಗರವೆಂಬ ಗ್ರಾಮವು ಕಲಬುರ್ಗಿ ಜಿಲ್ಲೆಯಲ್ಲಿರುವ ಸುರಪುರ ಗ್ರಾಮಕ್ಕೆ ಸಮೀಪವಿರುತ್ತದೆ. ಇಲ್ಲಿ ಬ್ರಹ್ಮಯ್ಯನೆಂಬ ಶಿವಶರಣನು ವಾಸಮಾಡುತ್ತಿದ್ದನು. ಅವನು ಶಿವನೇ ದೈವತವೆಂದು ಭಾವಿಸಿ ಆಚರಿಸುತ್ತಿರಲು ಆ ಗ್ರಾಮದಲ್ಲಿದ್ದ ಜೈನರು ಜಿನನೇ ದೈವವೆಂದು ವಾದಿಸುತ್ತಿದ್ದರು. ಆಗ ಭಕ್ತರಿಗೂ ಜೈನರಿಗೂ ಕಾಳಗವಾಗಲು ಅವುಗಳಲ್ಲಿ ಭಕ್ತರು ಜಯಶೀಲರಾದರು. ಮುಂದೆ ಈ ಪ್ರಾಂತದಲ್ಲೆಲ್ಲ ಬಹುಜನರು ವೀರಶೈವ ಮತವನ್ನು ಸ್ವೀಕರಿಸಿದರು. ಸಗರದ ಬ್ರಹ್ಮಯ್ಯನು ವಚನಕಾರನಿದ್ದಾನೆ.

**ಕೋವೂರಿದ ೧ನೇ ಕಾಳಗ:—** ಕೋವೂರೆಂಬಲ್ಲಿ ಬ್ರಹ್ಮಯ್ಯನೆಂಬ ರಾಜನು ರಾಜ್ಯವಾಳುತ್ತಿದ್ದ. ಅವನು ಕೇವಲ ಶಿವಭಕ್ತನಾಗಿದ್ದನು. ಅವನ ರಾಜಧಾನಿಯಲ್ಲಿ ಜೈನರು ಬಹು ಪ್ರಬಲರಾಗಿದ್ದು ಅವರು ಅವನನ್ನು ಅತ್ಯಂತವಾಗಿ ವಿರೋಧಿಸುತ್ತಿದ್ದರು. ಅವರ ಸಂಖ್ಯೆಯು ಗ್ರಾಮ

ದಲ್ಲಿ ಬಹು ದೊಡ್ಡದಾಗಿತ್ತು. ಅವರು ರಾಜನು ಶಿವಾನುಭವ ಗೋಷ್ಠಿಯಲ್ಲಿ ಕೆಲವುಕಾಲ ಏಕಾಂತವಾಗಿ ಇರುವ ಸಮಯಾವನ್ನು ಸಾಧಿಸಿ ಅವನ ಮಗನನ್ನು ಕೊಂದುಹಾಕಿದರು. ಇದಾದ ಮೇಲೆ ಅರಸನು ಗ್ರಾಮದಲ್ಲಿ ಬಹು ವಿಜೃಂಭಣೆಯಿಂದ ಗಣಾರಾಧನೆಯನ್ನು ನಡಿಸುತ್ತಿರುವಾಗ ಅಸಂಖ್ಯ ಜಂಗಮರು ಮತ್ತು ಭಕ್ತರು ಪಟ್ಟಣದಲ್ಲಿ ನೆರೆದರು. ಆ ಸಮಯದಲ್ಲಿ ಅರಸನು ತನ್ನ ಅರಮನೆಯಲ್ಲಿ ಲಿಂಗ ಪ್ರತಿಷ್ಠೆಯನ್ನು ಮಾಡಿದನು. ಜೈನರು ಇದನ್ನು ನೋಡಿ ಸಹಿಸಲಾರದೆ ಅರಸನ ಅರಮನೆಯನ್ನು ಮುತ್ತಿ ಯುದ್ಧವನ್ನು ಪ್ರಾರಂಭಿಸಿದರು. ಆದರೆ ಅರಸನು ಬಹುಜನ ಭಕ್ತರನ್ನು ಆಗ ಬರಮಾಡಿಕೊಂಡಿದ್ದರಿಂದ ಅವನು ಜೈನರನ್ನು ಹಿಮ್ಮೆಟ್ಟಿಸಿ ಅವರ ಬಸದಿಗಳಲ್ಲಿದ್ದ ಜೈನ ಮೂರ್ತಿಗಳನ್ನು ಒಡೆಯಿಸಿದನು. ಆದರೆ ಮುಂದೆ ಕೆಲ ಘಟನೆಗಳಾದಂತೆ ತೋರುತ್ತದೆ. ಅವು ಅವನ ಚರಿತ್ರೆಯಲ್ಲಿ ಹೇಳಲ್ಪಟ್ಟಿಲ್ಲ. ಮುಂದೆ ಬ್ರಹ್ಮಯ್ಯನು ಕೈಲಾಸಕ್ಕೆ ತನ್ನ ಭಕ್ತಜನರೊಡನೆ ಬರಬೇಕೆಂದು ಒಂದು ಶಿವಲಿಖಿತವು ಅವನ ಇದಿರಿಗೆ ಬೀಳಲಾಗಿ ಅರಸನು ಭಕ್ತರನ್ನು ಕೂಡಿಕೊಂಡು ತನ್ನ ಕುಲದೈವತವಾದ ರಾಮನಾಥನ ದೇವಾಲಯಕ್ಕೆ ಹೋಗಿ ಅಲ್ಲಿ ದೇವರಿದುರಿಗೆ ಅವರೆಲ್ಲರು ತಮ್ಮನ್ನು ಕಡಿದುಕೊಂಡು ತಮ್ಮ ಪ್ರಾಣವನ್ನು ದೇವರಿಗೆ ಅರ್ಪಿಸಿ ಶಿವಪದವನ್ನು ಹೊಂದಿದರು. ಒಟ್ಟಿಗೆ ಈ ಗ್ರಾಮದಲ್ಲಿ ಘೋರ ಯುದ್ಧಗಳು ನಡೆದು ಅವುಗಳಲ್ಲಿ ಶಿವಶರಣರು ಕಡೆಗೆ ಮೃತಿಯನ್ನು ಹೊಂದಿದಹಾಗೆ ನಮಗೆ ಕಾಣುತ್ತದೆ. ನಾವು ಮೊದಲು ತಿಳಿದಂತೆ ಕೊವೂರು ಜತ್ತಿ ತಾಲೂಕಿನಲ್ಲಿಯ ಕೋಹಳ್ಳಿಯಾಗಿರದೆ, ಅದು ಬೀದರ ಪಟ್ಟಣದ ಸಮೀಪದಲ್ಲಿರುತ್ತದೆಂದು ನಾವು ಕೇಳಿದ್ದೇವೆ.

**ಕೋವೂರಿನ ೨ನೇ ಕಾಳಗಃ —** ಈ ಕಾಲದಲ್ಲಿ ಕೋವೂರಲ್ಲಿ ಮಾಧವನೆಂಬ ವಿಷ್ಣುಭಕ್ತನು ರಾಜ್ಯವನ್ನಾಳುತ್ತಿದ್ದನು. ಅವನಿಗೆ ಭಾಸ್ಕರನೆಂಬ ಮಗನಿದ್ದನು. ಈ ಗ್ರಾಮದಲ್ಲಿ ಭೀಮಯ್ಯನೆಂಬ ಶಿವಭಕ್ತನಿದ್ದು ಅವನು ತನ್ನ ಮಗಳು ಚಂದ್ರಾಣಿಯನ್ನು ಬಿದಿರುಕೊಟ್ಟಿ ( ಬೀದರ ) ಯಲ್ಲಿದ್ದ ವೀರ ಸಂಗಯ್ಯನಿಗೆ ಕೊಟ್ಟು ಲಗ್ನಮಾಡಬೇಕೆಂದಿದ್ದನು. ಆದರೆ ಭಾಸ್ಕರನು ಅವಳನ್ನು ತನಗೆ ಕೊಡಬೇಕೆಂದು ಆಗ್ರಹ ಮಾಡಲು ಅದಕ್ಕೆ ಭೀಮಯ್ಯನು ಒಪ್ಪದೆ, ವೀರ ಸಂಗಯ್ಯನನ್ನು ಬರಮಾಡಿಕೊಂಡು ಲಗ್ನ

ಸಮಾರಂಭವನ್ನು ನಡಿಸಿ ಅದನ್ನು ಮುಗಿಸಿದನು. ಆಗ ಭಾಸ್ಕರನು ಮತ್ತಿಷ್ಟು ಕೆರಳಿದವನಾಗಿ ತನ್ನ ಸೈನ್ಯದೊಂದಿಗೆ ವೀರ ಸಂಗಯ್ಯನು ಹಿಂದಿರುಗಿ ಹೋಗುವ ಕಾಲದಲ್ಲಿ ಅವನ ಜನರ ಮೇಲೆ ಬಿದ್ದು ಕಾಳಗ ವನ್ನು ಪ್ರಾರಂಭಿಸಿದನು. ಅದರಲ್ಲಿ ಭಾಸ್ಕರನು ಸೋತು ಓಡಿಹೋ ದನು. ಆದರೆ ಅವನು ಮುಂದೆ ಒಬ್ಬ ಜಂಗಮನ ವೇಷ ಧಾರಣ ಮಾಡಿ ಕೊಂಡು ವೀರಸಂಗಯ್ಯನನ್ನು ಕಂಡಾಗ್ಗೆ ಅವನನ್ನು ವೀರಸಂಗ ಯ್ಯನು ನಮಸ್ಕರಿಸುತ್ತಿರಲು ಕಠಾರಿಯಿಂದ ಅವನನ್ನು ತಿವಿದನು. ಆಗ ವೀರಸಂಗಯ್ಯನು ಅವನ ಜಂಗಮ ವೇಷವನ್ನು ನೋಡಿ ಅವನು ಮಾಡಿದ ತಪ್ಪನ್ನು ಕ್ಷಮಿಸಿದನು. ಭಾಸ್ಕರನು ವೀರಸಂಗಯ್ಯನ ಈ ವೃತ್ತಿಗೆ ಪಶ್ಚಾತ್ತಾಪವನ್ನು ಹೊಂದಿ ಅವನೂ ಅವನ ಬಂಧು ಬಳಗದವರೂ ವೀರ ಶೈವ ದೀಕ್ಷೆಯನ್ನು ಹೊಂದಿದರು.

**ಪುಲಿಗೆರೆಯ ಕಾಳಗ**:— ಗುಜರಾಥ ದೇಶದಲ್ಲಿ ಆದಿಶೆಟ್ಟಿ ಎಂಬ ವ್ಯಾಪಾರಸ್ಥನು ಸೌರಾಷ್ಟ್ರ ಸೋಮೇಶ್ವರನ ಕೇವಲ ಭಕ್ತನಾಗಿದ್ದನು. ಅವನು ವ್ಯಾಪಾರಕ್ಕೋಸ್ಕರ ಧಾರವಾಡ ಜಿಲ್ಲೆಯಲ್ಲಿರುವ ಅಣ್ಣಿಗೇರಿಗೆ ಬಂದು ಅಲ್ಲಿ ಕೆಲವು ದಿವಸವಿದ್ದು ಆ ಮೇಲೆ ಈ ಭಾಗದ ಮುಖ್ಯ ಪಟ್ಟಣವಾದ ಪುಲಿಗೆರೆ ಅಂದರೆ ಲಕ್ಷ್ಮೇಶ್ವರಕ್ಕೆ ಬಂದನು. ಅವನು ಅಲ್ಲಿ ರುವಾಗ ಪದ್ಮಾವತಿ ಎಂಬ ಜೈನ ಸ್ತ್ರೀಯಳಿಗೆ ಮೋಹಿತನಾಗಿ ಅವಳ ತಾಯಿತಂದೆಗಳ ಒಪ್ಪಿಗೆಯಿಂದ ಆಕೆಯ ಲಗ್ನವಾದನು. ಉಭಯ ದಂಪ ತಿಗಳು ಶಿವಭಕ್ತರಾಗಿ ಪುಲಿಗೆರೆಯಲ್ಲಿಯೇ ವಾಸಮಾಡುತ್ತಿದ್ದರು. ಹೀಗಿ ರಲು ಕೆಲವು ಜಂಗಮರು ಪಟ್ಟಣಕ್ಕೆ ಬಂದಿರಲು ಆದಯ್ಯನು ಅವರಿ ಗೋಸ್ಕರ ಮನೆಯಲ್ಲಿ ಭೋಜನವನ್ನು ಏರ್ಪಡಿಸಿದನು. ಆದರೆ ಅಷ್ಟ ರಲ್ಲಿ ಕೆಲವು ಜೈನ ಯತಿಗಳು ಪದ್ಮಾವತಿಯ ತಾಯಿಯ ಮನೆಗೆ ಬರಲು ಜಂಗಮರ ಸಲುವಾಗಿ ಪದ್ಮಾವತಿಯು ಸಿದ್ಧಪಡಿಸಿದ ಆಹಾರ ಪದಾರ್ಥ ಗಳನ್ನು ಅವಳ ತಾಯಿಯು ಕಸಿದುಕೊಂಡು ಹೋಗಿ, ಜೈನ ಯತಿಗಳಿಗೆ ನೀಡಿದಳು. ಇದರಿಂದ ಆದಯ್ಯನ ಮನೆಗೆ ಬಂದ ಜಂಗಮರು ಭೋಜ ನವಿಲ್ಲದೆ ಹಿಂದಿರುಗಬೇಕಾಯಿತು. ಇದರಿಂದ ಆದಯ್ಯನ ಮನಸ್ಸು ನೊಂದ ವನಾಗಿ ತನ್ನ ಹೆಂಡತಿಯ ತಂದೆಯಾದ ಪಾರಿಸಶೆಟ್ಟಿಯನ್ನು ಕೇಳಲಾಗಿ

ಅವನು–ನೀನೇತರ ಭಕ್ತ? ಅವರಿಲ್ಲಿಯ ಜಂಗಮರು? ನೀನು ನಿನ್ನ ಸೋಮೇಶ್ವರನನ್ನು ಇಲ್ಲಿಗೆ ತಂದರೆ ನೀನು ಭಕ್ತನು, ಇಲ್ಲದಿದ್ದರೆ ಇಲ್ಲ, ಎಂದು ನಿಂದಿಸಿ ನುಡಿದನು. ಆದಯ್ಯನು ಅವಕ್ಕೆ ಖತಿಗೊಂಡು ಒಂದು ತಿಂಗಳಲ್ಲಿ ಸೌರಾಷ್ಟ್ರ ಸೋಮೇಶ್ವರನನ್ನು ಇಲ್ಲಿಯ ಸುರಹೊನ್ನೆ ಬಸದಿಯಲ್ಲಿ ಸ್ಥಾಪಿಸಿಬಿಡುವೆನೆಂದು ಪ್ರತಿಜ್ಞೆ ಮಾಡಿದನು. ಆ ಮೇಲೆ ಅವನು ಉತ್ತರಾಭಿಮುಖನಾಗಿ ಸೌರಾಷ್ಟ್ರ ಸೋಮೇಶ್ವರನನ್ನು ತರಲು ಹೋದನು. ಆಗ ಒಂದು ಪವಾಡವಾಗುತ್ತದೆ. ಶಿವನು ಆದಯ್ಯನ ಪ್ರವಾಸದ ಕಷ್ಟಕ್ಕೆ ಮನಸ್ಸು ನೊಂದವನಾಗಿ, ಅವನಿಗೆ ಪ್ರತ್ಯಕ್ಷನಾಗಿ ನಾನೇ ಪುಲಿಗೆರೆಗೆ ಬಂದು ಸುರಹೊನ್ನೆ ಬಸದಿಯಲ್ಲಿ ನೆಲಸುವೆನು, ಎಂದು ಹೇಳುವನು. ಆ ದಿವಸ ರಾತ್ರಿ ಆದಯ್ಯನು ಅಲ್ಲಿಯೇ ನಿದ್ರೆ ಹೋಗಿರಲಾಗಿ ಮರುದಿನ ಮುಂಜಾವಿನಲ್ಲಿ ಅವನು ಪುಲಿಗೆರೆಯಲ್ಲಿ ಎಚ್ಚರಾದನು. ಆ ದಿನ ಬೆಳಗ್ಗೆ ಸುರಹೊನ್ನೆ ಬಸ್ತಿಯನ್ನು ಜೈನರು ತೆರೆದುನೋಡಲಾಗಿ ಅದರಲ್ಲಿಯ ಜೈನ ಮೂರ್ತಿಗಳೆಲ್ಲವೂ ಭಗ್ನವಾಗಿದ್ದವು ಮತ್ತು ಒಂದು ಉಜ್ವಲ ಲಿಂಗವು ಅವುಗಳ ಮಧ್ಯದಲ್ಲಿ ಉದ್ಭವಿಸಿತ್ತು. ಪಟ್ಟಣದಲ್ಲಿಯ ಜೈನರು ಇದನ್ನು ನೋಡಿ ಖತಿಗೊಂಡು ಇದು ಆದಯ್ಯನ ಕೃತಕವೆಂದು ತಿಳಿದು ಅವರು ಅವನ ಮೇಲೇರಿ ಹೋದರು. ಆದರೆ ಅಷ್ಟರಲ್ಲಿ ಅವನ ಸಹಾಯಕ್ಕೋಸ್ಕರ ಇಬ್ಬರು ಗಣಾಧೀಶ್ವರರು ಖಡ್ಗಧಾರಿಗಳಾಗಿ ದೇವಾಲಯದೊಳಗಿಂದ ಹೊರಗೆ ಬಂದು ನಿಂತರು. ಈ ಮೂವರು ಬಾಗಿಲಲ್ಲಿ ಜೈನರನ್ನು ತಡೆದು ಅವರಲ್ಲಿ ಮುಂದೆ ಬಂದವರನ್ನು ಸಂಹರಿಸಹತ್ತಿದರು. ಹೀಗೆ ಎರಡು ಸಾವಿರ ಜೈನರು ದೇವಾಲಯದ ಮುಂದೆ ಮಡಿಯಲು, ಉಳಿದವರು ಓಡಿಹೋದರು.

ಹೀಗೆ ರಾಘವಾಂಕನ ಸೋಮನಾಥ ಪುರಾಣದಲ್ಲಿ ಕಥೆ ಇದೆ. ಆದರೆ ಇದರಲ್ಲಿಯ ಪವಾಡ ವಿಷಯಗಳನ್ನು ಬಿಟ್ಟು ಬಿಟ್ಟರೆ, ಆದಯ್ಯನು ಒಂದು ತಿಂಗಳ ತನಕ ಸುತ್ತಲೂ ಪ್ರವಾಸ ಮಾಡಿ ವೀರಶೈವರ ಬಲವನ್ನು ಶೇಖರಿಸಿ, ಅವರೊಡನೆ ಪುಲಿಗೆರೆಗೆ ಬಂದು ಅಲ್ಲಿಯ ಜೈನರೊಡನೆ ಕಾಳಗವನ್ನು ಪ್ರಾರಂಭಿಸಿರಬೇಕು, ಆಗ ಅವರು ಜೈನರನ್ನು ಸೋಲಿಸಿ ಸುರಹೊನ್ನೆ ಬಸ್ತಿಯನ್ನು ಶಿವಾಲಯವನ್ನಾಗಿ ಮಾಡಿರಬೇಕೆಂದು ಊಹಿಸಬಹುದಾಗಿದೆ. ಆದರೆ ಯಾವ ಕಥೆಯನ್ನು ತೆಗೆದುಕೊಂ

ದರೂ ಉಳಿದ ಪಕ್ಷಗಳಲ್ಲಿ ಕಾಳಗವಾಗಿರಬೇಕು ಮತ್ತು ಅವರಲ್ಲಿ ಜೈನರು ಸೋತುಹೋಗಿರಬೇಕು ಎಂದು ತಿಳಿಯಲು ಯಾವ ಪ್ರತ್ಯವಾಯವಿಲ್ಲ. ಪುಲಿಗೆರೆಯು ಈ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಒಬ್ಬ ಮಾಂಡಲಾಧಿಪತಿಯ ಮಹತ್ವದ ರಾಜಧಾನಿಯಾಗಿತ್ತು. ಅಲ್ಲಿ ಜೈನರು ಬಹು ಸಂಖ್ಯಾಕರಾಗಿ ಬಲಿಷ್ಠರಾಗಿದ್ದರು. ಆದರೆ ಯುದ್ಧದಲ್ಲಿ ಅವರು ಸೋತದ್ದರಿಂದ ಪಟ್ಟಣದಲ್ಲಿಯ ಎಲ್ಲ ಜಿನಾಲಯಗಳು ಶಿವಾಲಯಗಳಾದವು. ಇದರ ತರುವಾಯ ಈ ಭಾಗದಲ್ಲಿ ವೀರಶೈವ ಧರ್ಮವು ತೀವ್ರವಾಗಿ ಪ್ರಸಾರ ಹೊಂದಿರಬೇಕೆಂದು ತೋರುತ್ತದೆ.

**ಪಾನುಗಲ್ಲಿನ ಕಾಳಗ :—** ಪಾನುಗಲ್ಲು ಈಗ ಹೈದ್ರಾಬಾದ ಇಲಾಖೆಯಲ್ಲಿ ಮಹಬೂಬನಗರ ಜಿಲ್ಲೆಯಲ್ಲಿರುತ್ತದೆ. ಅಲ್ಲಿ ಉದಯ ಭೂಪಾಲನೆಂಬ ರಾಜನು ಆಳುತ್ತಿದ್ದ. ಅವನು ಶಿವಭಕ್ತರನ್ನು ಅತೀವ ಪೀಡಿಸುವವನಾಗಿದ್ದನು.

ಮಲ್ಲಿಕಾರ್ಜುನ ಪಂಡಿತಾರಾಧ್ಯನು ಬಸವೇಶ್ವರನನ್ನು ಕಾಣಲು ಬಯಸಿ ಅಮರಗುಂಡ ಕ್ಷೇತ್ರದಿಂದ ಹೊರಟು ನಡುಗೂಡಿನ ಮಾರ್ಗವಾಗಿ ಪಾನುಗಲ್ಲಿನಲ್ಲಿ ಬಂದು ತಳುವಿದನು. ಇಲ್ಲಿಂದ ಅವನು ವನಿಪುರಕ್ಕೆ ಹೋಗಿ ಅಲ್ಲಿಂದ ಕಲ್ಯಾಣ ಪಟ್ಟಣಕ್ಕೆ ಬರತಕ್ಕವನಾಗಿದ್ದನು.

ಪಂಡಿತಾರಾಧ್ಯನು ಪಾನುಗಲ್ಲಿನಲ್ಲಿರುವಾಗ್ಗೆ ಅಲ್ಲಿ ಧವಳೇಶ್ವರನೆಂಬ ಅವನ ಶಿಷ್ಯನು ಅವನಿಗೆ ಬಹಳ ಉಪಚರಿಸಿದನು. ಧವಳೇಶ್ವರನು ಅರಸನ ಊಳಿಗದವನಾಗಿದ್ದನು. ಅವನು ಉಪಚರಿಸುವದನ್ನು ಪಂಡಿತಾರಾಧ್ಯನ ವಿರೋಧಿಗಳು ಕಂಡು ಸರಿಹರಿಸಲಾರದೆ ಅರಸನಿಗೆ ದೂರು ಹೇಳಲು ಅರಸನು ಧವಳೇಶ್ವರನನ್ನು ಕರಿಸಿ ಪಂಡಿತಾರಾಧ್ಯನನ್ನು ನೀನು ಸೇವಿಸಬಾರದೆಂದು ಎಚ್ಚರಿಸಿದನು. ಅದಕ್ಕೆ ಧವಳೇಶ್ವರನು ನಿನ್ನ ಸೇವೆಯಲ್ಲಿದ್ದ ಈ ಶರೀರವನ್ನು ನೀನು ತೆಗೆದುಕೋ, ಎಂದು ತನ್ನ ಖಡ್ಗದಿಂದ ತನ್ನ ಶಿರಸ್ಸನ್ನು ಕತ್ತರಿಸಿ ಅರಸನಿಗೊಪ್ಪಿಸಿದನು. ಆದರೆ ಅವನಲ್ಲಿದ್ದ ಗಣಾಚಾರವು ರೂಪುಗೊಂಡು ಅರಸ ಕೈಯಲ್ಲಿದ್ದ ಖಡ್ಗದಿಂದಲೇ ಅರಸನನ್ನು ಕೊಂದುಹಾಕಿತು. ಆಗ ಉಭ

ಯುಪಕ್ಷಗಳಲ್ಲಿ ತುಮುಲ ಯುದ್ಧವು ಪ್ರಾರಂಭವಾಯಿತು. ಆದರಲ್ಲಿ ಅರಸನ ಸೈನ್ಯವು ಸೋತು ಮಡಿದುಹೋಯಿತು. ಸೈನ್ಯವು ಮಡಿದದ್ದು ಧವಳೇಶ್ವರನೊಬ್ಬನಿಂದಲೇ ಎಂದು ಕಥೆಯಲ್ಲಿ ಹೇಳಿದೆ. ಆದರೂ ಪಂಡಿತಾರಾಧ್ಯನು ಬಸವೇಶ್ವರನನ್ನು ಕಾಣಲು ಹೊರಟಾಗ ಅಸಂಖ್ಯ ಭಕ್ತರು ಅವನೊಡನೆ ಅಲ್ಲಿ ಇದ್ದುದು ಗ್ರಂಥಗಳಲ್ಲಿದೆ. ಇವರು ತಮ್ಮನ್ನು ಇದಿರಿಸಿದ ಉದಯಭೂಪಾಲನ ಸೈನ್ಯದೊಂದಿಗೆ ಕಾದಿ ಅದನ್ನು ಸೋಲಿಸಿ ಅರಸನನ್ನು ಕೊಂದುಹಾಕಿರಬೇಕೆಂದು ನಮಗೆ ತೋರುತ್ತದೆ. ಈ ಕಾಲದಲ್ಲಿ ಧವಳೇಶ್ವರನೂ ಕೂಡ ಮಡಿದಿರಬೇಕು.

ಇಲ್ಲಿಂದ ಪಂಡಿತಾರಾಧ್ಯನು ಕಲ್ಯಾಣಕ್ಕೆ ಹೊರಟನು. ಅವನು ವನಿಪುರಕ್ಕೆ ಬಂದಾಗ್ಗೆ ಬಸವೇಶ್ವರನು ಕಪ್ಪಡಿ ಸಂಗಮನಾಥನಲ್ಲಿ ಐಕ್ಯವಾದನೆಂಬ ವಾರ್ತೆಯನ್ನು ಕೇಳಿ ಅವನು ಹಿಂದಿರುಗಿದನೆಂದು ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ.

**ಪರಳಿಯ ಕಾಳಗ:**— ಗೋದಾವರೀ ತೀರಕ್ಕೆ ಸಮೀಪವಾಗಿ ಪರಳೀ ಎಂಬ ಗ್ರಾಮವಿರುತ್ತದೆ. ಪರಿವಳಿಗೆ ಎಂಬುದು ಇದರ ಪುರಾತನ ಕನ್ನಡ ಹೆಸರು. ಇದು ವೈಜವ್ವೆಯು ಇದ್ದ ಗ್ರಾಮವು. ಇಲ್ಲಿ ಕಾಳಗವಾಯಿತೆಂದು ಸ್ಪಷ್ಟ ಉಲ್ಲೇಖವು ದೊರೆಯದಿದ್ದರೂ ಅಲ್ಲಿ ಕಾಳಗವಾಗಿರಬೇಕೆಂದು ನಮ್ಮ ಊಹೆ ಇದೆ. ವೈಜವ್ವೆಯು ಶಿವಭಕ್ತಳು. ಆದರೆ ಆಕೆಯ ತಾಯಿತಂದೆಗಳು ಅವಳನ್ನು ನೇಮಿಸೆಟ್ಟಿ ಎಂಬ ಜೈನನಿಗೆ ಕೊಟ್ಟು ಲಗ್ನ ಮಾಡಿದರು. ಆದರೆ ವೈಜವ್ವೆಯು ಗುಪ್ತ ಭಕ್ತಿಯುಳ್ಳವಳಾಗಿ ಲಿಂಗಾರಾಧನೆಯಲ್ಲಿರುತ್ತಿದ್ದಳು. ಒಂದುದಿನ ಆಕೆಯ ಪತಿಯು ಹೇಳಿದಂತೆ ಜೈನರಿಗೋಸ್ಕರ ಸಿದ್ಧಪಡಿಸಿದ ಆಹಾರ ಪದಾರ್ಥಗಳನ್ನು ಜಂಗಮರಿಗೆ ಕೊಟ್ಟದ್ದನ್ನು ಆಕೆಯ ಗಂಡನು ನೋಡಿ ಕುಪಿತನಾಗಿ ಆಕೆಯನ್ನು ಹೊಡೆದು ಬಡಿದು ಬಹಳ ಹಿಂಸಿಸಿದನು. ಆ ಗ್ರಾಮದಲ್ಲಿ ಒಂದು ಪ್ರಸಿದ್ಧ ಜಿನಾಲಯವಿದ್ದಿತು. ವೈಜವ್ವೆಯ ಹಿಂಸೆಯ ಮೂಲಕ ಮರುದಿನ ಅದರ ಬಾಗಲು ತೆರೆಯದಿರಲು ಜೈನರು ವೈಜವ್ವೆಯನ್ನು ಪ್ರಾರ್ಥಿಸಿದ್ದರಿಂದ ಅವಳು ಬಾಗಿಲನ್ನು ಮುಟ್ಟಿದ ಕೂಡಲೆ ಬಾಗಿಲುಗಳು ತಾವಾಗಿಯೇ ತೆರೆದವು. ಆಗ ಒಳಗಿದ್ದ ಜೈನ ಪ್ರತಿಮೆಗಳಲ್ಲಿ

ಉರುಳಿ ಬಿದ್ದದ್ದನ್ನೂ ಮಧ್ಯದಲ್ಲಿ ಒಂದು ಶಿವಲಿಂಗವು ಮೂಡಿದ್ದನ್ನೂ ಜೈನರು ಕಂಡು ಚಕಿತರಾಗಿ ಅವರೆಲ್ಲರೂ ಲಿಂಗಧಾರಿಗಳಾದರು. ಆದರೂ ವೈಜವ್ವೆಯು ಆ ಲಿಂಗದಲ್ಲಿಯೇ ಐಕ್ಯಳಾದಳು. ಅಂದಿನಿಂದ ವೈಜನಾಥ ದೇವಾಲಯವೆಂದು ಅದು ಪ್ರಸಿದ್ಧವಾಯಿತು. ಹೀಗೆ ಈಕೆಯ ಕಥೆಯು ಇದೆ. ಆದರೆ ಪೊವಾಡವು ಹೀಗಿದ್ದರೂ ಸೇವಿನಾಣನು ವೈಜವ್ವೆಯನ್ನು ಕೊಂದುಹಾಕಿರಬೇಕೆಂದು ನಮ್ಮ ಊಹೆ ಇದೆ. ವೈಜವ್ವೆಯ ಮೇಲೆ ಈ ಕ್ರೂರ ಕೃತ್ಯವು ಜರಗಿದ್ದರಿಂದ ಸುತ್ತಲಿನ ಪ್ರದೇಶಗಳಲ್ಲಿದ್ದ ವೀರ ಶೈವರು ಕುಪಿತರಾಗಿ ಪರವಳಿಗೆಯ ಮೇಲೇರಿ ಬಂದು ಜೈನರನ್ನು ಸೋಲಿಸಿ ಅಲ್ಲಿದ್ದ ದೇವಾಲಯಗಳಲ್ಲಿದ್ದ ಜಿನ ಮೂರ್ತಿಗಳನ್ನು ಒಡೆದು ಹಾಕಿ ಅವುಗಳನ್ನು ಶಿವಾಲಯಗಳನ್ನಾಗಿ ಮಾಡಿರಬೇಕೆಂದು ತೋರುತ್ತದೆ. ವೈಜವ್ವೆಯು ಪ್ರಾಣಕೊಟ್ಟದ್ದರಿಂದ ಆಕೆಯ ಹೆಸರಿನಿಂದ ವೈಜನಾಥ ಲಿಂಗವನ್ನು ವೀರಶೈವರು ಇಲ್ಲಿ ಸ್ಥಾಪಿಸಿರಬೇಕು. ಈ ಘಟನೆಯ ಮೂಲಕ ಈ ದೇವಾಲಯವು 'ಪರಳೀ ವೈಜನಾಥ' ಎಂದು ಮಹಾ ರಾಷ್ಟ್ರ ದೇಶದಲ್ಲೆಲ್ಲ ಈಗಲೂ ಅತ್ಯಂತ ಪ್ರಸಿದ್ಧಿಯನ್ನು ಹೊಂದಿರುತ್ತದೆ. ಹರಿಹರ ಕವಿಯು ವೈಜವ್ವೆಯ ರಗಳೆಯನ್ನು ರಚಿಸಿದ್ದಾನೆ ವೈಜ ವ್ವೆಯು ತನ್ನ ಧರ್ಮದಂತೆ ನಡಿಯುವಲ್ಲಿ ತನ್ನ ಪ್ರಾಣ ಕೊಟ್ಟದ್ದರಿಂದ ಜೈನರಿಗೂ ವೀರಶೈವರಿಗೂ ಇಲ್ಲಿ ಕಾಳಗವಾಗಿರಬೇಕು.

**ಧನದ ಮರದ ಕಾಳಗ:**— ಗುಂಟೂರ ಜಿಲ್ಲೆಯಲ್ಲಿ ಚಂದ್ರ ವ್ರೋಲು ಎಂಬ ಹೆಸರಿನ ಗ್ರಾಮವು ಈಗಲೂ ಇರುತ್ತದೆ. ಧನದ ಮರ ವೆಂದು ಇದರ ಪುರಾತನ ಹೆಸರು. ಇಲ್ಲಿ ವೆಲ್ನಾಡ ಚೋಳನು ರಾಜ್ಯ ವಾಳುತ್ತಿದ್ದನು. ಅವನು ಬೌದ್ಧ ಧರ್ಮದಂತೆ ಆಚರಿಸುವವನಾಗಿದ್ದನು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವನೇ ದೈವವು, ಅವನೊಬ್ಬನೇ ಇದ್ದಾನೆಂದು ಅರಸನ ಗುರುವಾದ ಬೌದ್ಧಾಚಾರ್ಯನೊಡನೆ ವಾದಿಸಿ ಅವನನ್ನು ಸೋಲಿಸಿದನು. ಅದಕ್ಕೆ ಬೌದ್ಧರು ಕುಪಿತರಾಗಿ ಪಟ್ಟಣ ದಲ್ಲಿದ ಮಲ್ಲಿಕಾರ್ಜುನ ದೇವಾಲಯದ ಮುಂದೆ ಇದ್ದ ದೀಪಮಾಲೆಯ ಕಂಭವನ್ನು ಕಿತ್ತು ಅದರ ಅರ್ಚಕನನ್ನು ಕೊಂದುಹಾಕಿದರು ಮತ್ತು ಆ ಕಂಭವನ್ನು ದೀವಿ ಖಂಡವೆಂಬ ಹೆಸರಿನ ನೆರೆಯ ದ್ವೀಪದಲ್ಲಿದ್ದ

ಬುದ್ಧ ದೇವಾಲಯದ ಮುಂದೆ ನಡಿಸಿದರು. ಇದು ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗೆ ತಿಳಿಯಿತು. ಆಗ ಅವನ ಅಪ್ಪಣೆಯ ಪ್ರಕಾರ ಅವನ ಶಿಷ್ಯನಾದ ರೇವಯ್ಯ ದೇವನು ಧನದ ಮರಕ್ಕೆ ಹೋಗಿ ಬೌದ್ಧಾಚಾರ್ಯನನ್ನು ಕೊಂದುಹಾಕಿ ಆ ಕಂಭವನ್ನು ಮೊದಲಿನಂತೆ ಶಿವಾಲಯದ ಇದಿರಿಗೆ ನಡಿಸಿದನು. ಆಗ ವೆಲ್ನಾಡ ಚೋಳನು ರೇವಯ್ಯ ದೇವನ ಕಣ್ಣುಗಳನ್ನು ಕೀಳಿಸಿದನು. ಈ ಕಾಲಕ್ಕೆ ಯುದ್ಧವಾಗಿರಬೇಕೆಂದು ನಮ್ಮ ಊಹೆ ಇದೆ. ಆದರೆ ಹೀಗೆ ಕಣ್ಣುಗಳನ್ನು ಕೀಳಿಸಿದ ಬಳಿಕ ಒಂದು ಪೊವಾಡವಾಯಿತೆಂದು ಚರಿತ್ರೆಯಲ್ಲಿ ಹೇಳಲ್ಪಟ್ಟಿದೆ. ಆದರ ಪ್ರಕಾರ ರೇವಯ್ಯನ ಕಣ್ಣುಗಳು ತಿರುಗಿ ಬಂದವು. ಆದರೆ ಉಭಯ ಪಕ್ಷಗಳಲ್ಲಿ ಕಾಳಗವಾದದ್ದರ ಸ್ಪಷ್ಟ ಉಲ್ಲೇಖವಿಲ್ಲ. ರೇವಯ್ಯ ದೇವನನ್ನು ಪೀಡಿಸಿದ್ದರಿಂದ ವೆಲ್ನಾಡ ಚೋಳನಿಗೆ ಶರೀರದಲ್ಲಿ ಹುಣ್ಣುಗಳು ಹುಟ್ಟಿದವು. ಅವುಗಳಿಂದ ಅವನು ಪರಿತಪಿಸುತ್ತ ಮರಣಹೊಂದಿದನೆಂದು ಈ ಕಥೆಯಲ್ಲಿ ಹೇಳಿದೆ. ಒಟ್ಟಾರೆ ನೋಡಿದಲ್ಲಿ ಈ ಕಾಲದಲ್ಲಿ ಕಾಳಗವಾಗಿರಲೇಬೇಕೆಂದು ನಮ್ಮ ಊಹೆ ಇದೆ.

**ಅಬ್ಬಲೂರು ಕಾಳಗ:—** ಅಬ್ಬಲೂರು ಗ್ರಾಮವು ಪುಲಿಗೆರೆಯಿಂದ ದಕ್ಷಿಣಕ್ಕೆ ೪೦ ಮೈಲುಗಳ ಮೇಲೆ ಇದೆ. ಇದು ಹಿಂದಿನಕಾಲದಲ್ಲಿ ಸಂಪೂರ್ಣವಾಗಿ ಜೈನರ ಪಟ್ಟಣವಾಗಿತ್ತು. ಶಿವಶರಣನಾದ ಏಕಾಂತದ ರಾಮಯ್ಯನು ತನ್ನ ಪ್ರವಾಸದಲ್ಲಿ ಈ ಗ್ರಾಮಕ್ಕೆ ಬಂದಿರಲು ಅವನಿಗೂ ಜೈನರಿಗೂ ವಾಗ್ವಾದವಾಗಿ ಅವನು ತನ್ನ ಕತ್ತನ್ನು ಕತ್ತರಿಸಿ ಪುನಃ ಪಡೆದುಕೊಂಡರೆ ಜೈನರು ತಮ್ಮ ಜಿನಾಲಯಗಳನ್ನು ಲಿಂಗಾಲಯಗಳನ್ನಾಗಿ ಮಾಡುವೆವೆಂದು ಅವರಿಂದ ಭಾಷಾ ಪತ್ರವನ್ನು ಬರೆಯಿಸಿಕೊಂಡನು. ಆಮೇಲೆ ಏಕಾಂತದ ರಾಮಯ್ಯನು ತನ್ನ ತಲೆಯನ್ನು ಕೊಯ್ದುಕೊಂಡು ಅದನ್ನು ಪುನಃ ಹತ್ತಿಸಿಕೊಂಡನು. ಆದರೆ ಜೈನರು ತಾವು ಬರೆದು ಕೊಟ್ಟಂತೆ ಜಿನಾಲಯಗಳನ್ನು ಶಿವಾಲಯಗಳನ್ನಾಗಿ ಮಾಡಲಿಲ್ಲ. ಆಗ ಭಕ್ತರು ಖಡ್ಗಗಳನ್ನು ಹಿಡಿದು ಇದಿರ್ಗೊಂಡ ಜೈನರನ್ನು ಸಂಹರಿಸುತ್ತ ಬಸದಿಗಳನ್ನು ಪ್ರವೇಶಿಸಿ ಅವುಗಳಲ್ಲಿಯ ಮೂರ್ತಿಗಳನ್ನು ತೆಗೆದುಹಾಕಿ ಅಲ್ಲಿ ಲಿಂಗಗಳನ್ನು ಪ್ರತಿಷ್ಠಿಸಿದರು. ಈ ಕಾಲದಲ್ಲಿ ಭಕ್ತರಿಗೂ ಜೈನರಿಗೂ ಕಾಳಗವಾದದ್ದು ಅಲ್ಲಿದ್ದ ಶಿಲಾಶಾಸನದಲ್ಲಿ ಹೇಳಲ್ಪಟ್ಟಿದೆ.

ರವಿ ಕಾಣದುದಂ ಕವಿ ತಾಂ ।
ಭುವಿಯೊಳ್ ತಿಳಿದಿರ್ಪನೈದೆ ಕವಿಯರಿದುದನಂ ।
ರವಿಯರಿಯಲ್ಕಸಮರ್ಥಂ ।
ರವಿಗಿವ್ಯ್ಕೆಗಿಲವಸಯಲ್ಲಿ ವರ ಕವಿ ವೇಮಾ ॥ ೨೭೭ ॥

ಅಜ್ಞಾನವೆ ಶೂದ್ರತ್ವನು ।
ಸುಜ್ಞಾನಬ್ರಹ್ಮವೆಂಬ ಶ್ರುತಿವಚನವ ಕೇಳ್ ।
ಅಜ್ಞಾನವಳಿಯೆ ವಾಲ್ಮೀಕಿ ।
ಸುಜ್ಞಾನ ಬ್ರಹ್ಮನಾದ ನೋಡೈ ವೇಮಾ ॥ ೨೭೮ ॥

ಸುಜ್ಞಾನದೃಷ್ಟಿಯಿಂ ಸುಖತರವಾಗಿಹ ಸಕಲವು ತಾ ।
ನೆಂದು ತಿಳಿಯುತಿಹವು ।
ಇಷ್ಟು ಮಾರ್ಗಂಗಳನೇಕ ರೀತಿಲಿ ನೋಳ್ಪ ಯೋಗಿಗೆ
ಶೂನ್ಯಮದಾಗಿ ತೋರ್ಕುಂ ॥ ॥ ೨೭೯ ॥

ತತ್ವಹೀನರಿಹರು ಧರಣಿಯೊಳಗಣಿತ ।
ತತ್ವವೇತ್ತರರಿಮ ಧರಣಿಯಲ್ಲಿ ।
ಇಾವುದಾಪೊಡವರು ಕಾಣಿಸಲಾರರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೦ ॥

ರಜ್ಜು ಸರ್ಪನೆಂದು ತಾ ನೋಡಿ ಭಯಪಟ್ಟು ।
ತಿಳಿಯೆ ಹಗ್ಗವೆಂದು ಭಯವು ಮಾಣ್ಗುಂ ॥
ಭಯವು ತೀರದೊಡನೆ ಬ್ರಹ್ಮವು ತಿಳಿವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೧ ॥

ಪ್ರಾಣವವರಿಯದವನು ಭಕ್ತನು ತಾನಲ್ಲ ।
ಜ್ಯೋತಿಯರಿಯದವನು ಯೋಗಿಯಲ್ಲ ॥
ನಿತ್ಯವರಿಯದವನು ನಿರ್ವಾಣಿಯಾಗನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೨ ॥

ಮೋಗನರಿತರೇನು ಘನತರ ವಸ್ತುವ ।
ದೇಹವರಿಪುದೇನು ದಿವ್ಯ ಬೋಧೆ ॥
ವಿಧವನರಿತು ನೀವು ವೇದಾಂತವರಿವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೩ ॥

ಮುಳಿ ಬಳುವುದಂ ಮತ್ತೆ ಪ್ರಾಣ ತೊರೆಯುವುದನ್ನು ।
ತಿಳಿಯಲಸದಳವೆನಿಸಿತು ಘನನಾದೊಡಂ ॥
ತಿಳಿದೊಡಾಗಲೆ ಕಲಿಯು ನಡೆಯುವುದೆ ಧರೆಯಲ್ಲಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೪ ॥

ಆಲಸ್ಯ ವಿವೇಕವೆಂದೆಂಬ ಕೊಡಲಿಯಿಂ ।
ಪಿರಿದು ವಿದ್ಯೆಯೆಂಬ ಕಾಡ ಕಡಿದು ॥
ತಿಳಿವು ಯೆಂಬ ದೊಡ್ಡ ದೀಪವ ಪಿಡಿಯುತೆ ।
ಮುಕ್ತಿಯರಸಲಹುದು ಯೋಗಿ ವೇಮಾ ॥ ೨೮೫ ॥

ನುಡಿವುವೆನಲದೇಕೆ ನುಡಿಯದೆ ನೀನಿರ್ಪೆ ।
ನುಡಿವುದಯ್ಯ ಯನ್ನೊಳ್ಪ್ರಬಲವಾಗಿ ॥
ನುಡಿವುದಯ್ಯ ನಿನ್ನ ನುಡಿಯ ನಾನರಿವೆನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೬ ॥

ಓದು ಓದದಿರಲು ಸೌಖ್ಯಗಳಿಲ್ಲವು ।
ಓದು ಓದಲಾಗಿ ಸರಸನಹನು ॥
ಓದು ಮರ್ಮವರಿತು ಓದುವುದೋದಯ್ಯ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೭ ॥

---

## ಪ್ರಯೋಜನವಲ್ಲದ ಓದಿಗೆ ಮೆಚ್ಚಬೇಡ

ಹಾಲು ನೀರು ಬೇರೆ ಮಾಳ್ಪುದು ಹಂಸವು ।
ಇಂಥ ಗುಣವು ಬಕಪಿಗೆಲ್ಲಿ ಬಹುದು ॥

ಅಜ್ಞನಾಗ ಸುರುಷನರಿವನೆ ಶಿವನನ್ನು ।
ವಿಶ್ವತೋಭಿರಾಮ ಕೇಳೊ ವೇವ ೨ ॥ ೨೮೮ ॥

ಉತ್ತಮೋತ್ತಮನಿಸಿ ತತ್ವಜ್ಞನಾಗಿರ್ದ ।
ಮಹಿಮೆ ತೋರುವವನು ಮಧ್ಯಮಸ್ಥ ॥
ವೇಷಧಾರಿಯುದರ ಪೋಷಕನಧಮನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೮೯ ॥

ಅರಿವಿಲ್ಲದವರೆಷ್ಟು ಓದಿದರುಂ ಬರಿದೆ ।
ಓದಿದನಿತು ಪೇಳೆ ಸದ್ಗುಣಗಳು ॥
ತಾವರೆದೆಡೆಯೊಳು ಕಪ್ಪೆ ತಾನಿದ್ದಂತೆ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೦ ॥

ಓದುಗಳೆನಿತೋದಿದೊಡುಂ ।
ಸಾಧಿಸರಾ ಪರಮ ಪದವನೆಂದಿಗುಮದರಿಂ ॥
ಈ ಧರೆಯ ಭೋಗ ಮುಳಿದಾ ।
ರಾಧಿಸೆ ಕೈವಲ್ಯ ಪದವ ಲಭಿಸುಗು ವೇಮಾ ॥ ೨೯೧ ॥

ಕುಲದ ಮದವು ಸ್ವಲ್ಪ, ಬಲದ ಮದವದು ಸ್ವಲ್ಪ।
ತಿಳಿದ ಮದನಿಂತು ಪಲ ಮದಗಳಿಂದ ॥
ಭಂಡ ವಿದ್ಯೆಯನೋದಿ ಭಂಡರಾಗುವರಲ್ಲ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೨ ॥

ತನ್ನ ಯತ್ತ್ವವನರಿಯಲಾರದ ಮುಗ್ಧರ ಸೇವೆ।
ಯ ಮಾಡಲೇಂ ಸಿದ್ಧಿಯಹುದು ।
ತನ್ನ ಕೇತರಿಯದ ಹಲವು ವಿದ್ಯಂಗಳ ಓದಲು ।
ಫಲವೇನು ಸತ್ಯಮಹುದು ವೇವ ೨ ॥ ೨೯೩ ॥

ದರ್ಶನಂಗಳಲ್ಲಿ ನೆರೆ ಷಣ್ಮತಗಳಲ್ಲಿ।
ವರ್ಣಾಶ್ರಮಗಳಲ್ಲಿ ಬಿಡದೆ ಸತತ ॥

ತಿರುಗುತಿರ್ಪ ಮನುಜ ತಿಳಿವನೆ ಬ್ರಹ್ಮವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೪ ॥

ಎತ್ತನಾದರೊಂದು ವರ್ಷ ಶಿಕ್ಷಿಸಲಾಗಿ।
ಮಾತು ತಿಳಿದು ಮರ್ಮವಾಗಿ ನಡೆಗುಂ ॥
ಮಂಕ ತಿಳಿಯಲಾರ ಜೀವಿತ ಪರ್ಯಂತ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೫ ॥

ಪಿಕವು ವನದ ಮಧ್ಯೆ ಪ್ರಿಯವಾಗಿ ನುಡಿಯುವ ।
ತೆರದಿ ಪ್ರಾಜ್ಞ ಜನರ ನುಡಿ ನಡೆಗಳು ॥
ಕಾಗಿ ಕೂಗಿನಂತೆ ಕರ್ಮಬದ್ಧರ ಕೂಗು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೬ ॥

ನೀರಿನಲ್ಲಿ ಹಡಗು ವೇಗದೊಳ್ಚರಿಸುದು ।
ಹೋಗದೊಂದು ಮೊಳವು ಹೋಗಲಹುದೆ ॥
ಸ್ಥಳವು ತಪ್ಪಲಾಗಿ ಪ್ರಾಜ್ಞನಜ್ಞನು ಸತ್ಯ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೭ ॥

ವಿದ್ಯೆಯಿಲ್ಲದವನು ವಿದ್ವಾಂಸರೆಡೆಯೊಳ ।
ಗಿದ್ದ ಮಾತ್ರ ವಿಬುಧನಾಗ್ವನೆಂತು ॥
ಕೊಳದ ಹಂಸದ ಬಳಿ ಬಕವಿದ್ದ ರೀತಿಯೊಳ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೮ ॥

ಬ್ರಹ್ಮ, ರಾಜ, ವೈಶ್ಯ, ಶೂದ್ರಾದಿ ವರ್ಣಗಳ್ ।
ಬ್ರಹ್ಮ, ವಿಷ್ಣು, ನೃಪತಿ, ಪಶುಗಳೆಷ್ಟು ॥
ಬ್ರಹ್ಮವನರಿಯದೆ ಬಹು ರೂಪವೆಂತಾಯ್ತು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೯೯ ॥

ಒಡ್ಡರವಳು ವಲವರಿವಳೆ ।
ಮಡ್ಡಿಯು ತಾಂ ಜಾಣನಾಗಬಲ್ಲನೆ ಧರೆಯೊಳ್ ॥

ಅದ್ದಾದಿದ್ದಿಗು ತಿರುಗುವ ।
ಗಿಡ್ಡಿಯು ತಿಳಿಯುವದೆ ಹಾಲರುಚಿಯನು ವೇಮಾ ॥ ೩೦೦॥

ಎಷ್ಟು ಓದಿ ಓದಿ ನೀ ... ನಿತರಿತರುಂ ।
ಗೀನನವಗುಣಗಳ ಮಾಣನೆಂದುಂ ॥
ಕಾಲೊಳಿದ್ದಲರೆಯೆ ಪೋಪುದೆ ಮಲಿನವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೦೧ ॥

ಪುಸ್ತಕಗಳು ಜಗೆಗಳ್ ಹುಲಿದೊಗಲ್ ವಸ್ತ್ರವು ।
ಕಕ್ಷಪಾಳಿ ಹತ್ತು ಲಕ್ಷವಿರಲು ॥
ಭಾರಗೇಡು ಹೊರಲು ಮೋಕ್ಷವೇನಿಲ್ಲವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೦೨ ॥

ಓದಿ ಓದಿ ಓದಿ ಸಾಯುವುದೇತಕೆ ।
ಸಾವು ಬರದ ಓದು ಓದಬೇಕು ॥
ಓದು ಕಾಣದಂತೆ ಹಲವರು ಸತ್ತರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೦೩ ॥

ಅರಿಷಡ್ವರ್ಗಗಳಿಂದಂ।
ನರರಿಲ್ಲರು ಸಿಕ್ಕಿ ಸಿಕ್ಕಿ ನಯಗತಿಯೆನುತಂ ॥
ಅರಿತಿಹರಲ್ಲದೆ ತತ್ವನ ।
ನಾತಪನಂ ಲೇಶ ತಿಳಿದು ನಡೆಯರು ವೇಮಾ ॥ ೩೦೪ ॥

ನಾಯಿ ತಿಂದವನು ಶ್ರೀಗುರುಲಿಂಗಜಂಗಮ ।
ಹಂದಿ ತಿಂದವನೆ ತಾಂ ಪರಮ ಯೋಗಿ ॥
ಆನೆ ತಿಂದವನಿಳೆಯೊಳೆಂತು ಸುಜ್ಞಾನಿಯೋ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೦೫ ॥

ಮೋಘವಡ್ಡವಾಗೆ ಮಿಹಿರನ ತಡೆವುದು ।
ಚಿತ್ತವಡ್ಡವಾಗೆ ಸ್ಥಿರವು ಕೆಡುಗುಂ ॥

ಮರವೆಯಡ್ಡವಾಗೆ ವರಮುಕ್ತಿ ಕೆಡುವುದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೦೬ ॥

---

## ಏಕಾಗ್ರ ಚಿತ್ತನಾಗಿರುವುದು.

ಮನವೇ ಮಾಯಾಮೃಗವೀ ।
ಮನವೆಲ್ಲಿಯು ಚಲಿಸದಂತೆ ಬಿಗಿ ಹಿಡಿಯುತ್ತಂ ॥
ಮನದೊಳ್ ಗರ್ವದ ಮೃಗಮಂ ।
ಮನದಲ್ಲಿಯೆ ಕೊಂದೊಡಲ್ಲಿ ಮುಕ್ತಿಯು ಸಿದ್ಧಂ ॥ ೩೦೭ ॥

ಅರಿಯಲ್ ಮನವೇ ಕಾರಣ ।
ಮಿರುವನ್ನೆಗಮಾತ್ಮ ಶರೀರದೊಳ್ ಸುಖದುಃಖಂ ।
ನೆರೆ ಮೋಕ್ಷಮಾದೊಡೊಂದಂ ।
ಧರಿಸಲ್ಬೇಕಿದುವೆ ಸತ್ಯಸಹುದೈ ವೇಮಾ ॥ ೩೦೮ ॥

ಮನಸಿನಲ್ಲೆ ಒಂದು ಮಾತಿನೊಳೊಂದು ।
ಕಾರ್ಯದಲ್ಲಿ ಒಂದು ಭಿನ್ನವಾಗೆ ॥
ಇಂಥ ನರಗೆ ಮುಕ್ತಿ ತಾನೆಂತು ಲಭಿಸುದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೦೯ ॥

ಮನವೇ ನೆರೆ ಯವ್ವನವಾ ।
ಮನವೇ ಜೀವನವು ಧರೆಯ ಮನುಜರ್ಗೆಲ್ಲಂ ॥
ಮನಸಿಗೆ ಮನಸೇ ಸಾಕ್ಷಿಯು ।
ಮನಸಿಗೆ ಸಾರ್ಥಕ್ಯವಿಲ್ಲ ಮಹಿಯೊಳ್ ವೇಮಾ ॥ ೩೧೦ ॥

ಚಿತ್ತವೆಂಬ ಬೇರು ಶಿಥಿಲವಾದಾಗಲೇ ।
ಶಕ್ತಿಯೆಂಬ ಮರವು ಮುರಿವುದಲ್ತೆ ॥
ವಾಂಛೆಯೆಂಬ ಶಾಖೆಗಳು ಬಾಡುತಿರುವುವು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೧೧ ॥

ತನ್ನಯ ನೆಳಲೇ ಶತ್ರುವು ।
ತನ್ನಯ ನೆಳಲದುವೆ ಸಾಕ್ಷಿ ಸತ್ಯವು ಧರೆಯೊಳ್ ।
ತನ್ನವರೆ ತನಗೆ ರಿಪುಗಳು ।
ತನ್ನಯ ಮಾನಸವೆ ತನಗೆ ಸಾಹ್ಯವು ವೇಮಾ ॥ ೩೧೨ ॥

ಒಂದೆ ಮನಸಿನೊಳಗೆ [illegible]ದು ಸಕಲವು ।
ಹುಚ್ಚು ಹಿಡಿದು ನರರು ತಿಳಿಯುತಿಹರು ॥
[illegible] ತಿಳಿದು ನ[illegible]ವು [illegible]ಒಂದೆಯೇ ಸಾಕ[illegible] ।
ವಿ[illegible]ತೋಭಿರಾಮ ಕೇಳೊ ವೇಮಾ ॥ ೩೧೩ ॥

ಮಾ[illegible]ನಾಡಬಹುದು ಮನ ನಿಲಿಸಲ[illegible]ಗದು ।
ತಿಳಿಸಬಹುದು ತನ್ನ ತಿಳಿವುದ[illegible]ದು ॥
ಕತ್ತಿ [illegible]ಡಿಯಬಹುದು ಶೂರನೆನಿಪ[illegible]ದು ಕಷ್ಟ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೧೪ ॥

---

## ಶುದ್ಧಮನಸ್ಸುಳ್ಳವನಾಗಿರು

ಆತ್ಮಶುದ್ಧಿಯಿಲ್ಲದಾಚಾರವದು ಯೇಕೆ ।
ಭಾಂಡಶುದ್ಧಿಯಿಲ್ಲದನ್ನವೇಕೆ ।
ಚಿತ್ತಶುದ್ಧಿಯಿಲ್ಲದಿಹ ಪೂಜೆ ಯೇತಕೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೧೫ ॥

ಸಂಕಲ್ಪವಡಗಿ ತಾನಿ ।
ಸ್ಸಂಕಲ್ಪನೆನಿಸಿದೊಡಲ್ಲ ಸದ್ಗತಿ ಸಿದ್ಧಂ ॥
ಸಂಕಲ್ಪವೆ ಬಂಧವು ನಿ ।
ಸ್ಸಂಕಲ್ಪವೆ ಮೋಕ್ಷವರಿಯಲಪ್ಪದು ವೇಮಾ ॥ ೩೧೬ ॥

ವಿಮಲ ಬೋಧೆಯುಳಿದಡು ತತ್ವಮದೊಳಿಹವು ।
ಕುಮತ ವಾದಗಳ್ನಶಿಸುತೆ ಕ್ರಮ ಪಡುವುದು ।

ಚಿತ್ತ ಶುದ್ಧ ಮನಸ್ಸವಾಗುತ್ತಿ ಬೆಳಗು ।
ತಾ ಮಹಾವಸ್ತು ಮಹಿಮೆಯು ಪರಮು ದೇವರ ॥ ೩೧೭ ॥

ಕರ್ಮಾ ಕರ್ಮಗಳೆಲ್ಲವು ।
ಕರ್ಮಿಗಳಿಗೆ ತಿಳಿಯಲಾರದನವರತದಿ ತಾಂ ॥
ಧರ್ಮಾಧರ್ಮ ವಿಮರ್ಶೆಯ ।
ನಿರ್ಮಲ ಮತಿ ತಿಳಿಸಲಪ್ಪುದಿದು ದಿಟ ವೇಮಾ ॥ ೩೧೮ ॥

ಶಿವನ ಮೇಲೆ ಮನವು ಸ್ಥಿರವಾಗಿ ನಿಲ್ಲಲು ।
ಆಗದಿದ್ದ ಮುಕ್ತಿಯಹುದು ಅಹುದು ॥
ಶಿವನ ಮೇಲೆ ಭಕ್ತಿ ಎಳ್ಳಷ್ಟು ತಪ್ಪಲು ।
ಆಗದಾಗದಯ್ಯ ಮುಕ್ತಿ ವೇಮಾ ॥ ೩೧೯ ॥

---

## ಇಂದ್ರಿಯಂಗಳಿಗೆ ವಶನಾಗಬೇಡ.

ವಿಷಯಗಳೊಳ್ಬೆರೆದಲರತಿ ।
ವಿಷವಂಟಿನ ಕಳದಿ ತಿಳಿವುದುತ್ತಮ ಧರೆಯೊಳ್ ॥
ವಿಷಯವು ನ್ಯಾಯಾಸುಖಗಳ ।
ವಿಷಯಗಳೊಳ್ಬೆರೆಯದಿಹರು ವೇತ್ತರು ವೇಮಾ ॥ ೩೨೦ ॥

ದಿನಕೆ ಮೂರು ಸಾರಿ ತಿಂದು ನಿದ್ದೆಯ ಮಾಡಿ ।
ಸೊಗಸು ಮೊಲೆಗಳವರೊಳ್ಸೊಂಪಿಸಿಂದ ॥
ಸೇರುತಿರ್ದು ಕಡೆಗೆ ಕೆಟ್ಟು ಸಾಯಲ್ಬೇಡಿ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೩೨೧ ॥

ಯಾವ ಕತೆ ಮನವು ಚಲಿಪುದೊ ।
ಭಾವಿಸಲಾ ಕಡೆಯೊಳಿಂದ್ರಿಯಂಗಳ ಸೆಳೆಗುಂ ॥
ದೇವನ ಪದವಂ ಸೇರಲ್ ।
ತಾವೆಲ್ಲಿಯು ಚಲಿಸವಿಂದ್ರಿಯಂಗಳು ವೇಮಾ ॥ ೩೨೨ ॥

R. N. B. 2554

# ಶಿವಾನುಭವ.

ಸಂಪುಟ ೨೫ ] ( ಮಾಸಪತ್ರಿಕೆ ) [ ಸಂಚಿಕೆ ೩



ಮಾರ್ಚ ೧೯೫೧] ವಿಜಾಪೂರ [ ಫಾಲ್ಗುಣ ೧೮೭೨

ವಾ. ಚಂ. ೩-೧೨-೦

# ವಿಷಯಾನುಕ್ರಮಣಿಕೆ




**ಶಿವಾನುಭವ ಪತ್ರಿಕೆ, ವಿಜಾಪುರ.**

ಮಾಸಿಕ ೬೪ ಪುಟಗಳು.

**ವಾರ್ಷಿಕ ಚಂದಾ ೫-೧೨-೦**

# ಶಿವಾನುಭವ

| ವರ್ಷ ೨೫ | ಮಾರ್ಚ ೧೯೫೧ | ಸಂಚಿಕೆ ೩ |
| --- | --- | --- |

## ಕನ್ನಡ ಸಾಹಿತ್ಯಕ್ಕೆ ಶಿವಶರಣರು ಸಲ್ಲಿಸಿರುವ ಸೇವೆ.

(ಲೇಖಕ:—ಶ್ರೀಯುತ ಗುರುಸಿದ್ಧ ಶಿವಾಚಾರ್ಯರು ಗುರವಿನಪುರಮಠ)

ಕನ್ನಡದೇಶದಲ್ಲಿ ಇತಿಹಾಸ ಉಜ್ವಲವಿರುವಂತೆಯೇ ನಮ್ಮ ಕನ್ನಡ ಸಾಹಿತ್ಯವಾದರೂ ಪ್ರಾಚೀನವೂ, ಅಪಾರವಾದುದೂ ಆಗಿರುತ್ತದೆ. ನಮ್ಮ ನಾಡಿನ ಇತಿಹಾಸ ಪ್ರಾರಂಭವಾದಂದಿನಿಂದ ಅಂದರೆ ಎರಡು ಸಾವಿರ ವರ್ಷಗಳಿಂದ ನಮ್ಮ ಸಾಹಿತ್ಯಕ್ಕೆ ಬೆಳೆದು ಬಂದಿರುವದಕ್ಕೆ ಅನೇಕ ಪ್ರಮಾಣವಿದೆ. ಆದರೂ ಪ್ರತ್ಯಕ್ಷ ಪ್ರಮಾಣವನ್ನು ದೊರಕಿಸುವ ಗ್ರಂಥಗಳಲ್ಲಿ ಇದುವರೆಗೆ ದೊರೆತಿರುವ ಅತಿ ಪ್ರಾಚೀನ ಅಲಂಕಾರ ಗ್ರಂಥವೆಂದರೆ, ರಾಷ್ಟ್ರಕೂಟರ ಅರಸನಾದ ನೃಪತುಂಗನು ಬರೆದ ಕವಿರಾಜಮಾರ್ಗವೇ ಪ್ರಾಮುಖ್ಯವಾದುದು. ಗ್ರೀಕ ಜನರ ನಾಟಕಗಳಲ್ಲಿಯೂ ಕನ್ನಡದ ನುಡಿಗಳು ಬಂದಿರುತ್ತವೆ ಎಂದು ಅನೇಕ ವಿದ್ವಾಂಸ ಸಂಶೋಧಕರು ಹೇಳುತ್ತಾರೆ. ಮಹೋಪಾಧ್ಯಾಯ, ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರು ಬರೆದ ಕವಿಚರಿತೆಯಿಂದ ಕವಿಗಳ ಸಂಖ್ಯೆ ಸಿಕ್ಕಿದರೂ ಚರಿತೆಯ ಸಂಪುಟಗಳಲ್ಲಿ ಬಾರದೆ ಇರತಕ್ಕ ಎಷ್ಟೋ ಹೆಸರುಗಳಿರುತ್ತವೆ. ಅಂತೂ ಕವಿಚರಿತೆ ಕನ್ನಡನಾಡಿನ ವೈಭವವನ್ನೂ, ಹಿರಿಮೆಯನ್ನೂ ವ್ಯಕ್ತಪಡಿಸುತ್ತದೆ.

ಕವಿಗಳಲ್ಲದೆ ಸುಮಾರು ೨೦೦ ಜನ ಶಿವಶರಣರು ವಚನ ವಾಙ್ಮಯವನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಪರಿಪೋಷಿಸಿದ್ದಾರೆ. ಇವರಂತೆಯೇ ಅಸಂಖ್ಯಾತ ಹರಿದಾಸರೂ ತಮ್ಮ ರಸ ಭರಿತವಾದ ಕೀರ್ತನೆಗಳನ್ನು ಹಾಡಿ ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಗೊಳಿಸಿರುತ್ತಾರೆ. ಅಂತೂ ೧,೫೦೦ ಅಥವಾ ಅದಕ್ಕಿಂತಲೂ ಹೆಚ್ಚಿಗೆ ಕವಿಗಳು ಚಂಪು, ನಾಟಕ, ಗದ್ಯ, ಪದ್ಯ, ವಚನ, ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ ಸಾಂಗತ್ಯ ರೂಪಗಳಿಂದ ನಮ್ಮ ಕನ್ನಡ ಸಾಹಿತ್ಯವನ್ನು ಅಪಾರವಾಗಿ ಬೆಳಗಿಸಿರುತ್ತಾರೆ. ಇದು ಪ್ರತಿ ಒಬ್ಬ ಕನ್ನಡಿಗನೂ ಹೆಮ್ಮೆ ಪಡುವ ವಿಷಯವಾಗಿದೆ. ಈ ವಿಷಯದಲ್ಲಿ ಅನ್ಯ ಪ್ರಾಂತಗಳಿಗೆ ತಲೆಬಾಗುವಂತಿಲ್ಲ. ವಂಗ ಸಾಹಿತ್ಯವಾಗಲಿ, ಮಹಾರಾಷ್ಟ್ರ ಸಾಹಿತ್ಯವಾಗಲಿ, ಆಂಧ್ರ ಸಾಹಿತ್ಯವಾಗಲಿ ಈ ಆಧುನಿಕ ಕಾಲದಲ್ಲಿ ವಿಸ್ತಾರಗೊಂಡಿದ್ದರೂ ಪ್ರಾಚೀನತೆಯಿಂದ ಕನ್ನಡ ಸಾಹಿತ್ಯದಷ್ಟು ಮೇಲ್ಮೆಯನ್ನೂ ಘನತೆಯನ್ನು, ಪೂಜ್ಯತೆಯನ್ನೂ ಹೊಂದಲಾರದು.

ಪಂಪ, ಜನ್ನ, ಅಭಿನವಪಂಪ, ಹರೀಶ್ವರ, ರಾಘವಾಂಕ, ಭೀಮಕವಿ, ಷಡಕ್ಷರಿ, ಚಾಮರಸ, ಕುಮಾರವ್ಯಾಸ, ಲಕ್ಷ್ಮೀಶ, ಪುರಂದರದಾಸ, ರುದ್ರಭಟ್ಟ ಮೊದಲಾದ ಕವಿಗಳ ಕಾವ್ಯಗಳು ಉತ್ತಮಗ್ರಂಥಗಳಾಗಿರುತ್ತವೆ. ಅರ್ಥಾತ್ ರಸ, ಭಾವ, ಅಲಂಕಾರ ಮೊದಲಾದವುಗಳಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ಪ್ರಚಂಡನೆನಿಸಿದ ಸುಪ್ರಸಿದ್ಧ ಕಾಳಿದಾಸ, ಭವಭೂತಿ, ಬಾಣ, ವಿಶ್ವನಾಥ, ಭಾರವಿ, ಶೂದ್ರ, ಶ್ರೀಹರ್ಷ, ದಂಡಿ ಇನ್ನೂ ಮುಂತಾದ ಕವಿಗಳ ಪಂಕ್ತಿಯಲ್ಲಿ ಸೇರಲು ಅರ್ಹರಾಗಿರುತ್ತಾರೆ. ಕನ್ನಡ ಕಾವ್ಯದಲ್ಲಿ ಒಂದೊಂದು ಕಾವ್ಯದಲ್ಲಿ ಒಂದೊಂದು ಗುಣ ಅಧಿಕವಾಗಿರುತ್ತದೆ. ವೀರರಸಪರಿಪೂರಿತವಾದ ರನ್ನನ 'ಗದಾಯುದ್ಧ' ನಾಟಕವನ್ನು ಓದಿದರೆ ಇನ್ನಾವ ಸಾಹಿತ್ಯದಿಂದೇನು, ಎಂದೆನಿಸುತ್ತದೆ. ಕೆಲವು ಕವಿಗಳ ಶೈಲಿ ಮನೋಹರವಾಗಿಯೂ, ಸುಲಲಿತವಾಗಿಯೂ ಇರುತ್ತದೆ. ಇದನ್ನು ಇಷ್ಟಕ್ಕೆ ನಿಲ್ಲಿಸಿ ನಮ್ಮ ಸಾಹಿತ್ಯವನ್ನು ಪರಿಪೋಷಿಸಿ ನೀರೆರೆದು ದೊಡ್ಡ ವೃಕ್ಷವನ್ನಾಗಿ ಮಾಡಿದವರನ್ನು ನೆನೆಯುವುದು ಆದ್ಯ ಕರ್ತವ್ಯವಲ್ಲವೇ ?

ಕವಿತಾಗುಣಾರ್ಣವನಾದ ಪಂಪ, ರನ್ನ, ಪೊನ್ನ, ಜನ್ನ, ಅಭಿನವ ಪಂಪ ಮೊದಲಾದ ಹಲವು ಜೈನ ಕವಿಗಳು ಚಂಪು ಮೊದಲಾದ ಪ್ರೌಢ ಗ್ರಂಥಗಳನ್ನು ಬರೆದು ಕರ್ನಾಟಕ ಸಾಹಿತ್ಯದ ಹಿರಿಮೆಯನ್ನು ಹೆತ್ತಿತೋರಿಸಿದರು. ಕನ್ನಡ ಭಾಷೆಯಲ್ಲಿ ಉತ್ತಮವಾದ ಕಾವ್ಯಗಳನ್ನು ಹೆಚ್ಚಾಗಿ ಜೈನ ಕವಿಗಳೇ ಬರೆದಿರುತ್ತಾರೆ. ಇವರ ಗ್ರಂಥಗಳಲ್ಲಿ ವಿಶೇಷವಾಗಿ ಜೈನ ಧರ್ಮವನ್ನೇ ಪ್ರತಿಪಾದಿಸಿರುತ್ತಾರೆ. ಅಂತು ಕನ್ನಡ ಸಾಹಿತ್ಯದಲ್ಲಿ ಜೈನ ಕವಿಗಳು ಅಜರಾಮರ ಕೀರ್ತಿಯನ್ನು ಗಳಿಸಿರುತ್ತಾರೆ.

ಜೈನ ಕವಿಗಳು ಸಂಸ್ಕೃತ ಮಿಶ್ರವಾದ ಚಂಪೂಗ್ರಂಥಗಳನ್ನೇ ಬರೆದಿರುವರು. ಸರಸ ಕವಿ ಸಾರ್ವಭೌಮನಾದ ಹರೀಶ್ವರ, ರಾಘವಾಂಕ, ಭೀಮಕವಿ, ಷಡಕ್ಷರಿ, ಚಾಮರಸ ಮೊದಲಾದ ವೀರಶೈವ ಕವಿಗಳು ಚಂಪೂ, ಷಟ್ಪದಿ, ವಚನ, ರಗಳೆ ಶತಕ, ದ್ವಿಪದಿ ಮೊದಲಾದವನ್ನು ಜನಸಾಮಾನ್ಯಕ್ಕೆ ತಿಳಿಯುವಂತೆ ಬಹು ಸುಲಭವಾದ ಶೈಲಿಯಲ್ಲಿ ಬರೆದು ಕನ್ನಡ ವಾಙ್ಮಯವನ್ನು ಅಭಿವೃದ್ಧಿಗೆ ತಂದರು. ಇವರ ಕೃತಿಗಳಲ್ಲಿ ವೀರಶೈವ ಧಾರ್ಮಿಕ ಮೂಡಿರುತ್ತದೆ. ಇದರಿಂದ ಕನ್ನಡಸಾಹಿತ್ಯ ಪ್ರಚಂಡ ಉನ್ನತಿಶಿಖರವನ್ನೇರಿತು. ವಿಜಯನಗರದ ಸಾಮ್ರಾಜ್ಯ ಕಾಲದಲ್ಲಿ ವೀರಣ್ಣೊಡೆಯ, ಕಲ್ಮಠದ ಪ್ರಭುಸ್ವಾಮಿ, ಜಕ್ಕಣಾಚಾರ್ಯ ಮೊದಲಾದ ಅಸಂಖ್ಯಾತ ೧೦೧ ಜನ ವಿರಕ್ತರು ಕನ್ನಡಸಾಹಿತ್ಯ ಸೇವೆ ಸಲ್ಲಿಸಿ ಕೀರ್ತಿಶಾಲಿಗಳಾಗಿರುತ್ತಾರೆ.

ಇಲ್ಲಿಯವರವಿಗೆ ಕನ್ನಡಸಾಹಿತ್ಯದ ಒಟ್ಟು ನೋಟವನ್ನು ಸೂಕ್ಷ್ಮವಾಗಿ ವಿವರಿಸಿದ್ದಾಯಿತು. ಕನ್ನಡ ಸಾಹಿತ್ಯವನ್ನು ವಿಮರ್ಶನ ಮಾಡುವಾಗ ವಚನವಾಙ್ಮಯದ ತಹ ಉಪನಿಷತ್ತುಗಳನ್ನು ಬಿಟ್ಟು ಮುಂದಕ್ಕೆ ಹೋಗುವಂತಿಲ್ಲ. ಈ ವಚನ ವಾಙ್ಮಯದ ಆದ್ಯ ಪ್ರವರ್ತಕರು ವೀರಶೈವ ಮತವನ್ನು ಉದ್ಧಾರಮಾಡಿದ ಪರಮಪೂಜ್ಯ ಬಸವಣ್ಣನವರು. ಬಸವಣ್ಣನವರಗಿಂತ ಪೂರ್ವದಲ್ಲಿ ದೇವರ ದಾಸಿಮಯ್ಯನೇ ಮೊದಲಾದ ಕೆಲವರು ವಚನಗಳನ್ನು ಬರೆದಿರುತ್ತಾರೆ ಬಸವಣ್ಣನವರ ಹಾಗೆಯೇ ಪ್ರಭುದೇವರು ಚನಬಸವಣ್ಣ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ, ಸರ್ವಜ್ಞ, ಘನಲಿಂಗಿ, ಅಖಂಡೇಶ್ವರ ಮೊದಲಾದ ೩೦೦

ಜನ ಶಿವಶರಣರು ಬೇರೆ ಬೇರೆ ಕಾಲದಲ್ಲಿ ವಚನಗಳನ್ನು ರಚಿಸಿರುತ್ತಾರೆ. ಮೂಲೆಗುಂಪಾಗಿದ್ದ ಈ ವಚನವಾಙ್ಮಯವನ್ನು ಬೆಳಕಿಗೆ ತಂದವರು ನಮ್ಮೆಲ್ಲರಿಗೆ ಪರಮಪೂಜ್ಯರಾದ ರಾವ್ ಬಹಾದ್ದೂರ್, ಫ. ಗು. ಹಳಕಟ್ಟಿ, ಚನ್ನಪ್ಪ ಉತ್ತಂಗಿ ಈ ಮಹನೀಯರು ವೀರಶೈವ ಸಾಹಿತ್ಯಕ್ಕೆ ಪಟ್ಟಿರುವ ಕಷ್ಟವನ್ನು ಯಾವ ಕನ್ನಡಿಗನೂ ಮರೆಯುವಂತಿಲ್ಲ. ಒಟ್ಟಿನಮೇಲೆ ವಚನವಾಙ್ಮಯದಂತಹ ಶ್ರೇಷ್ಠ ಸಾಹಿತ್ಯ ಜಗತ್ತಿನ ಯಾವ ಭಾಷೆಯಲ್ಲಿಯೂ ಇಲ್ಲವೆಂದರೆ ಏನೂ ಅತಿಶಯೋಕ್ತಿಯಾಗಲಾರದು.

ಈ ವಚನಗಳಲ್ಲಿ ವೀರಶೈವ ಧರ್ಮದ ತಿರುಳಾದ ಷಟ್‌ಸ್ಥಲ ಪಂಚಾಚಾರ, ಅಷ್ಟಾವರಣ ಮೊದಲಾದ ವಿಷಯಗಳಿದ್ದರೂ ನೀತಿ ಸತ್ಯ, ಸದಾಚಾರ, ಬ್ರಹ್ಮಚರ್ಯ ಮೊದಲಾದ ಸರ್ವಪ್ರಿಯವಾದ ಎಲ್ಲಾ ವಿಷಯಗಳಿರುತ್ತವೆ. ಪಂಡಿತರು ಈ ವಚನಗಳನ್ನು 'ಉಪನಿಷತ್' ಎಂದು ಹೇಳಿರುವದು ಸತ್ಯಾಂಶವೇ ಸರಿ. ಇದರಿಂದ ಕನ್ನಡಸಾಹಿತ್ಯದ ಹಿರಿಮೆಯೂ, ಕನ್ನಡಸಾಹಿತ್ಯಕ್ಕೆ ಶಿವಶರಣರು ಸಲ್ಲಿಸಿದ ಸೇವೆಯೂ ವ್ಯಕ್ತವಾಗುವದಿಲ್ಲವೆ? ಇಲ್ಲಿ ಬಸವೇಶ್ವರನ ಒಂದು ವಚನವನ್ನು ಉದಹರಿಸುತ್ತೇನೆ.

ಶ್ರೀ ಬಸವಣ್ಣನವರ ನೀತಿ ವಿಚಾರ ತೆಗೆದುಕೊಂಡು ಅವರ ಅಲೌಕಿಕ ಶಕ್ತಿಯನ್ನು ವ್ಯಕ್ತಪಡಿಸಿರುತ್ತಾರೆ. ಪ್ರಪಂಚದಲ್ಲಿ ತಮ್ಮ ತಪ್ಪನ್ನು ಯಾರೂ ತಿಳಿಯರು. ಇನ್ನೊಬ್ಬರ ತಪ್ಪುಗಳನ್ನು ಎತ್ತಿ ಕಟ್ಟುವದರಲ್ಲಿ ಬಹುಮುಂದುವರಿದಿದ್ದಾರೆ. ಅದಕ್ಕೆ ಬಸವಣ್ಣನವರು – "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ತನುವ ನೀವು ಸಂತಯಿಸಿಕೊಳ್ಳಿ" ಎಂದು ಹಾಡಿ ಮದತ್ತಿನಲ್ಲಿದ್ದ ಈ ಜನಾಂಗವನ್ನು ಎಚ್ಚರಗೊಳಿಸಿರುತ್ತಾರೆ. ಲೌಕಿಕ, ಪಾರಮಾರ್ಥ ಎರಡನ್ನೂ ಅನುಸರಿಸಿ ಜನಾಂಗವು ಮುಂದುವರಿಯುವ ರೀತಿಯಲ್ಲಿ ಜನಾಂಗವನ್ನು ಮೇಲಾಗಿ ಸಾಹಿತ್ಯವನ್ನು ಅಭಿವೃದ್ಧಿಗೊಳಿಸಿದ ಶ್ರೀ ಬಸವಣ್ಣನವರು ಭಾಷಾ ಜನಕರಲ್ಲವೇ ?

ಮತ್ತೊಂದು ವಚನದಲ್ಲಿ :—

" ಲಿಂಗವ ಪೂಜಿಸಿ ಫಲವೇನಯ್ಯ ಸಮರತಿ ಸಮಸುಖವ ಸಂಯದನ್ನಕ್ಕ, ಲಿಂಗವ ಪೂಜಿಸಿ ಫಲವೇನಯ್ಯ ಕೂಡಲಸಂಗಮದೇವರ

ಪೂಜಿಸಿ ನದಿಯೊಳಗೆ ನದಿ ಬೆರೆಯುದನ್ನಕ್ಕ'' ಎಂದು ಸಾರಿರುವರು. ಬರಿದೆ ಲಿಂಗವ ಪೂಜಿಸಿ ಫಲವಿಲ್ಲ. ಏಕಮನಸ್ಸಿನಿಂದ ಪರಮಾತ್ಮನನ್ನು ಧ್ಯಾನಮಾಡಬೇಕು. ಮನಸ್ಸು ಪರಮಾತ್ಮನಲ್ಲಿ ಲೀನವಾಗಬೇಕು. ಇಲ್ಲದೆ ಇದ್ದರೆ ಎಲ್ಲವೂ ನಿಶ್ಶೂನ್ಯ. ಅದಕ್ಕೆ ' ನದಿಯೊಳಗೆ ನದಿ ಬೆರೆಯುದನ್ನಕ್ಕ ' ಎಂದು ಉದಾಹರಣೆಯನ್ನು ಕೊಟ್ಟಿರುವರು. ಭಕ್ತನ ಮನಸ್ಸು ಪರಮಾತ್ಮನಲ್ಲಿ ಲೀನವಾದರೆ ಪರಮೇಶನು ನಮ್ಮತ್ತಲೆರಗುತ್ತಾನೆ. ತನ್ನ ಪೂರ್ಣ ಕಟಾಕ್ಷವನ್ನು ಬೀರುತ್ತಾನೆ. ಇವಕ್ಕೆ ಸಮರತಿಸುಖವೆಂದು, ಈ ಸುಖವನ್ನು ಅನುಭವಿಸಿದಾತನೇ ಧನ್ಯ! ಮಾನ್ಯ! ವಚನಗಳಿಗೆ ಕೆಲವು ಇನ್ನೂ ಉದಾಹರಣೆಗಳನ್ನು ಕೊಡಬಹುದಾಗಿತ್ತು. ಆದರೆ ಕಿರಿಯನಾದ ನಾನು ಮಾಡಲಾರದ ಕೆಲಸವನ್ನು ಹಿರಿಯರಿಗೆ ಬಿಟ್ಟಿರುತ್ತೇನೆ.

ಶರಣರಂತೆ ಶಿವಶರಣೆಯರೂ ಸಾಹಿತ್ಯ ಸೇವೆ ಮಾಡಿರುತ್ತಾರೆ. ಅವರಲ್ಲಿ ಹೆಚ್ಚು ಮಂದಿ ಸಿಕ್ಕಿದರೂ ಜನಾದರಣೆಗೆ ಪಾತ್ರಳಾದ ವೈರಾಗ್ಯ ನಿಧಿ ಅಕ್ಕಮಹದೇವಿಯವರು ಪರಮಪೂಜ್ಯರಾಗಿ ವಿರಾಜಿಸುತ್ತಾರೆ. ಇವರೂ ಸಹ ಶರಣರಂತೆ ವ್ಯಾಕರಣದ ಕಟ್ಟಿಗೆ ಬೀಳದೆ ಕೇವಲ ಮಾತೃಭಾಷೆಯಾದ ಕನ್ನಡದಲ್ಲಿ ನೈತಿಕ, ಸಾಮಾಜಿಕ, ಮಿಗಿಲಾಗಿ ಧಾರ್ಮಿಕ ವಿಷಯವನ್ನು ಪ್ರಸ್ತಾಪಿಸಿರುತ್ತಾರೆ. ಅವರವರ ಭಾಷಾ ಸೌಷ್ಠವ ಅಪೂರ್ವವಾಗಿರುತ್ತದೆ. ವಚನಗಳನ್ನು ಓದುವುದರಿಂದ ಓದುಗರ ಮನಸ್ಸಿನಲ್ಲಿ ಅತ್ಯಂತ ಪರಿಣಾಮವಾಗದೆ ಇರದು. ಜಗತ್ತಿನ ಜೀವಜ್ಯೋತಿಗಳ ಮಣಿಮಾಲಿಕೆಯಲ್ಲಿ ಮಹದೇವಿ ಮಧ್ಯದಲ್ಲಿ ದಿವ್ಯರತ್ನದಂತೆ ಪ್ರಜ್ವಲಿಸುತ್ತಿರುವಳು. ಕರ್ನಾಟಕದ ಇತಿಹಾಸದಲ್ಲಿ ಅಕ್ಕನ ಸ್ಥಾನವು ಬಹು ಪ್ರಾಧಾನ್ಯವಾಗಿದೆ. ಬಸವೇಶ್ವರ ಚನ್ನಬಸವೇಶ್ವರ ಪ್ರಭುದೇವ ಇನ್ನೂ ಮುಂತಾದ ಅಸಂಖ್ಯ ಶಿವಶರಣರ ಹೊಗಳಿಕೆಗೆ ಪಾತ್ರಳಾಗಿದ್ದಾಳೆ. ನಿಜವಾಗಿಯೂ ಅಕ್ಕನ ಸಂಸರ್ಗದಿಂದ ಶಿವಶರಣರ ಬಾಳು ಕಳೆಯೇರಿತು. ಸುಖ, ಶಾಂತಿಗಳು ನೆಲೆಗೊಂಡವು. ಹೆಚ್ಚಾಗಿ ಧಾರ್ಮಿಕ ಪ್ರವಾಹ ದಶದಿಕ್ಕುಗಳಲ್ಲಿಯೂ ಭೋರ್ಗರೆದು ಹರಿಯುವಂತೆ ಮಾಡಿದರು. ಸಮಾಜವನ್ನು ಭದ್ರಗೊಳಿಸಿದರು. ವಚನವೆಂಬ ಕನ್ನಡದ ಶೈಲಿಯೊಂದನ್ನು ಹೊಸದಾಗಿ ಹುಟ್ಟಿಸಿ ಪಂಡಿತರಿಗೂ ಪಾಮರರಿಗೂ ಗೂಢ ತತ್ವಗಳು ಸುಲಭವಾಗಿ ಅರ್ಥವಾಗುವಂತೆ

ಮಾಡಿದರು. ವಚನವಾಙ್ಮಯ ಬೆಳೆಯಿತು. ಕರ್ನಾಟಕ ಸಾಹಿತ್ಯಕ್ಕೆ ಅಕ್ಕ ಮಾಡಿರುವ ಸೇವೆ ಅತ್ಯಮೋಘವಾದದ್ದು. ಧಾರ್ಮಿಕ ಕ್ರಾಂತಿ ಎಂಬ ಭಯಂಕರ ವಿಚಾರ ಕ್ರಾಂತಿಯೇ ಎದ್ದಿತು. ನಯ, ನೀತಿಗಳ ಪ್ರವಾಹ ಹರಿಯಿತು. ಭಕ್ತಿ ಎಂಬ ಸಮುದ್ರ ಎಲ್ಲೆ ಮೀರಿ ಹರಿಯಿತು. ಹೆಚ್ಚೇನು?

"ಕೂಡಲ ಚನ್ನಸಂಗಯ್ಯನಲ್ಲಿಹಿರಿಸಿ ಬೇರಿಲ್ಲದಿಪ್ಪ ಹಿರಿಯತನ
ನಮ್ಮಮಹದೇವಿಯಕ್ಕರಿಗಾಯಿತ್ತು '' ಎಂದು ಶ್ರೀ ಷಟ್‌ಸ್ಥಲ ಚಕ್ರಿ ಚನ್ನಬಸವೇಶ್ವರರ ಹೊಗಳಿಕೆಗೆ ಪಾತ್ರಳಾದಳು.

ವೀರಶೈವ ಸಂಸ್ಕೃತಿಯು ಬೌತಿಕ, ಅಧ್ಯಾತ್ಮಿಕ ಇವೆರಡರ ಸಮನ್ವಯವು. ಅಧ್ಯಾತ್ಮಿಕದ ಮೊದಲನೆಯ ಮೆಟ್ಟಿಲು ಅಂದರೆ ಭಕ್ತಿ. ಭಕ್ತಿ ಎಂಬುದು ಮಾನವನ ಹೃದಯದಲ್ಲಿ ಇರುವ ಒಂದು ನಿಕ್ಷೇಪ. ಭಕ್ತನಿಗೆ ಶಿವನು ಯಾವ ತರದಲ್ಲಾದರೂ ಕಾಣಿಸಿಕೊಳ್ಳುವನು. ಈತನಿಗೆ (ಅಂದರೆ ಭಕ್ತನಿಗೆ) ದೃಢವಾದ ನಂಬಿಕೆ ಇರಬೇಕು. ಜೀವಿಯು ಮೋಕ್ಷಾಪೇಕ್ಷೆಯಾದರೆ ಶ್ರೀಗುರುವಿನಲ್ಲಿ ಮೊರೆಯಿಡಬೇಕು. ಗುರುವಿನ ದಿವ್ಯ ಆಶೀರ್ವಾದದಿಂದ ದಾಸಾನುದಾಸ ಮನೋಭಾವದಿಂದ ವಿನಮ್ರನಾಗಿ ಅಹಂಕಾರ ವರ್ಜಿತನಾಗಿ ಗುರುವಿನ ಕರ್ತೃತ್ವದಲ್ಲಿ ಆತ್ಮಾರ್ಪಣೆಯನ್ನು ಮಾಡಿ ಸದಾಕಾಲದಲ್ಲಿಯೂ ಏಕಾಗ್ರಚಿತ್ತಧ್ಯೇಯಗಳಿಂದ ಕೂಡಿರುತ್ತಾನೆ.

'' ಶಿವಭಕ್ತಿಯುಳ್ಳಾತ
ಭವಮುಕ್ತನಾದಾತ
ಶಿವಭಕ್ತಿ ಇರದ ಭಕ್ತಂಗೆ
ಎಂದೆಂದು ಭವ ಮುಕ್ತಿಯಿಲ್ಲ ಸರ್ವಜ್ಞ"

ಎಂಬಂತೆ ಅಕ್ಕ ಮಹಾದೇವಿ ಶಿವಭಕ್ತಿ, ನಡೆ, ನುಡಿಗಳಲ್ಲಿ ಪರಿಪಕ್ವವಾಗಿದ್ದಾಳೆ. ಜಗತ್ತಿನ ಆದರ್ಶ ವ್ಯಕ್ತಿಯಾಗಿದ್ದಾಳೆ. ಅಕ್ಕನ ಒಂದು ವಚನವನ್ನು ಉದಹರಿಸುತ್ತೇನೆ

ಅಕ್ಕ ಪರಮಾತ್ಮನನ್ನು ಹುಡುಕುತ್ತ ಎಲ್ಲಿಯೂ ದೇವನನ್ನು ಕಾಣದೆ ಅಲ್ಲಿರುವ ಪಶು, ಪಕ್ಷಿಗಳನ್ನು ಕುರಿತು ಅಂಗಲಾಚಿ ಬೇಡ

ಗುವ ವಚನ ಎಷ್ಟು ಚನ್ನಾಗಿಯೂ ಹೃದಯಂಗಮವಾಗಿಯೂ ಇದೆ. ಎಂಬುದು ವ್ಯಕ್ತವಾಗುತ್ತದೆ.

"ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ?
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ?
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ ?

ಸರೋವರದೊಳಗಾಡುವ ಹಂಸಗಳಿರಾ ನೀವು ಕಾಣಿರೆ ?
ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ ?
ಚನ್ನಮಲ್ಲಿಕಾರ್ಜುನ ಎಲ್ಲಿಯಹನೆಂದು ಹೇಳಿರೇ? ಹೇಳಿರೇ"

ಎಂದು ಅಂಗಲಾಚಿ ಬೇಡಿದ್ದಾರೆ. ಅಕ್ಕ ಒಂದು ಅಪೂರ್ವ ವ್ಯಕ್ತಿ. ಎಲ್ಲ ಕವಿಗಳೂ ಗಮಕಿಗಳಂತೆ ಕನ್ನಡ ಸಾಹಿತ್ಯವನ್ನು ಉದ್ಧಾರ ಮಾಡಿರುತ್ತಾರೆ. ಅಕ್ಕ ಮಹಾದೇವಿ ಪರಮ ವೈರಾಗ್ಯ ಮೂರ್ತಿಯಾದರೂ ಹೆಣ್ಣಿನ ಸತ್ವ ಸಾರ್ಥಕ್ಯಗಳನ್ನು ಪ್ರಕಾಶಿಸಿರುತ್ತಾರೆ. ಅಕ್ಕನಂತೆ ಇಂದಿನ ಸ್ತ್ರೀ ಸಮಾಜ ದುಡಿಯಬಲ್ಲುದೇ? ಅಕ್ಕನ ಹಿರಿಯ ಹೆಸರಿನಲ್ಲಿ ಪ್ರಜ್ವಲಿಸುವ "ಅಕ್ಕನ ಬಳಗ" ಗಳು ಸ್ತ್ರೀ ಸಮಾಜದ ಕುಂದು ಕೊರತೆಗಳನ್ನು ನಿವಾರಿಸಲು ಟೊಂಕ ಕಟ್ಟಿ ನಿಲ್ಲಬಲ್ಲವೆ ?

ಇಲ್ಲಿಯ ವರವಿಗೆ ಕರ್ನಾಟಕ ವಾಙ್ಮಯಕ್ಕೆ ವೀರಶೈವ ಶಿವಶರಣರು ಸಲ್ಲಿಸಿರುವ ಸೇವೆಯನ್ನು ಸೂಕ್ಷ್ಮವಾಗಿ ವಿವರಿಸಿದ್ದಾಯಿತು. ನಮ್ಮ ಹಿರಿಯರು ಸಾಹಿತ್ಯ ವೃಕ್ಷವನ್ನು ಪರಿಪೋಷಿಸಿ ಫಲ ಹಿಡಿಸಿದ್ದಾರೆ. ಆ ಫಲವನ್ನು ತಿನ್ನಲು ನನ್ನದು ತನ್ನದು ಎಂಬ ತಿಕ್ಕಾಟ ಹತ್ತಿದೆ. ಅಂದರೆ ಕನ್ನಡ ನಾಡ ಇಬ್ಬಾಗವಾಗಿದೆ. ಇದನ್ನು ಒಂದು ಗೂಡಿಸಲು ಹಿರಿಯರೂ ಪೂಜ್ಯರೂ ಆದ ಉದುವಕೊಂಡ ಜಗದ್ಗುರು, ನಿಜಲಿಂಗಪ್ಪ, ಪಂಡಿತರತ್ನ ಶಿವಮೂರ್ತಿ ಶಾಸ್ತ್ರಿಯವರೇ ಮೊದಲಾದ ಕನ್ನಡಮ್ಮನ ಹಿರಿಯ ಕುವರರು ತಾಯಿಯ ಸಂಕೋಲೆಯನ್ನು ಕತ್ತರಿಸಲು ಸಿದ್ಧರಾಗಿದ್ದಾರೆ. ಆದರೆ ಕಿರಿಯರಾದ ನಾವು ಅವರ ಬುಜಕೆ ಬುಜ ಕೊಟ್ಟು ಸರ್ವ ವಿಧದಲ್ಲು ದುಡಿಯಬೇಕೇ ವಿನಹ ಇಲ್ಲದೆ ಇದ್ದರೆ ಹಿರಿಯ ಬಯಲಾಟವಾಗುತ್ತದೆ. ಆದುದರಿಂದ ಕರ್ನಾಟಕ ವೀರ ಶರಣ

ತರುಣಿಯರೇ ! ಕನ್ನಡಮ್ಮನ ನರಳಾಟ ಕೇಳಬರುತ್ತಿದೆ. ತಾಯಿಯು ಬಹಳ ಚೀರಾಟದಲ್ಲಿದ್ದಾಳೆ. ತಾಯಿಯ ದುಃಖವನ್ನು ಪರಿಹರಿಸೋಣ. ಅಧೈರ್ಯಪಡಬಾರದು. ನಮ್ಮ ಸಹಾಯಕ್ಕೆ ಹಿರಿಯರು ನೂರಾರು ಮುಂದೆ ನಿಂತಿದ್ದಾರೆ. ನಾಡುನುಡಿಯ ಸೇವೆ ಸಲ್ಲಿಸೋಣ. ಹಿರಿಯರು ನುಡಿದಂತೆ ನಡೆಯೋಣ. ನಡೆಯುಂತೆ ನುಡಿಯೋಣ. ಓ ಮಾತಬಾಂಧವರೇ ! ಏಳಿ ! ಎದ್ದೇಳಿ! ಕರ್ನಾಟಕ ಪ್ರಾಂತ ರಚನೆಗೆ.

---

## 'ಸಾವಧಾನ' ದ ಸ್ಪಷ್ಟವಾದಿಯ ಪ್ರಶ್ನಕರ್ತನಿಗೆ ಸ್ಪಷ್ಟೋತ್ತರಗಳು.

( ಬರಹಗಾರ:- ಶ್ರೀ. ಅ. ಮ. ಪಾಟೀಲ. ಬಿ. ಎ. ಗದಗ )

ವಿಜಾಪುರದ "ಶಿವಾನುಭವ" ದ ಸಪ್ಟಂಬರ ಸಂಚಿಕೆಯಲ್ಲಿ ಗದಗಿನ ಸಾವಧಾನ ಪಾಕ್ಷಿಕದ ದಿ. ೨೯-೬-೫೦ ರ ಸಂಚಿಕೆಯಲ್ಲಿ ಪ್ರಕಟವಾದ ಸ್ಪಷ್ಟವಾದಿಯ ಅಭಿಪ್ರಾಯಗಳಿಗೆ ಶ್ರೀ ಅನ್ನದಾನೀಶ ವಿರಕ್ತಮಠರು ಆಕ್ಷೇಪಗೊಂಡಿರುವರು. ಆ ಬಗ್ಗೆ ಸ್ಪಷ್ಟವಾದಿಯ ಸ್ಪಷ್ಟೀಕರಣವು ಹೀಗಿದೆ:—

ಶಿವಾನುಭವವೆಂದರೆ ಪರಶಿವಲಿಂಗದಬಗ್ಗೆ ಪುರಾತನ ಹಾಗೂ ನೂತನ ಶಿವಾನುಭವಿಗಳ ಅನುಭವ.

ಅದನ್ನು ಅವರು ಮುಂದಿನವರ ಬಗ್ಗೆ ನಡೆನುಡಿಗಳಿಂದ ಪ್ರಕಟಿಸಿರುವರು. ಹಾಗೂ ಅದನ್ನು ಅವರಾಗಲಿ ಅವರ ಶಿಷ್ಯರಾಗಲೀ ಬರೆದಿಟ್ಟಿರುವರು. ಈ ಸಾಹಿತ್ಯವು ಹೆಚ್ಚಾಗಿ ವಚನ ರೂಪದಲ್ಲಿಯೂ ಕೆಲವು ಕೃತಿಗೆ ಪದ್ಯರೂಪದಲ್ಲಿಯೂ ಇದೆ. ಈ ಸತ್ಯ ಜ್ಞಾನ ಭಾಂಡಾರವನ್ನು ಹೊರಗೆಡಹಲು ಅಧುನಿಕ ಶಿವಶರಣರು ಅರ್ಹರು. ಅವರ ತರುವಾಯ ಶಿವಾನುಭವದಲ್ಲಿ ಅಚಲ ಶ್ರದ್ಧಾಭಕ್ತಿಯುಳ್ಳವರು ಲೇಖನದ್ವಾರಾ ಹೊರಗೆಡಹಬಹುದು. ಆದರೆ ಶಾಸ್ತ್ರಪುರಾಣ ವಚನ ತತ್ವಪದಾದಿರೂಪ ಶಿವಾನುಭವದಲ್ಲಿ ಶ್ರದ್ಧೆಯಿಲ್ಲದ ನಾಸ್ತಿಕರು ಆ ಬಗ್ಗೆ ಬರೆಯುವದು ಶಿವಾನುಭವದ ವಿಡಂಬನವಾಗಲಿಕ್ಕಿಲ್ಲವೇ ?

ಈ ದೃಷ್ಟಿಯಿಂದ ನೋಡಿದರೆ ಆಕ್ಷೇಪಕರ ಈ ನುಡಿಗಳು "ಬಸವಣ್ಣನು ತಕ್ಕರ ಬದನೇ ಕಾಯಿಗಳನ್ನು ಲಿಂಗಗಳನ್ನು ಮಾಡಿ ಬಿಜ್ಜಳನ ಸಿಂಹಾಸನಕ್ಕೆ ಬೆಂಕೀ ಹತ್ತಿದ ಪವಾಡಗಳನ್ನು ಸ್ಪಷ್ಟವಾದಿಯು ಉದಾಹರಿಸಿದ್ದಾನೆ. ಈ ಪೌರಾಣಿಕ ಪವಾಡಗಳಲ್ಲಿ ಸ್ಪಷ್ಟವಾದಿಯು ಪ್ರಾಮಾಣಿಕ ನಂಬಿಗೆ ಇದ್ದರೆ ಇರಲಿ! ನಾನು ಮಾತ್ರ ನಂಬುವದಿಲ್ಲೆಂದು ಹೇಳಿದರೆ ಸಾಕು!"

ಜಗತ್ತಿನ ಪ್ರಗತಿಯು ಗೊಡ್ಡು ಪುರಾಣ ಹೇಳುವ ಶಾಸ್ತ್ರಗಳನ್ನು ಲೆಕ್ಕಿಸದೆ ಮುಂದೆ ನುಗ್ಗುತ್ತಿದೆ. ನಾಸ್ತಿಕತನದ ಪರಮಾವಧಿಯನ್ನು ಎತ್ತಿ ತೋರುವವಲ್ಲದೇ ಸರ್ವ ಆಸ್ತಿಕರಿಂದಲೂ ಸರ್ವಾತ್ಮನಾ ಖಂಡನೀಯವಾಗಿವೆ ಇದನ್ನೋದಿದ ಇಲ್ಲಿಯ ಅನೇಕ ಆಸ್ತಿಕ ಲಿಂಗಾಂಗಿಗಳ ಹಾಗೂ ಸಾಮಾನ್ಯವಾಗಿ ಸರ್ವರ ಮನ ನೊಂದಿರುವದು. ಶಾಸ್ತ್ರ ಪುರಾಣಗಳು ಗೊಡ್ಡಾದ ಬಳಿಕ ಅವುಗಳ ಕಥಾನಾಯಕರೂ ಲೇಖಕರೂ ಶ್ರೋತೃಗಳೂ ಎಲ್ಲರೂ ದಡ್ಡರಾದಂತಾಯಿತು. ಇದು ಸರ್ವ ಜಾತೀಯರಿಗೂ ಅನ್ವಯಿಸುವದು. ಹೀನ ವಾಕ್ಯವು ಬೇರುಂಟೇ ? ಯಾವ ಪ್ರಸಂಗದಲ್ಲಿಯೂ "ಹೀನ" "ಹೇಯ" ಇತ್ಯಾದಿ ಶಬ್ದಗಳನ್ನು

ಎತ್ತಬಾರದೆಂತಲೂ ಇವರ ಆಕ್ಷೇಪ. ಆದರೆ ತಾವೂ ಅಂಥ ಶಬ್ದಗಳನ್ನು ಉಪಯೋಗಿಸದೇ ಬಿಟ್ಟಿಲ್ಲ

ಶ್ರೀ ತೋಂಟದ ಸಿದ್ಧಲಿಂಗೇಶ್ವರ, ಪ್ರಭುದೇವ, ಬಸವೇಶ, ಚನ್ನಬಸವೇಶ, ಸಿದ್ಧರಾಮೇಶ, ಕೊಟ್ಟೂರ ಗುರುಬಸವೇಶ, ಶರಣ ಬಸವೇಶ, ಸೋಮನಾರಾಧ್ಯ ಮುರುಘೇಶ, ಮಹಾಂತೇಶ, ಅನ್ನದಾನೀಶ ಇತ್ಯಾದಿ ಅನಂತ ಶಿವಯೋಗಿ ಪುಂಗವರೇ ಪುರಾಣಗಳ ಕಥಾನಾಯಕರಲ್ಲವೇ? ಪುರಾಣ ಹೇಳುವ ಶಾಸ್ತ್ರಿಗಳಲ್ಲಿಯೂ ಕೂಡಾ ವೈರಾಗ್ಯಶೀಲ ಶಿವಯೋಗಿಗಳೇ ಆದ ಘನಮಠೇಶರು, ಮಲ್ಲಣಾರ್ಯರು ಮುಂತಾದವರು ಆಗಿಲ್ಲವೇ? ಇವರಿಲ್ಲ ಗೊಡ್ಡಾಗಿ ಕಂಡಿದ್ದರೆ ಅಡ್ಡೀ ಏನು? ಈ ಎಲ್ಲ ಅಸಂಖ್ಯ ಮಹಿಮಾನ್ವಿತರು ಅಗಣಿತ ಲೀಲೆಗಳನ್ನು ದೇಹಧಾರಿಗಳಾಗಿದ್ದಾಗಲೂ ಅದೃಶ್ಯರೂಪದಿಂದಿದ್ದು ಈಗಲೂ ಪ್ರಕಟಿಸುತ್ತಿರುವದು ಅನೇಕ ಸ್ವಮತ ಪರಮತ ಆಸ್ತಿಕರಿಗೆ ಸೂರ್ಯ ಪ್ರಕಾಶದಷ್ಟು ನಿಚ್ಚಳವಿದ್ದಾಗ್ಯೂ ಹಲ ಕೆಲವರಿಗೆ ದೃಗ್ಗೋಚರವಾಗದಿದ್ದಲ್ಲಿ ಆದಾರ ತಪ್ಪು?

ಹೇರಂಬ ಕವಿ ಎಂಬ ಶ್ರೀ ವೀರ ವೈಷ್ಣವನೂ ಕೂಡ ಅತಿಶಯ ಭಕ್ತಿಭಾವದಿಂದ ಶ್ರೀ ತೋಂಟದಾರ್ಯ ಮಹಾ ಶಿವಯೋಗಿಗಳ ಪುರಾಣವನ್ನು ಸಾವಿರಾರು ಪದ್ಯಗಳಲ್ಲಿ ಕೊಂಡಾಡಿ ಅವರ ಅಗಣಿತ ಅತ್ಯದ್ಭುತ ಪವಾಡಗಳನ್ನು ಬರೆದಿಟ್ಟಿರುವದನ್ನು ನೋಡಿದರೆ ಶಿವಭಕ್ತರೆಲ್ಲ ಹರುಷ ಪುಲುಕಿತರಾಗದಿರರು. ತೋಂಟದಾರ್ಯ ಪರಂಪರೆಯ ಮುಂ ತೋಂಟದಾರ್ಯರೂ ಕೂಡ ತೋಂಟದಾರ್ಯರ ಹಾಗೂ ಸೋಮನಾರಾಧ್ಯರ ಪುರಾಣಗಳನ್ನು ಬರೆದು ಆ ಕಥಾನಾಯಕರನ್ನೂ ಅನಂತರೀತಿ ಕೊಂಡಾಡಿದ್ದಾರೆ. ಇಾಥವರೆಲ್ಲರೂ ಗೊಡ್ಡೇ? ಶರಣ ಬಸವೇಶನಂತೂ ವ್ಯಾಪಾರಿಯಂತೆ ದಾಸೋಹಕ್ಕೆ ಸಾವಿರ ರೂಪಾಯಿ ಸಲ್ಲಿಸುವವರಿಗೆ ಗಂಡು, ಅರ್ಧ ಸಾವಿರಕ್ಕೆ ಹೆಣ್ಣು ಸಂತಾನವನ್ನೂ ಕೊಡುತ್ತಿದ್ದನೆಂಬುದು ಸುಪ್ರಸಿದ್ಧವೇ ಇದೆ. ಬ್ರಾಹ್ಮಣ ದೇಶಮುಖನ ಹೆಂಡತಿಯ ರೋಗ ಕಳೆದು ಗಂಡು ಸಂತಾನ ಕೊಟ್ಟಿದ್ದಕ್ಕೆ ಬ್ರಹ್ಮಪುರವೆಂಬ ಆ ವಿಶಾಲ ಸ್ಥಳವನ್ನೂ ಆತನು ಕಲಬುರ್ಗಿಯ ಶರಣಬಸವೇಶನಿಗೆ ಕೊಟ್ಟಿರುವನು. ಇದರಂತೆಯೇ ಡಂಬಳದ ಅರ್ಧ

ನಾರೀಶ್ವರ ಶಿವಯೋಗಿಗಳ ಆಶೀರ್ವಾದದಿಂದಲೇ ಬ್ರಾಹ್ಮಣ ದೇಸಾಯಿಯ ಕುಷ್ಠರೋಗವು ನಿವಾರಣೆಯಾಗಿತ್ತೆಂಬುದು ಇತಿಹಾಸ ಪ್ರಸಿದ್ಧವಿದೆ. ಈಗಲೂ ಬ್ರಾಹ್ಮಣಾದಿ ಸಕಲ ಮತೀಯರು ಈ ಎಲ್ಲ ಪುಣ್ಯ ಸ್ಥಳಗಳಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳುತ್ತಿರುವದು ಆ ಮಹಿಮರ ಪವಾಡಗಳ ಮೂಲಕವಲ್ಲವೇ ? ಶಿವ ಶರಣರಿಗೆ ಅಣಿಮಾದಿ ಅಷ್ಟಸಿದ್ಧಿಗಳು ತಾವಾಗಿಯೇ ಹಿಂಬಾಲಿಸುವವು. ಅವರ ಪ್ರಖ್ಯಾತಿಗೋಸುಗ ಇಲ್ಲವೆ ಲೌಕಿಕ ಲಾಭಕ್ಕಾಗಿ ಅವನ್ನುಪಯೋಗಿಸುವದಿಲ್ಲ. ಹಾಗಿದ್ದರೆ ಕೊಪ್ಪಳ ಗವಿ ಸಿದ್ಧೇಶನು ನವಾಬನು ಕೊಟ್ಟ ಗ್ರಾಮಗಳ ಜಹಗೀರದಾರಿಕೆಯ ಕಾಗದವನ್ನು ಹರಿದೊಗೆಯುತ್ತಿರಲಿಲ್ಲ. ಗವಿ ಸಿದ್ಧರ ಆಶೀರ್ವಾದ ರೂಪ ಪ್ರಸಾದದಿಂದ ಅಸಾಧ್ಯವಾದ ಮಹಾ ರೋಗವನ್ನು ಕಳೆದುಕೊಂಡ ನವಾಬನು ಈಗಲೂ ಕೊಪ್ಪಳಕ್ಕೆ ಬಂದಾಗ ಎಲ್ಲ ಮಹಮ್ಮದೀಯ ಉಚ್ಚ ಅಧಿಕಾರಿಗಳೊಡನೆ ಗವಿ ಮಠಕ್ಕೆ ಬಂದು ನಮಸ್ಕರಿಸಿ ಆಶೀರ್ವಾದ ಹೊಂದಿ ಹೋಗುತ್ತಿರುವನು. ಕಡು ವಿರೋಧಿಗಳಾದ ಮತೀಯರು ಕೂಡ ಕಡು ನಮ್ರರಾಗಿ ನಡೆದುಕೊಳ್ಳುತ್ತಿರುವದು ಪವಾಡವಲ್ಲವೇ?

ಪವಾಡಗಳು ಸುಳ್ಳು ಎನ್ನುವ ವಿಶಾಲ ಬುದ್ಧಿವಂತರು ಇದಕ್ಕೇನು ಉತ್ತರಿಸುವರು ? ಇಂಥ ಅನೇಕ ಪವಾಡಗಳು ಪ್ರತಿ ನಿತ್ಯ ಅನೇಕ ಸಂಭವಿಸುತ್ತಿದ್ದರೂ ಗೊತ್ತಿದ್ದ ಕೆಲವೊಂದನ್ನೇ ಬರೆದಿಟ್ಟಿರುವರು. ಎಮ್ಮಿಗನೂರ ಜಡೆಸಿದ್ಧರು, ಗಂಗ ಮಡಿವಾಳೇಶ್ವರರು ಪ್ರತಿದಿನ ಅನೇಕ ಪವಾಡಗಳನ್ನು ಮೆರೆಯಿಸಿ ಸುಪ್ರಸಿದ್ಧರೇ ಆಗಿರುವರು. ಹೀಗೆ ಸರ್ವ ಮತೀಯರಿಂದಲೂ ಈ ಪವಾಡಗಳ ನೆವದಿಂದ ಇವರೆಲ್ಲ ಪೂಜ್ಯರಾಗಿರುವಾಗ್ಗೆ ಅದೇ ಶಿವಕುಲದಲ್ಲಿ ಜನಿಸಿದ ಕೆಲವರು ಪವಾಡಗಳು ಸುಳ್ಳು, ಶಾಸ್ತ್ರ ಪುರಾಣಗಳು ಗೊಡ್ಡು, ಎಂಬ ವಿಚಾರಗಳಿಂದ ಮಹನೀಯರ ಬಗ್ಗೆ ಕೃತಘ್ನತೆಯ ಪರಮಾವಧಿಯನ್ನು ತೋರಿದಂತಾಗದೇ ?

“ ಜಗತ್ತಿನ ಪ್ರಗತಿಯು ಮುಂದೆ ಮುಂದೆ ನುಗುತ್ತದೆ. ” ಎಂದು ಪ್ರಶ್ನಕರ್ತನ ವಿಚಾರ. ಅದು ನುಗ್ಗಿ ಒಗ್ಗಾಲಿಯಾಗಿ ಯಾವ ಆಗಾಧ ತಗ್ಗಿನಲ್ಲಿ ಬೀಳ ಹತ್ತಿದೆಂಬುದನ್ನು ವಿಚಾರವಂತರು ಬಲ್ಲರು. ಮೊನ್ನೆ ನಾಶಿಕ ಕಾಂಗ್ರೆಸ ಅಧಿವೇಶನದ ಕಾಲಕ್ಕೆ ಪಂ. ನೇಹರೂರು ” ಈ ಕ್ರೂರ

ಜಗತ್ತಿನಲ್ಲಿ ದುರ್ಬಲರಿಗೆ ಉಳಿಗಾಲವಿಲ್ಲ. ಶರಣರು ಹೊಣೆಯರಿತು ನಡೆಯಬೇಕು.' ಎಂದು ಹೇಳುವದು ಪ್ರಗತಿಯಿಂದ ಮುನ್ನಗ್ಗುವದರ ಕುರುಹೇ? ಸ್ವಾರ್ಥ ಘಾತಕರಾಗಿ ಭೌತಿಕ ಶೋಧಗಳಿಂದ ವಿಶಿಷ್ಟ ವಿಷಯ ಸುಖವನ್ನು ಹೊಂದಲು ಇತರರನ್ನು ಘಾತಗೈಯ್ಯಲಿಚ್ಛಿಸುವವರಿಂದ ಲೋಕ ಕಲ್ಯಾಣದ ಪ್ರಗತಿಯಾದೀತೇ? ಜಗತ್ತಿನ ಅಶಾಂತಿಗೆ ಈ ಸ್ವಾರ್ಥ ಪರ ಮುತ್ಸದ್ದಿಗಳೇ ಕಾರಣವೆಂಬುದು ತಿಳಿದು ಬಂದಿದೆ. ಕಾರಣ ಈಗಿನ ವಿದ್ಯೆಯೊಂದು ನಿಜವಾದ ವಿದ್ಯೆಯೇ ಅಲ್ಲ. ಸ್ವಾರ್ಥವನ್ನು ಹಿಂದಿಕ್ಕಿಟ್ಟು "ಪರೋಪಕಾರಾರ್ಥ ಮಿದಂ ಶರೀರಂ" ಎಂದು ಬೋಧಿಸಿ ಆತ್ಮಜ್ಞಾನವನ್ನೇ ಗುರಿಯಾಗಿಟ್ಟುಕೊಂಡು ಸಾಗಿ ಮಾನವ ಜನ್ಮದ ಸಫಲತೆಯನ್ನು ಕಂಡಕೊಳ್ಳಲು ಹಚ್ಚುವ ಸತ್ಯ ಶಾಸ್ತ್ರ ಪುರಾಣಗಳಿಂದ ಸಿಗುವ ವಿದ್ಯೆಯೇ ನಿಜವಾದ ಪ್ರಗತಿಗೆ ಸಾಧನವು.

ಪುರಾಣಗಳನ್ನು ನಿಂದಿಸುವವರ ಬಗ್ಗೆ ಶ್ರೀ ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು ಅಪ್ಪಣೆಗೈದಿರುವರು. "ಯಮನ ದೂತರಿಳಿದು ವೊಯ್ದು ಪಾಪದೇಹಿಯು। ಕೆಟ್ಟ ಯಮ ನನೆದುರಿಗೊಯ್ದು ಪಾಪಿ ಬಾಯಿ ಬಿಡುತಿಹ॥ಪ॥ ಮರೆತೆ ಲಿಂಗ ಪೂಜೆ ಗುರುವ ಸೇವೆ ಮಾಡುವದ। ತಿರುಗಿ ಜರಿದೆ ಮಾಡಿ ನುಡಿ ಕಿ ಹಡೆವ ಭಕ್ತರುಗಳನು...... ....ವರ ಪುರಾಣ ಪುಣ್ಯ ಕಥೆಯ ಕೇಳಲೊಲ್ಲದೆ। ಸೊಕ್ಕಿ। ಹಿರಿಯತನ ಉರಿದೆನಾಗ ತಿಳಿಯಲಿಲ್ಲವು। ಮದುಕನಾಗಿ ಧರ್ಮ ಮಾರ್ಗ ತಿಳಿಯಲಿಲ್ಲವು। ಆದಕೆ। ಒದಗಿಲೆಂಥ ಬಾಧೆಯೊಂದು ಮರುಗು ತಿರುವನು। ಒಡೆದು ಇವನ ಹುಳಗೊಂಡ ದೊಳು ಹಾಕಿರೆಂದನು। ಯಮನು ಚಿದುರ ಮಹಾಂತ ಲಿಂಗ ಮುನಿದ ರಾರುಕಾಯ್ವರು ?"

ಪುರಾಣಗಳ ಬಗ್ಗೆ ರತ್ನಾಕರ ಶತಕಕಾರನು ಹೀಗೆ ಅನ್ನುತ್ತಾನೆ. "ಹೊರನಿಂಬಿಂ ಹೊಲೆವೆಣ್ಣೆ ಸೋಲ್ವ ತೆರದಿಂ ಶೃಂಗಾರ ವೀರಕ್ಕೆಬಾ। ಯೊರೆತೀ ತಸ್ಕರ ಜಾರವೀರ ವಿಟ ವೇಶ್ಯಾ ಕಾಯಮಂ ಕೇಳ್ದು ವೈ॥ ಮರೆವರ್. ಪುಣ್ಯ ಪುರಾಣದತ್ತೆಳಸರಯ್ಯೋ ಭೂಪರೊಲ್ದಾವಲ್ಲಮಂ। ಸುರಿವರ್ ಪಾಲ್ಗುಡಿಯೆಂದರೆ ಜಡಿವರೈ ರತ್ನಾಕರಾ ಧೀಶ್ವರಾ॥

ಅಂದರೆ ಶ್ರೀಮಂತರು ಕಳ್ಳರ, ಘಟಿಂಗರ, ಶೂರರ, ಕ್ರೂರ ನೀಚ ಇತಿಹಾಸದ ಕಥೆಗಳನ್ನಾಗಲಿ ಕಾದಂಬರಿಗಳನ್ನಾಗಲಿ ತಲ್ಲೀನರಾಗಿ ಕೇಳುವರಲ್ಲದೆ ಆತ್ಮೋನ್ನತಿಯ ನಿತ್ಯಸುಖದಾಯಕ ಚರಿತ್ರೆಗಳಾದ ಪರಮಪವಿತ್ರ ಪುರಾಣಗಳನ್ನು ತಿರಸ್ಕರಿಸುತ್ತಿರುವರು. ಇತಿಹಾಸ ಇತಿಹಾಸವೆಂದು ಬಡಬಡಿಸುತ್ತ ಪುರಾಣಗಳನ್ನು ಹೀಯಾಳಿಸುವ ವಿಪರೀತ ಬುದ್ಧಿವಂತರು ಮೇಲಿನವೆರಡು ಪಾರಮಾರ್ಥಿಕ ಹಾಗೂ ಲೌಕಿಕ ಅನುಭವಿಗಳ ವಿಚಾರಗಳನ್ನು ಕಣ್ದೆರೆದು ನೋಡಿ ತಮ್ಮ ಮಾರ್ಗದಪ್ಪಿದ ನಡವಳಿಕೆಯನ್ನು ತಿದ್ದುವದು ಲೇಸು.

ಇನ್ನು ಅಪೂರ್ಣ ಕಥನದಿಂದ ವಾಚಕರ ಮನವನ್ನು ಕೆಡಿಸಲಿಚ್ಛಿಸುವ ಹೇಯ ಮಾರ್ಗವನ್ನು ಈ ಪ್ರಶ್ನಕರ್ತನು ಅನುಸರಿಸಿದ್ದನ್ನು ಇಲ್ಲಿ ಕಾಣಬಹುದು. ಸ್ಪಷ್ಟವಾದಿಯು ಯಾವ ಸಂದರ್ಭದಲ್ಲಿ ಕಠೋರ ಶಬ್ದಗಳನ್ನು ಪ್ರಯೋಗಿಸಿರುವನೆಂಬದನ್ನು ಸುಜ್ಞರು ನೋಡಿದ್ದರೆ ಇದಕ್ಕೂ ಕಠೋರ ಶಬ್ದಗಳನ್ನೇಕೆ ಉಪಯೋಗಿಸಲಿಲ್ಲವೆಂದು ಅವರೇ ಕೇಳಬಹುದು. ಆ ಸಂದರ್ಭದ ಅವತರಣಿಕೆಯಿದು :—

“ ಉಷ್ಣಾವರಣ ಪಂಚಾಚಾರ ಆರು ಸ್ಥಲಗಳ । ನಾನೆ । ಸೃಷ್ಟಿಯೊಳಗೆ ಶ್ರೇಷ್ಠವೆಂದು ಸೃಷ್ಟಿಮಾಡಿದೆ ॥ ಅಷ್ಟು ಮಾತಕೆ ನನ್ನ ಮತವು ಘನತೆಯುಳ್ಳದು । ಈಗ । ಭ್ರಷ್ಟ ಗುಣದ ನಡತೆಯಿಂದ ಕೆಟ್ಟು ಹೋದಿತು ” ಎಂದು ಬಾಲ ಲೀಲಾ ಮಹಾಂತ ಶಿವಯೋಗಿಗಳು ನುಡಿದರುವರು. “ ಎಷ್ಟೊಂದು ಗುಣವುಳ್ಳ ನರನಾದೊಡಂ ಕಡೆಗೆ ಇಷ್ಟಲಿಂಗಾರ್ಚಕತೆಗೆ ಸರಿಯಿಲ್ಲ ” ಇದು ವೈಲಾರ ಬಸವಲಿಂಗ ಶರಣರ ಉಕ್ತಿಯು. “ ನವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ . ಅಂದರೆ ಮೂರು ಲೋಕಗಳಲ್ಲಿಯೂ ವೀರಶೈವದಂಥ ಧರ್ಮವಿಲ್ಲ” ಹೀಗೆ ಆಗಮ ಪ್ರಮಾಣವುಂಟು.

ಹೀಗೆ ಅನೇಕ ಅನುಲ್ಲಂಘನೀಯ ಪ್ರಮಾಣಗಳಿದ್ದರೂ ಅಸೂಯಾಂಧರಾದ ಪರಮತ ಪಂಡಿತರಿಂದ ಅಲ್ಲದ ಸಲ್ಲದ ಕೃತ್ರಿಮ ಕುಕಲ್ಪನೆಗಳಿಂದ ಈ ಸರ್ವ ಶ್ರೇಷ್ಠ ಧರ್ಮವು ತಿರಸ್ಕರಿಸಲ್ಪಡುತ್ತ ಬಂದಂತೆ

ಈಗಲೂ ಅಲ್ಲಲ್ಲಿ ಅದೇ ಪ್ರಸಂಗಗಳು ಕಾಣುತ್ತವೆ. ಅವರ ಈ ಸಹಜ ಪ್ರವೃತ್ತಿಯ ಬಗ್ಗೆ ಯಾರೂ ಅಸಂತುಷ್ಟರಾಗಬೇಕಿಲ್ಲ. ಆದರೆ ನಮ್ಮವರೇ ಎಂದು ಹೇಳಿಕೊಂಡು ಮೆರೆಯಲಪೇಕ್ಷಿಸುವ ಕೆಲವರು ಹೀಗೆ ಜನ ಸಾಮಾನ್ಯರ ಬುದ್ಧಿಭ್ರಂಶಗೊಳಿಸುತ್ತಿರುವರೆಂಬುದನ್ನು ಕಂಡು ಕಸಿಕರ ಪಡಬೇಕಾಗಿದೆ

ಈ ಅವತರಣಿಕೆಯನ್ನು ಲಕ್ಷ್ಯಗೊಟ್ಟು ನೋಡಿದಲ್ಲಿ ನಮ್ಮ ಪ್ರಶ್ನಕರ್ತನ ಆಕ್ಷೇಪಗಳು ಎಷ್ಟು ನಿರಾಧಾರವಾದವುಗಳೆಂಬುದು ಸ್ವತಃ ಸಿದ್ಧವಾಗುವದು. ವರ್ಣಾಶ್ರಮಾತೀತ ಶ್ರೇಷ್ಠ ವೀರಶೈವ ಧರ್ಮವನ್ನು ತಮ್ಮ ಹೇಯ ವರ್ಣಾಶ್ರಮ ವಿಚಾರದಂತೆ ನಾಲ್ಕನೆಯ ವರ್ಣದಲ್ಲಿ ಸೇರಿಸಿ ಸರಕಾರದಲ್ಲಿಯೂ ಈ ಅತಿ ವರ್ಣಗಳಿಗೆ ಅವೇ ಕಾಯ್ದೆಗಳನ್ನು ಸಂಬಂಧಪಡಿಸಿದವರು ಅಸೂಯಾಂಧರೂ, ಜಾತ್ಯಾದಿಮಾಂಧರೂ, ಆಗರೇ ? ಇಂಥವರನ್ನೂ ಇನ್ನೂ ಕಠೋರತರ ವಿಶೇಷಣಗಳಿಗೆ ಸಲ್ಲರೇ ? ಇಷ್ಟು ಮಾತ್ರಕ್ಕೆ ಪರ ಸಮಾಜವನ್ನೇ ನಿಂದಿಸಿದಂತಾಯಿತೇ ? ಹಾಗೆ ತಿಳಿಯುವದು ಮೂರ್ಖತನವಾಗದೇ ?

ಮ. ಗಾಂಧಿಯವರು ಕೆಲವು ದುಷ್ಟ ಬ್ರಿಟಿಶ ಅಧಿಕಾರಿಗಳನ್ನು ಅತಿ ಕಠೋರ ಶಬ್ದಗಳಿಂದ ನಿಂದಿಸಿದಾಗ್ಯೂ ಆ ಜನಾಂಗದ ಬಗ್ಗೆ ಅವರಲ್ಲಿ ದ್ವೇಷಾಸೂಯೆಗಳಿದ್ದಿಲ್ಲವೆಂಬುದನ್ನು ಆ ಜನಾಂಗವೇ ಒಪ್ಪಿಲ್ಲವೇ ? ಅಂದ ಮೇಲೆ ಕೆಲವು ಕುಹಕ ಅಸೂಯಾಂಧರನ್ನು ನಿಂದಿಸಿದ ಮಾತ್ರಕ್ಕೆ ಆ ಶಬ್ದಗಳನ್ನೂ ಯಾವ ಕಾಲಕ್ಕೂ ಆಡ ಕೂಡದೆಂಬ ಅಧಿಕ ಪ್ರಸಂಗವೇಕೆ ?

“ ಲಿಂಗಧಾರಕ ಭಕ್ತಸ್ತು ಲಿಂಗ ಹೀನ ನೃಪಂ ದ್ವಿಜಂ । ನ ಸೇವೇನ್ನ ನಮಸ್ಕುರ್ಯಾತ್ । ಯದಿ ಕುರ್ಯಾತ್ ನರಕಂ ವ್ರಜೇತ್। ಈ ವೀರಾಗಮ ವಚನದಂತೆ ಲಿಂಗಾಂಗಿಯು ಲಿಂಗ ಹೀನರಿಗೆ ನಮಸ್ಕರಿಸ ಕೂಡದೆಂಬ ಶಾಸ್ತ್ರ ಪ್ರಮಾಣವಿದ್ದ ಮೇಲೆ ಶ್ರೀ ಬಸವೇಶ್ವರನಂಥ ಧರ್ಮ ಮಾರ್ಗದರ್ಶಕನು ಶಾಸ್ತ್ರ ರೂಢಿಗಳನ್ನೂ ಮೀರಿ ಸಾಮಾನ್ಯರಂತೆ ಕಂಡ ಕಂಡವರಿಗೆಲ್ಲ ನಮಸ್ಕರಿಸುತ್ತಿದ್ದನೆಂದು ಹೇಳುವದು ಮಹಾ

ದೋಷ. ತಾನು ಮುಖ್ಯ ಮಂತ್ರಿಯಾದ್ದರಿಂದ ಇತರರು ಅನುಸರಿಸಲೆಂದು ರಾಜ ಸಿಂಹಾಸನದೆದುರು ತನ್ನ ನಂದಿ ಉಂಗುರಕ್ಕೆ ಬಾಗಿದಂತೆ ತೋರುತ್ತಿದ್ದನು. ಕನಿಷ್ಠರ ಸಲುವಾಗಿ ಶ್ರೇಷ್ಠರ ಆಚರಣೆಗಳೆಷ್ಟೋ ಇರುತ್ತವೆ. ಮಾರ್ಗದಲ್ಲಿ ಅಲಿಂಗಿಗಳು ಶರಣಾಗ್ಯೆದರೆ ಅವರ ಶರಣಾರ್ಥಿಯನ್ನು ಅವರಿಗೆ ಮುಟ್ಟಿಸಲೋಸುಗ 'ಒಮ್ಮೆ ಶರಣು' ಅನ್ನುತ್ತಿರಬಹುದು. ಆದರೆ ಲಿಂಗಾಗಿಯು ಶರಣು ಮಾಡಿದರೆ ಆತನ ಶರಣನ್ನು ಮುಟ್ಟಿಸಿ ತನ್ನ ಶರಣನ್ನು ಸಲ್ಲಿಸಲು 'ಶಿವಶರಣಾರ್ಥಿ' ಯೆಂದೆನ್ನಬೇಕು. ಇದು ಶರಣರ ಆಚರಣೆ. ಇದು ತಾರತಮ್ಯವಿಲ್ಲದೆ ಎಲ್ಲರಿಗೂ ಒಂದೇ ರೀತಿ ಶರಣನೆಂದು ಬಸವೇಶನುಚ್ಚರಿಸುತ್ತಿದ್ದನೆಂದು ಹೇಳುವದು ವಿಚಾರವಂತರು ಒಪ್ಪದ ಮಾತು

ಬಸವೇಶನ ಮನೆಗೆ ಬಂದವರು ಲಿಂಗವಂತರೇ ಎಂದು ಪ್ರಶ್ನಕರ್ತನು ಕೇಳುವನು. ಅವರು ಮೊದಲು ಇರದಿದ್ದರೂ ಬಸವೇಶನ ಭಾವ ಪರುಷದಿಂದ ಲಿಂಗಾಂಗಿಗಳಾಗಿರಲೇ ಬೇಕು. ತನ್ನ ಮನೆಗೆ ಕಳವಿಗೆ ಬಂದವರನ್ನು ಕೂಡಲ ಸಂಗಮನಲ್ಲದೆ ಯಾರೂ ಅಲ್ಲವೆಂದು ಬಸವೇಶನು ಭಾವಿಸಿದೊಡನೆ ಅವರು ಲಿಂಗಾಂಗಿಗಳಾಗಿರಲೇ ಬೇಕು. ಯಾಕಂದರೆ "ಅಂಗದ ಮೇಲೆ ಲಿಂಗವಿದ್ದವರನೆಲ್ಲ ಸಂಗಮೇಶನೆಂಬೆ" ಹೀಗೆ ಆತನ ವಚನವುಂಟು ಪಂಚ ಪರುಷಗಳನ್ನು ನಂಬದ ನಾಸ್ತಿಕರಿಗೆ ಇದರಿಂದ ಸಮಾಧಾನವಾಗದಿದ್ದರೆ ಅದು ಅವರ ದೋಷ. ಇದಕ್ಕಿಂತ ಹೆಚ್ಚಿನ ಐತಿಹಾಸಿಕ ಸಿದ್ಧತೆಗೆ ಇದು ಸ್ಥಾನವಲ್ಲ "ಆಕಳು ಕದಿಯಲು ಬಂದವರನ್ನು ಕಳ್ಳನೆನಬೇಡ. ಆತನು ಸಂಗಮೇಶ"ನೆಂದು ಆ ಬಸವೇಶನ ವಚನ ಉಂಟೆಂದು ಯಾವ ಆಧಾರದಿಂದ ಈ ಸಂಶಯಾತ್ಮ ಪ್ರಶ್ನ ಕರ್ತನು ಸಿದ್ಧ ಮಾಡುವನು? ಅವೇ ವಚನ ಗ್ರಂಥ ಪುರಾಣಾದಿಗಳಿಂದಲ್ಲವೇ? ಅಂದಮೇಲೆ ಅವೇ ಆಧಾರಗಳಿಂದ "ಬದನೇಕಾಯಿಗಳು ಲಿಂಗವಾದವೆಂಬ ಈತನು ಯಾಕೆ ನಂಬಬಾರದು?

ಶಾಸ್ತ್ರ ಪುರಾಣ ಪವಾಡಾದಿಗಳು ಗೊಡ್ಡು ಯೆನ್ನುವ ಪ್ರಶ್ನವಾದಿಯು ತಾನೇ ದಿ- ೨೬-೧-೪೮ನೇ ಸಾವಧಾನ ಪುಕ್ಷಿಯದಲ್ಲಿ ಏನು ಅಭಿಪ್ರಾಯ ಪಟ್ಟಿರುವನೆಂಬುದರ ಪರಿವೆಯಿಲ್ಲದಾಗಿರುವನು. ಆಗ್ಗೆ ಈತನು

ಹೀಗೆ ಬರೆದಿರುವನು. ಸೋಮೇಶ್ವರ ಕವಿಯಂತೂ ಅಜರಾಮರವಾದ ಬಸವಲಿಂಗ ನಾಮಾವಳಿಯನ್ನು ಅದ್ವೈತ ಚಕ್ರವರ್ತಿಯಾದ ನಿಜಗುಣ ಶಿವಯೋಗಿಯ ಪುರಾತನ ತ್ರಿವಿಧಿಯನ್ನು ಬರೆದಿರುವರು. ಈಗಿನ ಲಿಂಗವಂತರಲ್ಲಿ ಕೆಲವರು ಅಜ್ಞಾನದಿಂದ ದುರಾಗ್ರಹದಿಂದ ಇಲ್ಲವೆ ಸಲ್ಲದ ಜಾತಿಭೇದದ ಕಲ್ಪನೆಯಿಂದ ಶಿವಶರಣರನ್ನು ಸ್ಮರಿಸುವದಿಲ್ಲ. ಇಷ್ಟೇ ಅಲ್ಲ ಅಪ್ರತ್ಯಕ್ಷವಾಗಿ ಶಿವಶರಣರ ವಿರುದ್ಧವಾಗಿ ಅಪಪ್ರಚಾರವನ್ನೇ ನಡೆಸುವ ಕೃತಘ್ನತೆಯ ಚಕ್ರವು ಕಣ್ಣೆದುರಿಗೆ ನಿಂತ ವಿಷಾದವಾಗುತ್ತದೆ, ಯಾವಾಗಲೂ ಶರಣರನ್ನು ಸ್ಮರಿಸಬೇಕು. ಬಸವಲಿಂಗ ನಾಮಾವಳಿ ಪುರಾತನರ ತ್ರಿವಿಧಿ ಗುರುಕರಣ ತ್ರಿವಿಧಿ ಮೊದಲಾದ ಗ್ರಂಥಗಳನ್ನು ಓದುತ್ತಿರಬೇಕು.

ಪ್ರಶ್ನಕಾರನ ಮೇಲಿನ ಕೆಲವು ವಾಕ್ಯಗಳಿಗೂ ಈಗಿನ ನಾಸ್ತಿಕ ವಿಚಾರಗಳಿಗೂ ತಾಳಮೇಳವುಂಟೆ? ಬಸವಲಿಂಗ ನಾಮಾವಳಿ ಮುಂತಾದ ಗ್ರಂಥಗಳಲ್ಲಿ ಬದನೇಕಾಯಿಗಳು ಲಿಂಗವಾಗಿದ್ದು ಜೋಳದ ರಾಶಿ ಮುತ್ತಾದದ್ದು ಇವೇ ಮುಂತಾದ ಪವಾಡಗಳ ವರ್ಣನೆಯಿಲ್ಲವೇ? ಇವುಗಳಲ್ಲಿ ತನ್ನ ನಂಬಿಗೆ ಇಲ್ಲವೆಂದು ಈಗ ಹೇಳುತ್ತಾನೆ. ಅಂದಮೇಲೆ ಕಾಲಕಾಲಕ್ಕೆ ಕಾಲಚಕ್ರದಂತೆ ತಿರುಗುತ್ತಿರುವ ನಿಮ್ಮೊಳಗಿನ ಸ್ಥಿತಿಯು ಸ್ಥಿರವಾಗಿ ನಿಂತಮೇಲೆ ಬೇರೆಯವರಿಗೆ ಉಪದೇಶಗೈಯುವ ಹವ್ಯಾಸವದು ನೆಟ್ಟಗಲ್ಲವೆ?

“ತನಗೆ ನಿಶ್ಚಯವಿಲ್ಲದುಪದೇಶವೇಕೆ?” ಇದು ನಿಜಗುಣರ ಉಪದೇಶ. ಸಪ್ಟಂಬರದ ಶಿವಾನುಭವದಲ್ಲಿ “ಗೊಡ್ಡು ಶಾಸ್ತ್ರಪುರಾಣಗಳನ್ನು ಲೆಕ್ಕಿಸದೆ ಜಗತ್ತು ಪ್ರಗತಿಯಲ್ಲಿ ಸಾಗಿದೆ.” ಎಂದು ಹೇಳುವವನು ಮರುಕ್ಷಣವೇ ಅಕ್ಟೋಬರದ ಶಿವಾನುಭವದಲ್ಲಿಯೇ ಜಗತ್ತು ತೀವ್ರಗತಿಯಿಂದ ಅಧೋಗತಿಯಲ್ಲಿರುವದೆಂದು ಅನ್ನುತ್ತಾನೆ. ಹೀಗೆ ೨-೩ ವರ್ಷಕ್ಕೊಮ್ಮೆ ಈತನ ವಿಚಾರಗಳು ಒಂದಕ್ಕೊಂದು ವಿರುದ್ಧವಾಗುತ್ತಿದ್ದರೆ ಈಗ ತಿಂಗತಿಂಗಳಿಗೆ ಬರಬರುತ್ತ ದಿವಸ ದಿವಸಕ್ಕೆ ಬದಲಾವಣೆ ನಡೆದಂತಿದೆ. ಇದರಿಂದ ವಾಚಕರು ಏನು ಪಾಠ ಕಲಿಯುವಂತಿದೆ? ಸುಮ್ಮನೆ ಬರೆಯುವ ಚಟಕ್ಕೆ ಒರೆದು ಅಪಹಾಸ್ಯಕ್ಕೀಡಾಗದಿರುವದು ಮೇಲು.

ಅರ್ಥೋಕ್ತಿಗಳಿಂದ ವಾಚಕರನ್ನು ದಾರಿ ತಪ್ಪಿಸುವ ಇನ್ನೊಂದು ಉದಾಹರಣೆಯನ್ನು ಕೊಡುವೆನು. ಸ್ಪಷ್ಟವಾದಿಯ ನುಡಿಗಳು ಹೀಗಿವೆ "ಹೀಗೆ ಭವಿಯಾದ ರಾಜನಿಗೇ ನಮಸ್ಕರಿಸದೇ ಆತನನ್ನೇ ಆಗಾಗ್ಗೆ ಕ್ಷಮಿಸುತ್ತಿದ್ದ ಧರ್ಮರೂಪಿ ಬಸವೇಶನು ಸಮಗಾರ ಡೋಹರ ಇತ್ಯಾದಿ ಸರ್ವರಿಗೂ ಭವಿಗಳಿದ್ದರೂ ನಮಸ್ಕರಿಸುತ್ತಿದ್ದನೆಂದು ಬರೆಯುವದು ಮಹಾಶ್ರವಾದ,, ಇದರಲ್ಲಿ ಮೂಲದಲ್ಲಿರುವ "ಭವಿಯಾದ ಭವಿಗಳಿದ್ದರೂ,, ಈ ಶಬ್ದಗಳನ್ನು ದುರುದ್ದೇಶದಿಂದಲೇ ಬಿಟ್ಟು ಅಪಾರ್ಥ ಮಾಡಿರುವದು ಕಾಣದಿರದು. "ಬಸವನೆಂದರೆ ಪಾಪ ದೆಸೆಗೆಟ್ಟು ಪೋಗುವದು,, ಸೂತ್ರವನ್ನು ಅರ್ಧಕ್ಕೆ ನಿಲ್ಲಿಸಿ "ಬಸವನೆಂದರೆ ಪಾಪ,, ಹೀಗೆ ಅರ್ಥ ಮಾಡಿದರೆ ಬರುವ ದೋಷವೇ ಅಪೂರ್ಣ ಕಥನದ ಮೇಲಿನೆರಡು ಉದಾಹರಣೆಗಳಿಗೂ ಅನ್ವಯಿಸುವದು.

"ಪವಾಡಗಳ ಬಗ್ಗೆ ಇತಿಹಾಸವು ಹೇಳುತ್ತಿದೆಯೇ" ಎಂದು ಈತನ ಇನ್ನೊಂದು ಪ್ರಶ್ನೆ. ಇತಿಹಾಸದಲ್ಲಿ ಎಲ್ಲವೂ ಬರುವದೆಂದು ತಿಳಿಯುವದೇ ಸಲ್ಲದು. ಇತಿಹಾಸದಲ್ಲಿ ಬಂದ ಅನೇಕ ಸಂಗತಿಗಳು ಅಸತ್ಯವೆಂದು ಕಂಡು ಬಂದೇ ಸತ್ಯ ಇತಿಹಾಸವನ್ನು ಬರೆಯಲು ಶಾಸ್ತ್ರಧುರೀಣರು ಯತ್ನಿಸುತ್ತಿರುವರು. ನಿಜವಾದ ಐತಿಹಾಸಿಕ ಸಂಗತಿಗಳು ಹಿಂದಕ್ಕೆ ಅಪರಾಧಿಗಳಾಗಿ ಗಣಿಸಲ್ಪಟ್ಟು ಶಿಕ್ಷೆಗೆ ಕಾರಣವಾಗುತ್ತಿದ್ದ ಎಷ್ಟೋ ಉದಾಹರಣೆಗಳನ್ನು ಕೊಡಬಹುದು. ಆದ್ದರಿಂದ ಇತಿಹಾಸವು ಸತ್ಯ, ಪುರಾಣವು ಅಸತ್ಯವೆಂಬ ಅಸತ್ಯ ಕಲ್ಪನೆಯಿರ ಕೂಡದು.

"ಶಿವಲಿಂಗ ಹೀನರೇ ಭವಿಗಳೆಂದು ಸ್ಪಷ್ಟವಾದಿ ಅನ್ನುತ್ತಾನೆ. ಹಾಗಾದರೆ ಲಿಂಗವಿದ್ದ ಭವಿಗಳುಂಟೆಂದು ಅನೇಕ ವಚನಗಳುಂಟು. ಆ ಅಭಿಪ್ರಾಯ ತಪ್ಪೆಂದು ನಾನು ಹೇಳುತ್ತೇನೆ. ಬಸವಣ್ಣನನ್ನೂ ಲಿಂಗಾಂಗಿ ಧರ್ಮವನ್ನೂ ಜಾತಿಯ ಸಂಕುಚಿತ ಕಟ್ಟಿನಲ್ಲಿ ಕೂಡ್ರಿಸಲಿಕ್ಕೆ ಯತ್ನಿಸುವ ಸನಾತನಿ ಜಾತ್ಯಾಭಿಮಾನಿಗಳನ್ನು ಕಂಡು ಅತ್ಯಂತ ಕನಿಕರವಾಗುತ್ತದೆ, ಎಂದು ಈ ನವೀನ ಸುಧಾರಕರು ಬರೆಯುತ್ತಾರೆ. ಮೇಲಿನ ಅಭಿಪ್ರಾಯ ನನ್ನವೇ ಅಲ್ಲ. ಅಸಂಖ್ಯಾತ ಮಹಾತ್ಮರು ಅವನ್ನು ಎತ್ತಿ ಆಡಿದ್ದಾರೆ. "ಅಂಗದೊಳಗೆ ಲಿಂಗವಿಲ್ಲದ ನರನೇ ಭವಿ.

ಯೆಂಬ ಇಂಗಿತವನರಿದು ಶಿವನ ಡಿದಾಗವಾವ ಕೇಳು...... ......
ಲಿಂಗಾಂಗಿಗಳ್ ಶ್ರೇಷ್ಠರು" ಇದು ವೈಲಾರ ಬಸವಲಿಂಗ ಶರಣರ ಉಕ್ತಿ. "ಅಂಗದೊಳು ಶಿವಲಿಂಗವಿಲ್ಲದ ಮತ್ತ ಭವಿಗಳೊಡನೆ। ತರದಿನೇಕಾಸನ ಶಯನ ಯಾನ ಸಂಪರ್ಕ। ಮುರುತದ ಸಹಭೋಜನ ಕ್ರಿಯೆಗಳಿಲ್ಲದಣ। ಯಾದಿಂದೆಯನ್ಯೋವಸ್ಥಿತವಾಕ್ಯ ವಚನಂ ಭಕ್ತಿ ಭೇದಂ ಬಳಿಕ್ಕೆ॥ ನೆರೆಯುದಾಸೀನ ನಿರ್ದಯಮೆಂಬ। ತೋರ್ಪರು ತಂದಂತರಂಗದ ಭವಿತ್ವ ವಿಲ್ಲದೆ . ಹೀಗೆ ಮಾತೆಂಟದಾಚಾರ್ಯರು ಪಾಲ್ಕುರಿಕೆ ಸೋಮೇಶ ಪುರಾಣದಲ್ಲಿ (ಸಂಧಿ ೧೨ ಪದ ೪೯-೫) ಹೇಳಿ ಭವಿತ್ವವು ಬಾಹ್ಯ ಹಾಗೂ ಅಂತರಂಗವೆಂದು ಎರಡು ಪ್ರಕಾರ ಉಂಟೆಂದು ಹೇಳಿರುವರು.

ಶರಣರು ಲಿಂಗಧಾರಿಗಳನ್ನೂ ಭವಿಗಳೆಂದು ಖಂಡಿಸಿರುವಲ್ಲಿ ಅವರ ಅಂತರಂಗದ ಭವಿತ್ವವನ್ನು ಖಂಡಿಸಿರುವರೆಂದು ತಿಳಿಯಬೇಕು. ಅಂಗಕ್ಕೆ ಲಿಂಗಧಾರಣಗೈಯಲು ಅಂಗಭವಿತ್ವವು ಹಿಂಗಿತು. ಬರಬರುತ್ತ ಮನಭಾವಗಳ ಭವಿತ್ವವು ತಾನೇ ಹಿಂಗುವದು. ಅಂಗದ ಬಾಹ್ಯ ಭವಿತ್ವವನ್ನು ಲಿಂಗಧಾರಣೆಯಿಂದ ಹಿಂಗದವನು ಅಂತರಂಗದೆರಡು ಭವಿತ್ವಗಳನ್ನು ಹಿಂಗುವದು ದೂರೇ ಉಳಿಯಿತು.

ಪಾತ್ರೆಯು ಹೊರಗೆ ಬೆಂಕಿ ಇದ್ದರೇ ಆ ಉಷ್ಣತೆಯು ಒಳಗಿನ ನೀರಿಗೂ ಧಾನ್ಯಕ್ಕೂ ಭೇದಿಸಿ ಪಾಕರಚನೆಯಾದೀತಲ್ಲವೇ? ಜಗದ್ಗುರು ಸಿದ್ಧಲಿಂಗೇಶ್ವರರು ಭವಿಗಳ ವರ್ಗೀಕರಣವನ್ನು ಹೀಗೆ ಮಾಡಿರುವರು. "ಆಯತ ಲಿಂಗ ( ಇಷ್ಟಲಿಂಗ ) ಸಂಬಂಧವಿಲ್ಲದಾತ ಅಂಗ ಭವಿ ಸ್ವಾಯತ ಲಿಂಗ ( ಪ್ರಾಣಲಿಂಗ ) ಸಂಬಂಧವಿಲ್ಲದಾತ ಮನ ಭವಿ. ಸನ್ನಿಹಿತ ಲಿಂಗ ( ಭಾವಲಿಂಗ ) ಸಂಬಂಧವಿಲ್ಲದಾತ ಆತ್ಮ ಭವಿ. ಅಂದರೆ ಮೊದಲು ಇಷ್ಟಲಿಂಗ ಧಾರಣೆಯಿಂದ ಅಂಗ ಭವಿತ್ವವನ್ನು ಕಳೆದುಕೊಂಡೇ ಮನ ಹಾಗೂ ಆತ್ಮ ಭವಿತ್ವಗಳನ್ನು ಕಳೆದುಕೊಳ್ಳಬೇಕೆಂಬುದು ಮಹಿಮರ ಅಭಿಪ್ರಾಯ.

ಸುಪ್ರಸಿದ್ಧ ಷಡಕ್ಷರದೇವ ಕವಿಗಳು ವೃಷಭೇಂದ್ರ ವಿಜಯದಲ್ಲೆಲ್ಲ ಕಡೆಗೆ ಭವಿಶಬ್ದವನ್ನು ಲಿಂಗ ಹೀನನೆಂಬರ್ಥದಲ್ಲಿಯೇ ಉಪಯೋಗಿಸಿ

ರುವರು. ಘನವಿದ್ವಾಂಸರಾದ ಎನ್. ಆರ್. ಕರಿಬಸವ ಶಾಸ್ತ್ರಿಗಳು ಕೂಡ ಭವಿಯೆಂದರೆ ಲಿಂಗ ಹೀನನೆಂದೇ ಅರ್ಥ ಬರೆದಿರುವರು. ಉದಾಹರಣೆಗಾಗಿ "ಭವಿಸಂಗ ತ್ಯಾಗಿಗಳ್" (ಆಶ್ವಾಸ ೫ ಪದ ೬೨) "ಏಗೆ ಭವಿಮಾರ್ಗದೊಳ್ನಡೆದೆನೋ ಭವಿ ಪಾಕವನುಂಡೆನೋ (ಆ ೩ ಪದ ೨೩) ನೋಡಬಹುದು. ಅಖಂಡೇಶ್ವರ ವಚನಗಳಲ್ಲಿ ಈ ಎರಡನ್ನು ನೋಡಬಹುದು "ಮುಕ್ತಿಯ ಪಡೆವೆನೆಂದು ಯುಕ್ತಿಗೆಟ್ಟು ಸಕಲ ತೀರ್ಥ ಕ್ಷೇತ್ರಗಳಿಗೆಡೆಯಾಡಿ ತೊಟ್ಟನೆ ತೊಳಲಿ ಬಳಲಿ ಬೆಂಡಾಗಲೇತಕೋ? ಒಬ್ಬ ಶಿವಭಕ್ತನ ಅಂಗಣದಲ್ಲಿ ೮೮ ಕೋಟಿ ಕ್ಷೇತ್ರಂಗಳಿಪ್ಪವು. ಆತನ ಬಚ್ಚಲಲ್ಲಿ ೬೬ ಕೋಟಿ ತೀರ್ಥಂಗಳಿಪ್ಪವು. ಆತನ ಕಾಯವೇ ಕೈಲಾಸ. ಆತನಂಗದ ಮೇಲಿರ್ಪ ಲಿಂಗವೇ ಅನಾದಿ ಪರಶಿವನು" (ಭಕ್ತಸ್ಥಲ ೮೨) "ಇಷ್ಟಲಿಂಗದ ನಿಜವನರಿಯದೆ ಪ್ರಾಣಲಿಂಗದ ಮಾತು ನುಡಿವ ನೀತಿ ಹೀನರ ನಾನೇನೆಂಬೆನಯ್ಯಾ? ಹೆತ್ತ ತಂದೆಯನರಿಯದೆ ಅಜ್ಜನ ಪ್ರತಾಪವ ಹೇಳುವ ಕತ್ತೆ ಮೂಳಗಳ ನೇನೆಂಬೆನಯ್ಯಾ ಅಖಂಡೇಶ್ವರಾ" (ಮಹೇಶ್ವರ ಸ್ಥಲ ೫೦) ಇಂಥ ಅನಂತ ಪ್ರಬಲ ಪ್ರಮಾಣಗಳನ್ನು ಕೊಡಬಹುದು.

ಹೀಗಿದ್ದೂ ಶಿವಾನುಭವದ ಇದೇ ಸಪ್ಟಂಬರ ಸಂಚಿಕೆಯಂತೆ ಆಗಷ್ಟ ಸಂಚಿಕೆಯಲ್ಲಿಯೂ ಈ ಭವಾನುಭವಿಗಳು "ಶರಣ ಶರಣೆಯರು ಲಿಂಗವಿಲ್ಲದವರಿಗೆ ಭವಿಯೆಂದು ಕರೆದಿಲ್ಲ. ಭಕ್ತನೆಂದರೆ ಚಲೋ ಮನುಷ್ಯ. ಭವಿಯೆಂದರೆ ಕೆಟ್ಟ ಮನುಷ್ಯ" ಇತ್ಯಾದಿಯಾಗಿ ಶಿವಾನುಭವಿಗಳೆಲ್ಲರ ಸ್ಪಷ್ಟಾಭಿಪ್ರಾಯಕ್ಕೆ ತೀರ ವಿರುದ್ಧವಾಗಿ ಬರೆದಿರುವನು.

ಕ್ರಮಪದ್ಧತಿಯಂತೆ ಯಾರಾದರೂ ಲಿಂಗಾಂಗಿಗಳಾಗಬಹುದಾದರೂ ಲಿಂಗವಿಲ್ಲದೆ ಲಿಂಗಾಂಗಿ ಅಂದರೆ ಭಕ್ತನಾಗಬಹುದೆಂಬ ಹೊಸ ಕ್ರಮವನ್ನು ನೆಲೆಗೊಳಿಸಲು ಯತ್ನಿಸಿ ಪ್ರಶ್ನಕಾರನು ಪುರಾತನರ ಮಾರ್ಗವನ್ನು "ಸಂಕುಚಿತ ಕಟ್ಟು" ಎಂದು ಕರೆಯುತ್ತಾನೆ. ಕಟ್ಟು ಹರಿದು ನಡೆಯುತ್ತಿರುವ ಸ್ವೇಚ್ಛಾಚಾರಿಗೆ ಇದು ಸಹಜ. ಕಟ್ಟು, ಶೀಲ, ಮಡಿ, ಮೈಲಿಗೆ, ಮುಂತಾದ ವಿಚಾರಗಳನ್ನು ಕಂಡು ಈತನಿಗೆ ಅತ್ಯಂತ ಕಸಿಕಸಿ ಯಾಗುವದಂತೆ. ಯಮನಿಯಮಾದಿ ವಿಷಯಕ

ಯೋಗವೂ ಕೂಡ ಒಂದು ಕಟ್ಟು ಅಲ್ಲವೆ? ಇಂದ್ರಿಯ ಸಮೂಹವು ಇಷ್ಟವಸ್ತು(ಇಷ್ಟಲಿಂಗ) ನಿಷ್ಠವಾಗದಿದ್ದರೆ ಭ್ರಷ್ಟವಾಗಲೇಬೇಕೆಂದು ಅನುಭವಿಗಳ ಮತ. "ಯೋಗಶ್ಚಿತ್ತ ವೃತ್ತಿನಿರೋಧ" ಎಂದು ಪತಂಜಲಿ ಋಷಿಯು ಹೇಳಿದಂತೆ "ಹರಿದಾಡುವ ಮನವನು ಹರಗೆ ಸಮರ್ಪಿಸಿ ಪರ ಶಿವಾನಂದ ಸಂಭ್ರಮದೊಳಗಾಡುವ ಯೋಗಿಯುಕಂಡಿರೇನೆ ?" ಎಂದು ಬಾಲಲೀಲಾ ಮಹಾಂತ ಶಿವಯೋಗಿಗಳು ಮನವನ್ನು ಸ್ವಾಧೀನ ಪಡಿಸಿಗೊಳ್ಳುವದನ್ನೇ ಯೋಗವೆಂದೂ|ಅದನ್ನು ಸಾಧಿಸಿದವನೇ ಯೋಗಿಯೆಂದೂ ಅಪ್ಪಣೆಗೈದಿರುವರು.

ಹೀಗೆ ಈ ಆಕ್ಷೇಪಕಾರನ ಶಬ್ದಗಳನ್ನೂ ಖಂಡಿಸಿ ಇನ್ನೂ ವಿಸ್ತಾರವಾಗಿ ಬರೆಯಬಹುದು. ಆತನು ಮೊದಲಿನ ಒಂದು ತಪ್ಪನ್ನು ಮುಚ್ಚಲು ಹೋಗಿ ಸದಿಚ್ಛಾ ಪೂರಿತ ದೋಷದರ್ಶಕನಮೇಲೆ ಹರಿಹಾಯ್ದು ಅನಂತ ಹೊಸ ತಪ್ಪುಗಳನ್ನು ಮಾಡಿದ್ದಾನೆ. ಮ. ಗಾಂಧಿಯವರೊಮ್ಮೆ ತಮ್ಮ ಒಂದು ಸಣ್ಣ ತಪ್ಪನ್ನು ತಾವೇ ಮನಗಂಡು ಪ್ರಕಟಿಸುವಾಗ್ಗೆ ಅದಕ್ಕೆ ಹಿಮಾಲಯದಂಥ ತಪ್ಪು ಎಂದು ಕರೆದು ಅಗ್ರಲೇಖ ಬರೆದದ್ದುಂಟು. ಇದೇ ದೊಡ್ಡವರ ದೊಡ್ಡಸ್ತಿಕೆಯ ಮೂಲ ಕಾರಣ.

# ಮೃತ್ಯುಂಜಯು.

( ಲೇಖಕ :- ಶ್ರೀ ಹಿಮಸಿ ಗುರೂಜಿ ಮು. ಬೋಳೇಗಾವ ತಾ. ಇಂಡಿ)

**ಟೀಪು:** — ಬೋಳೇಗಾವ ಶಿವಯೋಗಾಶ್ರಮದಲ್ಲಿ ಮಹಾ ಶಿವಯೋಗಿಗಳು ಬಂಥನಾಳ ಅವರ ಪ್ರಸಾದ ವಾಣಿಯಿಂದ "ಬಸವ ಶಿಖಾಮಣಿ" ಪುರಾಣನಡೆದಾಗ್ಗೆ ಶ್ರೀಗಳವರು ಕೊಟ್ಟ ಉಪನ್ಯಾಸ ಸಂಗ್ರಹವಿದು.

ಮಹಾನುಭಾವಿ ಬಸವೇಶ್ವರನು ಬಹು ಸಂದರ್ಭದಲ್ಲಿ ಸತ್ತವರನ್ನು ಪುನಃ ಸಜೀವರನ್ನಾಗಿ ಮಾಡಿದ ಸಂಗತಿ ಕೇವಲ ಅತಿಶಯೋಕ್ತಿಯೆಂದೆನ್ನಕೂಡದು. ಯಾವನು ಮೃತ್ಯುಂಜಯನಾಗಿರುವನೋ ಅವನಿಗೆ ಸಾವು ನೋವುಗಳು ಆಧೀನವಾಗಿರುತ್ತವೆ. ಪಂಚ ಕ್ಲೇಶಗಳಾದ ಅಭಿನಿವೇಶ, ದ್ವೇಷ, ರಾಗ, ಅಸ್ಮಿತ ಹಾಗು ಅವಶ್ಯಗಳನ್ನು ಗೆದ್ದವನೇ ಶರಣ-ಯೋಗಿ-ಮಹಾತ್ಮ-ಮೃತ್ಯುಂಜಯು.

ಮರಣದ ಭಯ ಯಾವಾತನಿಗೆ ಇಲ್ಲವೋ ಆತ ಮೃತ್ಯುಂಜಯ
ಪಂಚ ಭೂತ ತತ್ವ ಅರಿತ ಆಳವಡಿಸಿಕೊಂಡವನು ಮೃತ್ಯುಂಜಯು
ಮರಣವು ಮಾನವನ ಸಹೋದರನೆಂದರಿತನು ಮೃತ್ಯುಂಜಯು
ಹೀಗೆಂದು ಮಹಾ ಶಿವಯೋಗಿಗಳು ಸಾರಿ ಮುಂದುವರಿದರು.

ಜ್ಞಾನಿಗಳಾದವರು ಇದೇ ಮಾತನ್ನೇ ಅಡಿಗಡಿಗೆ ಬೋಧಿಸುತ್ತಿದ್ದಾರೆ. ಯಾವದೊಂದು ಧರ್ಮ ಇಲ್ಲವೇ ರಾಷ್ಟ್ರದಲ್ಲಿ ಪರಿಸ್ಥಿತಿಯನ್ನು ಮಾರ್ಪಡಿಸಿ ಹೊಸ ಚೈತನ್ಯ ತುಂಬಲು ಆಮೂಲಾಗ್ರ ಬದಲಾವಣೆಯು ಅಪೂರ್ವ ಕ್ರಾಂತಿಯಾಗಬೇಕಾದರೆ ಮೃತ್ಯುಂಜಯರಿಂದಲೇ ಸಾಧ್ಯ. ಮೃತ್ಯುವಿಗೆ ಹೆದರುವದರಿಂದ ಮನೆಯ ಬಾಳನ್ನು ಕೂಡಾ ಮಾಡಲಸದಳ.

ಅಳಿವುದಕೆ ಹೆದರುವಗೆ
ಉಳಿವುದಕೆ ಹಕ್ಕಿಲ್ಲ
ಗಳಿತವಹ ದೇಹವು ಚಿರಂಜೀವಿಯೇ।
ಹಳೆಯಾಂಗಿ ತಿಳಿಯೆ ಸರ್ವೇಶ

ಮಾನವನು ತನ್ನ ಅಳಿವುಳಿವುಗಳಿಗೊಳಗಾಗಕೂಡದು. ಕಾಯ ಸ್ಥಿರವಲ್ಲವೆಂಬುವದನ್ನರಿಯಬೇಕು. ಸ್ಥಿರವಲ್ಲದ್ದನ್ನು ನೆಚ್ಚಕೂಡದು. ಕೆಲಸಕ್ಕೆ ಉಪಯೋಗಿಸಲು ಬರುವಂತೆ ಸದುಪಯೋಗ ಮಾಡಿಕೊಳ್ಳಲು ಸಂರಕ್ಷಿಸಿಕೊಳ್ಳಬೇಕು. ದಕ್ಷತೆಯಿಂದ ಇದು ಸಾಮಾನ್ಯ ಮಾರ್ಗ. ಈ ಮಾರ್ಗದಿಂದ ಸಾಧಕನಾಗಿ ಮುಂದೆ ಮುಂದೆ ಸೂಕ್ಷ್ಮ ದಾರಿದರ್ಶನ ಮಾಡಿಕೊಳ್ಳಬೇಕು. ಅಲ್ಲಿ ಮಾನವನಿಗೆ ಹುಟ್ಟು ಸಾವು ನೋವುಗಳ ಕಲ್ಪನೆ ಇಲ್ಲವಾಗುತ್ತದೆ. ಅದು ನೈಜ ಜ್ಞಾನ. ಅಲ್ಲಿ ಮಾನವನು ಮೃತ್ಯು ಅತೀತನಾಗುವನು ಮೃತ್ಯು ನಿರ್ಭಯನಾಗುವನು. ಮೃತ್ಯುವಿನಿಂದ ಜಯಪತ್ರ ಪಡೆಯುವನು. ಆಗ ಮೃತ್ಯುಂಜಯನು.

ಜಗತ್ತಿನ ಮೇಲೆ ಮೃತ್ಯುಮಹಾರಾಜನ ಸಾರ್ವಭೌಮ ವಿದ್ದಂತೆ ಆಭಾಸವಿದೆ. ಆ ಮಹಾರಾಜನ ಕಪಿಮುಷ್ಟಿಯಲ್ಲಿ ಬಾಳಿ ಬದುಕಬೇಕಾದ ಕಲ್ಪನೆಯಿದೆ ಜಗಕೆ. ತಲೆನೋವು, ಚಳಿಜ್ವರ, ಯಾವದೊಂದು ಸಾಮಾನ್ಯರೋಗ ತಮ್ಮ ಅವಿಚಾರದ ಮೂಲಕ ಅಂಟಿಕೊಂಡರೂ ಮೃತ್ಯುಮಹಾರಾಜನ ಹುಕಂ ಎಂದೇ ಭಾವಿಸಿ ಬೆದರಿ, ಹೌಹಾರಿ ಮೈ ಜುಮ್ಮೆಂದು ದೆಸೆಗೆಟ್ಟು, ಬಾಧುಬಾಗಕ್ಕೆಲ್ಲ ಅಪ್ಪಿ, ನಿರ್ಜೀವ ವಸ್ತುಕ್ಕೆಲ್ಲ ದೇವಾಧಿದೇವನೆಂದು ಬಗೆದು ಭಯ ಭಕ್ತಿಯಿಂದ ಶರಣಾಗತರಾಗುವರು ಈ ಭಯಜೀವಿಗಳು. ಮಾನವನ ಮೂಲಭೂತ ಹಕ್ಕುಗಳನ್ನು ಕಸಿದುಕೊಂಡು ಆಳಿಕೆ ನಡೆಯಿಸಿದಂತಾಗಿದೆ, ಆ ಮೃತ್ಯು ಮಹಾರಾಜರು.

ಮೃತ್ಯುಮಹಾರಾಜರಿಂದ ನಾವು ಸ್ವಾತಂತ್ರ್ಯ ಪಡೆದುಕೊಂಡು ನಮ್ಮ ಸ್ವರಾಜ್ಯವನ್ನು ಸ್ಥಾಪಿಸಿ ಸುರಾಜ್ಯವನ್ನಾಗಿ ಮಾಡಿಕೊಂಡು ಸುಖ ಶಾಂತಿಗಳಾಗಿ ಬಾಳಬೇಕಾದರೆ ಮೃತ್ಯುವಿನ ಮೂಲ ತತ್ವವರಿತಿರಬೇಕು.

ಈ ಮೂಲತತ್ವದರಿಯಲು ವಿಧಾಯಕ ಚಳವಳಿ ಎಬ್ಬಿಸಬೇಕು. ಈ ದಿಶೆಯಲ್ಲಿ ಜಯಪತ್ರ ಪಡೆದುಕೊಂಡರು ಅಂದಿನ ನಮ್ಮ ಪ್ರಮಥಾದಿ ಶಿವಶರಣರು. ಅವರೆಲ್ಲರೂ ಸ್ವಾತಂತ್ರಿಗಳು, ಮೃತ್ಯುಂಜಯಿಗಳು.

ನಡೆ ಮೊದಲು ನುಡಿ ಹಿಂದು ಇದ್ದವರು ಮೃತ್ಯುಂಜಯರೇ ಸರಿ. ನುಡಿಮೊದಲ ನಡೆ ಹಿಂದು ಇವರಿಗೆತ್ತಣದು ಸ್ವಾತಂತ್ರ್ಯ, ಸುಖ-ಶಾಂತಿಗಳು? ಮೃತ್ಯುಮಹಾರಾಜನ ರಾಜಸತ್ತೆ ಮುರಿದು ಪ್ರಜಾಸತ್ತಾತ್ಮಕವಾಗಬೇಕಾದರ ನೀರಿನಮೇಲಿನ ಶ್ರದ್ಧೆಯಿಂದ ಮೀನವು ಎದುರು ಈಸಿದಂತೆ! ಇಲ್ಲವಾದರೆ ಅಜ್ಞಾನದಿಂದ ಸೊಕ್ಕಿಗೇರಿದ ಆನೆ ನೀರಿದುರು ಈಸಲು ಹೋಗಿ ಮೃತ್ಯುವಿನ ದವಡಿಯಲ್ಲಿ ಸಿಕ್ಕಂತೆ.

ಈ ಬಗ್ಗೆ ಮೂರು ಉದಾಹರಣೆಗಳನ್ನು ಕೇಳಬಹುದು.

(೧) ಓರ್ವ ಮುದುಕಿಯು ಅರಣ್ಯವಿಭಾಗದಿಂದ ಕಟ್ಟಿಗೆ ಹೊರಿ ಹೊತ್ತುಕೊಂಡ ಹೊರಟ ಸಮಯ ಭಾರವಾದ ಹೊರೆಯಿಂದ ಬೇಸತ್ತು ಬಿಸಲಿನ ಬೇಗೆಯಿಂದ ಬೆಂದ, ನಿಟ್ಟುಸಿರು ಹಾಕಿ, ಹೊರೆಯೊಗೆದು ಕೂತು "ಎಲೇ ಮೃತ್ಯುವೇ ಒಯ್ಯಬಾರದೇ ನನ್ನ" ಎಂದಳು. ತಟ್ಟನೆ ಆಕೆಯ ಬೆಂದುಲಿಗೆ ಓಗೊಟ್ಟು ಮುಂದೆಯೇ ಬಂದುನಿಂತು–

ಮೃತ್ಯು :— ಅಮ್ಮಾ ಯಾಕೆ ಕರೆದೆ ?
ಮುದುಕಿ :— ಕರೆದಕೂಡಲೆ ಬರುವಿ ಅನ್ನುವದು ಗೊತ್ತಿಲ್ಲದ್ದಕ್ಕಾಗಿ
ಮೃತ್ಯು :— ಮುಂದೇನು ?
ಮುದುಕಿ :— ಹೊರೆ ಹೊರಿಸಿ ಹೋಗು.
ಮೃತ್ಯು :— ನಿನ್ನನ್ನೇ ಹೊರುವೆ.
ಮುದುಕಿ :— ಅದು ಮಾತ್ರ ಮಾಡಬೇಡ.

(೨) ಓರ್ವ ಸಿರಿವಂತ ಶಿಷ್ಯನು ತಮ್ಮ ಗುರುಗಳಾದ ಏಕನಾಥರನ್ನು ಕಂಡಾಗ ಕೆಳಗಿನಂತೆ ಸಂವಾದ ಜರುಗಿತು.

ಶಿಷ್ಯ :— ಗುರುಗಳೇ ಸರ್ವತ್ರ ವಿಲಾಸದಿಂದ ಸುಖ ಶಾಂತಿ ಕೊಂಡುವ ಜೈನಿಯನ್ನು ಬಿಟ್ಟು, ಕೇವಲ ನಾಲ್ಕು ಬೆರಳಿನ ಲಂಗೋಟಿ ಕಂಬಳಸೊಟ್ಟು ಬರಿತಲೆ ಮಲಗುವದೆಲ್ಲಿ? ತಿಂಬುವದೆಲ್ಲಿ? ಎಂದು

ಗುರು :— (ಸಾಮಾನ್ಯವಾಗಿ) ನಿನ್ನಷ್ಟು ಸಿರಿವಂತಿಕೆ ನನಗಿದ್ದರಲ್ಲಾ? ನಿನ್ನಂತೆ ಜೈನಿ ಎಂದು ಹೇಗುವಾಗ, ಶಿಷ್ಯನ ಕರಿತು-ನಿಮಗೆ ಒಂದು ತಿಂಗಳಲ್ಲಿ ಮರಣವಿದೆ ಎಂದು ಹೋದರು.

ಶಿಷ್ಯ :— ಮರಣದ ಭಯದಿಂದ ತೀವ್ರ ಕೊರಗು ಹಚ್ಚಿಕೊಂಡು ಅರ್ಧ ತಿಂಗಳಲ್ಲಿ ಎಲ್ಲ ಜೈನಿ ಮರೆತು ಚಿಂತಾಗ್ರಸ್ತನಾದನು

ಮತ್ತೆ ಗುರುಗಳು ಭೆಟ್ಟಿಯಾಗಲು

ಗುರು :— ಯಾಕಪ್ಪ ಶಿಷ್ಯ ಬಹಳೇ ಸೊರಗಿರುವಿ? ನಿನ್ನ ಜೈನಿಯು ಸ್ವಲ್ಪವು ಕೂಡಾ ಇಲ್ಲವಲ್ಲ?

ಶಿಷ್ಯ :— ತಿಂಗಳಲ್ಲಿಯೇ ಸಾಯುವ ನನಗೆ ಆ ಚಿಂತೆಯಲ್ಲಿ ಎಲ್ಲಿಯ ಜೈನಿ ಗುರುಗಳೇ?

> ಸತ್ಯರು ಹುಸಿಯನಾಡಿದರೆ
> ಹೆತ್ತಮ್ಮ ಮುನಿದರೆ
> ಉತ್ತರಿಯು ಒರದರೆ
> ಲೋಕವೆತ್ತ ಬಾಳ್ವದು ॥

ತಮ್ಮ ಹೇಳಿಕೆಯ ಪ್ರಕಾರ ನನ್ನ ಮರಣ ಎಂದಾದರೂ ತಪ್ಪೀತೆ? ಇಂಥಅಧಿಕ ವ್ಯಸನದಲ್ಲಿ ಉಡು-ತೊಡಿಗೆಯೆಲ್ಲಿ? ತಿನುವದೆಲ್ಲಿ?

ಗುರು :— ತಿಂಗಳಲ್ಲಿಯೇ ಸಾಯುವನೆಂಬ ಭಯದಿಂದ ನನಗೇಕೆ ಜೈನಿ ಎಂದು ಬಿಟ್ಟಿರುವಿಯಾ? ಇದರಂತೆ ನಾನು- ಎಂದಾದರೊಮ್ಮೆ ಸತ್ತೇಸಾಯುವೆನು ಎಂಬ ಭಯಾಧಿಕದಿಂದ ನಿನ್ನಂಥ ಜೈನಿ ಬಿಟ್ಟು ಈ ಲಂಗೋಟಿ ಧರಿಸಿದ್ದೇನೆ.

(೩) ಮುಗುದೆಂದು ಮಾತು - ಒಂದು ಭಾಗದಲ್ಲಿ ಜನಸಂಖ್ಯೆ ಅತೀವ ಹೆಚ್ಚಾಗಿ ಆಹಾರದ ಕೊರತೆಯಿಂದ ಜನ ಸಾಯುವಾಗ

ಮೃತ್ಯು ಇನ್ನೂರು ಜನರನ್ನು ಒಂದು ಸಾಂಕ್ರಾಮಿಕ ರೋಗದ ನೆವ ಮಾಡಿ ಆಮಂತ್ರಿಸಿತ್ತು. ಇನ್ನೂರು ಜನರ ಸಾವು ನೋವುಗಳ ಭಯ ದಿಂದ ನಾನೂರು ಜನ ಮರಣವನ್ನೈದಿತ್ತು.

ಯಮ :— ಹೇಳಿದ್ದರಕ್ಕಿಂತ ಮರಣದ ಸಂಖ್ಯೆ ಹೆಚ್ಚೇಕೆ?

ಮೃತ್ಯು :— ಅಜ್ಞೆಯಷ್ಟೇ ಕಾರ್ಯ ಮಾಡಿದೆ ಯಾದರೂ ಇಹದಲ್ಲಿ ಸತ್ತವರನ್ನು ಕಂಡು ಭಯದಿಂದ ಸತ್ತವರ ಸಂಖ್ಯೆ ಹೆಚ್ಚಾ ದರೆ ಮಾಡುವದೇನಿದೆ ?

ಈ ಮೂರು ಸಂಗತಿಗಳಿಂದ ಒಂದೇ ಒಂದು ಮಾತು " ಮರಣ ಭಯ ಇಹದಲ್ಲಿ "

ಇಹಲೋಕದಲ್ಲಿ ಮರಣವೆಂದರೆ ಅತೀವ ಭಯ ಪಡುವರು. ಮರಣ ಕರೆದಾಗ ಬರುವದಿಲ್ಲೆನ್ನುವದು ಗೊತ್ತಿದ್ದ ಕೆಲ ಜನರು " ನಮ್ಮನ್ನು ಸಾವು ಕರೆದೊಯ್ದರೆ ಗುಣವಾಗುವದೆಂದು " ಅನ್ನುವರು. ಸಾವು ಸಮೀಪಿಸುತ್ತಲೇ ಭಯಪಟ್ಟು ದುರ್ಗವ್ವ ಮರ್ಗವ್ವ ದೇವತೆ ಗಳಿಗೆ ಕುರಿ ಕೋಣಗಳ ಬಲಿಕೊಡಲು, ಜಂಗಮರಿಗೆ ಊಟಕೊಡಲು ದೇವರಿಗೆ ದೀರ್ಘ ದಂಡವತ್ಪ್ರಣಾಮ ಹಾಕಲು ಸಿದ್ಧರು. ಪ್ರಾಣದ ಉಳಿತಾಯಕ್ಕಾಗಿ.

ಇಂಥವರಿಂದ ಮೃತ್ಯು ಮಹಾರಾಜನಿಂದ ಸ್ವಾತಂತ್ರ್ಯ ಹೇಗೆ ಪಡೆದಾರು ? ಸ್ವಾತಂತ್ರ್ಯ ಪಡೆವವರು ರಾಜಸತ್ತೆ ಪ್ರಜಾಸತ್ತೆಯ ಮೂಲ ತತ್ವ ಹಾಗು ತಮ್ಮ ಮೂಲ ಭೂತ ಹಕ್ಕುಗಳ ಬಗೆಗೆ ಜ್ಞಾನವಿರ ಬೇಕಾಗುತ್ತದೆ. ಇಲ್ಲಿ ರಾಜಕೀಯದಲ್ಲಿ ರಾಜತತ್ವ ( ಮೃತ್ಯುತತ್ವ ) ಗಳೆಂದರೆ ಸಾಮಾನ್ಯವಾಗಿ ಸಾವೆಂಬುವದಿಲ್ಲ. ಜಗತ್ತು ಅವಿನಾಶಕಾರ್ರಿ ಹಾಗೂವಸ್ತುರೂಪ ವರ್ಗೀಕರಣತ್ವವಾಗಿದೆ. ಈ ತತ್ವದ ಮೇಲಿಂದ ನಮ್ಮ ಮೂಲಭೂತ ಹಕ್ಕು ಎಂದರೆ ನಿರ್ಭಯ, ನಿಶ್ಚಿಂತೆ, ಸ್ವಾತಂತ್ರ್ಯ. ಹುಟ್ಟಿಗೆ ನಗೆಯಿಲ್ಲ. ಸಾವಿಗೆ ಹೊಗೆ ( ಅಳುವು ) ಇಲ್ಲವಾಗಿರಬೇಕು. ಇಂಥವ ರಿಂದ ಮೃತ್ಯು ಮಹಾರಾಜನಿಂದ ಸ್ವಾತಂತ್ರ್ಯ ಪಡೆಯಬಹುದು.

ಹುಟ್ಟುತ್ತಲೇ ನಾವು ಮೃತ್ಯುಟಿಕೇಟು ತೆಗೆದೇ ಹೋಗಬೇಕಾಗುವದು. ಉಗಿಬಂಡಿಯು (ಜೀವನದ) ವಿವಿಧ ಕ್ಲಾಸಗಳೆಂದರೆ—

೧ನೆಯ ಕ್ಲಾಸ ಡಬ್ಬಿ.......ಬಾಲ್ಯ

೨ನೆಯ ಕ್ಲಾಸ ಡಬ್ಬಿ......ತಾರುಣ್ಯ

೩ನೆಯ ಕ್ಲಾಸ ಡಬ್ಬಿ..... ಪ್ರೌಢ ಆಬಳಿಕ ಮರಣ

ಸಾವೆಂಬುವದು ಅಪ್ರತ್ಯಕ್ಷವಾಗಿ ಬೆನ್ನಹತ್ತಿ ಕ್ರಮೇಣ ತನ್ನ ಬೆಳಗೆಯನ್ನು ಮಾಡಿಕೊಂಡು ಕೊನೆಗೊಮ್ಮೆ ಪೂರ್ಣ ಬಲಶಾಲಿಯಾದಾಗ ಪ್ರತ್ಯಕ್ಷ ದರ್ಶನ ಕೊಡುವದು. ಅಂದು ನಾವು ಅಥವಾ ಮರಣವಾಯಿತೆಂಬ ಗ್ರಹಿಕೆ. ಅಂತು ಮರಣವು ಚಂದ್ರನ ಕಲೆಯೋಪಾದಿ "ನಿತ್ಯ ಪ್ರಳಯಂ"

ಆತ್ಮಕ್ಕೆ ಮರಣವೆಂಬುದಿಲ್ಲ. ದೇಹಕ್ಕೆ ಮಾತ್ರ ಉಂಟು. ಅದು ನೈಸರ್ಗಿಕವಾಗಿ ಪಂಚಭೂತಗಳಿಂದಾದ ಹುಟ್ಟೇ ಅಳಿಯುತ್ತ ಬೆಳೆಯುತ್ತ ಉಳಿದುದೊಮ್ಮೆ ಪೂರ್ಣ ಅಳಿದಂತಾಗಿ ಮರಣವೆನಿಸುವದು. ಅಳಿಗೆಯು ಅಪ್ರತ್ಯಕ್ಷವಾಗಿ ಆದಿಯಿಂದಲೇ ಆತುಕೊಂಡು ಬಂದಮೂಲಕ ಮರಣದ ಸೈಜ ಭಯ ಕಲ್ಪನೆ ಮೊದಲು ಬಾರದೆ ಅದರ ಉತ್ತರಾರ್ಧದಲ್ಲಿ ಅನಿಸುತ್ತಾ ಹೊರಟು ಕೊನೆಗೊಮ್ಮೆ "ಸತ್ತೆ" ಎಂದೆನಿಸಿಕೊಳ್ಳುವದು.

ಗರ್ಭದಿಂದ ಹೊರಬಿದ್ದ ಕೂಡಲೆ ಶರೀರಾಂಶವಾದ ಹೊಕ್ಕಳ ಹುರಿ ಕತ್ತರಿಸುವರು, ಜವಳ ತೆಗೆಯಿಸುವರು, ಉಗುರು ಚಿವುಟುವರು, ಹಲ್ಲು ಬೀಳುವವು, ಕ್ರಮೇಣ ಈ ಕ್ರಿಯೆ ನಾಶರೂಪದಿ ಸಣ್ಣ ಪ್ರಮಾಣದ ಮೇಲೆ ಆರಂಭವಾಗಿ ಜೀವನದ ವೈಶೇಷಿಕ ಮಹತಿಯುಳ್ಳ ಬಾಲ್ಯಾವಸ್ಥೆ ಒಮ್ಮೆ, ತಾರುಣ್ಯಾವಸ್ಥೆ ಮತ್ತೊಮ್ಮೆ, ಪ್ರೌಢಾವಸ್ಥೆ ಮಗುದೊಮ್ಮೆ ಉಳಿದುಳಿದ ವೃದ್ಧಾಪ್ಯ ಕಾಲದಲ್ಲಿ ಕರ್ಣ ಕಿವುಡ, ಕಣ್ಣು ಕುರುಡ, ಅರುಚಿ ನಾಲಿಗೆ, ಬಿದ್ದ ಹಲ್ಲು, ಕೂತ ದವಡೆ, ವಾಸನೆಯರಿಯದ ನಾಶಿಕ, ಸ್ಪರ್ಶಜ್ಞಾನವಿಲ್ಲದ ಚರ್ಮ, ನಿಶ್ಯಕ್ತವಾದ ತೊಡೆ ಮೊಳಕಾಲು, ಬಿದ್ದ ಧ್ವನಿ, ಇವೆಲ್ಲವುಗಳಿಂದ ಕೂಡಿದ ಅವಸ್ಥೆಯು

ಕಾಲವೊಂದು ಇಲ್ಲಿ. "ಏನ್ರೆಪ್ಪಾ ನಮ್ಮದೆಲ್ಲಾ ಆಗ್ಯಾದ ನಾವು ಸತ್ತೇವಿ ಎಲ್ಲಿಯೋ ಟುಕು ಟುಕು ಉಳದಾದ" ಎಂದು ಜೀವಿಸಿರುವಾಗಲೇ ಸತ್ತ ಸುದ್ದಿ ಹೇಳುವದರಲ್ಲಿ ತಥ್ಯವಿದೆ. ಸಾವು ಬಹು ದಿನಗಳಿಂದ ಬೆನ್ನು ಹತ್ತಿಯೇ ಇದೆ. ಇಂದು ಅದು ನನ್ನನ್ನು ಜಯಿಸಲು ಸಿದ್ಧವಿದೆ ಎಂಬುವ ಅರ್ಥ.

ಬಿಡುವುಂಟು ಅನುಜರಿಗೆ ।
ಒಡಹುಟ್ಟು ಅವರಲ್ಲಿ ॥
ಒಡನೆಯೇ ಹುಟ್ಟಿತು ಮೃತ್ಯು ದಿಟವಾಗಿ
ಬಿಡದಿರಿಚ್ಚುವ ಸರ್ವೇಶ ।

ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಆತ್ಮವು ಹೇಗೆ ಅಮರವೋ ಹಾಗೆಯೇ ಶರೀರವು ಅಮರವು. ಶರೀರವು ಪಂಚಭೂತ( ನೆಲ,ನೀರು ಬೆಂಕಿ, ಗಾಳಿ, ಆಕಾಶ ) ಗಳಿಂದಾಗಿದೆ ಮರಣವೆನ್ನಿಸಿಕೊಳ್ಳುವ ಕಾಲವೆಂದರೆ ಕೂಡಿದ ಪಂಚಭೂತ ತತ್ವಗಳು ಬಿಡಿ ಬಿಡಿಯಾಗಿ ತಮ್ಮ ತಮ್ಮ ಮೂಲ ವಸ್ತು ತತ್ವವನ್ನು ಕೂಡಿಕೊಳ್ಳುವವೆಂದರ್ಥ. ಇಲ್ಲಿ ವಸ್ತುರೂಪ ಬದಲಾಯಿತೇ ಹೊರತು, ನಾಶ ( ಮರಣ ) ವಿಲ್ಲಹಾಗಾದರೆ ಹೆದರುವದೇಕೆ ?

ಪಂಚಭೂತ ತತ್ವವರಿತಾತನಿಗೆ ।
ಮರಣವು ಮಹಾ ನವಮಿ ದಿಬ್ಬ ॥

ಮ. ಗಾಂಧೀಜಿಯವರು ಮಹಾ ಮೃತ್ಯುಂಜಯರು. ಈ ಮಹಾತ್ಮರನ್ನು ಮೃತ್ಯುವು ೧೮ ಸಾರೆ ಕರೆದೊಯ್ಯಲು ತವಕಿಸಿತು. ಅದರಲ್ಲಿ ಅಯಶಸ್ವಿಯಾಯಿತು. ನಯನದಿಂದ ನೀರು ಸುರಿಸಿತು. ೧೯ನೆಯ ಸಾರೆ ಮೃತ್ಯು ಭಕ್ತನಾಗಿ ಬಂದು ಶರಣಾಗತವಾಗಿ ಭಕ್ತವತ್ಸಲ ಭಕ್ತನ ಅಪೇಕ್ಷೆ ತೀರಿಸು ಎಂದು ಅಂಗಲಾಚಿ ಕೋರಿದಾಗ ಭಕ್ತನ ಇಚ್ಛೆ ಪೂರ್ಣಗೊಳಿಸುವದಕ್ಕಾಗಿ "ತಥಾಸ್ತು" ಶ್ರೀ ರಾಮ ಹರಿ ಎಂದು ಇಹದಿಂದ ದೂರಾದರು. ಶಿವಪಾದ ಸೇರಿದರು.

# ಪ್ರೊ॥ ಎಮ್. ಆರ್. ಸಾಖರೆ ಇವರ ನಿಧನ

ಪ್ರೊ॥ ಎಮ್. ಆರ್. ಸಾಖರೆ ಎಮ್ ಏ ಇವರು ನಿಧನ ಹೊಂದಿದ್ದಕ್ಕೋಸ್ಕರ ನಾವು ಅತ್ಯಂತ ವಿಷಾದ ಪಡುತ್ತೇವೆ. ಕರ್ನಾಟಕದಲ್ಲಿ ಶಿಕ್ಷಣಾಭಿವೃದ್ಧಿಯ ಕಾರ್ಯದಲ್ಲಿ ಬಹಳ ಶ್ರಮವಹಿಸಿದವರು ಇವರಾಗಿದ್ದಾರೆ—

ಎಮ್. ಏ. ಪಾಸಾದಬಳಿಕ ಅವರು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಿ ಗಿಲಗಂಚಿ ಅರ್ಟಾಳ ಹೈಸ್ಕೂಲನ್ನು ಬೆಳಗಾವಿಯಲ್ಲಿ ಪ್ರಾರಂಭಿಸಿದರು. ಮುಂದೆ ಈ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ಲಿಂಗರಾಜ ಕಾಲೇಜವು ಸ್ಥಾಪಿಸಲ್ಪಟ್ಟಿತು. ಇದಕ್ಕೋಸ್ಕರ ಅವರು ವಿಶೇಷ ಪರಿಶ್ರಮಪಟ್ಟರು. ಮುಂದೆ ಅವರು ಇಂಗ್ಲಂಡಕ್ಕೆ ಹೋಗಿ ಟಿ. ಡಿ ಪದವಿಯನ್ನು ಹೊಂದಿ ತಿರುಗಿ ಬಂದಬಳಿಕ ಲಿಂಗರಾಜ ಕಾಲೇಜಿನಲ್ಲಿ ನಿವೃತ್ತರಾಗುವವರೆಗೆ ಪ್ರೊಫೆಸರರಾಗಿ ಕೆಲಸಮಾಡಿದರು. ಅವರು ವೀರಶೈವ ಧರ್ಮದ ವಿಷಯವಾಗಿ ಇಂಗ್ಲಿಷ ಭಾಷೆಯಲ್ಲಿ ಒಂದು ಉದ್ಗ್ರಂಥವನ್ನು ಬರೆದಿರುವರು. ಅವರು ಇನ್ನೂ ಅನೇಕಧಾರ್ಮಿಕ ಶೋಧಗಳಲ್ಲಿ ತೊಡಗಿದವರಾಗಿದ್ದರು. ಅಷ್ಟರಲ್ಲಿ ಅವರು ವಿಧಿವಶರಾದರು ಅವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ.

ಶ್ರೀಮತಿ ಗೌರವ್ವ ಕೋಂ ಶಿವಪ್ಪ ತುಪ್ಪದ ಮು. ಗದಗ ಇವರು ತಮ್ಮ ಚಿಕ್ಕಮ್ಮನವರಾದ ಶ್ರೀಮತಿ ರುದ್ರಮ್ಮನವರು ಶಿವಾಧೀನರಾದ ಬಗ್ಗೆ ೫ ರೂಪಾಯಿ ಶಿವಾನುಭವ ಪತ್ರಿಕೆಗೆ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಇದನ್ನು ನಾವು ಆದರ ಪೂರ್ವಕವಾಗಿ ಸ್ವೀಕರಿಸುತ್ತೇವೆ. ಮೃತರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ.

---

ವಾಚಕರಲ್ಲಿ ಕ್ಷಮಾಪಣೆ :— ಈ ತಿಂಗಳಲ್ಲಿ ಜಿಲ್ಲಾ ಲೋಕಲ್ ಬೋರ್ಡಿನ ಮತದಾರರ ಲಿಷ್ಟು ಪ್ರಿಂಟಿಂಗಾಗಿ ನಮ್ಮ ಕಡೆಗೆ ಬಂದಿದ್ದರಿಂದ, ಶಿವಾನುಭವ ಪತ್ರಿಕೆಯ ಪುಟ್ಟಗಳನ್ನು ಅನಿವಾರ್ಯವಾಗಿ ಕಡಿಮೆಮಾಡಬೇಕಾಗಿ ಬಂದಿದೆ. ವಾಚಕರು ಕ್ಷಮಿಸಬೇಕು.

ಪ್ರಭುವು ಕೋತಿಯಾಗೆ ಪಾರ್ಶ್ವದಿ ನಾಯಿಗಳ್ ।
ಸೇನೆಯೊಡೆಯ ನರಿಯು ಸೇನೆ ಪುಲಿಗಳ್ ॥
ಆನೆಗಳಶ್ವಗಳಿಲಿಗಳು ಬೆಕ್ಕುಗಳ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೬೩ ॥

ಅನ್ನ ಮದದೊಳ್ಬಿದೆ ಸತಿಯರು ಪುರುಷರು ।
ಮದನಹತಿಯೊಳ್ಮಗ್ನರಾದಿವೇಂಬರ್ ॥
ಅನ್ನವಡಗಲಾಗ ಮದನನೇನಾದನೋ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೬೪ ॥

ಶ್ರವಣಗಳ್ಕೊರ್ವವು ಸಂಗೀತ ಸಾಹಿತ್ಯ ।
ಭಾಷೆಗಳಾದಿಯಾದಿ ತರವನ್ನು ॥
ಚರ್ಮವು ಕೋರ್ವುದು ಶೈತ್ಯೋಷ್ಣ ಮೃದು ।
ಕಠಿಣಂಗಳ ಸ್ಪರ್ಶವ ಸತತ ಬಿಡದೆ ॥ ೩೬೫ ॥

ಇಂದ್ರಿಯಪರವಶನಧಮಂ ।
ಇಂದ್ರಿಯ ಪರವಶನು ಭಕ್ತಿಯೊಳ್ಮಧ್ಯಮ ನು ॥
ಇಂದ್ರಿಯ ಜಯನುತ್ತಮನು ಜಿ ।
ತೇಂದ್ರಿಯ ಸನ್ಮತನು ತಿಳಿಯಲಭವನು ವೇಮಾ ॥ ೩೬೬ ॥

---

## ಭಕ್ತಿಯುಳ್ಳವನಾಗಿರು.

ಬಹು ಪಾಪಿಯಾದೊಡಂ ಬ್ರಹ್ಮಘ್ನನಾದೊಡಂ ।
ನಿರ್ದಯ ನೀಚಾತ್ಮನಾದೊಡೈದೆ ॥
ಮರಣಕಾಲದೊಳೆಲ್ಲ ಮಘತತಿಗಳನು ಬಿಟ್ಟು ।
ಹರನ ಭಜಿಸೆ ಮುಕ್ತನಹನು ವೇಮಾ ॥ ೩೬೭ ॥

ಭಸ್ಮ ದೇಹಕೆಲ್ಲ ಬಳಿದೊಡೆಯೇನಾಯ್ತು ।
ನಿಷ್ಠೆ ಶಿವನ ಮೇಲೆ ನಿಲಿಸಬೇಕು ॥

ಬೂದಿಯಲ್ಲಿ ಕತ್ತೆ ಬಿದ್ದು ಒದ್ದಾಡದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೨೮ ॥

ಓದು ಓದಲೇಕೆ ? ಸನ್ಯಾಸಿಯಹುದೇಕೆ ।
ಷಣ್ಮತದೊಳು ಸಿಕ್ಕು ಸಾಯಲೇಕೆ ॥
ಶಿವನ ಭಜನೆ ಮಾಡುತಾತ್ಮದೊಳರಿವುಳ್ಳೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೨೯ ॥

ಹೆಚ್ಚು ಕುಲದಿ ಹುಟ್ಟಿ ಎಷ್ಟು ದಿನ ಬಾಳ್ದರುಂ ।
ಸಾವು ಹುಟ್ಟು ಭುವಿಯೋಳ್ ಜಾತಕವದು ॥
ಮೆಚ್ಚಿ ಮನದಿ ಪೂಜೆ ಮೇಲಾಗಿ ಮಾಳ್ಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೦ ॥

ವಿಜಯನಾದ ನರನು ಬಿಲ್ಲು ಕೈಗೊಳಲಾಗ ।
ಕುಜನರಾದ ನರರು ಬಿದ್ದರೆಳೆಗೆ ॥
ಭಜನೆ ಮಾಡೆ ಘನನು ಪಾಲಿಸದಿರ್ಪನೇ ॥
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೧ ॥

ಹಲವು ಬಗೆ ಕರೆದರುಂ ನುಡಿಯದೆ ನೀನಿರ್ಪೆ ।
ನುಡಿವುದಯ್ಯ ಎನ್ನ ಭ್ರಮೆಯು ತೀರೆ ॥
ನುಡಿಯದಿರಲು ನಿನ್ನ ಪರರು ದೂಷಿಸುವರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೨ ॥

ರಾಮಭಕ್ತರೆಂದು ಶಿಲೆಗಳ್ಗೆ ಮುಗಿಯುತೆ ।
ಭಜನೆ ಮಾಳ್ಪದೇಕೆ ಭಕ್ತಿಯುಳಿದು ।
ಭಕ್ತಿ ನಿಲಿಸುವವನು ಭಜನೆಯ ಮಾಳ್ಪನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೩ ॥

ಮೂಢ ಭಕ್ತಿಯಿಂದ ಹರನನು ಪೂಜಿಸಿ ।
ಬೇಡ ಮುಕ್ತನಾದ ಮುನ್ನ ತಾನು ॥

ಪೂಜೆಗೇನು ಬಂತು ಬುದ್ಧಿ ಪ್ರಧಾನವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೪ ॥

ಗಂಗೆ ಗೋವು ಹಾಲು ಒಂದು ಸವುಟೇ ಸಾಕು ।
ಕುಂಭವಾದೊಡೇನು ಕತ್ತೆ ಹಾಲು ॥
ಭಕ್ತಿಲಿಡುವ ಕೂಳು ಒಂದು ತುತ್ತೇ ಸಾಕು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೫ ॥

ನೀಚರ ವಿನುತಿಯ ಮಾಡುತ್ತಿ ।
ಯಾಚಕತನದಿಂದ ತಿರುಗಿ ಬಳಲುವುದೊಂದೇ ॥
ಶ್ರೀ ಚರಿತನಂಘ್ರಿಕಮಲವ ।
ಯೋಚಿಸೆ ತಾನಿಲ್ಲಿಯಲ್ಲಿ ಘನನಹ ವೇಮಾ ॥ ೩೩೬ ॥

ತಂದೆತಾಯ್ಗಳಲ್ಲಿ ದಾರಿದ್ರ್ಯಯುತರಲ್ಲಿ ।
ನಂಬಿದ ಕಡು ದೀನ ಮನುಜರಲ್ಲಿ ॥
ಪ್ರಭುಗಳಲ್ಲಿ ನೋಡೆ ಭಕ್ತಿಯುಂಟಾಗಿರೆ ।
ಇಹ ಪರಂಗಳಲ್ಲಿ ಸುಖವು ವೇಮಾ ॥ ೩೩೭ ॥

---

## ಯೋಗದ ರೀತಿ

ಶಿವಗುಡಿಗೆ ದೀಪವಿಡಲಾ ।
ಶಿವಮಂದಿರವೆಲ್ಲ ಬೆಳಗುತಿರ್ಪುದು ಪಿರಿದೇಂ ॥
ಶಿವಯೋಗಿ ಮಹಿಮೆ ದೀಪವು ।
ಭುವನಂಗಳನೆಲ್ಲ ಬೆಳಗುತಿರ್ಪುದು ವೇಮಾ ॥ ೩೩೮ ॥

ಸತಿಯು ಸುತರು ಮಾಯೆ ಸಂಸಾರವಿದು ಮಾಯೆ ।
ಧನವು ಘನವು ಮಾಯೆ ತನುವು ಮಾಯೆ ।

ಮಾಯೆ ಗೆಲ್ಲುವವನೆ ಮರ್ಮಜ್ಞನಹ ಯೋಗಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೩೯ ॥

ಮಾಯೆ ಲೋಕವೆಲ್ಲ ಮನುಜನು ತಿಳಿಯನು ।
ಮಾಯೆಯಿಂದ ತಾನು ಮಗ್ನನಹನು ॥
ಮಾಯೆ ತಿಳಿಯುವವನೆ ಮರ್ಮಜ್ಞನಹ ಯೋಗಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೦ ॥

ತನುವಿದಸ್ಥಿರವೆಂದು ಧನವಿದಸ್ಥಿರವೆಂದು ।
ತಿಳಿಸಬಲ್ಲ ತಾನು ತಿಳಿದು ಕಲಿತು ॥
ಪಾತ್ರನಾದ ಯೋಗಿ ವಸ್ತ್ರವನರಿಯನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೧ ॥

ಪುಷ್ಪಗಳೊಳುತ್ತಮವಹ ।
ಪುಷ್ಪವು ವರಜಾಜಿ ಪುಷ್ಪ ಪುರುಷರೊಳೆಲ್ಲಂ ॥
ನಿಷ್ಪಕ್ಷಪಾತಿ ಯುತ್ತಮ ।
ನಿಷ್ಪ್ರಾಪಂಚಿಕನೆ ಯೋಗಿ ನಿಜವಿದು ವೇಮಾ ॥ ೩೪೨ ॥

ಬ್ರಹ್ಮನನ್ನು ಕೊಂದು ವಿಷ್ಣುವಿನೊಳ್ಬೆರಸಿ ।
ವಿಷ್ಣುವನ್ನು ಕೊಂದು ಶಿವನೊಳ್ಬೆರಸಿ ॥
ಶಿವನ ಕೊಂದು ತಾನು ಶಿವಯೋಗಿಯಾಗುವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೩ ॥

ಉಜ್ಜಿ ಉಜ್ಜಿ ಮರದೊಳನಲವು ಜನಿಪುದು ।
ಮಥಿಸೆ ಮಥಿಸೆ ದಧಿಯೊಳ್ ಘೃತ ಜನಿಪುದು ॥
ನೆನೆಯೆ ನೆನೆಯೆ ತನುವಿನೊಳ್ತತ್ತ್ವವುದಿಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೪ ॥

ಉದಧಿ ಲಂಘಿಸಿ ದಾಂಟಿದ ಭಕ್ತವರನು ।
ಮನದಿ ರಾಮಾಜ್ಞೆ ಮೀರದೆ ಮಾಯೆ ಗೆಲ್ದು ॥

ಹೃದಯುಕಮಲದಿ ರಾಮನ ಸೆರೆಯವಿಡಿದ ।
ವಿಮಲಗುಣ ರಾಜಯೋಗೀಂದ್ರ ವೇಮನಾರ್ಯಾ ॥ ೩೪೫ ॥

ಅರುಣೋದಯಗಳೆಷ್ಟೋ ಅಸ್ತಮಾನಗಳೆಷ್ಟೋ ।
ಜನನ ಮರಣಗಳೆಷ್ಟೋ ಜಾತಿಯೆಷ್ಟೋ ॥
ಇದನು ತಿಳಿದಿಹ ಯೋಗಿ ಧೀರನಾಗಿರುವನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೬ ॥

ಧ್ಯಾನಿಯಂದದೊಳಿರ್ಪ ಮೌನಿಯಂದದೊಳಿರ್ಪ ।
ಭೋಗಿಯಂದದೊಳಿರ್ಪ ರೋಗಿಯಂತೆ ॥
ಸಕಲವ ತಿಳಿದಿಹ ಸರ್ವಜ್ಞನಾಗಿರ್ಪ ।
ಪರಮಯೋಗಿ ವರನು ಧರೆಯೊಳ್ ವೇಮಾ ॥ ೩೪೭ ॥

ಕೇಳಿ ಕೇಳದಿರ್ಪ ಹುಚ್ಚ ತಾನಾಗಿರ್ಪ ।
ಕಂಡು ಕಾಣದಿರ್ಪ ಕೊನೆಗೆ ಯೋಗಿ ॥
ಮನುಜ ಶ್ರೇಷ್ಠರಿಂದ ಪೂಜೆಯಗೊಳುತಿರ್ಪ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೮ ॥

ಕಡೆಗಖಿಳ ಜಗಕೆಲ್ಲ ನಡುನಾಳದಲ್ಲಿರ್ಪ ।
ಉದಯ ಚುಕ್ಕೆಯಂಥ ಬೆಳಗು ದಿಕ್ಕು ॥
ಬೆಳಕಿಗಿಂತ ದಿಕ್ಕು ಬೇರೆ ಮತ್ತಾರುಂಟು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೪೯ ॥

ಸುಳ್ಳು ಗುರುವು ಪೇಳ್ವನೆಲ್ಲ ಕರ್ಮಂಗಳ ।
ಮಧ್ಯಗುರುವು ಪೇಳ್ವ ಮಂತ್ರಚಯವ ॥
ಉತ್ತಮಾರ್ಯನು ಪೇಳ್ವ ಯೋಗ ಸಾಮ್ರಾಜ್ಯವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೦ ॥

ಮರದೊಳ್ಬೆಂಕಿಯು ಜನಿಪುದು ।
ಮರವರಿವುದೆ ಬೆಂಕಿಯಿರುವು ಮನುಜಾವಳಿಯೊಳ್ ॥

ಾರಿ ರೊಳ್ಬೆಂಕಿಯು ತೆರದಿಂ ।
ನರರೊಳ್ ವರಯೋಗಿ ಬೆಳಗುತಿರ್ಪನು ವೇಮಾ ॥ ೩೫೭ ॥

ಜೇನು ಇರವು ಜೇನು ನೊಣವರಿತಿರ್ಪುದು ।
ಸುಮಪರಾಗವನ್ನು ಭ್ರಮರವರಿಗುಂ ॥
ಪರಮ ಯೋಗಿದಾರಿ ವರಭಕ್ತನರಿವನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೨ ॥

---

## ಗುರುವಿನ ಕಾರ್ಯಗಳು

ಯಾವ ಮಂತ್ರವಾದರೆಂಜಲಾಗದ ರೀತಿ ।
ಹೇಳಲಳವೆ ಬ್ರಹ್ಮಗಾದರೇನು ।
ಎಂಜಲೆಂಜಲೆಂಬರೆಂಜಲ ಬಾಯಲ್ಲಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೩ ॥

ಬೀಜ ಮೊದಲು ಗುರುವು ಈ ಜಗಕೆಲ್ಲವು ।
ಪ್ರಣವ ಮಂತ್ರವೊಂದು ಪರಮ ಗುರುವು ॥
ಕರ್ಮಗುರುವು ನೋಡೆ ಗಾಯತ್ರಿ ಮಂತ್ರವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೪ ॥

ಆಸೆ ನಾಶಗೈದಸೂಯಾಗ್ನಿ ತಪಿಸಿ ।
ಕಚ್ಚೆ ಬಿಗಿಯು ಹಿಡಿದು ಕೋಪಮುಳಿದು ॥
ಗುಟ್ಟುವರಿುವವನು ಗುರುವಿಗೆ ಗುರುವಯ್ಯ
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೫ ॥

ಗುರು ಚರಣವಂ ಪಿಡಿಯೆ ಶುನಕ ತಾಂ ಕಡಿವುದೇ ।
ಗುರು ಚರಣವನು ಬಿಡಲ್ ಕಡಿವುದದುವೆ ॥
ಶುನಕ ತಿಂದವನೆ ಶ್ರೀಗುರು ಲಿಂಗವೆನಿಪನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೬ ॥

ವಾಕ್ಕಿನಲ್ಲಿ ಗುರುವು ವಾಕ್ತತ್ವದೊಳ್ಗುರುವು ।
ಕತ್ತಲಲ್ಲಿ ಗುರುವು ಕಾಣಿಸುವನು ॥
ಸಕಲ ಜಗಕೆ ಗುರುವೆಯಾಧಾರವಾಗಿರ್ಪ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೭ ॥

ಕಾಗೆ ಗೂಡಿನಲ್ಲಿ ಕೋಗಿಲೆಯಿದ್ದಂತೆ ।
ಭ್ರಮರಕೀಟನ್ಯಾಯ ಬಾಳನರಿದು ॥
ಗುರುವ ಸ್ತುತಿಸೆ ಬಳಿಕ ಗುರುವೆ ತಾನಾಗುವ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೮ ॥

ಮೋಹರಾಶಿಯಲ್ಲಿ ಮುಳುಗಿ ಸಾವುದೆ ಹೊರತು ।
ಹರಿಪರಾಯಣತ್ವವರಿದು ಜಗದಿ ॥
ಸೇರಿ ಗುರುಧ್ಯಾನ ಮೂಲವರಿವುದೆ ಮುಕ್ತಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೫೯ ॥

ಉಸಿರು ಇರುವ ವೇಳೆ ಉಪದೇಶ ಪಡೆವುದು ।
ಹಸಿವು ನಶಿಸಲದುವೆ ರೂಢಿಯಲ್ಲ ॥
ವಿಪ್ರನಾದೊಡೇನು ಬಡಬಾಗ್ನಿ ನುಂಗ್ವನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೬೦ ॥

ಮೃಗಮದವಂ ನೋಡೆ ಮೇಲೆ ಕಪ್ಪಾಗಿಹುದು ।
ಘಮ ಘಮಿಸುವುದದರ ಪರಿಮಳವದು ॥
ಗುರುಗಳ ಸದ್ಗುಣವೀ ರೀತಿ ಯಿರ್ಪುದೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೬೧ ॥

ಹಿಂದೆ ಮಾಡಿದಂಥ ಕರ್ಮಬಂಧಗಳೆಲ್ಲ ।
ಬೆಂದು ಪೋಪುದು ಸದ್ಗುರುವಿನಿಂದಲಿ ॥
ಕುಂಬಾರಗೊಂದೊರುಷ ದೊಣ್ಣೆಗೊಂದೇ ನಿಮಿಷ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೬೨ ॥

ಎನುತೆ ಸದ್ಗುರು ಬೋಧೆಯನರಿತು ನಿತ್ಯ ।
ಮಱಯದಿರ್ಪವರೀ ಮಾಯ ಜಗದಿ ಬಿದ್ದು ॥
ಹತ್ತದಿಹರೆಂದು ತಿಳಿಯುತೆ ನಯದೊಳೈದೆ ।
ವಿವರಿಸಿದ ಯಿಂತು ವೇಮಣ್ಣ ದೇಶಿಕೇಂದ್ರ ॥ ೩೬೩ ॥

---

## ಗುರುವಿಗೆ ದಾನ ಮಾಡುವುದು

ಗುರುವಿಗೆ ಹಸಿಯ ಸೊಪ್ಪಾದರುಂ ಕೊಡರು ತಾ ।
ಮರಿಯೆ ವೇಶ್ಯೆಗೀವರರ್ಥವೆಲ್ಲ ॥
ಗುರುವು ವೇಶ್ಯೆಗಿಂತ ಗುಣಹೀನನಾದನೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೬೪ ॥

---

## ಗುರು ಮಹತ್ವ

ವ್ಯಾಧಿ ಬಂದ ವೇಳೆಯಲಿ ವೈದ್ಯನಿಂದಲಿ ।
ಔಷಧವನು ಕೊಳ್ಳಲದು ಹರಿವುದು ॥
ದೀಪವಿಲ್ಲದಿರಲು ಪೋಪುದೆ ಕತ್ತಲು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೬೫ ॥

ಗುರುವು ಪೇಳ್ವ ವಿದ್ಯೆ ಗುರುವಿಗೆ ತಿಳಿಯುತ್ತೆ ।
ಗುರುತು ತಿಳಿಯದಿರಲು ಗುಣಮದಿಲ್ಲ ॥
ಗುರು ಮಹಿಮೆಯು ಪರಗುರುವಿಗೆ ತಿಳಿವುದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೬೬ ॥

ಶಿವಮತವಾದರು ವಿವರಿಸೆ ಗುರು ಮುಖ್ಯ ।
ಹರಿಮತವಾದರು ತಿಳಿಸೆ ಗುರುವು ॥

# ಶಿವಾನುಭವದ ಸತ್ವಮಾರ್ಗ

ಶಿವಶರಣರ ಶಿವಾನುಭವದ ತತ್ವಗಳನ್ನು ಅರುಹುವ ಗ್ರಂಥವು ಇದಾಗಿದೆ. ಶ್ರೀ ಶಿವಯೋಗಿಗಳು ಬಂಥನಾಳ, ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಸ್ವಾಮಿಗಳು ವಿಜಾಪುರ, ಶ್ರೀ ಮಹಾದೇವ ಸ್ವಾಮಿಗಳು ಸರ್ವಭೂಷಣ ಮಠ ಬೆಂಗಳೂರ, ರಾ|| ಬ|| ಪಿ. ಜಿ. ಹಳಕಟ್ಟಿ ವಿಜಾಪುರ, ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಬಿ. ಎ ಬಿ. ಟಿ ಈ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಮಾಡಿದ ಮಹತ್ವದ ಲೇಖಗಳು ಇದರಲ್ಲಿವೆ. ಶಿವಶರಣರ ತಾತ್ವಿಕ ವಿಚಾರಗಳನ್ನು ತಿಳಿಯಲು ಬಹು ಉಪಯುಕ್ತವಾದ ಗ್ರಂಥವು ಉತ್ತಮ ಕಾಗದ, ಮತ್ತು ಉತ್ತಮ ಬಾಯಿಂಡವುಳ್ಳದ್ದಿದೆ.

**ದೊರೆಯುವ ಸ್ಥಳಃ—ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ**

**ಬೆಲೆಃ— ೧ ರೂ. ೧೦ ಆಣೆ (೧೩೮ ಪುಟಗಳು)**

---

# ಶ್ರೀ ಬಸವೇಶ್ವರನ ತತ್ವಗಳು

ಕೈ. ವಾ. ಸಿದರಾಮಪ್ಪ ಪಾವಟೆ, ಕೈ. ವಾ. ವೀರಪ್ಪ ಬಿಳೇಅಂಗಡಿ, ರಾ|| ಬ|| ಪಿ. ಜಿ. ಹಳಕಟ್ಟಿ, ಶ್ರೀಯುತ ವೀರಪ್ಪ ಯರ್ಗಟ್ಟಿ ಬಿ. ಎ. ಎಲ್. ಎಲ್. ಬಿ. ಮೊದಲಾದ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಮಹತ್ವದ ಲೇಖಗಳು ಇದರಲ್ಲಿವೆ. ಇದರಲ್ಲಿ ಬಸವೇಶ್ವರನ ನೈತಿಕ ಮತ್ತು ಸಾಮಾಜಿಕ ವಿಚಾರಗಳು, ಅವನು ಮಾಡಿದ ವಾಙ್ಮಯ ಕ್ರಾಂತಿ. ಇವೇ ಮೊದಲಾದ ಮಹತ್ವದ ವಿಷಯಗಳ ಮೇಲೆ ಲೇಖಗಳು ಬಂದಿರುತ್ತವೆ. ಉತ್ತಮ ಕಾಗದ, ಉತ್ತಮ ಬಾಯಿಂಡವುಳ್ಳದ್ದಿರುತ್ತದೆ

**ದೊರೆಯುವ ಸ್ಥಳಃ—ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ**

**ಬೆಲೆಃ— ೧ ರೂ. ೮ ಆಣೆ (೧೦೫ ಪುಟಗಳು)**

**BOOK-POST.** **R. N. B. 2554**

ಶ್ರೀ ರಾ॥ ರಾ॥

Shivanubhava
Office
Bijapur.

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ ೨, ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಲಿಂಗಪಾದೋದಕದಲ್ಲಿ ಲಿಂಗೋದಕ ಅಪ್ಯಾಯನೋದಕಗಳು ಕೂಡಿ ಕೊಂಡರೆ ಅದೇ ವಿನಯ ಜಲವೆನಿಸುವದು. ಇವರ ಪರಿಗ್ರಹಣದಿಂದ ಭಕ್ತನಲ್ಲಿ ವಿನಯವು ಒಳಿತಾಗಿ ನೆಲಿಸಲೇಬೇಕು. ಆತನ ಮುಖದರ್ಪಣ ದಲ್ಲಿಯೂ ವರ್ತನೆಯಲ್ಲಿಯೂ ವಿನಯವು ಸತತವಾಗಿ ಹೊರಹೊಮ್ಮಲೇ ಬೇಕು. ಹಾಗಾಗದಿದ್ದರೆ ಲಿಂಗದಮೇಲೆ ಅದೆಷ್ಟು ಎರೆದೆರೆದು, ಪಾದೋದಕ ಸ್ವೀಕರಿಸಿದರೂ ಅದೆಲ್ಲ ನಿರರ್ಥಕವು. ವ್ಯವಹಾರದಲ್ಲಿ ಸರ್ವ ಜನ ರೊಡನೆ ಭಕ್ತನು ವಿನಯದಿಂದಲೇ ವರ್ತಿಸತಕ್ಕದೆಂಬುದನ್ನು ಇದರಿಂದ ಅವಶ್ಯ ಕಲಿಯತಕ್ಕದ್ದಿದೆ.

ಜಂಗಮ ಪಾದೋದಕದಲ್ಲಿ ಪರಿಣಾಮೋದಕ ನಿರ್ನಾಮೋದಕಗಳು ಸೇರಿದರೆ ಅದೇ ಸಮರಸ ಜಲವಾಗುವದು. ಸಮಾಜನೊಡನೆ ಭಕ್ತನು ಆದಾವ ಭೇದ ಭಾವವಿಡದೆ ಎಲ್ಲರೊಡನೆ ಸಮರಸ ಭಾವವಿಡಿದು ಬೆರೆದು ಒಂದೇ ಒಂದು ಅಖಂಡ ಸಮಾಜವಾಗುವಂತೆ, ನಡೆಯುವ ದಿರುತ್ತದೆ. ಕರುಣ ವಿನಯಗಳು ಈ ಸಮರಸತೆಗೆ ಒಳಿತಾಗಿ ಸಹಾಯ ಮಾಡುವವು. ಆದಾವರೀತಿಯಲ್ಲಿಯೂ ಭಕ್ತನು ತಾನು ಸಿಡಿದುನಿಂತು ನಿರ್ದಯತೆಯನ್ನಾಗಲೀ ಔದ್ಧತ್ಯವನ್ನಾಗಲೀ ಪ್ರಕಟಿಸಕೂಡದು. ಅರಿಯ ದವರು ( ಭವಿಗಳು ) ಹಾಗೆ ಮಾಡುವದನ್ನು ಕಂಡು ಲಿಂಗಧಾರಿಯು ಅಂತೆ ನಡೆಯುವದು ಜನ್ಮನಿಘಾತಕವಾಗಿರುವದು. ಕಾಯಕ ವಿಭೇದ, ಸ್ತ್ರೀ-ಪುರುಷ ವಿಭೇದ, ಸೂತಕಾದಿಗಳು ಮುಂತಾದ ಯಾವರೀತಿಯ ಲ್ಲಿಯೂ ಒಡಕು ಸಂಭವಿಸದಂತೆ ಲಿಂಗಧಾರಿಗಳೆಲ್ಲರೂ ಎಚ್ಚರ ಪಡಬೇಕು. ಇಲ್ಲದಿದ್ದರೆ ಪಾದೋದಕ ಸ್ವೀಕಾರದ ಮರ್ಮವು ನಷ್ಟವಾಗುವದು

ಮೇಲೆ ಹೇಳಿದ ತ್ರಿಜಲಗಳು ಪರಸ್ಪರ ಪೂರಕವಾಗಿ ಸಹಕರಿಸಿ ನಡೆಯುವದರಿಂದ ಸಮಾಜದಲ್ಲಿ ಭಕ್ತನು ಪ್ರತಿಯೊಂದು ವ್ಯವಹಾರ ದಲ್ಲಿಯೂ ಆಚರಣೆಯಲ್ಲಿಯೂ ಕ್ರಿಯಾ ಕರ್ಮಾದಿಗಳಲ್ಲಿಯೂ ಸತ್ಯ ಮಾರ್ಗವನ್ನೇ ಅವಲಂಬಿಸಿ ನಡೆಯುವನು. ಹೀಗೆ ಭಕ್ತನನ್ನು ಕೇವಲ ಸತ್ಯವ್ರತನನ್ನಾಗಿ ಮಾಡುವದೇ ಪಾದೋದಕದ ಮರ್ಮವು. ಈ ರೀತಿ ಭಕ್ತರೆಲ್ಲರೂ ನಡೆಯಹತ್ತಿದರೆ ಈ ಐಹಿಕವೇ ಭೂಕೈಲಾಸವಾಗುವದರ ಲ್ಲೇನು ಸಂದೇಹ! ಇದೇ ಹತ್ತನೆಯದಾದ ಸತ್ಯ ಜಲವು. (೩×೩+೧=೧೦)

ಇದು ಪಾದೋದಕದ ರೀತಿಯಾಯಿತು. ಇನ್ನು ಪ್ರಸಾದಲಿಂಗ ದಲ್ಲಿ ಬೆರೆಯತಕ್ಕ ಭಕ್ತನು ಪ್ರಸಾದದಲ್ಲಿ ಸಮರಸತೆ ಹೊಂದುವ ಬಗೆಗೆ ಏಕಾದಶ ಪ್ರಸಾದಗಳನ್ನು ತುಸು ವಿವೇಚಿಸುವೆ.

## ಪ್ರಸಾದ

ಪ್ರಸಾದದ ವ್ಯಾಖ್ಯೆಯನ್ನು ಮೊದಲೇ ಅನೇಕ ಸಾರಿ ವಿವರಿಸಿದ್ದುಂಟು. ಗುರು-ಲಿಂಗ-ಜಂಗಮದಿಂದ ಪಡೆಯತಕ್ಕ ಪ್ರಸಾದವು ೧೧ ವಿಧವಾಗಿರುವ ದೆಂದು ಹೇಳಲಾಗಿದೆ. ಅದು ಪ್ರಸಾದಿ ಪ್ರಾಣಲಿಂಗಿ ಶರಣಸ್ಥಳಗಳಲ್ಲಿ ಸಹ ಕಡೆತನಕ ಸಾಧಿಸತಕ್ಕದ್ದಾಗಿರುವದು.

ಶುದ್ಧ ಪ್ರಸಾದದಲ್ಲಿ ಅಂದರೆ ಸತ್ಯಶುದ್ಧಕಾಯಕದಿಂದ ದೊರಕಿ ಸಿದ ಪದಾರ್ಥದಿಂದ ಮಾಡಿದ ಪ್ರಸಾದದಲ್ಲಿ ಆಪ್ಯಾಯನ ಪ್ರಸಾದ ಸಮಯಪ್ರಸಾದಗಳು ಸೇರಿದರೆ ಅದು ಗುರು ಪ್ರಸಾದವಾಗಿ ಇಷ್ಟಲಿಂ ಗಕ್ಕೆ ಸಂಬಂಧಿಸುವದು. ಭಕ್ತನ ತನುವೇ ಗುರುವು. ಅವನ ಸದಾ ಚಾರವೇ ಇಷ್ಟಲಿಂಗವು. ಗುರುಪ್ರಸಾದ ಸೇವನೆಯಿಂದ ಭಕ್ತನಕಾಯವು ಪ್ರಸಾದಕಾಯವಾಗಿ, ಆದರಿಂದ ಅವನಲ್ಲಿ ಸದಾಚಾರವು ನೆಲೆಗೊಳ್ಳಲೇ ಬೇಕು. ಅದಾಗದೇ ಗುರು ಪ್ರಸಾದ ಸೇವಿಸಿದ,ದೆಲ್ಲ ಅಪಹಾಸ್ಯಕರ ವಾಗುವದು.

ಸಿದ್ಧಪ್ರಸಾದದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ [illegible] ಅಂತಃಕರಣ ವಿರಹಿತ ಪ್ರಸಾದಗಳು ಸಂಗಡಿಸಿದರೆ, ಆಗ ಅದು ಲಿ[illegible]ಪ್ರಸಾದವೆನ್ನಿ ಸುವದು. ಲಿಂಗವೆಂದರೆ ಪ್ರಾಣ ಮನಗಳು. ಅಲ್ಲಿ ಶಿವನು ವಾಸಮಾ ಡುತ್ತಾನೆ. ಲಿಂಗಾರ್ಪಿತ ಮಾಡುವದೆಂದರೆ ಬರಿಯ ಲಿಂಗದತ್ತ ನೈವೇದ್ಯ ಮಾಡುವದಲ್ಲ! ಅರ್ಪಿಸತಕ್ಕುದನ್ನೆಲ್ಲ ಶಿವನೇ ಕೊಟ್ಟಿರುವದರಿಂದ (ಶಿವನೇ ಆಗಿರುವದರಿಂದ) ತಾನು ಕಾಯಕದಿಂದ ಪರಿಶುದ್ಧರೀತಿಯಲ್ಲಿ ಪಡೆ ದಾಗ್ಯೂ ಸಹ ಅದನ್ನು ಭಕ್ತಿಭಾವದಿಂದ ಆ ಪರಮಾತ್ಮರೂಪಿ ಲಿಂಗ ದೇವರಿಗೆ ಸಮರ್ಪಿಸಲೇ ಬೇಕು. ಇದು ಭಕ್ತಿಯಕಾರ್ಯ. ಇನ್ನು ಆ ಅರ್ಪಣೆವಸ್ತುಗಳೆಲ್ಲ ಲಿಂಗದಿಂದಲೇ ಉದ್ಭೂತವಾಗಿರುವದರಿಂದ

ಅವೆಲ್ಲ ಲಿಂಗರೂಪವೇ ಎಂದು ಜ್ಞಾನದೃಷ್ಟಿಯಿಂದ ತಿಳಿಯುವದು ಅವಶ್ಯವಿರುತ್ತದೆ. ಹೀಗೆ ಲಿಂಗಾರ್ಪಿತ ಪ್ರಸಾದವು ಭಕ್ತನ ಪ್ರಾಣ ಮನಗಳನ್ನು ಪ್ರಸಾದರೂಪವಾಗಿರಿಸಿ ಹೊರಗೆ ಹೇಗೋ ಹಾಗೆಯೇ ಒಳಗೂ ಸಹ ಪ್ರಸಾದವನ್ನು ಬಿತ್ತರಿಸುವದು. ಹೀಗೆ ಉಂಟಾದರೆ ಮಾತ್ರ ಅವನು ಸೇವಿಸಿದ್ದುದು ಲಿಂಗಪ್ರಸಾದವಾಗುವದು. ಇಂತಹ ಭಾವನೆಯು ಸ್ಪರ್ಶವು ಸಹ ತನಗಿಲ್ಲದೆ ಸುಮ್ಮ ಸುಮ್ಮನೆ ಆ ದ್ರವ್ಯಗಳನ್ನು ಕೈತಟ್ಟಿ ಲಿಂಗಕ್ಕೆ ತೋರಿಸಿದುದು ನಿಷ್ಪ್ರಯೋಜಕವಾಗುವದು. ಇದು ಪ್ರಾಣಲಿಂಗಕ್ಕೆ ಸಂಬಂಧಿಸುವ ಪ್ರಸಾದವು. ಇದರಿಂದ ಮನದಲ್ಲಿ ಸುವಿಚಾರಗಳು ಹುಟ್ಟಿ ಜ್ಞಾನದಲ್ಲಿ ಭಕ್ತನು ನಿಮಗ್ನಿಸಲೇಬೇಕು.

ಪ್ರಸಿದ್ಧ ಪ್ರಸಾದವಲ್ಲಿ ಪ್ರಸಾದಿಯು ಪ್ರಸಾದ ಸದ್ಭಾವನಾ ಪ್ರಸಾದಗಳು ಕೂಡಿದರೆ ಅದು ಜಂಗಮ ಪ್ರಸಾದವಾಗುವದು. ಲಿಂಗಾರ್ಪಿತಮಾಡಿ ಬರಿಬಾಯಲ್ಲಿ ಇಟ್ಟಾಕ್ಷಣಕ್ಕೆ ಅದು ಜಂಗಮ ಪ್ರಸಾದವಾಗದು. ತನು-ಮನ-ಧನಗಳು ಆಚಾರ, ಸುವಿಚಾರ ಜನತೆಗೆ ಅರ್ಪಿಸಲ್ಪಟ್ಟು ಅಲ್ಲಿ ತಾನು ಮಾಡಿದೆನೆಂಬ ಭಾವನೆ ಸ್ವಲ್ಪ ಸಹ ಇಲ್ಲದೆ ಸತ್ ಅಂದರೆ ಶಿವನೇ ಎಲ್ಲವನ್ನು ಮಾಡುತ್ತಿರುವನೆಂಬ ತ್ರಿಪುಟಿಯನ್ನು ಅಳವಡಿಸಿಕೊಳ್ಳದಿದ್ದರೆ ಏನೇನೂ ಪ್ರಯೋಜನವಿಲ್ಲ. ಹೀಗೆ ತನ್ನಲ್ಲಿ ಸದ್ಭಾವನೆ ತೋರಿದರೆ ಮಾತ್ರ ಅದು ಜಂಗಮ ಪ್ರಸಾದವಾಗುವದು. ಇದು ಭಾವಲಿಂಗಕ್ಕೆ ಸಂಬಂಧಿಸುವದು.

ಈ ರೀತಿ ನವವಿಧ ಪ್ರಸಾದಗಳು ಪರಿಣಾಮಕಾರಿಯಾದರೆ, ಭಕ್ತನಲ್ಲಿ ತಾನಾಗಿಯೇ ಸಮತಾಪ್ರಸಾದವು ಪ್ರಸ್ಥಾಪಿಸಲ್ಪಡುವದು. ಅದಾದರೆ ಹಿಂದೆ ಸತ್ಯಜಲದಲ್ಲಿ ವಿವರಿಸಿದಂತೆ ಸಮಾಜದೊಡನೆ ಕೇವಲ ಸಮತ್ವಭಾವದಿಂದಲೇ ಭಕ್ತನು ವ್ಯವಹರಿಸುವನು. ಇದೇ ಸಮತ್ವ ಪ್ರಸಾದವು.

ಹೀಗೆ ಉತ್ಕರ್ಷೆಯನ್ನು ಹೊಂದಿದ ಪ್ರಸಾದದ ಪ್ರಗತಿಯು ಕುಂಠಿತವಾಗದೆ ಇಲ್ಲವೆ ಅಧೋಮುಖವಾಗದೆ, ನಿರಂತರ ನೆಲೆಗೊಂಡು ನಿಲ್ಲುವದೇ ಸಮ್ಯಕ್ ಜ್ಞಾನ ಪ್ರಸಾದವು.

ಈ ಹನ್ನೊಂದು ತರನಾದ ಪ್ರಸಾದಗಳು ಭಕ್ತನಲ್ಲಿ ಇಂಬುಗೊಂಡು ತನ್ನಲ್ಲಿಯೂ ಸಮಾಜದಲ್ಲಿಯೂ ಜಗತ್ತಿನಲ್ಲಿಯೂ ಎಲ್ಲಿ ನೋಡಿದಲ್ಲೆಲ್ಲ ಶಿವ ಚಿತ್ಕಳೆಯ ವಿನಾ ಬೇರೊಂದು ತೋರದೆ ಚಿನ್ಮಯತೆಯೇ ಪಸರಿಸಿ ನಿಲ್ಲುವದೇ ಚಿತ್ಕಳಾ ಪ್ರಸಾದವು. ಇಷ್ಟಾದರೆ ಮಾತ್ರ ಭಕ್ತನು (ಶರಣನು) ಪ್ರಸಾದಲಿಂಗದಲ್ಲಿ ಬೆರೆದನೆಂದು ತಿಳಿಯಬೇಕು ಎಂದು ನಿತ್ಯ ಪ್ರಸಾದ ಕ್ರಿಯೆಯ ತಾತ್ಪರ್ಯ ಉಂಟು.

ಗುರುಲಿಂಗ ಜಗಮುಗಳಿಂದ ಪಡೆಯುವ ಈ ಪಾದೋದಕ ಪ್ರಸಾದಗಳೇ ನಮ್ಮ ಅಷ್ಟಾವರಣಗಳಲ್ಲಿ ಮುಖ್ಯವಾಗಿರುತ್ತವೆ. ಇವನ್ನು ಪಡೆಯುವದೇ ಭಕ್ತ ಜನ್ಮದ ಹೆಗ್ಗುರಿಯು. ಆದಕ್ಕಾಗಿಯೇ ಅವು ಪ್ರತಿದಿನದ ಕಾರ್ಯಗಳಲ್ಲಿ ತಪ್ಪದೆ ಸಾಗುವಂತೆ ಸೇರಿಸಿ ಬಿಟ್ಟಿರುವರು. ಆದರೆ ಕಾಲ ಮಹಿಮೆಯಿಂದ ಅವು ಈಗ ತೀರ ವೈಪರಿತ್ಯ ಹೊಂದಿವೆ. ಅವು ಸಾರ್ವತ್ರಿಕವಾಗಿರುವದಂತೂ ನಿಂತೇ ಹೋಗಿದೆ. ಬಹು ಸ್ವಲ್ಪ ಜನರು ಮಾತ್ರ ಅನುಸರಿಸುತ್ತಿದ್ದರೂ ಅವರಲ್ಲನೇಕರು ಕೇವಲ ಸಾಂಪ್ರದಾಯವೆಂದೇ ನಡೆಸುತ್ತಿರುವರಲ್ಲದೆ ಅವುಗಳ ಮರ್ಮವನರಿತು ತಮ್ಮಲ್ಲಿ ಪರಿಣಾಮಕಾರಿಯಾಗಿ ನಿಜವಾಗಿಯೇ ಸುಫಲಿತವಾಗಬೇಕೆಂದು ಬಯಸಿ ಅತಃಕರಣಪೂರ್ವಕ ಆಚರಿಸುವವರು ತೀರ ವಿರಳ! ಈ ಪಾದೋದಕ ಪ್ರಸಾದಗಳನ್ನು ಪರಿಪೂರ್ಣವಾಗಿ ಪಡೆಯದವರು ಶರಣರೆಂದೂ ಆಗಲಾರರು. ಇದನ್ನರಿತೇ ಪ್ರಸಾದ ಬಯಸುವವರೆಲ್ಲರೂ ಸಾವಧಾನದಿಂದ ನಡೆಯಬೇಕೆಂದು ನಮ್ರವಾಗಿ ಬಿನ್ನಯಿಸುವೆನು. ಭಾವನೆಯು ಮೊದಲಿನಿಂದಲೇ ಬಲಿಯುತ್ತಸಾಗಿ ಕೊನೆಗೆ ಅದು ಸದ್ಭಾವನೆಯಾಗಿ ಸದ್ರೂಪ ಪಡೆಯಬೇಕು. ಮಹಾಲಿಂಗವನ್ನು ಸದ್ಭಾವಹಸ್ತದಲ್ಲಿಯೇ ಪೂಜಿಸಿ ಭಕ್ತನು ಅದರಲ್ಲಿಯೇ ಸಮರಸತೆ ಪಡೆಯುವದುತ್ತಮವೆಂಬುದನ್ನು ಯಾರೂ ಮರೆಯಲಾಗದು.

ಶ್ರೀ ಬಸವೇಶ್ವರರು " ಪಂಚೇಂದ್ರಿಯಗಳಳಿಯದನ್ನಕ್ಕ ಶರಣನೆಂತೆಂಬೆ? " ಎಂದು ಶರಣನ ವಿಷಯವಾಗಿ ಸೂತ್ರರೂಪದಿಂದ ಹೇಳಿದ ವಚನವಿದೆ. ಪಂಚೇಂದ್ರಿಯಗಳೇ ಪಂಚ ವಿಷಯಗಳ ಜ್ಞಾನಕ್ಕೆ ಸಾಧನವಾಗಿವೆ. ಅವು ಪದಾರ್ಥಗಳಲ್ಲಿ ಭಿನ್ನಭಾವವನ್ನು ಹುಟ್ಟಿಸುವವು. ಶರ

ಣನು ಜಗದ್ವ್ಯಾಪಿ ಪ್ರಸಾದ ಲಿಂಗದಲ್ಲಿ ಬೆರೆಗು ಏಕತ್ವ ಪಡೆಯುತ್ತಕ್ಕದ್ದಿರುವದಷ್ಟೇ! ಅವನಲ್ಲಿ ಇಂದ್ರಿಯಗಳು ಭಿನ್ನತ್ವ ತಿಳಿಸಹತ್ತಿದರೆ ಅವನ ಲಿಂಗದೈಕ್ಯಕ್ಕೆ ಅವಸರವೇ ಇಲ್ಲದಂತಾಗುವದು. ಆದಕಾರಣ ಎಲ್ಲವಿಷಯಗಳು ಒಂದೇ ಒಂದು ಪ್ರಸಾದ ರೂಪವೇ ಹೊರತು ಅಲ್ಲಿ ಭಿನ್ನತೆಗಾಗಲೀ ಮೇಲುಕೀಳಿಗಾಗಲೀ ಸಹಸಾ ಆಸ್ಪದವಿರಕೂಡದು. ಅಂತೇ ಅಣ್ಣನವರು ಮೇಲಿನ ಸೂತ್ರವನ್ನು ನುಡಿದಿದ್ದಾರೆ. " ಪ್ರಸಾದದಲ್ಲಿ ರುಚಿ ಇಲ್ಲವೆ ಎಂಜಲುಂಟೇ ?" ಎಂದು ಉದ್ಗಾರವೆತ್ತಿರುವದಾದರೂ ಇದಕ್ಕಾಗಿಯೇ. ಇವರ ವಚನ ಸಮಾವೇಶವು ಮೇಲೆ ಹೇಳಿದ ಏಕಾದಶ ಪ್ರಸಾದಗಳಲ್ಲಿ ಲಿಂಗಪ್ರಸಾದದಲ್ಲಾಗುವದು.

ಇನ್ನು ಶ್ರೀ ಚನ್ನ ಬಸವಣ್ಣನವರು ಶರಣನ ವಿಷಯವಾಗಿ ಏನು ಹೇಳುವರೆಂಬುದನ್ನು ನೋಡೋಣ. ಅವರು ಏಕೋತ್ತರ ಶತಸ್ಥಳಗಳಲ್ಲಿ ಶರಣನ ಅಂಗಸ್ಥಲಗಳು ನಾಲ್ಕು, ಹಾಗೂ ಲಿಂಗಸ್ಥಲಗಳು ಒಂಭತ್ತು ಎಂದು ನಿರೂಪಿಸಿದ್ದಾರೆ.

## ಶರಣನ ಅಂಗಸ್ಥಲಗಳು

(೧) ಶರಣಸ್ಥಲ :— ಇದರಲ್ಲಿ ಶರಣನ ಸಾಮಾನ್ಯ ಲಕ್ಷಣ ಅವನ ಧ್ಯೇಯ ಮುಂತಾದವುಗಳು ಬರುವವು. ಅವುಗಳ ವಿವರವು ಮೇಲೆ ಬಂದೇ ಇದೆ.

(೨) ತಾಮಸ ನಿರಸನಸ್ಥಲ :— ಪ್ರಸಾದಿ ಸ್ಥಳದಲ್ಲಿ ಕಾಯಾರ್ಪಿತ, ಕರಣಾರ್ಪಿತ ಭಾವಾರ್ಪಿತಗಳಾಗಿರುವವು. ಹಾಗೆಯೇ ಪ್ರಾಣಲಿಂಗಿಸ್ಥಳದಲ್ಲಿ ನಿರ್ದೇಹಾಗಮ, ನಿರ್ಭಾವಾಗಮ ನಷ್ಟಾಗಮಗಳಾಗಿರುವವು. ಇವುಗಳ ನಂತರ ಪ್ರಾಣಲಿಂಗವು ( ಜೀವಾತ್ಮನು ) ಪರಮಾತ್ಮಸ್ವರೂಪದ ವಿನಾ ಬೇರೊಂದಲ್ಲವೆಂಬುದನ್ನು ಹೇಳಿ ತ್ರಿವಿಧ ಪ್ರಸಾದಿಯನ್ನಾಗಿ ಮಾಡಿ ಆತನನ್ನು ಜಂಗಮ ಲಿಂಗದಲ್ಲಿ ಬೆರೆಯಿಸಿದ್ದಾರೆ. ಹೀಗಿದ್ದೂ ಶರಣಸ್ಥಳದಲ್ಲಿ ಮತ್ತೆ ಅದೆಂತಹ " ತಾಮಸ ನಿರಶನವು " ಉಳಿದಿರಬಹುದು? ಉಳಿಯಲಿಕ್ಕೆ ಎಷ್ಟೆಷ್ಟೂ ಅವಸರವಿಲ್ಲವಲ್ಲ! ಇಂತಿದ್ದೂ ಹೇಳಿರುವರೆಂದಮೇಲೆ ಅದರಲ್ಲಿ ಸ್ವಾರಸ್ಯವಿರಲೇಬೇಕು. ಅದು ಮೇಲೆ

ಹೇಳಿದವುಗಳಿಗಿಂತ ಭಿನ್ನವಾಗಿರಬಹುದು. ಅದನ್ನು ಮುಂದಿಡುವದೇ ತಾಮಸ ನಿರಸನದ ಮುಖ್ಯೋದ್ದೇಶವು. ತಾಮಸನೆಂದರೆ ಕತ್ತಲೆಗೆ (ಅಜ್ಞಾನಕ್ಕೆ) ಸಂಬಂಧಿಸಿದ ವಿಷಯು. ಇಂದ್ರಿಯಾರ್ಪಿತವಲ್ಲ (ಕರಣಾರ್ಪಿತ) ದಶೇಂದ್ರಿಯಗಳು (೫ ಜ್ಞಾನೇಂದ್ರಿಯ + ೫ ಕರ್ಮೇಂದ್ರಿಯ) ಬಂದಿವೆ. ಅವುಗಳನ್ನು ಶಿವಾರ್ಪಿತ ಮಾಡಿದೆನೆಂದು ಹೇಳುವದು ಸುಲಭ ಆದರೆ ಜ್ಞಾನೇಂದ್ರಿಯಗಳನ್ನು ಅರ್ಪಿತ ಮಾಡುವದು ಪರಮ ದುಸ್ತರವಾದುದು! ಅವನ್ನು ಅರ್ಪಿತಮಾಡಿದಮೇಲೆ ಪಂಚವಿಷಯಗಳೆಲ್ಲ ಕೇವಲ ಪ್ರಸಾದ (ಪರಮಾತ್ಮ) ಸ್ವರೂಪವಾಗಿಯೇ ಅಂದರೆ ಏಕರೂಪವಾಗಿ ತೋರಲೇಬೇಕು. ಅವುಗಳಲ್ಲಿ ಭೇದ ಭಾವವು ಇನಿತಿನಿತಾದರೂ ಭಾಸವಾಗಬಾರದು. ಹೀಗೆ ಭಾಸವಾದರೆ ಆ ಜ್ಞಾನೇಂದ್ರಿಯಗಳು ಇನ್ನೂ ಲಿಂಗಾರ್ಪಿತವಾಗದೆ ಜೀವಾತ್ಮನ ಆಧೀನವಾಗಿಯೇ ಉಂಟು ಎಂದು ಭಾವಿಸಬೇಕಾಗುತ್ತದೆ. ಇದೇ ಮಾತನ್ನು ತೊಡೆಸು ಹಾಕುವದಕ್ಕಾಗಿಯೇ ಶ್ರೀ ಜಗದಣ್ಣ ಬಸವಣ್ಣನವರು "ಪಂಚೇಂದ್ರಿಯಗಳಳಿಯದನ್ನಕ್ಕ ಶರಣನೆಂತೆಂಬೆ!" ಎಂದು ಉದ್ಗರಿಸಿದ್ದಾರೆ. ಶರಣನು ಬಹಿರಂಗ ಅಂತರಂಗಗಳಲ್ಲಿ ಸಂಪೂರ್ಣವಾಗಿ ಪರಮಾತ್ಮನಿಗೆ ಶರಣುಹೋಗುವದಿದೆ. ಅದಾವ ವಿಷಯದಲ್ಲಿಯೂ ಅವನೊಳಗೆ ಅಜ್ಞಾನವು (ತಾಮಸವು) ತಲೆ ಎತ್ತಲಾಗದು "ನಾನು ಶರಣ ನೀನು ಶರಣ" ಎಂದು ಹೇಳಿಕೊಳ್ಳುವ ಬಹು ಜನ ನಾನು ಮಾತ್ರ ಶರಣರನೇಕರು ಸಿಕ್ಕ ಬಹುದು ಆದರೆ ಶಬ್ದ ಸ್ಪರ್ಶ ರೂಪ ರಸ, ಗಂಧಗಳೆಂಬ ಪಂಚ ತನ್ಮಾತ್ರೆಗಳೂ ಅವುಗಳ ಪ್ರತಿಯೊಂದು ಪಂಚ ಉಪಭೇದಗಳೂ ಪೂರ್ಣವಾಗಿ ಅಡಗಿ ಅವನ್ನೆಲ್ಲ ಒಂದೇ ಒಂದು ಪ್ರಸಾದ ದೃಷ್ಟಿಯಿಂದಲೇ ಕಾಣುವಂತೆ ಶರಣನ ಜ್ಞಾನೇಂದ್ರಿಯಗಳು ಸಜ್ಜಾಗಿರಲಿಕ್ಕೆ ಬೇಕು. ಇದೇನು ಸಾಮಾನ್ಯ ವಿಷಯವೇ? ಪಂಚ ಜ್ಞಾನೇಂದ್ರಿಯಗಳಲ್ಲಿ ಒಂದಾದ ರಸನೆಯ ರಸ ವಿಷಯವನ್ನೇ ಇಲ್ಲಿ ದೃಷ್ಟಾಂತಕ್ಕಾಗಿ ತೆಗೆದುಕೊಳ್ಳೋಣ. ಭೋಜನ ಕಾಲಕ್ಕೆ ಎಡೆಯಲ್ಲಿ ಬಂದ ಪದಾರ್ಥಗಳನ್ನೆಲ್ಲ ಪ್ರಸಾದ ಮಂತ್ರದಿಂದ ಅಭಿಮಂತ್ರಿಸಿ, ಸ್ಪರ್ಶಿಸಿ ಲಿಂಗಾರ್ಪಿತ ಜಂಗಮಾರ್ಪಿತಮಾಡಿ ಭುಂಜಿಸುವವರಿಗೇನೂ ಕೊರತೆಇಲ್ಲ. ಬಾಯಿಂದ ಕೇಳಿದರೆ "ಓಹೋ! ಪ್ರಸಾದದಲ್ಲಿ ಮೇಲು ಕೀಳು ಇರುವದೇ? ಎಲ್ಲವೂ ಅತ್ಯಂತ ರುಚಿಕರವಿರುತ್ತವೆ" ಎಂದು ಹೇಳುವರು. ಪ್ರಸಾದದಲ್ಲಿ ರುಚಿಯು ಸರಸಬಾರದೆಂತಲೂ ಶಾಸ್ತ್ರ

ಹೇಳುವರು. ಆದರೆ ಮಾಡುವವರಲ್ಲಿ ತುಸು ಅಜಾಗ್ರತೆ ಯುಂಟಾಗಿ ಹೆಚ್ಚು ಬೆಂದಿದ್ದರೆ ಇಲ್ಲವೆ ಕಿಸರು ಉಳಿದಿದ್ದರೆ, ಅಥವಾ ಉಪ್ಪುಕಾರ ಹುಳಿಗಳೆಲ್ಲ ತಕ್ಕ ಪ್ರಮಾಣವಲ್ಲಿರದಿದ್ದರೆ ಮೋರೆ ಕಿವಿಚುತ್ತ ಹಾಗೂ ಹೀಗೂ ಎಡೆಯಲ್ಲಿ ಬಂದುದನ್ನು ತೀರಿಸಿ ಮತ್ತೆ ಅವು " ಸಾಕು ಸಾಕು " ಎಂದು ನುಡಿಯುವವರನ್ನು ಎಲ್ಲೆಡೆ ಕಾಣಬಹುದು. ಪಂಚಜ್ಞಾನೇಂದ್ರಿಯ ಗಳು ನಾಸ್ತಿಯಾದವನಲ್ಲಿ ಹೀಗಾಗುವದು ಶಕ್ಯವೇ ಇಲ್ಲ. ಅವನು ತನ್ನ ಪ್ರಮಾಣಕ್ಕೆ ಸರಿಯಾಗಿ, ಪ್ರಸಾದ ಕೊಂಡೇಬಿಡುವನು. ಇಂತಹ ಹಸಿ ಬಿಸಿ ಶರಣರನ್ನು ಕುರಿತೇ ಶ್ರೀ ಬಸವಣ್ಣನವರು ತಮ್ಮ ಸೂತ್ರ ವಚನ ಹೇಳಿದ್ದಾರೆ. ಅದನ್ನೇ ಶ್ರೀ ಚನ್ನಬಸವಣ್ಣನವರು ಶರಣನ ಲಿಂಗ ಸ್ಥಲಗಳಲ್ಲಿ ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನ ನಿಷ್ಪತ್ತಿಗಳೆಂದು ವಿವ ರಿಸಿದ್ದಾರೆ. ನಿಷ್ಪತ್ತಿ ಶಬ್ದದಲ್ಲಿ ನಿಸ್+ಪತ್ತಿ ಎಂಬೆರಡು ಶಬ್ದಗಳಿವೆ ಪತ್ತಿ ಎಂದರೆ ಹೊಂದೋಣ ಎಂಬರ್ಥ. ನಿಷ್ಪತ್ತಿ ಎಂದರೆ ಹೊಂದಿ ರೋಣ ಎಂಬರ್ಥವು ತಾನೇ ಉದ್ಭವಿಸುವದು. ಕ್ರಿಯಾ ಭಾವ ಜ್ಞಾನಗಳೆಲ್ಲ ಶರಣನಲ್ಲಿ ನಿಷ್ಪತ್ತಿಹೊಂದಬೇಕಾಗುತ್ತದೆ. ಅವುಗಳ ಸಂಬಂ ಧವು ಅವನಿಗೆ ಎಷ್ಟು ಮಾತ್ರವೂ ಇರದೆ ಅವು ತಮ್ಮಿಂದತಾವೇ ಸಹ ಜವಾಗಿ ಪ್ರಕಟವಾಗುತ್ತಿರಬೇಕು. ಇಂತು ಕ್ರಿಯಾ ಭಾವ ಜ್ಞಾನಗಳು ಜರುಗುತ್ತಿದರೆ ಅವು ಕೇವಲ ಲೋಕೋದ್ಧಾರಾರ್ಥವಾಗಿಯೇ ನಡೆಯು ಹತ್ತುವವು. ಅದರಲ್ಲಿ ಶರಣನ ಸಂಬಂಧವು ಲವ ಮಾತ್ರವೂ ಇರುವ ದಿಲ್ಲ. ಹೀಗೆ ಅವು ನಡೆಯಬೇಕೆಂಬುದಕ್ಕಾಗಿಯೇ ಅಂಗಸ್ಥಳದಲ್ಲಿ ಪುನಃ ತಾಮಸ ನಿರಸನನೆಂಬ ಸ್ಥಳವನ್ನು ಅವಶ್ಯವಾಗಿ ಹೇಳಬೇಕಾಗಿರುವದು. " ನಾವು ಪ್ರಸಾದವನ್ನೇ ಭುಂಜಿಸತ್ತೇವೆ ಆದ್ದರಿಂದ ನಾವು ಪ್ರಸಾದ ಕಾಯವನ್ನೇ ಪಡೆಯುವೆವು" ಎಂದು ಮುಗ್ಧ ಭಾವದಲ್ಲಿ ತೊಳಲಾಡು ವವರು ಈ ತಾಮಸ ನಿರಸನದ ಕಡೆಗೆ ಒಳಿತಾಗಿ ಲಕ್ಷಿಸುವರೆಂದು ನಂಬಿರುವೆ. ಇದೇ ಮೇರೆಗೆ ಉಳಿದ ತನ್ಮಾತ್ರೆಗಳ ಬಗೆಗೂ ಅರಿಯ ಬೇಕು. ತನ್ಮಾತ್ರ ( ತತ್+ಮಾತ್ರ ) ಎಂದರೆ ಅವು ಕೇವಲ " ಜ್ಞಾನ ಸ್ವರೂಪ " ಎಂದರಿಯಬೇಕು.

( ೩ ) ನಿರ್ದೇಶಸ್ಥಳ:—ಯಾವದಾದರೊಂದು ಸಂಗತಿಯನ್ನು ಮನ ಸ್ಸಿಗೆ ನಾಟುವಂತೆ ಸ್ಪಷ್ಟವಾಗಿ ತೋರಿಸಿಕೊಡುವದಕ್ಕೆ ನಿರ್ದೇಶವೆನ್ನು

ವರು. ಈ ನಿರ್ದೇಶವು ಶರಣನಿಗೆ ಅವನು ಪ್ರಸಾದಲಿಂಗದಲ್ಲಿ ಹೇಗೆ ಬೆರೆಯು ಬೇಕೆಂಬುದನ್ನು ತೋರಿಸಿದುದಾಗಿದೆ. ಹಾಗಾಗಲಿಕ್ಕೆ ಮೊದಲು ಪ್ರಸಾದ ಲಿಂಗದಲ್ಲಿ ನಿಜವಾದ ವ್ಯಾಪ್ತಿಯು ಅವನ ಮನಸ್ಸಿಗೆ ಹೊಳೆಯುವದು ಅಗತ್ಯವಾಗಿದೆ. ಮಹೇಶ್ವರ ಸ್ಥಳದಲ್ಲಿ "ಭಕ್ತದೇಹಿಕ ಲಿಂಗಸ್ಥಳ" ವೆಂದು ಹೇಳಿದುದು ಉದ್ದೇಶ ಸಾಧನೆಗೆ ಸುಕರತೆಯನ್ನುಂಟುಮಾಡುವದಕ್ಕೆ ಮಾತ್ರ. ಅದು ನಿಜವಲ್ಲ. ಲಿಂಗವು ಜಗದ್ಭರಿತವಾದುದೇ ಸತ್ಯ. ಅದನ್ನು ಪ್ರಾಣಲಿಂಗಿ ಸ್ಥಳದಲ್ಲಿ "ಲಿಂಗ ನಿಜಸ್ಥಳ" ವೆಂಬಲ್ಲಿ ಹೇಳಿ ತಿದ್ದಿರುತ್ತಾರೆ. ಅದರಿಂದಲೇ ಪ್ರಾಣಲಿಂಗಿಗೆ ಪ್ರಾಣಿಗಳಲ್ಲಿ (ಚರಸೃಷ್ಟಿಯಲ್ಲಿ) ರುವ ಪ್ರಾಣವನ್ನೆಲ್ಲ ಶಿವರೂಪವೆಂದು ಬಗೆಯಲು ಅನುವಾಯಿತು. ಇಲ್ಲಿ ಮತ್ತೂ ಮುಂದೆಸಾಗಿ ಶರಣನು ಸಂಪೂರ್ಣ ಜಗತ್ತನ್ನೆಲ್ಲ ಲಿಂಗರೂಪ ವೆಂದರಿಯಬೇಕಾಗಿದೆ. ಅಚರಸೃಷ್ಟಿಯಲ್ಲಿರುವ ವನಸ್ಪತಿ ಕೋಟಿಯು ಸ್ಥಲಬಿಟ್ಟು ಕದಲದಿದ್ದರೂ ಮೊಳೆತು, ಬೆಳೆದು, ಹೂ, ಕಾಯಿ, ಹಣ್ಣು, ಹಂಪಲ, ಕಾಳುಕಡಿಗಳನ್ನು ಕೊಡುತ್ತವೆ. ಆ ಕಾಳುಕಡಿ ಮೊದಲಾದವುಗಳೇ ಪ್ರಾಣಿಗಳನ್ನು ಪೋಷಿಸುತ್ತವೆ. ಆದುದರಿಂದ ಅವುಗಳಲ್ಲಿ ಪ್ರಾಣವಿರಲೇಬೇಕು. ಇನ್ನು ಗಿಡಬಳ್ಳಿಗಳು ಮಣ್ಣು ಕಲ್ಲುಗಳಲ್ಲಿ ಹುಟ್ಟಿ ಬೆಳೆಯುವವು. ಆದುದರಿಂದ ಅವುಗಳಲ್ಲಾದರೂ ಪ್ರಾಣವಿರಲೇಬೇಕು. ಇದಕ್ಕೆ ಚೈತನ್ಯವೆಂದು ಕರೆಯುವದು ವಾಡಿಕೆಯಾಗಿದೆ. ಇದರಿಂದ ಚರಿಸುವ ಪ್ರಾಣಿಗಳಂತೆಯೇ ಅಚರವಾದ ವನಸ್ಪತಿ ಕೋಟಿಯೂ ಮೃಚ್ಛಿಲಾ ಮೊದಲಾದ ನಿಜಕೋಟಿಯೂ ಸಹ ಚೈತನ್ಯ ಉಳ್ಳವೇ ಆದವು. ಜಗದ್ಭರಿತ ಈ ಪ್ರಾಣವೆಲ್ಲ ಚೈತನ್ಯವೆಲ್ಲ ಪರಮಾತ್ಮನಿಂದಲೇ ಉದ್ಭವಿಸಿ ಹಬ್ಬಿರುವದು. ಈ ರೀತಿಯಾಗಿ ಶರಣನು ಅರಿದು "ಯದ್ಯದ್ವಿಭೂತಿ ಮತ್ಸತ್ವಂ । ತತ್ತದೂರ್ಜಿತಮೇವ ವಾ ॥" ಎಂಬುದನ್ನು ಲಕ್ಷಿಸಿ, ಶಿವನು ಜಗನ್ಮಯನಾಗಿರುವನೆಂದರಿಯಬೇಕು. ಇದೇ ಪ್ರಸಾದಲಿಂಗವು.

ಹೀಗೆ ಲಿಂಗದ ವಿಸ್ತೃತ ರೂಪವನ್ನರಿತಮೇಲೆ ಅದರಲ್ಲಿ ಅವನು ಅದು ಹೇಗೆ ತಿಳಿಯದಂತೆ ಬೆರೆಯಬೇಕೆಂಬುದನ್ನು ಮಾತ್ರ ತೋರಿಸುವದುಳಿಯಿತು. ಇದು ಮನದಟ್ಟಾಗಲಿಕ್ಕೆ ಕೊಡಬಹುದಾದ ಒಂದೇ ಒಂದು ಲೌಕಿಕ ದೃಷ್ಟಾಂತವೆಂದರೆ ಸತಿಪತಿಗಳದು. ಇಲ್ಲಿ ಶರಣನೇ ಸತಿಲಿಂಗವೇ ಪತಿಯು. ಸಾಧ್ವಿ ಶಿರೋಮಣಿಯಾದ ಸತಿಯು ಹೇಗೆ ತನ್ನ ಕಷ್ಟದಕಡೆಗೆ

ನೋಡದೆ, ಪತಿಯೊಡನೆ ಎಲ್ಲ ರೀತಿಯಿಂದಲೂ ಸಹಕರಿಸಿ ನಡೆಯುವಳೋ ಹಾಗೇ ಶರಣನು ಪ್ರಸಾದಲಿಂಗವನ್ನು ಬೆಂಬಳಿಸಬೇಕು. ಅದೂ ಅಲ್ಲದೆ ಪತಿಯೇ ತನ್ನ ಪ್ರಾಣವೆಂದು ಸತಿಯು ನಂಬಿದಂತೆ ಶರಣನು ತನ್ನ ಲಿಂಗ ವನ್ನರಿಯಬೇಕು. ಮತ್ತು ಏಕಾಂತ ಗೃಹದಲ್ಲಿ ಸತಿಪತಿಗಳು ವಿನೋದ ಕ್ರೀಡೆಯಲ್ಲಿರುವಾಗ ಹೇಗೆ ಪರಸ್ಪರರು ಮೈಮರೆತು ತಲ್ಲೀನರಾಗಿ, ಏಕ ಸ್ವರೂಪರಾಗಿಬಿಡುವರೋ ಅಂತೆಯೇ ಶರಣಸತಿಯು, ತನ್ನ ಪತಿಯಾದ ಲಿಂಗದಲ್ಲಿ ಕೂಡಿ ಏಕೀಭವಿಸಬೇಕು. ಆದುದರಿಂದ ಇದೇ ಮಾತು ಮಾದರಿಯಾಗಿರಿಸಿಕೊಂಡು ಸಂದಿಲ್ಲದಂತೆ ವರ್ತಿಸಿ ಲಿಂಗವಿಲೀನನಾಗಬೇ ಕೆಂಬುದೇ ಈ ನಿರ್ದೇಶ ಸ್ಥಳದಲ್ಲಿ ವಿಸ್ತರಿಸಲಾಗಿದೆ.

( ೪ ) ಶೀಲ ಸಂಪಾದನ ಸ್ಥಳ:— ಶೀಲವೆಂದರೆ ಅತ್ಯವಶ್ಯಕವಾದ ಪಾರಮಾರ್ಥಿಕ ಕರ್ತವ್ಯ. ಜನ್ಮಕ್ಕೆ ಬಂದಮೇಲೆ ಅದನ್ನು ಬಿಡುವದೇ ಶಕ್ಯವಿಲ್ಲ. ಸುಮ್ಮನೆ ಸಗಣಿಗೆ ಸಾಸಿರ ಹುಳುಗಳು ಹುಟ್ಟಿದಂತೆ ಬಂದು ವ್ಯರ್ಥ ಸತ್ತುಹೋಗುವದು ಮಾನವನಿಗೆ ತರವಲ್ಲ. ಅಲಭ್ಯವಾದ ಮಾನುಷ ವನ್ನು ( ಜ್ಞಾನವಿರುವ ಜನ್ಮವನ್ನು ) ಪಡೆದು, ಅದರ ಬೆಲೆಯನ್ನರಿಯದೆ ವ್ಯರ್ಥವಾಗಿ ಪಶು ಪಕ್ಷಿ ಕ್ರಿಮಿ ಕೀಟಕಗಳಂತೆ ಸತ್ತುಹೋಗುವದು ವಿಹಿತವೇ ? ಉಕ್ತವೇ ? ಎಂದೆಂದೂ ಅಲ್ಲ. ಆದುದರಿಂದ ತನ್ನ ಶೀಲ ವೆಂದರೇನೆಂಬುದನ್ನು ಆತನು ಅರಿದು ಆ ಪ್ರಕಾರ ವರ್ತಿಸಿ ಧನ್ಯನೂ ಕೃತ ಕೃತ್ಯನೂ ಆಗಲೇಬೇಕು. ಅಂತೆಯೇ ಆತನಿಗೆ ಲಿಂಗವನ್ನು ಸರಿ ಯಾಗಿ ನಿರ್ದೇಶಿಸಿದ ಮೇಲೆ ಅದರಲ್ಲಿ ಅವನು ಬೆರೆದು ಏಕರೂಪತೆಯನ್ನು ಹೊಂದುವಂತೆ ವರ್ತಿಸುವದೇ ಸಾರ್ಥಕ್ಯವು. ಪತಿವ್ರತೆಯು ತನ್ನ ಪತಿ ಯಲ್ಲಿ ತ್ರಿಕರಣ ಪೂರ್ವಕವಾಗಿ ಬೆರೆದು ಆನಂದಪಡುವಂತೆಯೇ ಶರಣ ಸತಿಯು ಲಿಂಗಪತಿಯಲ್ಲಿ ಸಮರಸವಾಗಿ ಬೆರೆದು ಜನ್ಮವನ್ನು ಸಫಲ ಗೊಳಿಸಬೇಕು. ಹೀಗಾದರೆ ಮಾತ್ರ ಅವನು ಶೀಲ ಸಂಪಾದನ ಸ್ಥಳ ವನ್ನು ಹೊಂದಿದಂತಾಗುವದು. ಇದನ್ನು ಸರಿಯಾಗಿ ಜರುಗಿಸದಿದ್ದರೆ ಅದೆಷ್ಟು ಘಾತವಾಗುವದೆಂಬುದನ್ನು ಜಗದಣ್ಣ ಬಸವಣ್ಣನವರು ಒಂದು ಸಾದಾ ವ್ಯಾವಹಾರಿಕ ವಚನದಲ್ಲಿ ಸ್ಪಷ್ಟಗೊಳಿಸಿರುವರು. ಅದು “ ಅರಸನ ಕಂಡು ಪುರುಷನ ಮರೆದರೆ ಮರನೇರಿ ಕರಬಿಟ್ಟಂತೆ ಕಾಣಾ ಕೂಡಲ ಸಂಗಮದೇವಾ!” ಅರಸನೆಂದರೆ ರಸಹೀನ ( ಸ್ಥಿರಾನಂದವೀಯದ )ವಾದ

ಜಗತ್ತಿನ ವಿಷಯಗಳನ್ನು ಕಂಡು ಮೋಹಿಸಿ ಪುರುಷನ ಅಂದರೆ ರಸ ಭರಿತವಾದ ಸ್ಥಿರಾನಂದವೀವ ಪರಮಾತ್ಮನನ್ನು ಮರೆತರೆ ಮರನೇರಿ ಶಿವಾನುಭವ ವೃಕ್ಷವನ್ನು ತುದಿಮುಟ್ಟ ಏರಿಹೋಗಿ ಕರಬಿಟ್ಟಂತೆ ಅಂದರೆ ಫಲಪಡೆಯದೆ ವಿನಾಕಾರಣ ಕೈಬಿಟ್ಟು ಕೆಳಗೆ ದೊಪ್ಪನೇ ಬಿದ್ದು ( ಅಧೋ ಗತಿಯನ್ನೈದಿ ) ಕರಚರಣಗಳು ಮುರಿದು ತಲೆಯೊಡೆದು ಮಹಾ ದುಃಖಕ್ಕೆ ಒಳಗಾದಂತಾಯಿತು ನೋಡೋ ಕೂಡಲ ಸಂಗಮ ದೇವಾ ? ಎಂದು ಹೇಳಿದ್ದಾರೆ. ಇದೇ ಶೀಲ ಸಂಪಾದನ ಪಡೆಯದೆ ಶೀಲಭ್ರಷ್ಟತೆಹೊಂದಿ ಮರ್ಥರ ನರಕಕ್ಕೆ ಒಳಗಾಗುವ ದುರಾಚಾರ. ಇಂತಹದಕ್ಕೆ ಒಳಗಾಗದೇ ಶರಣನು ದೃಢನಿಶ್ಚಯದಿಂದ, ತನ್ನ ಶೀಲಪಾಲನಂಗೈದುಕೊಂಡು ತಪ್ಪದೆ ಪ್ರಸಾದ ಲಿಂಗದಲ್ಲಿ ಬೆರೆಯುವದೇ ಅವನ ಶೀಲವು.

## ಶರಣನ ಲಿಂಗಸ್ಥಲಗಳು ೯

( ಅ ) ನಿಷ್ಪತ್ತಿ ತ್ರಯ ಲಿಂಗಃ— ಇವು ಕ್ರಿಯಾನಿಷ್ಪತ್ತಿ, ಭಾವನಿ ಷ್ಪತ್ತಿ, ಜ್ಞಾನ ನಿಷ್ಪತ್ತಿ ಎಂದು ಮೂರು ಅವೆ. ಇವುಗಳ ದೆಸೆಯಿಂದ ಹಿಂದೆ ತಾಮಸ ನಿರಸನವನ್ನು ಕುರಿತು ಹೇಳುವಕಾಲಕ್ಕೆ ಉಲ್ಲೇಖಿಸಿರುವ ದರಿಂದ, ಬೇರೆ ಹೆಚ್ಚಾಗಿ ಹೇಳುವದೇನೂ ಇಲ್ಲ

( ಬ ) ಆಕಾಶ ತ್ರಯಲಿಂಗಃ — ಇವು ಪಿಂಡಾಕಾಶ ಬಿಂದ್ವಾಕಾಶ ಮಹಾಕಾಶ ಎಂದು ೩ ಉಂಟು. ನಿಷ್ಪತ್ತಿಯನ್ನು ಪಡೆದಮೇಲೆ ಶರಣನ ಕ್ರಿಯಾ-ಭಾವ-ಜ್ಞಾನಗಳು ಅದೆಂತು ಪ್ರಕಟವಾಗಬೇಕೆಂಬುದಕ್ಕೆ ದೃಷ್ಟಾಂತ ವಾಗಿ ಇವು ಬಂದಿವೆ. ಆಕಾಶವು ಪ್ರತಿಯೊಂದು ವಸ್ತುವಿನಲ್ಲಿಯೂ ವಿಶ್ವದ ಒಳಗೂ ಸುತ್ತು ಮುತ್ತೂ ಎಲ್ಲೆಡೆಯಲ್ಲಿಯೂ ತುಂಬಿಕೊಂಡಿ ದ್ದರೂ ಕೂಡ ತನಗೆ ಯಾವುದರ ಸಂಬಂಧವನ್ನೂ ಲವಲೇಶವೂ ಇಟ್ಟು ಕೊಂಡಿರುವದಿಲ್ಲ. ಅದೇ ರೀತಿಯಲ್ಲಿ ಶರಣನೂ ಸಹ ಕ್ರಿಯಾಭಾವ ಜ್ಞಾನಗಳು ತನ್ನಲ್ಲಿ ವಾಸಿಸುತ್ತಿದ್ದರೂ ಅವುಗಳನ್ನು ತನಗೆ ಎನಿತೆನಿತೂ ಹಚ್ಚಿಕೊಳ್ಳಲಾಗದು. ತಾಮಸ ನಿರಸನದ ಪೂರ್ಣತೆಯಿಂದಲೇ ಇದು ಸಾಧ್ಯ.

( ಕ ) ಪ್ರಕಾಶತ್ರಯ ಲಿಂಗಃ— ಇವಾದರೂ ಕ್ರಿಯಾ ಪ್ರಕಾಶ ಭಾವ ಪ್ರಕಾಶ ಜ್ಞಾನ ಪ್ರಕಾಶಗಳೆಂದು ಮೂರು ತೆರನಾಗಿರುವವು.

ಆಕಾಶವು ಎಂತು ಯಾವ ಸಂಬಂಧವೂ ಇಲ್ಲವೆ ಎಲ್ಲೆಲ್ಲಿಯೂ ತಾನೇ ತಾನಾಗಿ ಬೆಳಗುತ್ತಿರುವದೋ ಹಾಗೆಯೇ ಶರಣನ ಕ್ರಿಯಾಭಾವ ಜ್ಞಾನಗಳು ತಮ್ಮಷ್ಟಕ್ಕೆ ತಾವೇ ಪ್ರಕಾಶಗೊಳ್ಳಬೇಕು. ಯಾವ ಉದ್ದೇಶವೂ ಇಲ್ಲದೆ ಅಸಾಮಾನ್ಯವಾಗಿ ಜಗತ್ತಿನ ಕಲ್ಯಾಣಕ್ಕೋಸುಗ ಅವು ಹೊರಹೊಮ್ಮಬೇಕು. ಎಲ್ಲೆಡೆಯಲ್ಲಿಯೂ ಆತನು ಪ್ರಸಾದಲಿಂಗವನ್ನೇ ಕಂಡು ಅದೇ ತಾನು ತಾನೇ ಆಗಿ ಸಹಜ ರೀತಿಯಿಂದಲೇ ವರ್ತಿಸಬೇಕು. ಇದೇ ಶರಣನ ಜೀವನದ ನೈಸರ್ಗಿಕ ಸ್ಥಿತಿಯು.

ಹೀಗೆ ನಿಷ್ಪತ್ತಿಯನ್ನು ಸಾಧಿಸಿ ಶರಣನ ಕ್ರಿಯಾಭಾವ ಜ್ಞಾನಗಳು ಸಹಜ ಪ್ರಕಾಶಿಸ ಹತ್ತಿದರೆ ಅವನು ಅದ್ವಿತೀಯ ಮಹಾತ್ಮನಾಗುವನು. ಆದುದರಿಂದ ಶರಣನು ಮೆಚ್ಚಿದ ಸ್ಥಾನವೇ ಮಹಾಕ್ಷೇತ್ರ. ಅವನು ಮುಟ್ಟಿದ ಜಲವೇ ತೀರ್ಥ. ಅವನ ನುಡಿಯೇ ವೇದಾಗಮ ವಚನ. ಹೀಗೆ ಅವನ ಮಹಾತ್ಮ್ಯವಿರುವದು. ಅಂತೆಯೇ ಬಸವಣ್ಣನವರು “ ಕುಲವೇನು ಅವಂದಿರ ಕುಲವೇನು? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು ” ಎಂದು ಕೊಂಡಾಡಿದ್ದಾರೆ. ಆ ಶರಣನು ಬರಿಯ ಮಾನವ ಪ್ರಾಣಗಳದಷ್ಟೇ ಲೇಸನು ( ಕಲ್ಯಾಣವನ್ನು ಮಾಡುವವನೆಂದು ತಿಳಿಯಲಾಗದು ಅವನು ವನಸ್ಪತಿಗಳ ಬಗೆಗೆ ಸಹ ಎಚ್ಚರದಿಂದ ವರ್ತಿಸುತ್ತಾನೆ. ಗಿಡಬಳ್ಳಿಗಳಿಂದ ಹೂಕಾಯಿ ಎಲೆಗಳನ್ನು ಸಹ ಅವನು ಅಜಾಗ್ರತೆಯಿಂದ ಕೊಯ್ಯಲಿಕ್ಕೆ ಹೋಗುವದಿಲ್ಲ. ಅವು ತಾವಾಗಿಯೇ ಉದರಬಿದ್ದಾಗ ಮಾತ್ರ ಅವನ್ನು ಆಯ್ದುಕೊಂಡು ತನ್ನ ಗರಜು ಸಾಗಿಸಿಕೊಳ್ಳುವನು ಶರಣನು ಪರಮಾವಧಿ ಕರುಣಾಶಾಲಿಯಾಗಿರುವನು. ಅಲ್ಲದೆ ವಿನಯಾನ್ವಿತನೂ ಸರ್ವರನ್ನು ಸಮಾನತೆಯಿಂದ ಕಾಣುವವನೂ ಆಗಿರುವನು. ಅಂತೆಯೇ ಶರಣರ ಸಹವಾಸದಿಂದಲೇ ಭಕ್ತನ ಅಭಿವೃದ್ಧಿಯೂ ಉತ್ತರೋತ್ತರ ಕಲ್ಯಾಣವೂ ಅವಲಂಬಿಸಿವೆ. ಆದುದರಿಂದಲೇ “ ಶರಣರ ಮನೆಯಲ್ಲಿ ನಮ್ಮನ್ನೂ ಆಳಾಗಿರಿಸು, ಅವರಡಿಯಲ್ಲಿ ಚಮ್ಮಾವುಗೆ( ಕಡ ಹಾವಿಗೆಯಲ್ಲ ! )ಯನ್ನಾದರೂ ಮಾಡಿ ಇರಿಸು”ಎಂದು ಭಕ್ತರು ಶಿವನನ್ನು ಬೇಡಿಕೊಂಡಿದ್ದಾರೆ.

ಶರಣಾಂಗದಲ್ಲಿ ಇಷ್ಟಲಿಂಗಾರ್ಚಕ ಪ್ರಾಣಲಿಂಗಾರ್ಚಕ ಭಾವ ಲಿಂಗಾರ್ಚಕರೆಂಬ ತ್ರಿವಿಧ ಉಪಾಂಗರಿರುವರೆಂದು ಹೇಳಿದ್ದಾರೆ. ಆದು ದರಿಂದ ಕೆಳಗೆ ಆ ಮೂರೂ ಲಿಂಗಗಳ ತೃಪ್ತಿಯ ಕ್ರಮವನ್ನು ಕೊಡ ಲಾಗಿದೆ.

ಹರನ ಪೂಜೆ!
ಶರಣ ಸೇವೆ !
ನಿರುತವೆಮಗೆ ಲಭಿಸುವ|
ವರವನಿತ್ತು ।
ಕರಣದಿಂದ ।
ಪೊರೆವುದಯ್ಯ ಶಂಕರ ॥ ೧ ॥

ಇದು ತಲ್ಪ ಷಟ್ಪದಿ. ಎಲ್ಲಕ್ಕೂ ಆದಿಯು ಷಟ್ಪದಿಯು. ಇದೇ ಇದರಲ್ಲಿ ಮೂರು ಮಾತ್ರೆಯುಗಣಗಳಿವೆ.

# ತ್ರಿವಿಧ ಲಿಂಗತೃಪ್ತಿಯು ಕ್ರಮವು.

| ಕ್ರಮಾಂಕ | ತತ್ವ ಸಂಬಂಧವಾದ | ಭಕ್ತನು | ವಿಷಯ ಪದಾರ್ಥವನ್ನು | ಮಂತ್ರಪೂರ್ವಕವಾಗಿ | | | | ಇಷ್ಟಲಿಂಗಸ್ಥ | | ವಿಶೇ[illegible] |
|---|---|---|---|---|---|---|---|---|---|---|
| | | | | ಏಕತ್ವ | ಬಹುತ್ವ | ಪ್ರಸಾದ | ಶಿವ ಪಂಚಾಕ್ಷರಿ | ಶಕ್ತಿ | ಲಿಂಗಕ್ಕೆ | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ |
| ೧ | ಪೃಥ್ವಿ (ಜಲಸಹ) | ತ್ಯಾಗಾಂಗ | ರೂಪ (ಆಕಾಶ) | ಓಂ | ಬಂ ಅಂ; ನಮಃ (ಅಂಗ) | ಹ್ರಾಂ | ನಮಃ ಶಿವಾಯ (೨) | ಅಹೋ ಹೃದಯಗತ | ಇಷ್ಟಕ್ರಿಯ | ಇಷ್ಟಲಿಂಗ ಮುಖದಲ್ಲಿಯೇ ಸಮರ್ಪಿಸಿ; ಆ ಲಿಂಗತೃಪ್ತಿಯಲ್ಲಿಯೇ ಭಕ್ತನು ತಾನೂ [illegible] |
| ೨ | ಅಗ್ನಿ (ವಾಯುಸಹ) | ಭೋಗಾಂಗ | ರುಚಿ ಸೊಗಸುತನ) | ಓಂ | ಸಂ ಉಂ ಶಿವ (ಲಿಂಗ) | ಹ್ರಾಂ | ನಮಃ ಶಿವಾಯ | ಮಧ್ಯ ಹೃದಯಗತ | ಪ್ರಾಣ | |
| ೩ | ಆಕಾಶ ಆತ್ಮತತ್ವಸಹ | ಯೋಗಾಂಗ | ತೃಪ್ತಿ (ಆನಂದ) | ಓಂ | ವಂ ಮಂ ಆಯ (ಸಂಗ) | ಹ್ರೌಂ | ನಮಃ ಶಿವಾಯ | ಊರ್ಧ್ವ ಹೃದಯಗತ | ಭಾವ | |

೧) ಸಂಗ= ಸಂಬಂಧ, ಏಕತ್ವ (೨) ನಮಃ ಶಿವಾಯ (ಅಂಗ ಲಿಂಗೈಕ್ಯ) = ತತ್ತ್ವಮಸಿ [ತತ್ ತ್ವಂ ಅಸಿ.

ತ್ವ ತತ್ ಅಸಿ ಅಂದರೆ ನೀನು ಅರಿವು (ಶಿವನು ಇರುತ್ತೀ)

# ಆಧ್ಯಾತ್ಮಿಕತೆಯೆಂದರೇನು ?

ಬರೆದವರು :— ಅನ್ನದಾನೀಶ್ವರ ವಿರಕ್ತಮಠ,

ಶಿಕ್ಷಕರು- ಶ್ರೀ ಬಸವೇಶ್ವರ ಟ್ರೇನಿಂಗ ಕಾಲೇಜ, ಬಾಗಲಕೋಟೆ.

(೧) ಆಧ್ಯಾತ್ಮಿಕತೆ :— ಆಧ್ಯಾತ್ಮಿಕತೆಯು ಅನುಭವಗಮ್ಯವೂ ಹೃದಯವೇದ್ಯವೂ, ಪರಿಪೂರ್ಣ ಭಾವಕ್ಕೆ ನಿಲುಕುವಂಥದೂ ಆಗಿರುತ್ತದೆ. ಸಾತ್ವಿಕ ತೇಜಸ್ಸುಳ್ಳ ಶರಣರು, ಶಿವಯೋಗಿಗಳು, ಮಹಾತ್ಮರು. ಆಧ್ಯಾತ್ಮಿಕತೆಯ ಮೂರ್ತಿಮಂತ ಪ್ರತಿನಿಧಿಗಳಾಗಿದ್ದರು. ಆಧ್ಯಾತ್ಮಿಕತೆಯು ಅಥವಾ ಪಾರಮಾರ್ಥಿಕತೆಯು ತೆರೆಯಡಗಿದ ಸಾಗರದಂತೆ, ಮೇಘವು ತೊಲಗಿದ ಆಕಾಶದಂತೆ, ಮರುತನಡಗಿದ ಸ್ಥಾನದಲ್ಲಿಯ ಸೊಡರಂತೆ ಪ್ರಶಾಂತ, ಗಂಭೀರ, ಮನೋಹರವಾಗಿರುತ್ತದೆ. ಆತ್ಮಸಂಯಮನ, ಶಿಸ್ತು, ಶಾಂತಿಗಳುಳ್ಳ ಮಾನವನಿಗೆ ಮಾತ್ರ ಆಧ್ಯಾತ್ಮಿಕತೆಯು ಅಳವಡುವದು. ಆಧ್ಯಾತ್ಮಿಕ ಮನುಷ್ಯನಲ್ಲಿ ಆತ್ಮಸಂಯಮನ, ಶಿಸ್ತು ಶಾಂತಿ ಮುಂತಾದ ದೈವೀಗುಣಗಳು ನೆಲೆಗೊಂಡಿರುತ್ತವೆ. ಭೇದಭಾವವು ನಾಶವಾಗಿ ಅಭೇದಭಾವವು ' ಸರ್ವಂ ಶಿವಮಯಂ ' ದೃಷ್ಟಿಯು ಸ್ಥಿರವಾದರೇನೇ ಪಾರಮಾರ್ಥಿಕತೆಯು ಪ್ರಕಾಶವಾಗುವದು. ' ಅಹಂ ಬ್ರಹ್ಮಾಸ್ಮಿ ' ಮತ್ತು ' ದಾಸೋಹಂ ' ಭಾವಗಳಿಗಿಂತಲೂ ' ಸರ್ವಂ ಶಿವಮಯಂ ಜಗತ್ ' ಭಾವವು ಹೆಚ್ಚು ಪರಿಪೂರ್ಣಭಾವವು. ಆದ್ದರಿಂದಲೇ ಶಕ್ತಿವಿಶಿಷ್ಟವಾದ ಅದ್ವೈತಕ್ಕೆ ಹೆಚ್ಚಿನ ಬೆಲೆಯಿದೆ ಶ್ರೀ ರಾಮಕೃಷ್ಣ ಪರಮಹಂಸರು ಶಕ್ತಿವಿಶಿಷ್ಟವಾದ ಅದ್ವೈತವನ್ನು ಅನುಭವಿಸಿದ್ದರು.

ಸದ್ದಿಲ್ಲದೆ ಸಹಜವಾಗಿ ಕಮಲವು ಅರಳಿ ಚೆಂದ ಕಾಣಿಸುವಂತೆ, ನಿರ್ಲೇಪವಾಗಿರುವಂತೆ, ಆಧ್ಯಾತ್ಮಿಕ ಸಾಧಕನ ಅಂತರಂಗವು ಅರಳಿ ಸುತ್ತಲೂ ಸೌಂದರ್ಯ ಸತ್ವ, ಭಾವಗಾಂಭೀರ್ಯಗಳನ್ನು ಹೊರಸೂಸುತ್ತದೆ. ಶರಣರು ವರ್ಣಿಸಿದ ಪ್ರಾಣಲಿಂಗಸ್ಥಲ ಅಥವಾ ಪ್ರಾಣಲಿಂಗಿಯಸ್ಥಲ ಇದೇ. ಆಧ್ಯಾತ್ಮಿಕ ಮನುಷ್ಯನು ಸಕಲ ಜೀವಾತ್ಮರಿಗೆ

ಲೇಸನೇ ಬಯಸುವನು. ' ಪ್ರಪಂಚದಲ್ಲಿದ್ದ ಪ್ರಪಂಚವನ್ನು ಶಿವಮಯ ಅಥವಾ ಮಂಗಲಮಯ ಮಾಡುತ್ತಾನೆ. ಆಧ್ಯಾತ್ಮಯೋಗಿಯು ಪ್ರೇಮ ಮತ್ತು ಐಕ್ಯಗಳ ಪ್ರತಿಬಿಂಬದಂತಿರುತ್ತಾನೆ. ದ್ವೇಷ ಮತ್ತು ಭೇದಗಳು ಸೈತಾನನ ಗುಣಗಳು. ಇಂಥ ಸೈತಾನೀಗುಣಗಳುಳ್ಳವರು ಜಗತ್ತಿನಲ್ಲಿ ಯುದ್ಧದ ಜ್ವಾಲೆಯನ್ನೂ, ದುಃಖವನ್ನೂ ಹರಡುತ್ತಾರೆ.

ಅಂತಃಕರಣದಿಂದ ಜಗತ್ತಿನ ದುಃಖವನ್ನು ಕಳೆಯಲಿಕ್ಕೆ ಯತ್ನಿಸುವ ಸ್ವಯಂಸೇವಕನು ಆಧ್ಯಾತ್ಮಿಕ ಯೋಗಿಯ ಉದಾಹರಣೆಯು. ಸತ್ವಗುಣದಿಂದ ಸ್ವಾತಂತ್ರ್ಯಯುದ್ಧದಲ್ಲಿ ಗೆದ್ದು ಭಾರತಕ್ಕೆ ಸ್ವಾತಂತ್ರ್ಯ ನಿತ್ತ ಪೂಜ್ಯಬಾಪೂಜಿಯವರು ಆಧ್ಯಾತ್ಮಯೋಗಿಗಳಾಗಿದ್ದರು. ವಿಶ್ವಾತ್ಮನೊಡನೆ ಸಮರಸಗೈಯುತ್ತ, ಪ್ರೇಮಕಾರುಣ್ಯಗಳನ್ನು ಸೂಸುತ್ತ ಮಾನವರಲ್ಲಿ ಸಮಾನತ್ವ, ಬಂಧುಭಾವ, ಸ್ವಾತಂತ್ರ್ಯಗಳನ್ನು ಸ್ಥಾಪಿಸಲಿಕ್ಕಾಗಿ ಪ್ರಾಣನೀಡಿದ ಜಗದಂಣ ಬಸವಂಣನು ಆಧ್ಯಾತ್ಮಯೋಗಿಯಾಗಿದ್ದನು. ಆಧ್ಯಾತ್ಮಯೋಗಿಗಳ ಮಾತುಗಳೇ ಪ್ರಮಾಣ ಧರ್ಮಗ್ರಂಥಗಳಾಗಿರುವದನ್ನು ನಾವು ಗಮನಿಸಿದರೆ ಧಾರ್ಮಿಕ ಕಲಹಗಳನ್ನು ನಾಶಮಾಡಬಹುದು.

( ೨ ) ಧಾರ್ಮಿಕ ಕಲಹಗಳೇಕೆ ? ಪ್ರತಿಯೊಬ್ಬ ಧರ್ಮಸ್ಥಾಪಕ ವಿಭೂತಿಯ ಪ್ರಮಾಣ ಧರ್ಮಗ್ರಂಥದಲ್ಲಿ ಶಾಶ್ವತವಾದ ಧರ್ಮ ಮತ್ತು ಆಯಾಯ ದೇಶ ಕಾಲಪರಿಸ್ಥಿತಿಗೆ ತಕ್ಕ ಮತಾಚಾರಗಳು ಹೇಳಲ್ಪಟ್ಟಿವೆ. ಮತಾಚಾರಗಳು ದೇಶ ಕಾಲ ಪರಿಸ್ಥಿತಿಗೆ ತಕ್ಕಂತೆ ಬದಲಾವಣೆ ಹೊಂದಲೇಬೇಕು. ಹಾಗೆ ಬದಲಾಗದಿದ್ದರೆ ಮತಾಂಧತೆಯೂ, ಮತಭ್ರಾಂತಿಯೂ ಉಂಟಾಗಿ ಔರಂಗಜೇಬನ ಹಿಂಸೆಯ ನಗ್ನ ನೃತ್ಯವು ರುದ್ರಸ್ವರೂಪ ತಾಳಿ ಶಾಂತಿಯ ಸಂಸ್ಕೃತಿಯ ನಾಗರಿಕತೆಯ ಪ್ರಳಯ ಸಂಭವಿಸಬಹುದು. ಆಧ್ಯಾತ್ಮಿಕ ಭಾವನೆ ಯಿಲ್ಲದ ಮತಾಚಾರಗಳು ನಿರ್ಗಂಧ ಕುಸುಮದಂತೆಯೇ ಸರಿ. ಆಧ್ಯಾತ್ಮಿಕತೆ ಮತ್ತು ಸ್ವಾತಂತ್ರ್ಯ ಇವು ಕೂಡಿಯೇ ಇರುತ್ತವೆ. ಮತಾಚಾರಗಳು ಆತ್ಮನಿಗೆ ವಿಧಿನಿಷೇಧಗಳೆಂಬ ಸಂಕೊಲೆಯನಿಕ್ಕಲಕ್ಕೆ ಒತ್ತಾಯಮಾಡುವದೇ ಧಾರ್ಮಿಕ ಕಲಹಗಳಿಗೆ ಬೀಜ. ಮತಾಂತರಗೊಳಿಸುವ ಭರದಲ್ಲಿ ವಿವೇಕಕ್ಕೆ ಸಲ್ಲದಂತೆ ವರ್ತಿಸುವದೇ ದ್ವೇಷದ ಉಗಮಸ್ಥಾನವು. ಮತಾಂಧತೆ ಮತಭ್ರಾಂತಿಗಳಿಗೆ

ಸನಾತನಿಗಳು ಅಂದರೆ ವಿಮರ್ಶಕ ಶಕ್ತಿಯಿಲ್ಲದ ಹಟಮಾರಿಗಳು ಕೂಡಲೇ ಬಲಿಬೀಳುತ್ತಾರೆ. ಸನಾತನಿಗಳ ಮತಾಂಧತೆಯು ದೇಶದ ಸ್ವಾತಂತ್ರ್ಯ ವನ್ನು ಮಣ್ಣುಗೂಡಿಸಬಹುದು. ಪ್ರತಿಯೊಂದು ಧರ್ಮದ ಮನುಷ್ಯನು ಆಧ್ಯಾತ್ಮಿಕತೆಗೆ ಪ್ರಾಧಾನ್ಯತೆಯನ್ನಿತ್ತು ನಡೆಯಹತ್ತಿದರೆ ಮತಾಚಾರಗಳಲ್ಲಿ ಬದಲಾವಣೆ ತಾನೇ ಆಗುತ್ತವೆ. ಯೋಗ್ಯವು ಉಳಿಯುತ್ತವೆ. ಅಯೋಗ್ಯ ವಾದದ್ದು ಅಳಿಯುತ್ತದೆ.

(೩) ಮೂಢಭಕ್ತಿ ಅಳಿಯಲಿ!:- ಶ್ರದ್ಧಾಭಕ್ತಿಯು ವಿದ್ಯುಚ್ಛಕ್ತಿ ಯಂತೆ ಸ್ಫುರಣೆಯನ್ನು ಸ್ಫುರಿಸುತ್ತದೆ. ಮೂಢಭಕ್ತಿಯು ಕರ್ಮಠತನದ ಕತ್ತಲೆಯಲ್ಲಿ ಸಿಲುಕಿಸಿ ತೊಳಲಾಟಕ್ಕೆ ಕಾರಣವಾಗುತ್ತದೆ. ಭಾರತದಲ್ಲಿ ರುವ ನಾನಾ ಮೂರ್ತಿಗಳು (ದೇವರ ಮೂರ್ತಿಗಳು) ಜನರಲ್ಲಿ ಕಾಮ್ಯ ಕರ್ಮವನ್ನೇ ಪ್ರೇರೇಪಿಸುತ್ತವೆ. ನಿಷ್ಕಾಮ ಕರ್ಮವು, ಅಲ್ಲಲ್ಲ ! ನಿಷ್ಕಾಮ ಕ್ರಿಯೆಯು ಆಧ್ಯಾತ್ಮಿಕ ಭಾವನೆಯ ಬಾಹ್ಯ ಶರೀರವು. ಲಿಂಗಾಂಗಿಗಳ ಇಷ್ಟಲಿಂಗವು ನಿಷ್ಕಾಮ ಕ್ರಿಯೆಯ ಸೂಚಕವಾಗಿರುವದರಿಂದಲೂ, ಅದು ಬ್ರಹ್ಮರಂಧ್ರದ ಚಿತ್ಕಲಾ ಚೈತನ್ಯವೇ ಆಗಿದೆಯೆಂದು ತತ್ವವಿರುವದರಿಂದಲೂ ಅದು ತೀರ್ಥ ಕ್ಷೇತ್ರಗಳ ತೊಳಲಾಟವನ್ನು ತಪ್ಪಿಸಿ, ನಾನಾ ಮೂರ್ತಿ ಗಳನ್ನು ತ್ಯಜಿಸಲಿಕ್ಕೆ ಬೋಧಿಸುವದರಿಂದಲೂ ಗುಡಿಗಳಿಗೆ ಖರ್ಚಾಗುವ ಹಣ, ಕಾಲ, ಶಕ್ತಿಗಳನ್ನು ಅದು ತಡೆಯುವದರಿಂದಲೂ, ವ್ಯಕ್ತಿಯ ಆಧ್ಯಾತ್ಮಿಕ ಪ್ರಗತಿ ವಿಕಾಸಗಳಿಗೆ ಸಾಧನವಾಗಿಯೇ ಇದೆ ಆದರೆ ತತ್ವ ಜ್ಞಾನವಿಲ್ಲದೆ ಮೂಢಭಕ್ತಿಯಿಂದ ಕಾಮನಾಪೂರ್ತಿಗಾಗಿ ಇಷ್ಟಲಿಂಗವೇ ಸರ್ವಸ್ವವೆಂದು ತಿಳಿದು ಅಂತರಂಗದ ಪ್ರಾಣಲಿಂಗ ಧ್ಯಾನವಿಲ್ಲದೆ ಭಾವ ಪರಿಪೂರ್ಣವಾಗಲಾರದು. ಆಧ್ಯಾತ್ಮಿಕತೆಯನ್ನು ಅಂಗಾಂಗಗಳಲ್ಲಿ ಹೊರ ಸೂಸಲಿಕ್ಕೆ ಸಾಧನವಾದರೆ ಬೇಕಾದ ಮೂರ್ತಿಗಳು ಇರಲಿ. ಇಲ್ಲವಾದರೆ ಎಲ್ಲ ಮೂರ್ತಿಗಳು ಅಳಿಯಲಿ. ಮುಖ್ಯವಾಗಿ ಆಧ್ಯಾತ್ಮಿಕತೆಯಿಂದ ಎಲ್ಲ ಕಾರ್ಯಗಳು ಸಾಗಲಿ; ಅಂದರೇನೇ ಜಗದಲ್ಲಿ ಶಾಂತಿ ತುಷ್ಟಿ ಪುಷ್ಟಿಗಳು ಅಭಿವೃದ್ಧಿಯಾಗುತ್ತವೆ.

# ಶ್ರೀ. ಅರವಿಂದರು ಅವತಾರ ಪುರುಷರು.

ಲೇಖಕಃ-- ಶ್ರೀ. ಸ. ಚ. ಮಿರ್ಜಿ ಸಂಪಾದಕ

" ಉದಯ " ವಿಜಾಪೂರ.

" ಶಿವಾನುಭವ " ಮಾಸಪತ್ರಿಕೆಯ ಸಂಪಾದಕರಾದ ರಾ. ಬ. ಫ. ಗು. ಹಳಕಟ್ಟಿಯವರು ನನಗೆ ಶ್ರೀ. ಅರವಿಂದರ ವಿಷಯವಾಗಿ ಬರೆಯಲು ಬಿನ್ನವಿಸಿಕೊಂಡ ಮೇರೆಗೆ ಈ ಬರಹವನ್ನು ಬರೆಯಲಾಗಿದೆ. ಈ ಲೇಖದಲ್ಲಿ ಶ್ರೀ. ಅರವಿಂದರನ್ನು ನಾನು ತಿಳಿದುಕೊಂಡಂತೆ ಚಿತ್ರಿಸಿರುವೆನು. ಸರಿಯಾಗಿದ್ದುದು ಶ್ರೀ. ಅರವಿಂದರ ವಿಚಾರವೆಂದು ತಪ್ಪಿದ್ದರೆ ನನ್ನದೆಂದು ವಾಚಕರು ಅರಿಯ ಬೇಕೆಂದು ಬಿನ್ನವಿಸಿಕೊಳ್ಳುವೆನು.

— ಲೇಖಕ

ಜಗತ್ತಿನಲ್ಲಿ ಯಾವಾಗ್ಗೆ ಧರ್ಮದ ಗ್ಲಾನಿಯು ಕಂಡುಬರುವದು ಆಗ ಅದನ್ನು ಪುನಃ ಸ್ಥಾಪಿಸುವದಕ್ಕಾಗಿ ಪರಮಾತ್ಮನು ಅವತರಿಸುವನೆಂದು ಭಾರತೀಯರಾದ ನಮಗೆ ಬಲವಾದ ವಿಶ್ವಾಸವಿರುವದು. ಈ ಮಾತನ್ನು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಜಗತ್ತಿಗೆ ಘಂಟಾ ಘೋಷವಾಗಿ ಸಾರಿರುವದು ಸರ್ವರೂ ಅರಿತ ವಿಷಯವಾಗಿರುವದು.

ಈ ಮಾತಿನ ಸತ್ಯತೆಯನ್ನು ಸಿದ್ಧಮಾಡಿ ತೋರಿಸುವದಕ್ಕಾಗಿ ಬುದ್ಧದೇವ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಮತ್ತು ಬಸವಣ್ಣನವರು ಭಾರತದಲ್ಲಿ ಜನ್ಮವೆತ್ತಿ ಭೂಮಂಡಲಕ್ಕೆಲ್ಲ ಬೆಳಕು ಬೀರಿ ಬಯಲಾಗಿರುವರು.

ಇವರೆಲ್ಲರೂ ಗತಿಸಿ ಎಷ್ಟೋ ವರುಷಗಳಾದನಂತರ ಭಾರತದ ಆಧ್ಯಾತ್ಮಿಕ ಪ್ರಭೆಯು ಮಸುಮಸಕಾಗಹತ್ತಿತು. ಇದನ್ನು ಪುನಃ ಪ್ರಕಾ

ಶಮಯವನ್ನಾಗಿ ಮಾಡಲು ಶ್ರಿ ರಾಮಕೃಷ್ಣ ಪರಮಹಂಸರು, ಶ್ರೀ ಸ್ವಾಮಿ ವಿವೇಕಾನಂದರು, ಶ್ರೀ ರಾಮತೀರ್ಥರು ಮೊದಲಾದವರು ಇದೇ ಇಪ್ಪತ್ತನೇ ಶತಮಾನದಲ್ಲಿ ಆಗಿ ಹೋದರು. ಇವರ ನಂತರ ಈ ವಿಷಯವಾಗಿ ಹೆಣಗಾಡಿದ ಮಹಾವ್ಯಕ್ತಿಗಳೆಂದರೆ ಶ್ರೀ ರಮಣಮಹರ್ಷಿಗಳು ಮತ್ತು ಶ್ರೀ. ಅರವಿಂದರು ಎಂದು ಹೇಳಬಹುದು.

ತೀರ ಇತ್ತೀಚಿನವರಾದ ಮೊನ್ನೆ ಮೊನ್ನಿನವರೆಗೆ ಜಗತ್ತಿಗೆ ಮಾರ್ಗದರ್ಶನ ಮಾಡಲು ಪಾಂಡೀಚೇರಿಯೊಳಗೆ ಜಗತ್ತಿನಲ್ಲಿಯೇ ಅದ್ವಿತೀಯವಾದ ಆಶ್ರಮವನ್ನು ಸ್ಥಾಪಿಸಿ ಅದರ ಮೂಲಕ ಶ್ರೀ. ಅರವಿಂದರು ಜಗತ್ತಿಗೆ ಬೀರಿದ ಸಂದೇಶಗಳು ಅಜರಾಮರವಾಗಿ ಉಳಿಯುವವೆಂಬುದರಲ್ಲಿ ಯಾವ ಸಂದೇಹವಿಲ್ಲ ಇಂದು ಶ್ರೀ. ಅರವಿಂದರು ತಮ್ಮ ಭೌತಿಕ ಶರೀರವನ್ನು ತ್ಯಾಗಮಾಡಿದ್ದರೂ ಅವರ ಆತ್ಮಿಕ ಶಕ್ತಿಯು ಸದಾವ ಕಾಲದಲ್ಲಿ ನಮ್ಮೊಡನೆ ಇರುವದೆಂಬುವನ್ನು ಎಲ್ಲರೂ ಅರಿತು ಆಚರಿಸುವದು ಅತ್ಯವಶ್ಯವಾಗಿದೆ.

ಶ್ರೀ ಅರವಿಂದರು ತಮ್ಮ ಭೌತಿಕ ಶರೀರವನ್ನು ಬಿಟ್ಟು ಹೋಗಿದ್ದರೂ ಭೂತಲದಲ್ಲಿ ಅವರ ಕಾರ್ಯವನ್ನು ಭದ್ರಪಡಿಸಲು ಶ್ರೀ. ತಾಯಿಯವರು ನಮಗಾಗಿ ಪಾಂಡೀಚೇರಿಯಲ್ಲಿ ಕಾದು ನಿಂತಿರುವರು. ಇಂದಿನ ಸಮಸ್ಯೆಗಳನ್ನು ಬಗೆ ಹರೆಯಿಸಿ ಮುಂದಿನ ಮಾರ್ಗ ಸುಗಮ ಮಾಡಲು ಅವರು ಸರ್ವ ರೀತಿ ಸಮರ್ಥರಿರುವರೆಂಬುದರಲ್ಲಿ ಯಾವ ಸಂದೇಹವಿಲ್ಲ. ಆದರೆ ಸದ್ಯದ ಬುದ್ಧಿ ಜೀವಿಗಳು ಬೇಗ ಅವರ ನಿಲುಮೆಯನ್ನರಿತು ನಡೆಯುವದು ಲೇಸು.

ಈ ಜಗತ್ತನ್ನು ಪರಿಪಾಲನ ಮಾಡತಕ್ಕವರು ಶಿವ-ಶಕ್ತಿಯರಾಗಿರುವರೆಂಬದನ್ನು ಭಾರತೀಯರಾದ ನಮಗೆ ಪುನಃ ಬಿಚ್ಚಿ ಹೇಳಬೇಕಾಗಿಲ್ಲ. ಈ ಮಾತಿನ ಸತ್ಯೆಯು ಪ್ರತಿಯೊಬ್ಬ ಭಾರತೀಯನ ನರ, ನಾಡಿಗಳಲ್ಲಿ ನೆಲೆಯಾಗಿ ನಿಂತಿರುವದು. ಆ ಶಿವ-ಶಕ್ತಿಯರೇ ಇಂದಿನ ಶ್ರೀ. ಅರವಿಂದ. ಶ್ರೀ. ಮಾತೆಯರ ಮೂರ್ತಸ್ವರೂಪ. ಆದರೆ ಈ ಮಾತಿನ ಮಹತಿಯನ್ನು ಮನಗಂಡವರು ಮಾತ್ರ ವಿರಳ.

ಶ್ರೀ. ಅರವಿಂದರು ತಮ್ಮ ಯೋಗದ ಪೂರ್ಣ ಸಿದ್ಧಿಯನ್ನು ಪಡೆದುದು ೧೯೨೬ ನೇ ಇಸ್ವಿಯ ನವ್ಹಂಬರ ೨೪ ನೇ ತಾರೀಖು. ಅಂದಿನಿಂದ ಅವರು ಜಗತ್ತಿನ ಆಗುಹೋಗುಗಳನ್ನು ದೃಷ್ಟಾಪುರುಷರಾಗಿ ನೋಡುತ್ತ ಕುಳಿತಿದ್ದರು. ಆದರೂ ಅವರು ಜಗತ್ತಿನ ಸ್ಥಿತ್ಯಂತರದ ಮಹತ್ವದ ಸಮಯದಲ್ಲಿ ತಮ್ಮ ಸಂದೇಶಗಳನ್ನು ಬೀರಿ ಬೆಳಕು ತೋರುತ್ತಿದ್ದರು. ಆದರೆ ಅವರ ಕಾರ್ಯವನ್ನು ಕಾರ್ಯರೂಪದಲ್ಲಿಳಿಸುವ ಮಹಾಶಕ್ತಿಶಾಲಿನಿಯರಾದವರು ಶ್ರೀ. ಮಹಾತಾಯಿಯವರು ಮಾತ್ರ ಆಗಿರುವರು.

ಶ್ರೀ. ಅರವಿಂದರು ತಮ್ಮ ಸಿದ್ಧಿಯ ೨೪ ವರುಷದ ನಂತರ ೧೯೫೦ ನವ್ಹಂಬರ ೨೪ ನೇ ತಾರೀಖಿಗೆ ತಮ್ಮ ಅವತಾರದ ಸಾರಸ್ವರೂಪವನ್ನು ಎರಡು ಮಾತುಗಳಲ್ಲಿ ಜಗತ್ತಿಗೆ ಸಾರಿದರು. ಆ ಮಾತನ್ನು ಸಿದ್ಧಿಸುವದಕ್ಕಾಗಿಯೇ ಅವರ ಅವತಾರವಾಗಿತ್ತು. ಅವರು ತಮ್ಮ ಜೀವಮಾನದಲ್ಲಿ ಹೆಣಗಾಡಿದ್ದು ಅದಕ್ಕಾಗಿ. ಆ ಮಹಾವಾಕ್ಯಗಳನ್ನು ನಮ್ಮ ಜನರು ಮನನ ಮಾಡಿಕೊಳ್ಳಲೆಂದು ನನ್ನ ಮಹತ್ವಾಕಾಂಕ್ಷೆಯಾಗಿದೆ.

ಶ್ರೀ. ಅರವಿಂದರು ಹೇಳಿದ ಮುಖ್ಯ ಮಾತುಗಳು ಇಂತಿವೆ:—

" ಅತಿಮಾನಸವು ಸತ್ಯವಾಗಿದೆ; ಹಾಗೂ ಅದರ ಅವತರಣವು ವಸ್ತುತಃ ಅನಿವಾರ್ಯವಿದೆ " - ಶ್ರೀ. ಅರವಿಂದರು.

ಶ್ರೀ. ಅರವಿಂದರ ವಿಷಯದಲ್ಲಿ ಈ ವರೆಗೆ ಬರೆದುದು ಪೂರ್ವಪೀಠಿಕೆಯೆಂದು ಹೇಳಬಹುದು. ಆದರೆ " ಶಿವಾನುಭವದ " ಸಂಪಾದಕರಾದ ರಾ. ಬ. ಫ. ಗು. ಹಳಕಟ್ಟಿ ಯವರು ಶಿವಶರಣರ ಶಿವಾನುಭವಕ್ಕೆ ಶ್ರೀ. ಅರವಿಂದರ ವಿಚಾರಗಳನ್ನು ಹೋಲಿಸಿ ಬರೆಯಲು ನನಗೆ ಬಿನ್ನವಿಸಿಕೊಂಡದ್ದರಿಂದ ಆ ದೃಷ್ಟಿಯಿಂದ ನಾಲ್ಕು ಮಾತುಗಳನ್ನು ಬರೆಯಬೇಕಾಗಿದೆ.

ಹಿಂದಕ್ಕೆ ಕಲ್ಯಾಣ ಪಟ್ಟಣದಲ್ಲಿ ಅಲ್ಲಮಪ್ರಭು, ಬಸವಣ್ಣನವರು, ಚನ್ನಬಸವಣ್ಣನವರು ಮತ್ತು ಅಕ್ಕಮಹಾದೇವಿ ಮೊದಲಾದವರು ತಮ್ಮ ಜೀವನವನ್ನು ಆಧ್ಯಾತ್ಮಕ್ಕಾಗಿ ಮೀಸಲಿಟ್ಟರೂ ಅವರು ಸಂಸಾರವನ್ನು

ಸುಂದರಮಯವಾಗಿ ಹೇಗೆ ಮೇಳೈಸಿಕೊಂಡು ಹೋದರೆಂಬುದು ಮಹತ್ವದ ಮಾತಾಗಿದೆ. ಅವರು ತಮ್ಮ ನಡೆ, ನುಡಿಗಳಲ್ಲಿ ಈ ಮಾತನ್ನು ಸತ್ಯಮಾಡಿ ತೋರಿಸಿದರು. ಅದರಂತೆ ಶ್ರೀ. ಅರವಿಂದರು ಆಧ್ಯಾತ್ಮಿಕ ಮಹಾಪುರುಷರಾಗಿದ್ದರೂ ಇಂದಿನ ಜಗತ್ತಿನ ಆಗುಹೋಗುಗಳಿಗೆ ನಿಕಟವಾಗಿ ಸಂಬಂಧವನ್ನಿಟ್ಟುಕೊಂಡು ನಡೆದುಕೊಳ್ಳುತ್ತಿದ್ದರೆಂಬುದು ಅವರನ್ನು ಚನ್ನಾಗಿ ಅರಿತವರಿಗೆಲ್ಲ ಮನಗಂಡ ಮಾತಾಗಿದೆ.

ಶ್ರೀ. ಅರವಿಂದರ ಆಶ್ರಮವು ಜಗತ್ತಿನ ಆಧ್ಯಾತ್ಮಿಕದ ಕೇಂದ್ರ ಸ್ಥಲವಾಗಿದ್ದರೂ ಜಗತ್ತಿನಲ್ಲಿ ನಡೆಯತಕ್ಕ ಸರ್ವ ಕೆಲಸಗಳು ಅಲ್ಲಿ ಪೂರ್ಣತ್ವ ಸ್ವರೂಪದಿಂದ ಸಾಗುತ್ತವೆಂಬುದು ಆ ಆಶ್ರಮವನ್ನು ಪ್ರತ್ಯಕ್ಷ ಸಂದರ್ಶಿಸಿದವರಿಗೆ ಬೇರೆ ಹೇಳಬೇಕು, ಹೀಗೇನಿಲ್ಲ. ಅಲ್ಲಿಯ ವಿವಿಧಭಾಷೆಗಳಲ್ಲಿಯ ಗ್ರಂಥಬರಹ, ಪ್ರಕಾಶನ, ಪುಸ್ತಕಾಲಯ, ವಾಸ್ತುಶಿಲ್ಪ, ಕೃಷಿ, ನೇಯಿಗೆ, ಹೊಲಿಗೆ, ಡೇರಿ, ಶಿಕ್ಷಣ, ಚಿತ್ರಕಲೆ, ಆಟ ನೋಟ ಮನರಂಜನೆ, ಅಡಿಗೆ, ಆರೋಗ್ಯ ಮೊದಲಾದ ಕೆಲಸಗಳು ಎಷ್ಟು ಅಚ್ಚುಕಟ್ಟಾಗಿ ಸದ್ದಿಲ್ಲದೆ ಸಾಗುತ್ತಿರುವವೆಂಬುದನ್ನು ನೋಡಿ ಅಚ್ಚರಿಯಾಗದಿರದು. ಇದಕ್ಕೆಲ್ಲ ಶ್ರೀ. ಮಾತೆಯವರು ಸೂತ್ರ ಚಾಲಿಕೆಯರಾಗಿರ್ರುವರು. ಶ್ರೀ ಅರವಿಂದ ಆಶ್ರಮದಲ್ಲಿ ಶ್ರೀ. ಮಾತೆಯವರ ಹೊರತಾಗಿ ಯಾವ ಕಾರ್ಯವೂ ನಡೆಯುವದಿಲ್ಲ. ಪ್ರತಿಯೊಂದರಲ್ಲಿಯೂ ಅವರ ಸಾನ್ನಿಧ್ಯವು ಸ್ಪಷ್ಟವಾಗಿ ಎದ್ದು ಕಾಣುತ್ತಿರುವದು.

ಆಧ್ಯಾತ್ಮಿಕ ವ್ಯಕ್ತಿಗಳೆಂದರೆ ಯಾವ ಕೆಲಸ ಮಾಡಬಾರದೆಂಬ ತಪ್ಪು ತಿಳುವಳಿಕೆಯು ನಮ್ಮ ಜನರಲ್ಲಿ ಇನ್ನೂ ಅಚ್ಚಳಿಯದೆ ಉಳಿದಿದೆ. ಈ ಮಾತನ್ನು ಅಲ್ಲಗಳೆಯುವದೇ ಪಾಂಡಿಚೇರಿ ಶ್ರೀ ಅರವಿಂದ ಆಶ್ರಮದ ಅಸ್ತಿತ್ವ ಇರುವದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಹಿಂದಿನ ಶರಣರು ಕಾಯಕಕ್ಕೆ ಎಷ್ಟು ಮಹತ್ವವನ್ನು ಕೊಟ್ಟಿದ್ದರೋ ಅಷ್ಟೇ ಮಹತ್ವವನ್ನು ಶ್ರೀ ಅರವಿಂದರ ಆಶ್ರಮದಲ್ಲಿ ಕೊಡಲಾಗಿರುವದೆಂಬುದು ಮಹತ್ವದ ಮಾತಾಗಿದೆ.

ಇಷ್ಟೆಲ್ಲ ಕೆಲಸಗಳನ್ನು ಮಾಡುತ್ತಿದ್ದರೂ ಅಲ್ಲಿಯ ಸುಮಾರು ೮೦೦ ಸಾಧಕರ ದೃಷ್ಟಿಯೆಲ್ಲ ಶ್ರೀ ಅರವಿಂದರ ಮತ್ತು ಶ್ರೀ ಮಾತೆಯವರ

ಕಡೆಗೆ. ಯಾಕೆಂದರೆ ಇವರೆಲ್ಲರೂ ಪೂರ್ಣವಾಗಿ ಶ್ರೀ ಅರವಿಂದರಿಗೆ ಮತ್ತು ಮಾತೆಯವರಿಗೆ ಸಮರ್ಪಣವನ್ನು ಮಾಡಿರುವರು. ಆಶ್ರಮದಲ್ಲಿ ಸಮರ್ಪಣಕ್ಕೆ ಅಷ್ಟು ಮಹತ್ವವನ್ನು ಕೊಡಲಾಗಿರುವದು. ಆಧ್ಯಾತ್ಮದ ತಳಹದಿಗೆ ಸಂಪೂರ್ಣ ದೇವರಿಗೆ ಶರಣುಹೋಗುವದೇ ಮಹತ್ವದ ಮಾತೆಂದು ಶ್ರೀ ಅರವಿಂದರು ತಮ್ಮ ಪ್ರತಿಯೊಂದು ಗ್ರಂಥದಲ್ಲಿ ಜಗತ್ತಿಗೆ ಸಾರಿ ಹೇಳಿರುವರು. ಹಿಂದಿನ ನಮ್ಮ ಶರಣರಾದರೂ ಶಿವಾರ್ಪಣಕ್ಕೆ ಅಷ್ಟು ಮಹತ್ವವನ್ನು ಕೊಟ್ಟಿದ್ದರು. ಮತ್ತು ಅವರು ಎಲ್ಲ ಕೆಲಸ ಗಳನ್ನು ಶಿವಾರ್ಪಣ ಬುದ್ಧಿಯಿಂದಲೇ ಮಾಡುತ್ತಿದ್ದರು.

ಶ್ರೀ ಅರವಿಂದರು "ನಾವು ದೇವರಿಗೆ ಸಂಪೂರ್ಣ ಸಮರ್ಪಣ ವನ್ನು ಮಾಡಿ ಆತನ ಮೂಲಕ ಕಾರ್ಯವಾಗುವಂತೆ ಅವಕಾಶ ಕೊಡು ವದು ಅವಶ್ಯವಾಗಿದೆ. ಹಾಗೆ ಮಾಡುವದರಿಂದ ನಮ್ಮ ಬಲದಿಂದ ಮಾಡುವ ಕೆಲಸಕ್ಕಿಂತ ನೂರಾರುಪಟ್ಟು ಕೆಲಸವಾಗುವದು. ಮತ್ತು ಅದು ಒತ್ತರದಿಂದ ಸಾಗುವದು" ಎಂದು ಅಂದಿರುವರು ಹಿಂದಿನ ನಮ್ಮ ಶರಣರಾದರೂ ಶಿವನ ಶಕ್ತಿಯೇ ನಮ್ಮಲ್ಲಿ ಬಂದು ಕಾರ್ಯವನ್ನು ಎಸಗ ಲೆಂದು ಖಂಡಿತವಾಗಿ ನಂಬಿಕೊಂಡು ಅದರಂತೆ ನಡೆದು ತೋರಿಸಿದರು.

ಶ್ರೀ ಅರವಿಂದರು ಶಿವ ಮತ್ತು ಶಕ್ತಿಗಳು ಬೇರೆ ಬೇರೆಯಾಗಿರದೆ ಒಂದೇಯಾಗಿವೆಯೆಂದು ಸಾರಿರುವರು. ಹಿಂದಿನ ನಮ್ಮ ಶರಣರಾದರೂ ಈ ಮಾತನ್ನು ಸತ್ಯವಾಗಿ ನಂಬಿ ತಮ್ಮ ನಡೆನುಡಿಗಳಿಂದ ನಾಡಿಗೆಲ್ಲ ಬೀರಿದರು. ಇದರಮೇಲಿಂದ ನಮ್ಮ ಶರಣರ ಹೇಳಿಕೆಗೂ ಶ್ರೀ ಅರ ವಿಂದರ ಹೇಳಿಕೆಗೂ ಯಾವ ವ್ಯತ್ಯಾಸವಿಲ್ಲೆಂಬುದು ಸ್ಪಷ್ಟವು.

ಹಿಂದಕ್ಕೆ ಶ್ರೀ ಶಂಕರಾಚಾರ್ಯರು ಜಗತ್ತಿಗೆ ಮಾಯೆ ಯೆಂದು ಹೇಳಿಬಿಟ್ಟರು. ಆದರೆ ವೀರಶೈವ ತತ್ವಜ್ಞಾನಿಗಳಾದ ಶರಣರು ಜಗತ್ತು ಮಾಯೆಯಲ್ಲ, ಅದು ಚಿತ್ ಶಕ್ತಿಯ ಲೀಲೆ ಎಂದು ಕರೆದರು ಶ್ರೀ ಅರ ವಿಂದರಾದರೂ ಜಗತ್ತಿಗೆ ಮಾಯೆ ಅನ್ನದೆ ಅದು ಚಿತ್ ಶಕ್ತಿಯ ಲೀಲೆ ಯಾಗಿದೆ ಎಂಬುದಾಗಿ ಸಂಸಾರಕ್ಕೆಲ್ಲ ಸಾರಿ ಹೇಳಿರುವರು. ಮತ್ತು ಜಗತ್ತು ಪರಮಾತ್ಮನ ವ್ಯಕ್ತ ಸ್ವರೂಪವಾಗಿದೆ. ಆದುದರಿಂದ ಪರಮಾ

ತ್ಮನಿಗೂ ಜಗತ್ತಿಗೂ ಯಾವ ಭಿನ್ನತೆಯಿಲ್ಲ ಎಂಬ ಮಾತನ್ನು ಶ್ರೀ ಅರವಿಂದರು ಸ್ಪಷ್ಟಪಡಿಸಿರುವರು.

ಶ್ರೀ ಅರವಿಂದ ಆಶ್ರಮದಲ್ಲಿ ಭಾರತದ ಎಲ್ಲ ಪ್ರಾಂತಗಳಿಂದ ಬಂದವರು ಬೇರೆ ದೇಶಗಳಿಂದ ಬಂದವರು ವಾಸಿಸುತ್ತಿದ್ದರೂ ಎಲ್ಲರೂ ಸರಿಸಮಾನತೆಯಿಂದ ವರ್ತಿಸುತ್ತಿರುವರು. ಇನ್ನು ಆಶ್ರಮದಲ್ಲಿ ಹಲವು ಮಹಿಳೆಯರು ಇರುವರು. ಅವರಿಗಾದರೂ ಪುರುಷರಿಗಿರುವಷ್ಟೇ ಸರ್ವ ಸವಲತ್ತುಗಳನ್ನು ಸಮಾನತೆಯನ್ನು ಕೊಡಲಾಗಿರುವದು. ಪ್ರತಿಯೊಬ್ಬರ ಕೆಲಸಗಳು ಭಿನ್ನ ಭಿನ್ನವಾಗಿದ್ದರೂ ಅದರಮೇಲಿಂದ ಅವರು ಹೆಚ್ಚು ಕಡಿಮೆಯೆಂದು ತಿಳಿದುಕೊಳ್ಳಲಾಗುವದಿಲ್ಲ. ಆಶ್ರಮದಲ್ಲಿಯ ಮುಖ್ಯ ಸೆಕ್ರೆಟರಿಗಳಾದ ಶ್ರೀ ನಲಿನಿಯವರೂ ಆಶ್ರಮದ ಬಾಲ ಬಾಲಿಕೆಯರೂ ಕೂಡ ಒಂದೇ ಕಟ್ಟೆಗೊಳಗಾಗಿ ಸದಾ ಸಂತೋಷದಲ್ಲಿ ಶಾಂತಿ ಸಮಾನತೆಯಿಂದ ವರ್ತಿಸುವದನ್ನು ನೋಡಿ ಅಚ್ಚರಿಯೆನಿಸದಿರದು. ಆ ದೃಶ್ಯವನ್ನು ಚಿಕ್ಕ ಲೇಖದಲ್ಲಿ ಚಿತ್ರಿಸುವದು ಎಂತು ಸಾಧ್ಯವು ?

ನಮ್ಮ ಹಿಂದಿನ ಶಿವಶರಣರಾದರೂ ಸರ್ವರಿಗೂ ಸಮಾನತೆಯನ್ನು ಕೊಟ್ಟಿದ್ದರು. ಮೇಲು ಕೀಳು ಎಂಬುವದಕ್ಕೆ ಅವರು ಅವಕಾಶವನ್ನೆ ಕೊಟ್ಟಿದ್ದಿಲ್ಲ. ಪುರುಷರಂತೆ ಸ್ತ್ರೀಯರಿಗೂ ಎಲ್ಲ ವಿಧದಲ್ಲೂ ಸಮಾನತೆಯನ್ನು ಕೊಡಮಾಡಿದ್ದರು. ಇದರಮೇಲಿಂದ ಶ್ರೀ ಅರವಿಂದರ ವಿಚಾರಗಳಿಗೂ ಶ್ರೀ ಶಿವಶರಣರ ವಿಚಾರಗಳಿಗೂ ಹೇಗೆ ಮೇಳಗೂಡುವದೆಂಬುದು ಇದರಿಂದ ವ್ಯಕ್ತವಾಗುವಂತಿದೆ.

ಇನ್ನು ಕೊನೆಯದಾಗಿ ಹೇಳತಕ್ಕ ಮಾತೆಂದರೆ ಹಿಂದಿನ ಆಧ್ಯಾತ್ಮಿಕ ಮಹಾಪುರುಷರೆಲ್ಲರೂ ತಮ್ಮ ಆತ್ಮಿಕ ಶಕ್ತಿಯನ್ನ ಪರಮಾತ್ಮ ಶಕ್ತಿಯಲ್ಲಿ ಸಮರಸ ಮಾಡುವದೇ ಕೊನೆಯ ಗುರಿಯೆಂದು ನಂಬಿದ್ದರು ಆದರೆ ಶ್ರೀ ಅರವಿಂದರ ಅವತಾರದ ಮೂಲ ಉದ್ದೇಶವು ಮಾತ್ರ ಇದಕ್ಕೆ ತೀರ ಭಿನ್ನವಾಗಿರುತ್ತದೆಂದು ನನ್ನ ಭಾವನೆ. ಯಾಕಂದರೆ ಶ್ರೀ ಅರವಿಂದರು ಪರಮಾತ್ಮ ಶಕ್ತಿಯನ್ನೇ ನಮ್ಮ ಆತ್ಮ ಶಕ್ತಿಯಲ್ಲಿಳಿಸಿ ಇದನ್ನೇ ಪರಿಪೂರ್ಣಗೊಳಿಸುವದಾಗಿತ್ತು. ಇದರಿಂದಲೇ ಇಂದಿನ ಮಾನವ ಜನಾಂಗವನ್ನು ಮುತ್ತಿದ ದುಃಖ, ತಾಪತ್ರಯ, ಮರಣ ಮುಂತಾದವುಗಳಿಂದ ಅವರನ್ನು ಮುಕ್ತರನ್ನಾಗಿ ಮಾಡುವದಾಗಿತ್ತು

ಈ ಮಹಾ ಕಾರ್ಯದ ಪೂರ್ವ ಪೀಠಿಕೆಯನ್ನು ಶ್ರೀ ಅರವಿಂದರು ಹಾಕಿರುವರು. ಅದರ ಮೇಲೆ ಮಹಾ ಮಂದಿರ ರಚಿಸುವ ಕಾರ್ಯವು ಶ್ರೀ ಮಹಾಮಾತೆಯುವರದಾಗಿರುವದು. ಇಂದಿಲ್ಲ ನಾಳೆ ಈ ಮಂದಿರವು ಮೂರ್ತ ಸ್ವರೂಪ ಹೊಂದುವದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ. ಆದರೆ ಆ ಮಹಾ ಮಂದಿರದ ಒಂದು ಸಣ್ಣ ಶಿಲೆಯಾಗುವ ಸೌಭಾಗ್ಯವನ್ನು ಅದೆಷ್ಟು ಜನರು ಹೊಂದುವರೋ ನೋಡಬೇಕಾಗಿದೆ. ಮುಂಬರುವ ಹೊಸ ಜಗತ್ತಿಗೆ ಮೈಗೂಡುವಂತೆ ತನ್ನ ಮಹಾಸಿದ್ಧತೆಯನ್ನು ಮಾಡಿಕೊಳ್ಳಲು ಶ್ರೀ ಮಾತೆಯನ್ನು ಮೊರೆಹೋಗುವದು ಮೇಲೆಂದು ನನ್ನ ಮನವರಿಕೆಯಾಗಿದೆ. ಮಹಾ ಜನಗಳು ಈ ಮಾತಿನ ಮಹತಿಯನ್ನು ಅರಿತು ಆಚರಿಸುವರೇನು ? ಮತ್ತು ಶ್ರೀ ಅರವಿಂದರ ಅವತಾರದ ಅರಿಕೆಯನ್ನು ಮಾಡಿಕೊಳ್ಳುವರೇನು ?

ಇತ್ತೀಚೆಗೆ ಕರ್ನಾಟಕದ ಜನತೆಯ ಲಕ್ಷವು ಶ್ರೀ ಅರವಿಂದರ ಕಡೆಗೆ ಹೊರಳಿದೆ. ಅಲ್ಲಲ್ಲಿ ಶ್ರೀ ಅರವಿಂದ ಮಂಡಲಗಳು, ಶ್ರೀ ಅರವಿಂದರ ಅಭ್ಯಾಸ ಕೂಟಗಳು ಬೆಳೆಯಹತ್ತಿವೆ. ಕರ್ನಾಟಕದಲ್ಲಿ ಕೆಲಕೆಲವರು ಅವರ ವಾಙ್ಮಯದ ಆಳವಾದ ಅಭ್ಯಾಸವನ್ನು ನಡಿಸಿರುವರು. ಕರ್ನಾಟಕದ ಜನರು ಸಾಮಾನ್ಯವಾಗಿ ಭಕ್ತಿ ಮಾರ್ಗಾವಲಂಬಿಗಳಾದುದರಿಂದ ಶ್ರೀ ಅರವಿಂದರ ಆಶ್ರಮದಲ್ಲಿ ಕರ್ನಾಟಕದ ಜನತೆಗೆ ಹೆಚ್ಚು ಆದರವನ್ನು ತೋರಿಸಲಾಗುತ್ತಿದೆ. ಇದು ಕರ್ನಾಟಕದ ಭಾಗ್ಯವೆಂದೇ ಹೇಳಬಹುದು. ಶ್ರೀ ಅರವಿಂದರ ಮುಂದಿನ ಕಾರ್ಯದಲ್ಲಿ ಕರ್ನಾಟಕವಾದರೂ ಹೆಚ್ಚು ಹೊಣೆ ಹೊತ್ತು ಕೆಲಸ ಮಾಡುವದೆಂದು ಬೇರೆ ಹೇಳಲಿಕ್ಕೆಬೇಡ.

ಹಿಂದಿನ ಶಿವಶರಣರ ಕಾರ್ಯಕ್ಷೇತ್ರವಾಗುವ ಭಾಗ್ಯವು ಕರ್ನಾಟಕಕ್ಕೆ ದೊರೆತಿದ್ದು ಮುಂದಿನ ಶ್ರೀ ಅರವಿಂದ ಕಾರ್ಯಕ್ಕೂ ಕರ್ನಾಟಕವು ಒಂದು ಮಹತ್ವದ ಕಾರ್ಯಕ್ಷೇತ್ರವಾಗುವದೆಂಬ ನಂಬಿಗೆ ನನಗಿರುವದು. ಆದರೆ ಕರ್ನಾಟಕಸ್ಥರು ಶ್ರೀ ಅರವಿಂದರ ವಾಙ್ಮಯವನ್ನು ಕನ್ನಡಿಸಿ ಅವುಗಳ ಲಾಭವು ಜನಸಾಮಾನ್ಯರಿಗೂ ಲಭಿಸುವಂತೆ ಮಾಡುವದು ಅತ್ಯವಶ್ಯವಾಗಿದೆಂದು ಈ ಸಂದರ್ಭದಲ್ಲಿ ನಾನು ಹೇಳದಿರಲಾರೆನು.

# ಶಿವಾನುಭವ ಪ್ರವಾಸ ಗೋಷ್ಠಿಗಳು

( ಲೇಖಕರು- ಶ್ರೀ ಬಿ ನಂಜುಂಡಪ್ಪ ಕಾನಕಾನಹಳ್ಳಿ )

ವೀರಶೈವ ಸಮಾಜವು ಧರ್ಮದ ತಳಹದಿಯಮೇಲೆ ಕಟ್ಟಿದೆ. ಹಿಂದಿನ ಶರಣರೂ ಮಹಿಮಾ ಪುರುಷರೂ ಅದರ ಧಾರ್ಮಿಕ ಭದ್ರತೆಯನ್ನು ಸುವ್ಯವಸ್ಥಿತನಾಗಿ ಬಲಪಡಿಸಿದ್ದರೆ. ಆದರೆ ಇಂದಿನ ಸಮಾಜವು ಜಗತ್ತಿನ ಹಲಕೆಲವು ಸಮಾಜಗಳಂತೆ ತನ್ನ ಬಲವಾದ ಮತ್ತು ಸುಸ್ಥಿರವಾದ ಹಿನ್ನೆಲೆಯನ್ನು ಮರೆಯತೊಡಗಿರುವದು ಶೋಚನೀಯ. ಸಮಾಜದ ವ್ಯಕ್ತಿಗಳಲ್ಲಿ ಧಾರ್ಮಿಕ ಭಾವನೆ ಸ್ಥಾಯಿಯಾಗಿ ನಿಲ್ಲದೆ, ಅದರ ಛಾಯೆಯೂ ಅಳಿಸಿಹೋಗುತ್ತಿರುವಂತೆ ಭಾಸವಾಗುತ್ತಿದೆ. ಧಾರ್ಮಿಕ ಭಾವನೆಗಳ ಬೆಳವಣಿಗೆಗೆ ಕಾರಣವಾದ ಮಠಗಳು, ಸಂಸ್ಥೆಗಳು ಮತ್ತು ಸಮಾಜ ಮುಖಂಡರು ಆ ಕಡೆಗೆ ತಮ್ಮ ಗಮನವನ್ನು ಹರಿಸುವುದು ಅಗತ್ಯವಾಗಿದೆ.

ಧರ್ಮದ ಹಿನ್ನೆಲೆಯಿಲ್ಲದೆ ಮುಂದಡಿಯಿಡುವ ಯಾವ ಜನಾಂಗವೇ ಆಗಲಿ, ತನ್ನ ಅಸ್ತಿತ್ವವನ್ನು ಬಹು ಜಾಗ್ರತೆ ಕಳೆದುಕೊಳ್ಳುವದು. ಪರಮಾತ್ಮ ಸಾಕ್ಷಾತ್ಕಾರ ಮಾನವ ಜೀವನದ ಗುರಿ ಈ ಧ್ಯೇಯ ಸಾಧನೆಗೆ ತಕ್ಕಂತೆ ಜೀವನ ಮಾರ್ಪಡಬೇಕು. ಆದರೆ ವಸ್ತುಸ್ಥಿತಿ ತೀರ ಭಿನ್ನವಾಗುತ್ತಿದೆ. ಇಂದಿನ ಜಗತ್ತನ್ನು ಐಹಿಕ ಸುಖಸಾಧನೆಯ ಮಹಾಜಾಲದಲ್ಲಿ ತೊಡಗಿಸಿ, ಮೋಸಗೊಳಿಸಿ, ಕಲುಷಿತಮಾಡಿರುವ ಜಡವಾದವು ಬೃಹದಾಕಾರದಲ್ಲಿ ಬೆಳೆದು, ಮಾನವನನ್ನು ಮರುಳುಗೊಳಿಸಿ, ಅವನ ಜೀವನವನ್ನು ಸೂರೆಗೊಳ್ಳುತ್ತಿದೆ. ಇದರ ಸಂಬಂಧದಿಂದ ಬಿಡುಗಡೆಹೊಂದುವುದು ಪುಣ್ಯವಶದಿಂದ ಆದರೂ ವಾಸ್ತವಿಕವಾಗಿ ಈ ಜಡವಾದವು ಧರ್ಮ ಪರ್ವತದ ಮೇಲೆ ಮುಸುಕಿರುವ ಮಂಜಿನ ತೆರೆ ಮಾತ್ರವೆನ್ನಬಹುದು. ಪರ್ವತದ ಭದ್ರತೆಯನ್ನು ಬಿಟ್ಟು ಮಂಜಿನ ಸುಳಿದಾಟದಲ್ಲಿ ತೇಲಿ ಹೋಗಬಯಸುವ ಬುದ್ಧಿ ಸಾಮರ್ಥ್ಯವನ್ನು ಏನೆಂದು ಹೇಳಬಹುದ .

ವೀರಶೈವ ಸಮಾಜ, ಈಗಿನ ಸಂದಿಗ್ಧ ಪರಿಸ್ಥಿತಿಯಲ್ಲಿ, ತನ್ನ ಪೂರ್ವ ಗುಣಗಳನ್ನು ಕಳೆದುಕೊಳ್ಳದೆ, ಹಿಂದಿನ ತಳಹದಿಯನ್ನು ಭದ್ರಪಡಿಸಿ, ಅದರ ಬಲದಿಂದ ನೂತನ ಸಮಾಜ ಕಟ್ಟಡವನ್ನು ಮಾರ್ಪಡಿಸಿಕೊಳ್ಳುವದು ಅತ್ಯಗತ್ಯವಾಗಿದೆ.

ಇಂದಿನ ವಿದ್ಯಾಭ್ಯಾಸದಲ್ಲಿ ತೊಡಗಿರುವ ತರುಣರನೇಕರಿಗೂ, ನವ ನಾಗರಿಕತೆಗೆ ಮಾರುಹೋಗಿರುವ ಹಲವರಿಗೂ ಅಷ್ಟಾವರಣಗಳಾದ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ಭಸ್ಮ ರುದ್ರಾಕ್ಷಿ ಮತ್ತು ಮಂತ್ರ ಗಳ ಸಾಂಕೇತಿಕ ತತ್ವದ ಗಂಧವೇ ಇರುವುದಿಲ್ಲ. ಅವರ ದೃಷ್ಟಿಯಲ್ಲಿ ಇವೆಲ್ಲವೂ ಯಾವುದೋ ಕಾಲದ ಅನಾಗರಿಕತೆಯ ಅಂಧ ಶ್ರದ್ಧೆಯಂತೆ ತೋರುತ್ತಿವೆ. ಹಣೆಯಲ್ಲಿ ಭಸ್ಮ, ಅಂಗದಮೇಲೆ ಲಿಂಗ ಧರಿಸುವುದೂ ಕೇವಲ ನಾಚಿಕೆಗೇಡೆಂದು ಭ್ರಮಿಸಿ ಅವುಗಳನ್ನು ತ್ಯಾಗಮಾಡುತ್ತಿದ್ದಾರೆ. ಈ ಅವ್ಯವಸ್ಥೆಯ ಪ್ರಮಾಣ ದಿನೇ ದಿನೇ ಹೆಚ್ಚುತ್ತಿದೆ ವಿಚಾರವಿಲ್ಲ; ವಿವೇಕವಿಲ್ಲ. ಇಂದಿನ ಪರಿಸ್ಥಿತಿಯನ್ನು ಹಾಗೆಯೇ ಬೆಳೆದುಬಿಟ್ಟರೆ, ಸಂಸ್ಕೃತಿ ಪೋಷಕಗಳಾದ ಮಠಗಳೂ ಸಮಾಜ ಸಂಸ್ಥೆಗಳೂ, ಗುರು ಜಂಗಮರ ವ್ಯವಸ್ಥೆಯೂ ಮತ್ತು ಮತಾಚಾರಗಳೂ ಕೆಲವು ಕಾಲದಲ್ಲೇ 'ಅವಶೇಷಗಳಾಗಿ ಪರಿಣಮಿಸುವುದು ಆಶ್ಚರ್ಯವಲ್ಲ. ಭೂಶೋಧನಾಕಾರರು ಹರಪ್ಪಾ ಮೊಹೆಂಜೋದಾರೊ, ಚಂದ್ರವಳ್ಳಿಗಳಲ್ಲಿನ ಪ್ರಾಚೀನ ಅವಶೇಷಗಳ ಆಧಾರಗಳಿಂದ ಅಂದಂದಿನ ಜನರ ನಾಗರಿಕತೆ ಸಂಸ್ಕೃತಿ ವಿಶೇಷ ಗಳನ್ನು ಊಹಿಸಿರುವಂತೆ ಕಾಲಕ್ರಮೇಣ ನಮ್ಮ ಸಂಸ್ಕೃತಿಯನ್ನೂ ಅಲ್ಲಲ್ಲಿ ಗೋಚರವಾಗಬಹುದಾದ 'ಅವಶೇಷ' ಗಳಿಂದ ನಿರ್ಧರಿಸಬೇಕಾದೀತು. ಆದುದರಿಂದ ಸಮಾಜ ಹಿತೈಷಿಗಳು ಧರ್ಮ ಜಾಗೃತಿಯ ಬಗ್ಗೆ ಈಗಲೇ ಎಚ್ಚರಗೊಂಡು ಕಾರ್ಯೋನ್ಮುಖವಾಗುವುದು ಒಳಿತು.

ಧರ್ಮವನ್ನು ಅಳಿಸದೆ ಅದನ್ನು ಪೋಷಿಸಿ, ಮುಂದಿನ ಪೀಳಿಗೆಯು ಅದರ ಪ್ರಗತಿಯನ್ನು ಸಾಧಿಸಲು ದಾರಿತೋರುವದು ಇಂದಿನವರ ಕರ್ತವ್ಯ. ಮಠಗಳು, ಸಂಘ ಸಂಸ್ಥೆಗಳು, ಧಾರ್ಮಿಕ ಪಾಠಶಾಲೆಗಳು ಧಾರ್ಮಿಕ ವಿಷಯ ಬೋಧನೆಗೆ ಸಂಪೂರ್ಣ ಅವಕಾಶ ದೊರಕಿಸಬೇಕು. ಚಿಕ್ಕಂದಿನಲ್ಲೇ ಅದರ ಪರಿಚಯ ಕಡ್ಡಾಯವಾಗಿ ಆಗಬೇಕು. ಅದು ಸ್ನಾನ,

ಲಿಂಗಪೂಜೆಗಳಷ್ಟೇ ಮುಖ್ಯವಾಗಿ ಪರಿಗಣಿಸಲ್ಪಡಬೇಕು. ಆಚರಣೆಯಲ್ಲಿ ಲೋಪ ಬಾರದಂತೆ ಚಿಕ್ಕಂದಿನಲ್ಲಿ ತಂದೆತಾಯಿಗಳಾದಿಯಾದ ಹಿರಿಯರೂ ಗುರುಗಳೂ, ವಯಸ್ಸು ಬಂದಮೇಲೆ ಸಮಾಜ ಮತ್ತು ಮಠಾಧಿಪತಿಗಳೂ ತರುಣರನ್ನು ದಾಕ್ಷಿಣ್ಯ ಪ್ರಭಾವಗಳಿಗೆ ಒಗ್ಗಿಸಿಕೊಳ್ಳಬೇಕು. ಆದರೆ ವ್ಯಕ್ತಿ ಸ್ವಾತಂತ್ರ್ಯಕ್ಕಾಗಲೀ ಸ್ವತಂತ್ರ ವಿಚಾರಕ್ಕಾಗಲೀ ಸ್ವತಂತ್ರ ವಿವೇಚನೆಗಾಗಲೀ ಅಡ್ಡಿ ತರುವ ಸಂದರ್ಭವುಂಟಾಗುವುದಿಲ್ಲ.

ಸಂಸ್ಕೃತಿ ಪೋಷಕವಾದ ದಾರಿಗಳು ಹಲವಿವೆ. ಶಿವಕೀರ್ತನೆ, ಭಜನೆ, ವಚನ ಪ್ರವಚನ ಪುರಾಣ ಮತ್ತು ಕಾವ್ಯಗಳ ಶ್ರವಣ-ಇವು ಕೆಲವು ಇವುಗಳಿಂದ ಧಾರ್ಮಿಕ ಶ್ರದ್ಧೆ ವೃದ್ಧಿಗೊಳ್ಳುವದು.

ಅತಿಮುಖ್ಯವಾದ ಒಂದು ಮಾರ್ಗವೆಂದರೆ ಶಿವಾನುಭವ ಗೋಷ್ಠಿಗಳನ್ನು ಸ್ಥಾಪಿಸಿ, ಶಿವಾನುಭವ ವಿಷಯಗಳನ್ನು ಸುವ್ಯವಸ್ಥಿತರೀತಿಯಲ್ಲಿ ಪಕ್ರಮವಾಗಿ ನಡೆಸುವದು. ಈ ವಿಷಯಗಳ ಕ್ರಮವಾದ ಅಭ್ಯಾಸದಿಂದ ವೀರಶೈವನು ಅತ್ಯಗತ್ಯವಾಗಿ ತಿಳಿದಿರಬೇಕಾದ ಅಷ್ಟಾವರಣಗಳು ಪಂಚಾಚಾರಗಳು, ಷಟ್ ಸ್ಥಲಗಳು ಮುಂತಾದ ಸಾಮಾನ್ಯ ತತ್ವಗಳ ವಿವೇಚನೆ ಬೆಳೆದು ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಬಹುದು.

ಕೆಲವು ಗ್ರಾಮಾಂತರಗಳಲ್ಲಿ ಈ ಬಗೆಯ ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸಲು ಅವಕಾಶವಿರುವದಿಲ್ಲ. ಪ್ರತಿಕೂಲ ಸನ್ನಿವೇಶಗಳಿರುವುದುಂಟು. ಅಲ್ಪ ಸಂಖ್ಯೆಯ ಕಾರಣದಿಂದಲೋ ಧಾರ್ಮಿಕ ಭಾವನೆಗಳ ಅಭಾವದಿಂದಲೋ ಪ್ರಮುಖವ್ಯಕ್ತಿಗಳ ಅನೈಕಮತ್ಯ ದುರ್ವ್ಯವಹಾರಗಳ ಫಲವಾಗಿಯೋ, ಇತರ ಕಿರುಕುಳ ( ಭೀಕರ ) ದೈವ ಭಾವನೆಗಳಿಂದಲೋ ಅಲ್ಲಿನ ಸಮಾಜ ಹಿಂದುಳಿಯಬಹುದು.

ಶಿವಾನುಭವ ಪ್ರವಾಸ ಗೋಷ್ಠಿಗಳನ್ನು ಏರ್ಪಡಿಸುವದರಿಂದ ಈ ಬಗೆಯ ಕೊರತೆಗಳನ್ನು ನಿವಾರಿಸಬಹುದು. ಯಾವುದಾದರೊಂದು ಗೊತ್ತಾ ಸ್ಥಳಗದಲ್ಲಿರುವ ಸಂಘಸಂಸ್ಥೆಗಳವರು ಮಠಾಧಿಪತಿಗಳು ಇಲ್ಲವೇ ಸಮಾಜ ಮುಖಂಡರು ತಮ್ಮ ಸುತ್ತ ಮುತ್ತಣ ಗ್ರಾಮಾಂತರ ಪ್ರದೇಶಗಳಲ್ಲಿ ಗೊತ್ತಾದ ದಿನಗಳಲ್ಲಿ ಶಿವಾನುಭವ ಪ್ರವಾಸಗೋಷ್ಠಿಗ

ಳನ್ನು ಏರ್ಪಡಿಸತಕ್ಕದ್ದು. ಸುತ್ತಮುತ್ತಣ ಗ್ರಾಮಗಳಿಂದ ಹಲವರು ಬಂದು ಭಾಗಿಗಳಾಗಲು ಅನುಕೂಲವಾಗುವಂತೆ ಸಂಚಾರ ವ್ಯವಸ್ಥೆಯಿರುವ ಸ್ಥಳಗಳಾಗಬೇಕು. ಮೂರು ದಿನಗಳಿಗಾಗುವಷ್ಟು ದೀರ್ಘಕಾರ್ಯಕ್ರಮ ವಿರಬೇಕಾದುದರಿಂದ ಅಷ್ಟುಗಿನಗಳೂ ಅಲ್ಲಿ ತಂಗಲು ಭೋಜನ ಮತ್ತು ವಸತಿ ಸೌಕರ್ಯವಿರಬೇಕು. ಪರಿಶುದ್ಧವಾದ ಅನಾರೋಗ್ಯಕರವಲ್ಲದ ನೀರು, ಹಿತಕರ ವಾಯುಗುಣವಿದ್ದು, ದುಷ್ಟಪ್ರಾಣಿಗಳ ಉಪದ್ರವವಿಲ್ಲದೆ, ಮನೋನೈರ್ಮಲ್ಯಕ್ಕೆ ಅನುಕೂಲವಾದ ಪ್ರಕೃತಿ ಸೌಂದರ್ಯವಿರುವ ಸ್ಥಳವಾಗಬೇಕು. ಸಾಧ್ಯವಾದ ಮಟ್ಟಿಗೆ ಜನರ ವ್ಯವಹಾರಗಳಿಗೆ ನಿಕಟಸಂಬಂಧವಿಲ್ಲದೆಯೂ ಅನತಿದೂರದಲ್ಲಿಯೂ ಇರುವ ಪ್ರದೇಶ ಗೋಷ್ಠಿಗೆ ಉತ್ತಮ ಸನ್ನಿವೇಶ.

## ಪ್ರವಾಸಗೋಷ್ಠಿಯ ಕಾರ್ಯಕ್ರಮ

ಶಿವಾನುಭವ ಪ್ರವಾಸಗೋಷ್ಠಿಯ ಉದ್ದೇಶಿತ ಕಾರ್ಯಕ್ರಮಗಳ ಮುಖ್ಯಾಂಶ ಹೀಗಿರಬಹುದು. ( ಮೂರು ದಿನಗಳವರೆಗೆ ದಿನಂಪ್ರತಿ, ಅಥವಾ ಅನುಕೂಲವಿದ್ದಂತೆ )

( ೧ ) ಭಾಷಣ ವಿಭಾಗ :—

ಶಿವಾನುಭವ ವಿಚಾರಗಳಲ್ಲಿಯೂ, ಇತರ ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳಲ್ಲಿಯೂ ಪರಿಶ್ರಮವಿರುವವರಿಂದ ಭಾಷಣಗಳನ್ನು ಏರ್ಪಡಿಸುವವುದು.

( ೨ ) ಪ್ರವಚನ ವಿಭಾಗ : —

ಮಹಾನುಭಾವಿಗಳಾದ ಶಿವಶರಣರ ವಚನಗಳ, ಪುರಾಣಗಳ, ಧಾರ್ಮಿಕ ಕಾವ್ಯಗಳ ಮತ್ತು ಉದ್ಗ್ರಂಥಗಳ ಪ್ರವಚನಗಳನ್ನು ನಡೆಸುವುದು.

( ೩ ) ಕೀರ್ತನ ವಿಭಾಗ :—

ಶ್ರೀ ನಿಜಗುಣ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿ ಸ್ವಾಮಿಗಳು, ಘನಮಠದಾರ್ಯರು, ಬಾಲ

ಲೀಲಾ ಮಹಾಂತ ಶಿವಯೋಗಿಗಳು ಮುಂತಾದವರ ಕೃತಿಗಳ ಕೀರ್ತನೆ, ಭಜನೆ; ಮತ್ತು ಶಿವಕಥಾ ಶ್ರವಣ ( ಮಿತಕಾಲಾವಧಿಯಲ್ಲಿ )- ಶರಣರ ಜೀವಿತ ಕಥೆಗಳನ್ನು ಕುರಿತು.

( ೪ ) ಗೋಷ್ಠಿ ವಿಭಾಗ :—

(ಅ) ಶಿವಾನುಭವ ಗೋಷ್ಠಿ-ತತ್ವನಿರೂಪಣೆ, ವಿವೇಚನೆ

(ಆ) ಚರ್ಚಾಗೋಷ್ಠಿ-ಸಾಮಾಜಿಕ ಸಮಸ್ಯೆಗಳ ಚರ್ಚೆ.

**ಕಾರ್ಯಕ್ರಮದ ವೇಳಾಪಟ್ಟಿ : –**

ಕಾರ್ಯಕ್ರಮದ ವೇಳಾಪಟ್ಟಿ ಸ್ಥೂಲವಾಗಿ ಹೀಗಿರಬಹುದು.

( ೧ ) ಪ್ರಾತಃಕಾಲ :—

(ಅ) ಸ್ನಾನ, ಪೂಜೆ ಮೊದಲಾದ ಪ್ರಾತರಾಹ್ನಿಕಗಳು, ಉಪಹಾರ.

(ಆ) ಷಟ್ ಸ್ಥಲ ಧ್ವಜಾರೋಹಣ.

(ಇ) ಭಾಷಣಗಳು.

(ಈ) ಲಘು ವಿಶ್ರಾಂತಿ

( ೨ ) ಮಧ್ಯಾಹ್ನ :—

(ಅ) ಜಂಗಮಾರ್ಚನೆ, ಅರ್ಪಣ.

(ಆ) ಲಘು ವಿಶ್ರಾಂತಿ.

(ಇ) ಶಿವಾನುಭವ ಗೋಷ್ಠಿ, ಚರ್ಚಾಗೋಷ್ಠಿ.

(ಈ) ಲಘು ವಿಶ್ರಾಂತಿ.

( ೩ ) ಸಂಜೆ :—

ಶಿವಶರಣರ ವಚನಗಳ, ಪುರಾಣ ಮತ್ತು ಕಾವ್ಯಗಳ ಮತ್ತು ಉದ್ಗ್ರಂಥಗಳ ಪ್ರವಚನ

( ೪ ) ರಾತ್ರಿ :—

(ಅ) ಅರ್ಪಣ.

(ಆ) ಕೀರ್ತನೆ, ಭಜನೆ, ಶಿವಕಥಾಶ್ರವಣ.

(ಇ) ವಿಶ್ರಾಂತಿ.

## ವ್ಯವಸ್ಥಾಪಕರಿಗೆ ಕೆಲವು ಸಲಹೆಗಳು

ಈ ಎಲ್ಲ ಏರ್ಪಾಡುಗಳೂ ಒಂದು ವ್ಯವಸ್ಥಾಪಕ ಮಂಡಲಿಯ ನೇತೃತ್ವದಲ್ಲಿ ನಡೆಸಲ್ಪಡತಕ್ಕದ್ದು. ವ್ಯವಸ್ಥಾಪಕ ಮಂಡಲಿಯು ಈ ಹಲವು ವಿಷಯಗಳನ್ನು ಗಮನಿಸಬೇಕಾದುದು ಅಗತ್ಯ.

( ೧ ) ಸಮಯ ಸನ್ನಿವೇಶಕ್ಕೆ ತಕ್ಕಂತೆ ಈ ವೇಳಾ ಪಟ್ಟಿಯನ್ನು ಮಾರ್ಪಡಿಸಿಕೊಳ್ಳತಕ್ಕದ್ದು. ಪ್ರತಿ ವಿಷಯದ ನಿರ್ದಿಷ್ಟ ಕಾಲಾವಧಿ ( ಇಷ್ಟು ಗಂಟೆಯಿಂದ ಇಷ್ಟು ಹೊತ್ತಿನವರೆಗೆ ) ಯನ್ನು ಗೊತ್ತುಪಡಿಸ ಬೇಕು. ಶಿವಾನುಭವ ಗೋಷ್ಠಿ, ಸಾಮಾಜಿಕ ಸಮಸ್ಯೆಗಳ ಚರ್ಚಾ ಗೋಷ್ಠಿ ಇವುಗಳಿಗೆ ಪ್ರತ್ಯೇಕ ಕಾಲನಿಯತ ಇರಬೇಕು; ಪ್ರತ್ಯೇಕ ದಿನ ಗಳಲ್ಲಿಯಾದರೆ ಅನುಕೂಲ. ಅಂತೆಯೇ ಕಾವ್ಯ ಪ್ರವಚನಗಳಿಗೂ ಶರಣರ ವಚನ ಪ್ರವಚನಗಳಿಗೂ, ಭಜನೆ ಶಿವಕಥಾ ಶ್ರವಣಗಳಿಗೂ ಪ್ರತ್ಯೇಕ ದಿನಗಳು ಬೇಕು.

( ೨ ) ಉತ್ತಮ ವಸತಿ, ಉಪಹಾರ, ಭೋಜನ, ವಿಶ್ರಾಂತಿಗಳಿಗೆ ಅನುಕೂಲತೆ ಇರಬೇಕು. ಉಪಹಾರ ಮತ್ತು ಭೋಜನಗಳಿಗೆ ದೀರ್ಘ ಕಾಲ ವ್ಯಯವಾಗಲು ಅವಕಾಶವಿರಬಾರದು.

( ೩ ) ಪ್ರಾತರಾಹ್ನಿಕಗಳಾದ ಶೌಚ, ಸ್ನಾನ, ಲಿಂಗಪೂಜೆ ಇವು ಗಳಿಗೆ ಯಾವ ಆತಂಕಗಳೂ ಇರಬಾರದು. ಪೂಜಾ ವ್ಯವಸ್ಥೆ ಸಮರ್ಪಕ ವಾಗಿರಬೇಕು.

( ೪ ) ಪ್ರವಾಸ ಕಾಲದಲ್ಲಿ ಚಿಕ್ಕ ಪ್ರಮಾಣದಲ್ಲಿ ವೀರಶೈವ ಧರ್ಮ ಗ್ರಂಥಗಳ ಪ್ರದರ್ಶನವಿರುವುದು ಉಚಿತ. ಅಲ್ಲಿ ಧಾರ್ಮಿಕ ಮಾಸ ಪತ್ರಿಕೆ ಮತ್ತು ವಾರ ಪತ್ರಿಕೆಗಳನ್ನೂ ಪ್ರದರ್ಶಿಸಬಹುದು. ಅವಕಾಶ ವಿದ್ದಲ್ಲಿ ಗ್ರಂಥಗಳ ಮತ್ತು ಪೂಜೋಪಯೋಗಿ ವಸ್ತುಗಳ ಮಾರಾಟಕ್ಕೂ ವ್ಯವಸ್ಥೆ ಮಾಡಬೇಕು. ಇದು ಗೊಷ್ಠಿಯ ಒಂದು ಪ್ರಧಾನಾಂಶ.

( ೫ ) ಪ್ರತಿದಿನದ ಕಾರ್ಯಕ್ರಮದ ಪ್ರತಿ ವಿಷಯವೂ ಮೊದಲೇ ನಿಶ್ಚಿತವಾಗಬೇಕು. ಅಧ್ಯಕ್ಷರ ಅನುಮತಿಯಂತೆ ಬದಲಾಗಬಹುದು.

( ೬ ) ಅನುಕೂಲತೆಯಿದ್ದಲ್ಲಿ ಕಾರ್ಯಕ್ರಮಗಳ ಸಂಕ್ಷೇಪ ವಿವರ ಣೆಯನ್ನು ತೋರಿಸುವ ಹಸ್ತ ಪತ್ರಿಕೆಗಳನ್ನೂ, ಭಾಷಣ ಪ್ರವಚನಗಳ ಸಾರಾಂಶ ವನ್ನು ತಿಳಿಸುವ ಕಿರಿಹೊತ್ತಿಗೆಗಳನ್ನು ಹಂಚುವುದು.

( ೭ ) ಗೋಷ್ಠಿಯನ್ನು ಏರ್ಪಡಿಸಲು ಅತ್ಯಗತ್ಯವಾಗಿ ಬೇಕಾ ಗುವ ಹಣಕಾಸಿನ ಮತ್ತು ಆಹಾರ ಸಂಗ್ರಹ ಕಾರ್ಯ ಬಹಳ ಮುಖ್ಯ ವಾದುದು. ವ್ಯವಸ್ಥಾಪಕ ಮಂಡಳಿ ಈ ಬಗ್ಗೆ ಮೊದಲೇ ಆಲೋ ಚಿಸತಕ್ಕದ್ದು.

( ೮ ) ಸುಸಜ್ಜಿತರಾದ ಸ್ವಯಂಸೇವಕರಿಂದ ವ್ಯವಸ್ಥಾಪಕ ಮಂಡ ಲಿಯ ದಕ್ಷತೆ ಹೆಚ್ಚುವುದು.

ಈ ದೃಷ್ಟಿಯಿಂದ, ಶಿವಾನುಭವ ಪ್ರವಾಸಗೋಷ್ಠಿಗಳು ಈಗಿನ ವೀರಶೈವ ಸಮಾಜದ ಭದ್ರತೆಗೆ ಅತ್ಯಾವಶ್ಯಕವೆಂದು ಹೇಳಬಹುದು. ಕಾರ್ಯಕ್ರಮಗಳನ್ನು ಇನ್ನೂ ಹೆಚ್ಚಿಸಿಕೊಳ್ಳಬಹುದು. ಕುಗ್ಗಿಸಿಕೊ ಳ್ಳಲೂ ಬಹುದು. ಒಟ್ಟಿನಲ್ಲಿ ಯಾವ ಯಾವ ದೇಶ ಕಾಲ ವರ್ತಮಾನಗ ಳಿಗೆ ಹೇಗೆ ಮಾರ್ಪಾಟುಗಳನ್ನು ಮಾಡಿಕೊಂಡರೆ ಸರಿತೋರುವದೋ ಆಯಾಯ ಮಾರ್ಪಾಟುಗಳನ್ನು ಮಾಡಿಕೊಂಡು, ಸಮಾಜದ ದೃಷ್ಟಿ ಕೋನವನ್ನು ಧರ್ಮದತ್ತ ತಿರುಗಿಸುವುದು ಅಗತ್ಯವಾಗಿದೆ. ನಮ್ಮ ಸಮಾ

ಜದ ಮಠಾಧಿಪತಿಗಳು, ಸಂಘ ಸಂಸ್ಥೆಗಳು, ಅನುಭಾವಿಗಳು ಮತ್ತು ಸಮಾಜಮುಖಂಡರು ಈ ಪ್ರಯತ್ನಕ್ಕೆ ತಮ್ಮ ಸಹಕಾರ ಸಹಾಯ ಸೌಲಭ್ಯಗಳನ್ನು ನೀಡಬೇಕು.

ಪ್ರಾಯೋಗಿಕವಾಗಿ, ಬೆಂಗಳೂರು ಜಿಲ್ಲೆಯ ಕಾನಕಾನಹಳ್ಳಿ ವೀರಶೈವ ತರುಣ ಸಂಘದವರು ಈ ಬಗೆಯ ಪ್ರವಾಸಗೋಷ್ಠಿಗಳನ್ನು ಕಳೆದ ಕೆಲವು ವರ್ಷಗಳಲ್ಲಿ ಸಂಕ್ಷೇಪ ಪರಿಮಿತಿಯಲ್ಲಿ ಯಶಸ್ವಿಯಾಗಿ ನಡೆಸಿದರು.

ನಮ್ಮ ನಾಡಿನ ನಾನಾ ಮೂಲೆಗಳಲ್ಲಿಯೂ ಈ ಬಗೆಯ ಪ್ರವಾಸ ಗೋಷ್ಠಿಗಳೂ, ನಡೆದು, ಧರ್ಮಜಾಗೃತಿಯುಂಟಾಗಲೆಂದು ಆಶಿಸಬೇಕಾಗಿದೆ.

---

## ಗುರುದೇವ.

ಶ್ರೀ

ಶ್ರೀ ಗುರುವೆ! ಶ್ರೀ ಗುರುವೆ. ಆವ ಸ್ಥಾಣದಿ ನಿಂತಿಹೆ ?
ಆವ ಕದಲಿನ ತಳದಿ ಮಲಗಿಹೆ, ಆವ ಗುಹೆಯೊಳು ಅಡಗಿಹೆ?
ಆವ ಯೋಗವ ಹಿಡಿದಿಹೆ-ಮು
ಕ್ತಾವ ಶಾಂತಿಯ ನೆಲಿಸಿಹೆ ?

ಎಲ್ಲಿ ನಿನ್ನಿಂ ಬೆಳೆದ ಶಿಷ್ಯ ಸ್ತೋಮದ ತಂಡವು?
ಎಲ್ಲಿ ನಿನ್ನಯ ಬಲದಿ ಮೆರೆದಿಹ ಚಾಗಿ ಯೋಗಿಯ ತಂಡವು ?
ಎಲ್ಲಿ ನಿನ್ನಯ ಭಕ್ತರು-ಅವ
ರೆಲ್ಲ ಆ ಕಡುಧೀರರು ?

ಎಲ್ಲಿ ನಿನ್ನಯ ಪೂಜೆಯು ? ಎಲ್ಲಿ ನಿನ್ನಯ ಶಾಂತಿಯು ?
ಎಲ್ಲಿ ನಿನ್ನಯ ಧೈರ್ಯವು ? ಎಲ್ಲಿ ನಿನ್ನಯ ಸ್ಥೈರ್ಯವು !
ಎಲ್ಲಿ ನಿನ್ನಯ ಸೇಸ್ಯರು-ಭಲಿ
ಜಗದ ಕೀರ್ತಿವಿಶಾಲರು!

ನಿನ್ನ ಸೇವಿಸಿ ಬಹಳ ಮಾಸವು ಕಳೆದವು. !
ನಿನ್ನ ಶಾಂತಿಯ ಸುಧೆಯು ಲೋಕಕೆ ಬಹಳದಿನಗಳು ಕಳೆದವು !
ನಿನ್ನ ಠಾವು ಅದೆಲ್ಲಿದೆ ಏಕಿಂತು !
ಮೌನದಿ ಕುಳಿತಿಹೆ ?

ಗುರುವೆ ! ಗುರುವೆ ! ನಿನ್ನ ನೆನೆಯುವೆ ಕೆಟ್ಟೆವು
ನಿನ್ನ ತೊರೆಯುತ ಜನುಮಭೂಮಿಯನು ಕೊಟ್ಟೆವು
ಪರರ ಪಾಲಿಗೆ ಬಿಟ್ಟೆವು-ಅದ
ಮಾನಮುದ್ರೆಯ ಕೊಟ್ಟೆವು.

ತಂದೆ ! ತಂದೆ !! ನೋಡು ಇಂದಿನ ರೀತಿಯ
ನೋಡಲಾರೆಯ ಕನ್ನಡಕುವರರ ಇಂದಿನೀ ದುರವಸ್ಥೆಯ ?
ನಮ್ಮ ಕಷ್ಟವ ತೊಲಗಿಸು
ನಿನ್ನ ಅಡಿಗಳ ಸೇವಿಸು !

ಬಂದು ನೀನಿನ್ನೊಮ್ಮೆ ನಮ್ಮ ಸೇವೆಯ ಸಲ್ಲಿಸು
ಶಾಂತಿ ಸುಧೆಯನು ನೀಂಟಿಸು-ಹೊಸ ಜೀವಕಳೆಯನು ತುಂಬಿಸು
ಮತ್ತೆ ನೀ ಹುರಿದುಂಬಿಸು-ಈ
ಸತ್ತ ಬಾಳನು ಮುಲಗಿಸು

— ಗುರುಸಿದ್ಧ ಶಿವಾಚಾರ್ಯ
ಗುರುವಿನಪುರಮಠ

# ವೀರಶೈವ ಧರ್ಮಸ್ಥಾಪಕರು ಬಸವಣ್ಣನವರೆ ?

( ಶ್ರೀ— ಎಸ್. ಸಿ. ಹಿರೇಮಠ. ಬಾಗಲಕೋಟೆ )

ಕರ್ನಾಟಕ ಇತಿಹಾಸ ಸಂಶೋಧನಸಂಸ್ಥೆ ಧಾರವಾಡ ಇವರ ಸಂಸ್ಥೆಯು ಬೆಳ್ಳಿಯು ಹಬ್ಬದ ನಿಮಿತ್ತವಾಗಿ ಪ್ರಕಟಿಸಿದ *Jainism and Karnatak culture*' ಎಂಬ ಸಂಶೋಧನಾತ್ಮಕ ಗ್ರಂಥ ಶ್ರೀ. ಎಸ್ ಆರ್. ಶರ್ಮಾ, ಎಮ್. ಎ ಅವರದು. ಈ ಗ್ರಂಥದಲ್ಲಿ ಪುಟ ೩೫ ರಲ್ಲಿ ೨೨ ಸಾಲಿನಲ್ಲಿ *'The traditional account of life of Basava, the founder of Vira-saivism or Lingayatism is given in Bhima- Kavi's Basava purana'* ಅಂದರೆ 'ಬಸವಣ್ಣ— ವೀರಶೈವ ಧರ್ಮಸ್ಥಾಪಕ ಇಲ್ಲವೆ ಲಿಂಗಾಯತ ಧರ್ಮ ಸ್ಥಾಪಕನ ಜೀವನ ವೃತ್ತಾಂತವು ಭೀಮ ಕವಿಯು ಬರೆದ ಬಸವ ಪುರಾಣದಲ್ಲಿ ಸಿಗುವದು.' ಎಂದು ಬರೆಯಲಾಗಿದೆ.

ಶ್ರೀ. ಶರ್ಮಾರವರು ಕರ್ನಾಟಕದ ಇತಿಹಾಸವನ್ನು ಆಳವಾಗಿ ಅಭ್ಯಾಸಿಸಿದಂತೆ ಕಂಡುಬರುತ್ತದೆ. ಕನ್ನಡ ಗ್ರಂಥಗಳನ್ನು ಒಂದೊಂದಾಗಿ ತಮ್ಮ ಆಧಾರವಾಗಿಟ್ಟುಕೊಂಡಿದ್ದಾರೆ. ಆದರೆ ವೀರಶೈವ ಧರ್ಮದ ಮೂಲದ ಬಗೆಗೆ ಅವರ ಕಲ್ಪನೆ ಏನು ? ಬಸವಣ್ಣನವರು ವೀರಶೈವ ಧರ್ಮದ 'ಸ್ಥಾಪಕರೇ' ಇಲ್ಲವೆ 'ನಾಯಕರೇ ?'

ಮೊಹಂಜೋದಾರೊ. ಹರಪ್ಪಗಳ ಶೋಧನದಿಂದ ಶೈವ ಧರ್ಮವು ೧೧ ಸಾವಿರ ವರ್ಷ ಹಿಂದಿನದಾಗಿ ತಿಳಿದು ಬಂದಿದೆ. "ಶೈವ ಧರ್ಮ ಭರತಖಂಡದಲ್ಲಿ ಅಷ್ಟೇ ನಡೆದು ಬಂದಿಲ್ಲ. ಆದರೆ ರೋಮ, ಯುನಾನ್‌ಗಳಲ್ಲಿ ಕೂಡಾ ಲಿಂಗ ಪೂಜೆ ಆದರ ಎದುರುಗಳಲ್ಲಿ ನಂದೀಮೂರ್ತಿ ಪೂಜೆಗಳು ನಡೆಯುತ್ತಿದ್ದವು." ಎಂದು ಶ್ರೀ. ರಾಮದಾಸ ಎಮ್. ಎ. ಅವರು ಹೇಳಿದ್ದಾರೆ.

ಈ ಶೈವ ಧರ್ಮವೇ ಮುಂದೆ ಸೂಕ್ಷ್ಮಾಗಮದಲ್ಲಿ ಅನಾದಿಶೈವ. ಆದಿಶೈವ, ಮಹಾಶೈವ, ಅವಾಂತರಶೈವ, ಪ್ರವರಶೈವ, ವೀರಶೈವ ಹೀಗೆ ಅನೇಕ ವಿಭಾಗಗಳಾಗಿ ಕೊನೆಗೆ ವೀರಶೈವ ಧರ್ಮವು ಮಹತ್ವವನ್ನು ಪಡೆದಿರುವುದೆಂಬುದನ್ನು ಎಲ್ಲ ಇತಿಹಾಸಕಾರರು ಒಪ್ಪುವ ಮಾತು. ವೀರ ಶೈವ ಧರ್ಮವು ಯಾವನೊಬ್ಬ ವ್ಯಕ್ತಿಯಿಂದ ಸ್ಥಾಪಿತವಾದುದಲ್ಲ. ಬಸವಣ್ಣನವರಿಗಿಂತಲೂ ಪೂರ್ವದಲ್ಲಿಯೂ ವೀರಶೈವ ಧರ್ಮವಿತ್ತೆಂಬುದಕ್ಕೆ ಅನೇಕ ಐತಿಹಾಸಿಕ ಸಂಗತಿಗಳಿವೆ. ಕರ್ಮದ ಲತೆಯಂತೆ ಇದ್ದ ಜನಿವಾರವನ್ನು ಬಿಸುಟಿ ಒಗೆಯುವಾಗ ಅವನ ಮುಂದಿದ್ದುದು ವೀರಶೈವ ದೀಕ್ಷಾವಿಧಾನ. ಬಸವಣ್ಣನವರು ಅಂದಿನ ಅವ್ಯವಸ್ಥ ರೀತಿಯಲ್ಲಿದ್ದ ವೀರಶೈವ ಧರ್ಮದಲ್ಲಿಯ ವ್ಯವಹಾರಿಕ ಲೋಪ ದೋಷಗಳನ್ನು ಮಾತ್ರ ತೆಗೆದುಹಾಕಲು ಪ್ರಯತ್ನಿಸಿದರು. ಹಿರಿಯರು ಕಟ್ಟಿಸಿದ ಮನೆಯು ಸ್ವಲ್ಪ ಅಲ್ಲಿ ಇಲ್ಲಿ ಬಿದ್ದಿದ್ದರೆ ಅದನ್ನು ನಾವು ದುರಸ್ತ ಮಾಡಿಸಿದಾಕ್ಷಣವೇ ಮನೆಯನ್ನು ನಾವು ಕಟ್ಟಿದಂತಾಗಲಿಲ್ಲ.

ವೀರಶೈವ ಧರ್ಮದ ಬಗೆಗೆ ಹೆಚ್ಚಿನ ಸಂಗತಿಗಳು ಬೇಕಾದಲ್ಲಿ ಡಾಕ್ಟರ ಎಸ್. ಸಿ. ನಂದಿಮಠ ಎಮ್. ಎ. ಪಿ ಎಚ್ ಡಿ. ಲಂಡನ್ ಅವರ '*Hand book of Veeraskaivism*' ಮತ್ತು ಶ್ರೀ ಹ. ಣಶಾಳ ಬಿ. ಎ. ಬಿ. ಟಿ. ಅವರು ಬರೆದ '*Lingayat Movement*' ಮತ್ತು ಶ್ರೀಯುತ ಎಮ್. ಆರ್. ಸಾಖರೆ, ಎಮ್. ಎ. ಟಿ ಡಿ. ಸಂಸ್ಕೃತ ಮತ್ತು ಶಿಕ್ಷಣದ ಪ್ರೊಫೇಸರ '*Lingadharana Chandrika*' ಗ್ರಂಥಗಳನ್ನು ನೋಡಬಹುದು.

ಬಸವಣ್ಣನವರ ಬಗೆಗೆ ಶ್ರೀಯುತ ಸಿ. ಆರ್. ರೆಡ್ಡಿ ವಾಯಿಸ್‌ಚಾನ್ಸಲೆರ ಆಂಧ್ರ ವಿಶ್ವವಿದ್ಯಾಲಯ ಅವರು '*Lingayat Move-ment*' ಪುಸ್ತಕಕ್ಕೆ ಮುನ್ನುಡಿ ಬರೆಯುವಾಗ '*Basava is one of the greatest reformers.*' ಎಂದು ಹೇಳಿದ್ದಾರೆ. ಶ್ರೀ. ಹುಣಶಾಳರವರು ತಮ್ಮ ಮೊದಲು ಮಾತಿನಲ್ಲಿ '*The credit of having brought aboat a social revolution through religion backed up with progressive philosophy goes to Basava the leader of Lingayat Movement*' ಎಂದು ಹೇಳಿದಲ್ಲಿ '*Leader*' ಎಂದು ಯಾಕೆ ಉಪಯೋಗಿಸಿದರು.?

ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಪತ್ರಿಕೆ ೧೯೪೩ ನೇ ಜನವರಿ ತಿಂಗಳ ಸಂಪಾದಕೀಯಲ್ಲಿ *There is an inscription of 5th Century A. D. in Kailasnath temple at Kanchi which enumerates the names of 28 Agamas. So he comes to the conclusion that Agamas must have been written several centuries before 5th century A. D. If this is so, naturally it follows that Veerashaivism which is the main topic of these books was founded several centuries prior to date of these books. So the origin can be dated to the first century B C.* ಎಂದು ಡಾ|| ಎಸ್. ರಾಧಾ ಕೃಷ್ಣನ್‌ರ ಅಭಿಪ್ರಾಯವನ್ನ ಉದಾಹರಿಸಿದ್ದಾರೆ. ಅಂದರೆ

ಕ್ರಿ. ಶ. ೫ನೆಯ ಶತಮಾನದಲ್ಲಿಯ ಕಂಚಿಯ ಶಿಲಾಶಾಸನಲ್ಲಿ ೨೮ ಆಗಮಗಳ ಹೆಸರನ್ನು ಹೇಳಲಾಗಿದೆ ಈ ಆಗಮಗಳು ೫ನೆಯ ಶತಮಾನ ಕ್ಕಿಂತಲೂ ಎಷ್ಟೋ ಹಿಂದಿನವು. ಮತ್ತು ಈ ಪುಸ್ತಕಗಳ ವಿಷಯವು ವೀರಶೈವ ಧರ್ಮವು. ಕಾರಣ ಈ ಪುಸ್ತಕಕ್ಕಿಂತಲೂ ಪೂರ್ವದಲ್ಲಿಯೇ ವೀರಶೈವ ಧರ್ಮವು ಹುಟ್ಟಿ ಬೆಳೆದಿರಬೇಕು. ಆದುದರಿಂದ ವೀರಶೈವ ಧರ್ಮವು ಕ್ರಿ. ಶ. ಪೂ. ೧ನೆಯ ಶತಮಾನವೆಂದು ಊಹಿಸಬಹುದು.

ಹೀಗೆ ಬಸವಣ್ಣನವರಿಗಿಂತಲೂ ಎಷ್ಟೋ ವರ್ಷದಲ್ಲಿ ಶ್ರೀ ರೇಣುಕಾ ಚಾರ್ಯ ಮೊದಲಾದ ವಿಭೂತಿ ಪುರುಷರಿಂದ ತೊಳಗಿ ಬೆಳಗಿದ ವೀರ ಶೈವ ಧರ್ಮಕ್ಕೆ ಬಸವಣ್ಣನವರು ಅದಕ್ಕೆ ಹೊಸ ಚೈತನ್ಯವನ್ನುಕೊಟ್ಟು ನೂತನವನ್ನಾಗುವಂತೆ ಮಾಡಿದರು. ಅದರಿ ಅದು ಪುರಾತನವೆಂಬುದು ನಿಃಸಂಶಯ.

# ಜೈನ, ವೀರಶೈವ, ಬ್ರಾಹ್ಮಣ ಸಂಸ್ಕೃತಿಗಳು.

( ಲೇಖಕ :- ರಾ|| ಬ|| ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ )

ಕನ್ನಡ ವಾಙ್ಮಯವು ಈಗಿನಕಾಲಕ್ಕೆ ಜೈನ, ವೀರಶೈವ, ಬ್ರಾಹ್ಮಣ ಎಂದು ಮೂರು ವಿಭಾಗಗಳಾಗಿ ವಿಂಗಡಿಸಲ್ಪಡುವದುಂಟು. ಈ ವಿಭಾಗ ಗಳಿಗನುಗುಣವಾಗಿ ಕನ್ನಡ ಗ್ರಂಥಕಾರರೂ ಕೂಡಾ ಬೇರೆ ಬೇರೆಯಾಗಿ ಹೇಳಲ್ಪಡುತ್ತಲಿದ್ದಾರೆ. ಹೀಗೆ ವಿಭಾಗಿಸುವದರಿಂದ ಈ ಮೂರೂ ಸಂಸ್ಕೃತಿಗಳ ಅಭ್ಯಾಸಕ್ಕೋಸ್ಕರ ಅನುಕೂಲವಾಗುವದೆಂಬುದು ನಿಜವು. ಆದರೆ ಇಂಥ ವಿಭಾಗಗಳ ಮೂಲಕ ಈ ಮೂರೂ ಸಮಾಜಗಳ ಪರ ಸ್ಪರ ಸಂಬಂಧದ ವಿಷಯವಾಗಿ ತಪ್ಪು ಅಭಿಪ್ರಾಯಗಳುಂಟಾಗಲು ಕಾರಣವಾಗಿರುತ್ತದೆ. ಅವುಗಳಲ್ಲಿ ಕೆಲವುಗಳನ್ನು ನಾವು ಇಲ್ಲಿ ವಿವರಿ ಸುತ್ತೇವೆ.

ಜೈನ ವಾಙ್ಮಯದಲ್ಲಿ ಕೆಲವೊಂದು ಕಾಲದಲ್ಲಿ ಬಹು ಜನ ಗ್ರಂಥ ಕಾರರಾದರು. ಹಾಗೆಯೇ ವೀರಶೈವ ಮತ್ತು ಬ್ರಾಹ್ಮಣ ವಾಙ್ಮಯಗ ಳಲ್ಲಿಯೂ ಅನೇಕರು ಉಂಟಾಗಿದ್ದಾರೆ. ಇಷ್ಟೇ ಅಲ್ಲ, ಈ ವಾಙ್ಮಯಗಳ ಕಾಲಗಳೂ ಕೂಡಾ ನಿರ್ಧರಿಸಲ್ಪಟ್ಟಿದ್ದು ಅವು ೯ ನೇ ಶತಮಾನದಿಂದ ೧೨ ನೇ ಶತಮಾನದ ವರೆಗೆ ಜೈನವಾಙ್ಮಯಕಾಲವೆಂತಲೂ, ೧೨ ನೇ ಶತಮಾನದಿಂದ ೧೫ ನೇ ಶತಮಾನದ ವರೆಗೆ ವೀರಶೈವ ವಾಙ್ಮಯ ಕಾಲವೆಂತಲೂ, ೧೫ ನೇ ಶತಮಾನದ ತರುವಾಯ ಬ್ರಾಹ್ಮಣ ವಾಙ್ಮಯ ವೆಂತಲೂ ಹೇಳಲ್ಪಡುತ್ತದೆ. ಈ ಪ್ರಕಾರ ಕಾಲಗಳು ಉಂಟಾದ್ದರ ಕಾರಣಗಳನ್ನು ಕೂಡಾ ನಮ್ಮ ವಾಙ್ಮಯ ತಜ್ಞರು ಹೇಳುವ ದುಂಟು. ಕರ್ನಾಟಕದಲ್ಲಿ ಜೈನರು ಮೊದಲು ಸುಧಾರಣೆಯನ್ನು ಮಾಡಿ ದರೆಂತಲೂ ಆದ್ದರಿಂದ ಅವರಲ್ಲಿ ಬಹುಜನ ವಿದ್ವಾಂಸರಾದರೆಂತಲೂ, ಅವರು ಕನ್ನಡ ಸಂಸ್ಕೃತಗಳಲ್ಲಿ ಬಹುಪಂಡಿತರಾದ್ದರಿಂದ ಅವರು ನಿರ್ಮಾ ಣಮಾಡಿದ ವಾಙ್ಮಯವು ಬಹು ಕ್ಲಿಷ್ಟವಾದುದಾಯಿತೆಂತಲೂ ಅದು ಜನ

ರಿಗೆ ತಿಳಿಯದ್ದರಿಂದ ವೀರಶೈವ ಗ್ರಂಥಕಾರರು ಉಂಟಾಗಿ ಅವರು ಬಲು ಸುಲಭವಾದ ವಾಙ್ಮಯವನ್ನು ರಚಿಸಿದರೆಂತಲೂ ಹೇಳಲ್ಪಡುತ್ತದೆ. ಈ ವೀರಶೈವ ಗ್ರಂಥಕಾರರು ಸಂಸ್ಕೃತದ ರೀತಿಯನ್ನು ಅನುಸರಿಸದೆ ಅವರು ತಮ್ಮದೇ ಆದ ಕೆಲವೊಂದು ಸುಲಭ ಶೈಲಿಯನ್ನು ಕಂಡುಹಿಡಿದರು. ಇವು ವಚನ, ರಗಳೆ, ಷಟ್ಪದಿಗಳೇ ಇವೆ. ಇದರಿಂದ ಬಹು ಜನ ಸಮಾಜವು ಅವರನ್ನು ಹಿಂಬಾಲಿಸ ಹತ್ತಿದ್ದರಿಂದ ಬ್ರಾಹ್ಮಣರ ಪೂರ್ವದ ವರ್ಚಸ್ಸು ನಾಡಿನಲ್ಲಿ ಕಡಿಮೆಯಾಗಹತ್ತಿತೆಂತಲೂ ಆಗ ಬ್ರಾಹ್ಮಣರು ಸುಲಭ ಶೈಲಿಯನ್ನು ಅಂಗೀಕರಿಸಿ ಜನರಿಗೆ ಪ್ರಿಯವಾಗಿರುವ ರಾಮಾಯಣ ಮಹಾಭಾರತಗಳನ್ನು ಕನ್ನಡದಲ್ಲಿ ಭಾಷಾಂತರಿಸಿದರೆಂತಲೂ ಹೀಗೆ ಕನ್ನಡ ನಾಡಿನ ವಾಙ್ಮಯದ ಕತೆಯನ್ನು ನಮ್ಮ ಕರ್ನಾಟಕ ವಿದ್ವಾಂಸರು ಈ ವರೆಗೂ ಹೇಳುತ್ತ ಬಂದಿದ್ದಾರೆ. ಆದರೆ ಈ ವಿವರಣೆಗಳು ತಪ್ಪೆಂದು ನಮಗೆ ತೋರುತ್ತದೆ.

ಕೆಲವೊಂದು ಸಮಾಜದ ವಾಙ್ಮಯವು ಹೀಗೆ ಒಂದುಕಾಲದಲ್ಲಿ ಹೆಚ್ಚಾಗುತ್ತ ಬಂದರೂ ಆಗ ಬೇರೆ ಸಮಾಜಗಳ ವಾಙ್ಮಯಗಳು ಎಷ್ಟು ಮಾತ್ರವೂ ಉಂಟಾಗಲಿಲ್ಲೆಂಬ ತಿಳಿವಳಿಕೆಯು ತಪ್ಪಾದದ್ದಾಗಿದೆ. ಜೈನರು ತಮ್ಮ ವಾಙ್ಮಯವನ್ನು ಹೆಚ್ಚಿಸುತ್ತಿದ್ದ ಕಾಲಗಲ್ಲಿಯೇ ಬ್ರಾಹ್ಮಣ ಸಮಾಜದಲ್ಲಿ ಗ್ರಂಥಕಾರರೂ ವಿದ್ವಾಂಸರೂ ಆಗಿ ಹೋಗಿದ್ದಾರೆ. ಆಗ ಬ್ರಾಹ್ಮಣರು ಕನ್ನಡ ವಾಙ್ಮಯವನ್ನು ಅನುಸರಿಸದೆ, ಅದರ ಬದಲು ಸಂಸ್ಕೃತವನ್ನು ಪೋಷಿಸುತ್ತ ಬಂದರು. ೧೧ ನೇ ಶತಮಾನದಲ್ಲಿ ಹಿಂದೂ ಧರ್ಮಶಾಸ್ತ್ರಕಾರನಾದ ವಿಜ್ಞಾನೇಶ್ವರನು ಕಲ್ಯಾಣಪಟ್ಟಣದಲ್ಲಿ ವಾಸಿಸುತ್ತಿದ್ದನು. ಅವನು ರಚಿಸಿದ ಗ್ರಂಥವು ಹಿಂದೂ ಕಾಯದೆಯಲ್ಲಿ ಈಗಲೂ ಮನ್ನಣೆಯನ್ನು ಹೊಂದಿದೆ. ಇದೇ ಮೇರೆಗೆ ಅನೇಕ ಬ್ರಾಹ್ಮಣ ಪಂಡಿತರು ೧೪ ನೇ ಶತಮಾನದಲ್ಲಿ ಆಗಿಹೋದ ವಿದ್ಯಾರಣ್ಯ ಸಾಯಣಾಚಾರ್ಯರ ವರೆಗೂ ಕಾಲಕಾಲಕ್ಕೆ ಪ್ರಸಿದ್ಧಿಗೆ ಬಂದಿದ್ದಾರೆ. ಹೀಗೆ ಬ್ರಾಹ್ಮಣ ಪಂಡಿತರು ಜೈನ ವೀರಶೈವ ಗ್ರಂಥಕಾರರ ಕಾಲದಲ್ಲಿಯೂ ಉಂಟಾಗಿದ್ದಾರೆ.

ಅವರಂತೆಯೇ ಜೈನ ಗ್ರಂಥಕಾರರ ಹೆಚ್ಚಳದ ಕಾಲದಲ್ಲಿ ಅನೇಕ ಶಿವಶರಣರೂ ಕೂಡಾ ಆಗಿಹೋಗಿದ್ದಾರೆ. ಅವರಲ್ಲಿ ಕೇಶಿರಾಜ, ದೇವರ

ದಾಸಿಮಯ್ಯ, ಶಂಕರದಾಸಿಮಯ್ಯ, ಬಾಹೂರ ಬ್ರಹ್ಮಯ್ಯ ಮೊದಲಾದವರು ಮುಖ್ಯರು. ಅವರಲ್ಲಿ ಕೆಲವರು ವಚನಕಾರರೂ ಕೆಲವರು ಗ್ರಂಥಕಾರರೂ ಆಗಿದ್ದಾರೆ. ಮುಂದೆ ವೀರಶೈವರಲ್ಲಿ ಶ್ರೀ ಬಸವೇಶ್ವರನು ಪ್ರಸಿದ್ಧಿಗೆ ಬರಲಾಗಿ ಅವನ ಕಾಲದಲ್ಲಿ ಅಸಂಖ್ಯ ಶಿವಶರಣರು ಉಗಮ ಹೊಂದಿ ಉಚ್ಚ ಧಾರ್ಮಿಕ ವಾಙ್ಮಯವನ್ನು ಉಂಟುಮಾಡಿದರು. ಈ ವಾಙ್ಮಯದಲ್ಲಿ ವಚನ ವಾಙ್ಮಯವೇ ಅತ್ಯಂತ ಮಹತ್ವವಾದದ್ದು. ಆಗ ಬಹುಜನ ವಚನಕಾರರು ಉದಯಹೊಂದಿ ವೀರಶೈವ ಧರ್ಮವನ್ನು ಎಲ್ಲಕಡೆಗೂ ಪಸರಿಸಿದರು. ಇವರ ಚಳವಳಿಯ ಪರಿಣಾಮವಾಗಿ ನಾಡಿನಲ್ಲಿ ವೀರಶೈವ ಮತವು ಬಲಿಯಿತು. ಇದಕ್ಕೂ ಮೊದಲು ಜೈನ ವಾಙ್ಮಯ ಕಾಲದಲ್ಲಿ ೧೨ ನೇ ಶತಮಾನದ ಹಿಂದೆಯೇ ವೀರಶೈವ ವಾಙ್ಮಯವು ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ.

ವೀರಶೈವ ವಾಙ್ಮಯ ಪ್ರಸಾರದ ಮೂಲಕ ಜೈನ ಮತವು ನಷ್ಟವಾಯಿತೆಂದು ಅನೇಕರು ಭಾವಿಸಿರುತ್ತಾರೆ. ಇಷ್ಟೇ ಅಲ್ಲ, ಜೈನರು ವೀರಶೈವರಿಂದ ಬಹುಹೆಚ್ಚಾಗಿ ಹಿಂಸಿಸಲ್ಪಟ್ಟವರಾಗಿ ವೀರಶೈವ ಮತಾವಲಂಬಿಗಳಾದರೆಂತಲೂ ಬಹು ಜನರು ತಿಳಿದಿದ್ದಾರೆ. ಆದರೆ ಜೈನ ಧರ್ಮ ಗ್ರಂಥಗಳನ್ನು ಸಂಶೋಧಿಸಿದಲ್ಲಿ ಅನೇಕ ಮಹತ್ವದ ಜೈನ ಧರ್ಮಗ್ರಂಥಕಾರರು ವೀರಶೈವ ಧರ್ಮವು ಪ್ರಚುರಹೊಂದಿದ ಕಾಲದಲ್ಲಿಯೂ ಆಗಿದ್ದುದು ಕಂಡುಬರುತ್ತದೆ ಅವರ ಹೆಸರುಗಳು ಕೆಳಗೆ ಕೊಡಲ್ಪಟ್ಟಿವೆ. ಒಂದು ವೇಳೆ ಜೈನರು ವೀರಶೈವರಿಂದ ಘೋರವಾಗಿ ಹಿಂಸಿಸಲ್ಪಟ್ಟಿದ್ದರೆ ಹೀಗೆ ಅವರಲ್ಲಿ ಮಹತ್ವದ ಗ್ರಂಥಕಾರರು ಬಸವೇಶ್ವರನ ಕಾಲದಲ್ಲಿ ಅಥವಾ ಅವನ ತರುವಾಯ ಉಂಟಾಗುತ್ತಿದ್ದಿಲ್ಲ. ಬಸವೇಶ್ವರನು ಜನಿಸಿದ ವರ್ಷವು ೧೧೩೨ ಎಂತಲೂ ಅವನು ಲಿಂಗೈಕ್ಯವಾದದ್ದು ೧೧೭೦ ರಲ್ಲಿ ಎಂತಲೂ ಭಾವಿಸಲ್ಪಟ್ಟಿರುತ್ತದೆ. ಬಸವೇಶ್ವರನ ತರುವಾಯ ಸಹ ಬಹುಕಾಲದವರೆಗೆ ವೀರಶೈವ ಧರ್ಮವು ವಿಸ್ತಾರ ಹೊಂದುತ್ತಬಂದಿದೆ. ಈ ಅವಧಿಯಲ್ಲಿ ಕಾಲ ಕಾಲಕ್ಕೆ ಮಹತ್ವದ ಜೈನ ಪಂಡಿತರೂ ಧರ್ಮ ಗ್ರಂಥಕಾರರೂ ಕೂಡ ಆಗಿಹೋಗಿದ್ದಾರೆ. ಈ ಸಂಗತಿಯು ವೀರಶೈವರು ಜೈನರ ಮೇಲೆ ಧಾರ್ಮಿಕ ದಬ್ಬಾಳಿಕೆಯನ್ನು ಮಾಡಿದರೆಂಬುದನ್ನು ಸಿದ್ಧಗೊಳಿಸುವದಿಲ್ಲ.

ಈ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಜೈನ ಗ್ರಂಥಕಾರರ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

೧೧೪೦ ಕರ್ಣಪಾರ್ಯ. ನೇಮಿನಾಥ ಪುರಾಣದ ಕರ್ತೃವು.

೧೧೪೫ ಎರಡನೇ ನಾಗವರ್ಮ. ಇವನು ಬರೆದ ಗ್ರಂಥಗಳು (೧) ಕಾವ್ಯಾವಲೋಕನ (೨) ಕರ್ನಾಟಕ ಭಾಷಾ ಭೂಷಣ (೩) ವಸ್ತುಕೋಶ

೧೧೪೮ ಮೇಘಚಂದ್ರ. ಈತನು ಕೆಲವು ಶತಕಗಳ ವ್ಯಾಖ್ಯಾನಕಾರನಾಗಿದ್ದಾನೆ.

೧೧೫೦ ಉದಯಾದಿತ್ಯ. ಅಲಂಕಾರ ಗ್ರಂಥ ಬರೆದಿದ್ದಾನೆ.

೧೧೫೦ ಸುಮನೋಬಾಣ.

೧೧೫೦ ಚಾವುಂಡರಾಯ. ಲೋಕೋಪಕಾರ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ.

೧೧೫೩ ವೀರಣಂದಿ. ಆಚಾರಸಾರ ಗ್ರಂಥ ಬರೆದಿದ್ದಾನೆ.

೧೧೬೦ ಶಾಂತಿವರ್ಮ. ಒಬ್ಬ ಮಹತ್ವದ ಜೈನ ಗ್ರಂಥಕಾರ

೧೧೬೦ ವೃತ್ತ ವಿಲಾಸ. ಇವನು ಬರೆದ ಗ್ರಂಥ ಧರ್ಮ ಪರೀಕ್ಷೆ

೧೧೭೦ ಬಾಲಚಂದ್ರ. ವ್ಯಾಖ್ಯಾನಕಾರನು.

೧೧೭೦ ನೇಮಿಚಂದ್ರ. ಲೀಲಾವತಿ, ನೇಮಿನಾಥ ಪುರಾಣಗಳನ್ನು ಬರೆದಿದ್ದಾನೆ.

೧೧೮೦ ಬೊಪ್ಪಣ ಪಂಡಿತ. ನೀತಿ ಬೋಧಕ ಪದ್ಯಗಳು.

೧೧೮೯ ಅಗ್ಗಳ. ಚಂದ್ರಪ್ರಭ ಪುರಾಣ.

೧೧೯೫ ಆಚಣ್ಣ. ವರ್ಧಮಾನ ಪುರಾಣ.

೧೨೦೦ ಬಂಧುವರ್ಮ. ನೇಮಿನಾಥ ಚರಿತೆ, ಜೀವ ಸಂಬೋಧನೆ.

೧೨೦೦ ದೇವೇಂದ್ರಮುನಿ. ಬಾಲಗ್ರಹ ಚಿಕಿತ್ಸೆ.

೧೨೦೫ ಪಾರ್ಶ್ವ ಪಂಡಿತ. ಪಾರ್ಶ್ವನಾಥ ಪುರಾಣ

೧೨೦೫ ಜನ್ನ. ಯಶೋಧರ ಚರಿತೆ, ಅನಂತನಾಥ ಪುರಾಣ. ಕವಿ ಚಕ್ರವರ್ತಿ ಎಂಬ ಬಿರುದುಳ್ಳವ

೧೨೩೩ ಶಿಶು ಮಾಯಣ. ಅಂಜನಾ ಚರಿತ್ರೆ.

೧೨೩೫ ಎರಡನೇ ಗುಣವರ್ಮ. ಪುಷ್ಪದಂತ ಪುರಾಣ.

೧೨೩೫ ಕಮಲಭವ. ಶಾಂತೀಶ್ವರ ಪುರಾಣ.

೧೨೩೫ ಆಂಡಯ್ಯ. ಕಬ್ಬಿಗರ ಕಾವ.
೧೨೪೫ ಮಲ್ಲಿಕಾರ್ಜುನ. ಸೂಕ್ತಿ ಸುಧಾರ್ಣವ
೧೨೫೪ ಮಹಾಬಲ ಕವಿ. ನೇಮಿನಾಥ ಪುರಾಣ.
೧೨೬೦ ಕೇಶಿರಾಜ. ಶಬ್ದಮಣಿ ದರ್ಪಣ.
೧೨೮೦ ಮಾಘಣಂದಿ. ಶಾಸ್ತ್ರಸಾರ ಸಮುಚ್ಚಯ.
೧೨೭೫ ಕುಮುದೇಂದು. ರಾಮಾಯಣ.
೧೩೦೦ ಯಶಶ್ಚಂದ್ರ.
೧೩೦೦ ಪದ್ಮಪ್ರಭ. ವಿಂಶತಿ ರೂಪಿಣೀ ಟೀಕೆ.

ಈ ಪ್ರಕಾರ ಜೈನರ ಅನೇಕ ಮಹತ್ವದ ಗ್ರಂಥಕಾರರು ಶಿವಶರಣರ ಅಭ್ಯುದಯದ ಕಾಲದಲ್ಲಿಯೂ ಅದರ ತರುವಾಯವೂ ಕೂಡ ಪ್ರಸಿದ್ಧಿಗೆ ಬಂದಿದ್ದಾರೆ. ಆದ್ದರಿಂದ ಇದು ವೀರಶೈವ ಧರ್ಮದ ಕಾಲ, ಇದು ಜೈನ ಧರ್ಮದ ಕಾಲ, ಎಂದು ಸ್ಪಷ್ಟವಾಗಿ ವಿಂಗಡಿಸುವದು ತಪ್ಪು ತಿಳಿವಳಿಕೆಯಾಗಿದೆ.

ಎಲ್ಲ ಕಾಲಗಳಲ್ಲಿಯೂ ಜೈನ, ಲಿಂಗಾಯತ ಮತ್ತು ಬ್ರಾಹ್ಮಣ ಸಮಾಜಗಳಲ್ಲಿ ಪಂಡಿತರು ಉದ್ಭವಿಸಿ ತಮ್ಮ ತಮ್ಮ ಮತಗಳನ್ನು ಕುರಿತು ಉದ್ಗ್ರಂಥಗಳನ್ನು ಬರೆಯುತ್ತ ಬಂದಿದ್ದಾರೆ. ಒಂದುವೇಳೆ ಅವರಲ್ಲಿ ಪರಸ್ಪರ ಹಿಂಸೆಗಳೂ ವಿರೋಧಗಳೂ ನಡೆದಿದ್ದರೆ ಈ ರೀತಿ ಒಂದೇ ಕಾಲಕ್ಕೆ ಇಂಥ ಮಹತ್ವದ ಗ್ರಂಥಗಳು ವೀರಶೈವ ಜೈನರಲ್ಲಿ ಏಕಕಾಲಕ್ಕೆ ಅನೇಕ ವರ್ಷ ಉಂಟಾಗುತ್ತಿದ್ದಿಲ್ಲ.

ಈ ಪುರಾತನ ಕಾಲದಲ್ಲಿ ಜೈನ ಸಮಾಜವು ಉಚ್ಚ ಸ್ಥಾನದಲ್ಲಿದ್ದಿತೆಂದು ಕರ್ನಾಟಕ ಇತಿಹಾಸದಿಂದ ತಿಳಿದುಬರುತ್ತದೆ. ಸವದತ್ತಿಯ ರಟ್ಟರು, ಉತ್ತರ ಮೈಸೂರಿನ ಸಾಂತರರು, ಪಾಂಡ್ಯರು ಇವರಲ್ಲದೆ ಅನೇಕ ಮಾಂಡಲಿಕರು ಜೈನ ಧರ್ಮವನ್ನು ಹೊಂದಿದವರಾಗಿದ್ದರು. ಅವರು ಜೈನ ಗ್ರಂಥಕಾರರನ್ನು ಚನ್ನಾಗಿ ಪೋಷಿಸುತ್ತ ಬಂದಿದ್ದಾರೆ. ಆದರೆ ಶಿವಶರಣರಲ್ಲಿ ಬಹು ಸ್ವಲ್ಪ ಜನರು ಇಂಥ ಉಚ್ಚ ಅಧಿಕಾರಗಳನ್ನು ಹೊಂದಿದವರಾಗಿದ್ದರು. ಅವರೆಲ್ಲರೂ ಬಹುತರ ಸಣ್ಣ ಕೈಗಾರಿಕೆಗಳನ್ನು ಮಾಡುವವರಾಗಿದ್ದರು. ಅವರು ಬಹುತರವಾಗಿ ಬಡವರು.

ಇಂಥವರು ಉಚ್ಚ ಅಧಿಕಾರ ಸ್ಥಾನಗಳಲ್ಲಿದ್ದ ಜೈನರನ್ನು ಹಿಂಸಿಸುವದು ಶಕ್ಯ ತೋರುವದಿಲ್ಲ.

ಆದರೆ ಈ ಶಿವಶರಣರು ಉಚ್ಚ ಮತ್ತು ಉದಾರ ವಿಚಾರಗಳನ್ನು ಅನುಸರಿಸುವವರಾಗಿದ್ದರು. ಅವರು ಅವುಗಳನ್ನು ಉಚ್ಚ ನೀಚ ಎಲ್ಲ ವರ್ಗದವರಲ್ಲಿ ಪ್ರಸಾರ ಮಾಡುವದರಲ್ಲಿ ತೊಡಗಿದವರಾಗಿದ್ದರು. ಇದರಿಂದ ಬಹುಜನ ಸಮಾಜದಲ್ಲಿ ವೀರಶೈವ ಧರ್ಮವು ನೆಲೆಗೊಂಡಿತು. ಈ ಪ್ರಸಾರ ಕಾರ್ಯಗಳು ವಚನಗಳ ಮುಖಾಂತರವೇ ನಡೆದುಬಂದವು. ಅವುಗಳಲ್ಲಿಯ ಬೋಧೆಗಳಿಗೆ ಬಹುಜನ ಸಮಾಜವು ಒಲಿಯಿತು. ಈ ಪ್ರಸಾರ ಕಾರ್ಯವು ಬಸವೇಶ್ವರನ ಕಾಲದಲ್ಲಿ ಮಾತ್ರವಲ್ಲ, ಅವನ ತರುವಾಯ ೧೦೦ ವರ್ಷಗಳ ವರೆಗೂ ಕರ್ನಾಟಕದಲ್ಲೆಲ್ಲ ನಡೆದುಬಂದಿದೆ. ಇದರ ಪರಿಣಾಮವಾಗಿ ವೀರಶೈವ ಮತವು ನಾಡಿನಲ್ಲಿ ಒಲವಾಗಿ ಬೆಳೆಯಿತು. ಇದು ಬಹುಜನರು ತಿಳಿದಿರುವಂತೆ ಶರಣರ ಕೇವಲ ಪವಾಡಗಳಿಂದಲ್ಲ.

ಹೀಗೆ ವೀರಶೈವ ಧರ್ಮವು ಪ್ರಸಾರಕೊಂಡಿದ್ದು ಪರಧರ್ಮಿಗಳನ್ನು ಹಿಂಸೆಮಾಡಿ ಅವರಿಗೆ ಬಲಾತ್ಕಾರದಿಂದ ಲಿಂಗಧಾರಣೆಮಾಡಿದ್ದರಿಂದಲ್ಲ, ಶರಣರ ಅಹಿಂಸೆಯ ಮಾರ್ಗವನ್ನು ಅನುಸರಿಸುತ್ತ ಉಚ್ಚ ವಿಚಾರಗಳನ್ನು ಸಮಾಜದಲ್ಲಿ ನೆಲೆಗೊಳಿಸಿದ್ದರ ಮೂಲಕವಾಗಿದೆ.

ಮುಂದೆ ೧೩೦೦ ರ ತರುವಾಯ ಕರ್ನಾಟಕದಲ್ಲಿ ಮುಸಲ್ಮಾನರ ಹಾವಳಿಗಳು ಪ್ರಾರಂಭವಾದವು. ಆಗ ಮಹತ್ವದ ರಾಜ್ಯಗಳು ಕುಸಿದು ಬಿದ್ದವು. ದೇವಗಿರಿ ಯಾದವರು, ಹೊಯಿಸಳರು, ಓರುಗಲ್ಲಿನ ಕಾಕತೀಯರು ಪದಚ್ಯುತರಾದರು. ಆಗ ಎಲ್ಲೆಲ್ಲಿಯೂ ಹಿಂಸಾಚಾರಗಳೂ ಅನೀತಿಯ ಕೃತ್ಯಗಳೂ ನಡೆದವು. ಈ ಸಮಯದಲ್ಲಿ ಪ್ರಜೆಗಳನ್ನು ಪಾಲಿಸತಕ್ಕ ಅಧಿಕಾರಿಗಳು ಯಾರೂ ಉಳಿಯಲಿಲ್ಲ. ಈ ಸ್ಥಿತಿಯು ಉಂಟಾದಕೂಡಲೆ ಜೈನ ಧರ್ಮೀಯರು ಕಾರವಾರ ಮತ್ತು ಮಂಗಳೂರಿನ ಕಾಡು ಪ್ರದೇಶಗಳಿಗೆ ಹೋಗಿ ತಮ್ಮನ್ನು ರಕ್ಷಿಸಿಕೊಂಡರು. ವೀರಶೈವ ಧರ್ಮಾಧಿಕಾರಿಗಳು ಉತ್ತರ ಕರ್ನಾಟಕವನ್ನು ಬಿಟ್ಟು ಕಾವೇರೀ ದಕ್ಷಿಣಕ್ಕೆ ತೆರಳಿ ಅಲ್ಲಿ ವಾಸಮಾಡಹತ್ತಿದರು. ಆದರೆ ವೀರಶೈವರು ಈ ಕಾಲಕ್ಕೆ ಉತ್ತರ ನಾಡಿನಲ್ಲಿ ಬಹುಸಂಖ್ಯಾಕರಾದ್ದರಿಂದ ಅವರು ಈ

ತಮ್ಮ ಪ್ರದೇಶಗಳಲ್ಲಿಯೇ ಇದ್ದುಕೊಂಡು ತಮ್ಮ ರಕ್ಷಣೆಯನ್ನು ಮಾಡಿಕೊಂಡರು. ಅವರು ಕೆಲವು ಕಾಲ ವಿಜಯನಗರದ ರಾಜ್ಯದಲ್ಲಿ, ಕೆಲವು ಕಾಲ ವಿಜಾಪುರ ಆದಿಲ್‌ಶಾಹೀ ಮತ್ತು ಕಲಬುರ್ಗಿಯ ಬಹಾಮನೀ ಬಾದಶಹರ ರಾಜ್ಯಗಳಲ್ಲಿ ಇದ್ದರು. ಆದರೂ ಅವರು ತಮ್ಮ ವೀರಶೈವ ಧರ್ಮವನ್ನು ಬಿಡದೆ ಇಸ್ಲಾಮ ಧರ್ಮವನ್ನು ಸ್ವೀಕರಿಸದೆ ತಮ್ಮನ್ನು ಸಂರಕ್ಷಿಸಿಕೊಂಡರು. ಇಷ್ಟೇ ಅಲ್ಲ. ಈ ಮುಸಲ್ಮಾನ ರಾಜರಲ್ಲಿ ಅವರು ತಮ್ಮ ಶೌರ್ಯ ಧೈರ್ಯಗಳನ್ನು ತೋರಿಸುತ್ತ ದೊಡ್ಡ ದೊಡ್ಡ ಜಮೀನದಾರರೂ ವತನದಾರರೂ ಆಗಿ ತಮ್ಮ ಶ್ರೇಷ್ಠತೆಯನ್ನು ಕಾಯ್ದುಕೊಂಡರು.

# ಟೀಕೆ- ಟಿಪ್ಪಣಿಗಳು

ಶಿವಾನುಭವ ಪತ್ರಿಕೆಯ ೨೫ ನೇ ವರ್ಷದ ಪ್ರಾರಂಭ— ನಾವು ಶಿವಾನುಭವ ಪತ್ರಿಕೆಯನ್ನು ಪ್ರಾರಂಭಿಸಿ ಇಂದಿಗೆ ೨೪ ವರ್ಷಗಳಾದವು. ಈಗಿನ ಸಂಚಿಕೆಯಿಂದ ಅದರ ೨೫ನೇ ವರ್ಷವು ಪ್ರಾರಂಭವಾಗುತ್ತದೆ. ಈ ಪತ್ರಿಕೆಯನ್ನು ಪ್ರಾರಂಭಿಸಿದಾಗ ಶಿವಶರಣರ ವಾಙ್ಮಯದ ಮಹತ್ವವು ಯಾರಿಗೂ ಗೊತ್ತಿರಲಿಲ್ಲ. ಇದರ ಪರಿಚಯವನ್ನು ಕರ್ನಾಟಕಸ್ತರಿಗೆ ಮಾಡಿಕೊಡುವದೇ ಪತ್ರಿಕೆಯ ಮುಖ್ಯ ಉದ್ದೇಶವಾಗಿತ್ತು. ಈ ಉದ್ದೇಶವು ಕೆಲಮಟ್ಟಿಗಾದರೂ ಈಗ ಸಫಲವಾಗಿದೆಂದು ಹೇಳಲು ಪ್ರತ್ಯವಾಯವಿಲ್ಲ. ಅನೇಕ ವಚನ ಗ್ರಂಥಗಳನ್ನು ನಾವು ಶಿವಾನುಭವ ಪತ್ರಿಕೆಯ ದ್ವಾರಾ ಪ್ರಸಿದ್ಧಿಸಿದೆವು. ಬೇರೆ ಕೆಲವುಗಳನ್ನು ಸ್ವತಂತ್ರವಾಗಿಯೂ ಮುದ್ರಿಸಿದೆವು. ಇದಲ್ಲದೆ ಹರಿಹರನ ರಗಳೆಗಳಲ್ಲನೇಕವುಗಳನ್ನು ನಾವು ಪತ್ರಿಕೆಯ ಮೂಲಕ ಪ್ರಕಟಿಸಿದೆವು. ಪತ್ರಿಕೆಯನ್ನು ಪ್ರಾರಂಭಿಸುವ ಮೊದಲು ಈ ರಗಳೆಗಳ ಪರಿಚಯವು ಜನರಿಗೆ ಇದ್ದಿದ್ದಿಲ್ಲ. ಆದರೆ ೩೦-೪೦ ರಗಳೆಗಳನ್ನು ನಾವು ಈ ವರೆಗೆ ಪ್ರಸಿದ್ಧಿಸಿದ್ದರಿಂದ ಹರಿಹರನು ಎಂಥ ಉದಾತ್ತ ಕವಿಯಾಗಿದ್ದಾನೆಂಬುದು ಕರ್ನಾಟಕಸ್ತರ ನಿದರ್ಶನಕ್ಕೆ ಬಂದಿರುತ್ತದೆ. ಹೀಗೆ ಹೋದ ೨೪ ವರ್ಷಗಳಲ್ಲಿ ಸುಮಾರು ೭೫ ಪುರಾತನ ಗ್ರಂಥಗಳನ್ನು ನಾವು ಪ್ರಕಟಿಸಿದೆವು. ಇದಲ್ಲದೆ ಪತ್ರಿಕೆಯಲ್ಲಿ ಶಿವಾನುಭವ ಶಾಸ್ತ್ರದ ತತ್ವಗಳ ನಿರೂಪಣೆ ಮಾಡುವಂಥ ಅನೇಕ ಲೇಖಗಳು ಯಾವಾಗಲೂ ಬರುತ್ತಾ ಇವೆ. ಅವೆಲ್ಲವೂ ಬಹುತರ ಸಂಶೋಧನಾತ್ಮಕವಾದ ಸ್ವತಂತ್ರ ಲೇಖಗಳಾಗಿರುತ್ತವೆ. ಅವುಗಳ ಮೇಲಿಂದ ಅನೇಕ ಮಹಾನುಭಾವರು ವಚನ ಶಾಸ್ತ್ರವನ್ನು ಎಷ್ಟು ಆಳವಾಗಿ ಅಭ್ಯಾಸಮಾಡುತ್ತಾ ಇದ್ದಾರೆಂಬುದು ಗೊತ್ತಾಗುತ್ತದೆ. ಇದು ಬಹು ಅಭಿನಂದನೀಯವಾದದ್ದು. ಸಂಶೋಧನಾತ್ಮಕ ದೃಷ್ಟಿಯಿಂದ ಬರೆದ ಎಲ್ಲ ಲೇಖಗಳಿಗೂ ನಾವು ಪತ್ರಿಕೆಯಲ್ಲಿ ಸ್ಥಾನ ಕೊಡುತ್ತಾ ಬಂದಿದ್ದೇವೆ. ಇದರಲ್ಲಿ ನಾವು ಯಾವ ತರದ ಪಕ್ಷಪಾತ ವಹಿಸಿಲ್ಲ. ಸತ್ಯಾನ್ವೇಷಣವನ್ನೇ ನಮ್ಮ ಉದ್ದೇಶವನ್ನಾಗಿ ಇಟ್ಟುಕೊಂಡು ಇಂಥ ಲೇಖಗಳನ್ನು ಪ್ರಕಟಿಸುತ್ತ ಬಂದಿದ್ದೇವೆ. ಈಚೆಗೆ ನಾವು

ಶಿವಶರಣರ ಚರಿತ್ರೆಗಳಿಗೆ ಮುಖ್ಯಸ್ಥಾನವನ್ನು ಕೊಟ್ಟಿರುತ್ತೇವೆ. ಈ ವಿಷಯವು ಅತ್ಯಂತ ಮಹತ್ವವಾದದ್ದು. ಈ ಚರಿತ್ರೆಗಳಲ್ಲಿ ಶಿವಾನುಭವದ ಉದಾತ್ತ ವಿಚಾರಗಳು ಅಡಕವಾಗಿರುತ್ತವೆ. ವಾಚಕರು ಈ ಚರಿತ್ರೆಗಳನ್ನು ಲಕ್ಷಪೂರ್ವಕವಾಗಿ ಅವಲೋಕಿಸಿದಲ್ಲಿ ಇದು ಅವರಿಗೆ ಕಂಡು ಬರದೆ ಇರಲಾರದು. ಅವುಗಳ ಮೂಲಕ ನಾವು ವೀರಶೈವ ಧಾರ್ಮಿಕ ಇತಿಹಾಸವನ್ನು ಕಂಡು ಹಿಡಿಯಬಹುದು. ಶಿವಶರಣರ ಚರಿತ್ರೆಗಳಲ್ಲಿ ವೀರಶೈವಧರ್ಮದ ಉಚ್ಚ ಸಂಸ್ಕೃತಿಯನ್ನು ಕಾಣಬಹುದು. ಅವುಗಳ ಮೇಲಿಂದ ಶಿವಶರಣರು ತಾವು ಬೋಧಿಸಿದ ತತ್ವಗಳನ್ನು ತಮ್ಮ ಆಚರಣೆಯಲ್ಲಿ ಹೇಗೆ ತಂದರೆಂಬುದನ್ನು ತಿಳಿಯಬಹುದು. ಈ ಮಹಾನುಭಾವರು ಒಂದು ಸಾವಿರ ವರುಷಗಳ ಹಿಂದೆ ಆಗಿ ಹೋಗಿದ್ದಾರೆ. ಆದ್ದರಿಂದ ಅವರ ಚರಿತ್ರೆಗಳಲ್ಲಿ ಅತಿಶಯೋಕ್ತಿಗಳೂ ಅಸಂಭವನೀಯ ಸಂಗತಿಗಳೂ ಇದ್ದರೂ ಇರಬಹುದು. ಆದರೆ ವಾಚಕರು ಅವುಗಳಲ್ಲಿರುವ ಸತ್ಯಾಂಶಗಳನ್ನು ಕಂಡು ಹಿಡಿಯಲು ಪ್ರಯತ್ನಿಸಿದಲ್ಲಿ ಅವು ವೀರಶೈವ ಇತಿಹಾಸದ ಮೇಲೆ ಮತ್ತು ವೀರಶೈವ ಸಂಸ್ಕೃತಿಯ ಮೇಲೆ ಮಹತ್ವದ ಪ್ರಕಾಶವನ್ನು ಕೆಡಹುತ್ತವೆ. ನಾವು ಈ ಚರಿತ್ರೆಗಳನ್ನು ಇದ್ದಕ್ಕಿದ್ದ ಹಾಗೆ ಇಟ್ಟು ಇವುಗಳಲ್ಲಿರುವ ತಾತ್ವಿಕ ಮತ್ತು ಐತಿಹಾಸಿಕ ಭಾಗಗಳಿಗೆ ಮುಖ್ಯಸ್ಥಾನವನ್ನು ಕೊಡುತ್ತ ಬಂದಿದ್ದೇವೆ. ಹೀಗೆ ಶಿವಾನುಭವ ಪತ್ರಿಕೆಯ ದ್ವಾರಾ ವೀರಶೈವ ಸಂಸ್ಕೃತಿಯ ಅರಿವನ್ನು ಕರ್ನಾಟಕಸ್ತರಿಗೆ ಮಾಡಿಕೊಡುವ ಉದ್ದೇಶವನ್ನು ನಾವು ಮುಂದಿಟ್ಟು ಕೊಂಡು ಈ ಪತ್ರಿಕೆಯನ್ನು ೨೪ ವರ್ಷಗಳಿಂದಲೂ ನಡಿಸುತ್ತ ಬಂದಿದ್ದೇವೆ

ಆದರೆ ನಾವು ಮಾಡತಕ್ಕ ಮುಂದಿನ ಕಾರ್ಯಗಳು ಇನ್ನೂ ಬಹಳ ಘನತರವಾದವುಗಳು. ವಚನಶಾಸ್ತ್ರದ ಗ್ರಂಥಗಳು ಇನ್ನೂ ಅನೇಕಾನೇಕವಿದ್ದು ಅವುಗಳನ್ನು ನಾವು ಪ್ರಕಟಿಸಬೇಕಾಗಿದೆ. ಈಗ ಪ್ರಕಟವಾದ ಗ್ರಂಥಗಳಿಗೆ ವಿಮರ್ಶೆಗಳನ್ನೂ ಟೀಕೆ ಟಿಪ್ಪಣೆಗಳನ್ನೂ ಬರೆಯಬೇಕಾಗಿದೆ. ಷಟ್ ಸ್ಥಲ ಶಾಸ್ತ್ರದ ತತ್ವಗಳ ಪರಿಚಯವನ್ನು ಇನ್ನೂ ಹೆಚ್ಚಾಗಿ ಜನರಿಗೆ ಮಾಡಿಕೊಡಬೇಕಾಗಿದೆ. ಹೀಗೆ ಶಿವಾನುಭವ ತತ್ವ ಪ್ರಸಾರಕ್ಕೋಸ್ಕರ ಇನ್ನೂ ಹೆಚ್ಚಾಗಿ ವೀರಶೈವರು ಶ್ರಮಿಸಬೇಕಾಗಿದೆ. ಆದರೆ ಇಂಥ ಪ್ರಯತ್ನಗಳು ಇನ್ನೂ ಹೆಚ್ಚಾಗಿ ನಡೆದಿರುವದಿಲ್ಲ.

ಅಲ್ಲಲ್ಲಿ ಶಿವಾನುಭವ ಸಂಘಗಳಾಗಿದ್ದರೂ ಅವುಗಳು ವ್ಯವಸ್ಥಿತವಾಗಿ ನಡೆಯುವ ಏರ್ಪಾಡು ಆಗಿಲ್ಲ. ಇದು ಆಗಬೇಕಾಗಿದೆ. ಅವುಗಳಲ್ಲಿ ಯೋಗ್ಯ ಸಂಘಟನೆಯನ್ನು ಮಾಡುವದು ಅವಶ್ಯ. ಇದಲ್ಲದೆ ವೀರಶೈವ ಕಾವ್ಯಗಳು ಅಂದರೆ ಶತಕಗಳು, ವಾರ್ಧಿಕಗಳು, ತ್ರಿವಿದಿಗಳು ಇವು ಅಸಂಖ್ಯವಾಗಿವೆ. ಅವುಗಳನ್ನು ನಾವು ಸಂಶೋಧಿಸಿ ಅಚ್ಚುಹಾಕಿಸುವದು ಅವಶ್ಯವಿರುತ್ತದೆ. ಈ ಎಲ್ಲ ಕಾರ್ಯಗಳು ಕೇವಲ ಒಂದು ಶಿವಾನುಭವ ಪತ್ರಿಕೆಯ ದ್ವಾರಾ ಕೈಗೊಳ್ಳುವದು ಶಕ್ಯವಲ್ಲ. ಅನೇಕ ಪಂಡಿತರು, ಶಿವಾನುಭಾವಿಗಳು ಈ ಕಾರ್ಯಕ್ಕೋಸ್ಕರ ಶ್ರಮ ವಹಿಸಬೇಕಾಗಿರುತ್ತದೆ. ಈ ಕಾರ್ಯಗಳನ್ನು ಇನ್ನು ಮುಂದೆ ಶಕ್ಯವಿದ್ದಷ್ಟು ಭರದಿಂದ ನಡಿಸಬೇಕೆಂದು ಇಚ್ಛಿಸಿದ್ದೇವೆ.

ಆದರೆ ಶಿವಾನುಭವ ಪತ್ರಿಕೆಗೆ ಜನಸಹಾಯವು ಅತ್ಯಲ್ಪವಾಗಿದೆಂಬುದನ್ನು ನಮ್ಮ ವಾಚಕರ ಲಕ್ಷಕ್ಕೆ ತರಲು ಇಚ್ಛಿಸುತ್ತೇವೆ. ಅದರ ಅಸ್ತಿತ್ವವು ಚಂದಾದಾರರ ಸಹಾಯದ ಮೇಲೆ ಅವಲಂಬಿಸಿದೆ. ಇದರಲ್ಲಿಯ ವಿಷಯಗಳು ಸ್ವಾಭಾವಿಕವಾಗಿ ಕ್ಲಿಷ್ಟವಿರುವದರಿಂದ ಅದಕ್ಕೆ ಚಂದಾದಾರರ ಸಂಖ್ಯೆಯು ಯಾವಾಗಲೂ ಬಹು ಕಡಿಮೆ ಇರುತ್ತದೆ. ಧಾರ್ಮಿಕ ಬುದ್ಧಿಯವರೇ ಇದಕ್ಕೆ ಸಹಾಯ ಮಾಡುವಂಥವರು. ಆದರೆ ಈಗಿನ ಆಂದೋಲನಗಳ ಮೂಲಕ ಈ ಪ್ರವೃತ್ತಿಯು ಬಹಳ ಕಡಿಮೆಯಾಗಹತ್ತಿದೆ. ಆದರೆ ಸಂಸ್ಕೃತಿ ವಿಷಯದಬಗ್ಗೆ ಹೀಗೆ ವೀರಶೈವ ಸಮಾಜವು ಅನಾದರಣೆಯನ್ನು ತಾಳಿದ್ದಾದರೆ ಪತ್ರಿಕೆಗೆ ಹಾನಿಯಾಗದೆ ಇರದು. ಈಗಿನ ಪರಿಸ್ಥಿತಿಯ ಮೂಲಕ ಪತ್ರಿಕೆಯನ್ನು ನಡಿಸುವದು ನಮಗೆ ಬಹಳ ಕಠಿಣವಾಗಹತ್ತಿದೆ. ಆದ್ದರಿಂದ ವಾಚಕರು ತಮ್ಮ ಮಿತ್ರರನ್ನು ಪ್ರೋತ್ಸಾಹಿಸಿ ಈ ಪತ್ರಿಕೆಯ ಚಂದಾದಾರರನ್ನ ಹೆಚ್ಚಿಸಿ ಇದನ್ನು ಪೋಷಿಸಿದಲ್ಲಿ ನಾವು ಅವರಿಗೆ ಬಹಳ ಕೃತಜ್ಞರಾಗುವೆವು.

ಶಿವಾನುಭವ ಪ್ರವಾಸ ಗೋಷ್ಠಿ:— ಕಾನಕಾನಹಳ್ಳಿಯ ಶಿವಾನುಭವ ಪ್ರವಾಸ ಗೋಷ್ಠಿಯ ಚಾಲಕರು ತಮ್ಮ ಪ್ರವಾಸದ ಕಾರ್ಯಕ್ರಮವನ್ನು ಹೇಗೆ ನಡಿಸುತ್ತಾರೆಂಬುದನ್ನು ಕುರಿತು ಅವರು ನಮಗೆ ಬರೆದು ಕಳಿಸಿದ ಲೇಖವನ್ನು ನಾವು ಈ ಸಂಚಿಕೆಯಲ್ಲಿ ಬೇರೆ ಕಡೆಗೆ ಪ್ರಸಿದ್ಧಿಸಿದ್ದೇವೆ.

ಈ ಪ್ರಕಾರ ಅವರು ಕೆಲವು ವರ್ಷಗಳಿಂದಲೂ ಕಾರ್ಯಮಾಡುತ್ತ ಬಂದಿದ್ದಾರೆಂದು ತಿಳಿಯುತ್ತದೆ. ಅವರು ಯಾವತರದಪ್ರಸಿದ್ಧಿ ಯನ್ನು ಹೊಂದಲು ಅಪೇಕ್ಷಿಸದೆ ಸಮಾಜ ಸುಧಾರಣೆಯನ್ನೇ ತಮ್ಮ ಗುರಿಯಾಗಿಟ್ಟುಕೊಂಡು ಹೀಗೆ ಪ್ರಯತ್ನಿಸುತ್ತಿರುವದು ಅನುಕರಣೀಯವಾಗಿದೆ. ಮಹಾತ್ಮಾ ಗಾಂಧಿಯವರು ತಮ್ಮ ಪ್ರಚಾರ ಕಾರ್ಯಗಳನ್ನು ನಡಿಸುತ್ತ ಬಂದುದು ಇದೇ ಮಾದರಿಯ ಮೇಲೆ. ಅವರು ಕೆಲ ಕಾರ್ಯಕರ್ತರನ್ನು ಕೂಡಿಕೊಂಡು ಹೀಗೆಯೇ ಗ್ರಾಮಗಳಲ್ಲಿ ಸಂಚರಿಸುತ್ತ ಬರುತ್ತಿದ್ದರು. ಇದರಿಂದ ಕಾರ್ಯಕರ್ತರಲ್ಲಿ ಒಂದು ಬಲವಾದ ಸಂಘಟನೆಯಾಗುತ್ತದೆ. ಹಳ್ಳಿಗರ ರೀತಿ ನೀತಿಗಳು ತಿಳಿಯುತ್ತವೆ. ಹಳ್ಳಿಗರಿಗೂ ಸಮಾಜ ಸುಧಾರಣಾ ಕಾರ್ಯಕರ್ತ್ಯರಿಗೂ ಇರಬೇಕಾದ ಪರಸ್ಪರ ಸಹಾನುಭೂತಿಯು ಬೆಳೆಯುತ್ತ ಹೋಗುತ್ತದೆ. ಸಮಾಜ ಕಾರ್ಯ ಯಾವಾಗಲೂ ಕಠಿಣ ತರವಾದದ್ದು. ಬಹುಜನ ಸಮಾಜದಲ್ಲಿ ಉಪೇಕ್ಷಾ ಬುದ್ಧಿ ಮತ್ತು ಅಜ್ಞಾನಗಳಿರುವದರಿಂದ ಹೀಗಾಗುತ್ತದೆ. ಹೀಗಾಗಲು ಕಾರ್ಯಕರ್ತರು ಮಧ್ಯದಲ್ಲಿ ಎದೆಗುಂದಿ ಕಾರ್ಯ ಮಾಡುವದನ್ನು ಬಿಟ್ಟುಬಿಡುವದುಂಟು. ಆದರೆ ಈ ಸ್ಥಿತಿಯು ಆಗದಿರಲಿಕ್ಕೆ ಕಾನಕಾನಹಳ್ಳಿಯವರು ಕೈಕೊಂಡ ಪ್ರವಾಸಗೋಷ್ಠಿಯ ಕಾರ್ಯಕ್ರಮವನ್ನು ಅನುಸರಿಸಿದಲ್ಲಿ ಅದು ಬಹಳ ಸಹಾಯವಾದೀತೆಂದು ನಮಗೆ ತೋರುತ್ತದೆ. ನಿತ್ಯ ಪ್ರಪಂಚದ ಕಾರ್ಯಗಳಲ್ಲಿ ತೊಡಗಿರುವವರು ಮೂರು ದಿನಗಳ ಕಾರ್ಯಕ್ರಮದಲ್ಲಿ ಅಂಗವಹಿಸಿ ಆನಂದದಿಂದ ವೇಳೆಗಳೆಯಬಹುದು. ಹಳ್ಳಿಯ ಜನರು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಮಾಡಿದಲ್ಲಿ ಅವರಲ್ಲಿ ಉಚ್ಚ ಧಾರ್ಮಿಕ ಮನೋವೃತ್ತಿಯು ಬೆಳೆಯುವದು. ಜರ್ಮನಿ ಮತ್ತು ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ 'ಯೂಥ ಮುವ್ಹಮೆಂಟ' ಅಂದರೆ ತರುಣರ ಚಟುವಟಿಕೆಗಳು ಎಂಬ ಹೆಸರಿನಿಂದ ಕಾರ್ಯಗಳು ನಡೆಯುತ್ತಿದ್ದವು. ಇದೇ ಮಾದರಿಯ ಮೇಲೆ ಶಿವಶರಣರ ತತ್ವಗಳ ಪ್ರಚಾರವು ನಾಡಿನ ಮೂಲೆ ಮೂಲೆಗಳಲ್ಲಿಯೂ ನಡೆಯುವ ಏರ್ಪಾಡು ವೀರಶೈವರು ಅಗತ್ಯವಾಗಿ ಮಾಡಬೇಕು. ಪಟ್ಟಣದಲ್ಲಿಯ ಪ್ರತಿಯೊಬ್ಬನು ತಿಂಗಳಿನಲ್ಲಿ ಒಮ್ಮೆಯಾದರೂ ಈ ಪ್ರವಾಸ ಗೋಷ್ಠಿಗಳಲ್ಲಿ ಅಂಗ ವಹಿಸಿ ಗ್ರಾಮಗಳಲ್ಲಿ ಕಾರ್ಯ ಮಾಡಬೇಕು. ಹೀಗೆ ಅಂಗವಹಿಸುವವರಿಗೆ ಶಿವಶರಣರ ಉಕ್ತಿಗಳ ಜ್ಞಾನವಿರದಿದ್ದರೂ ಈ ಗೋಷ್ಠಿಗಳಲ್ಲಿದ್ದರೆ

ಅವರು ಅವುಗಳನ್ನರಿತು ಹೊಸ ಮನುಷ್ಯರಾಗುವದರಲ್ಲಿ ಸಂದೇಹವಿಲ್ಲ. ಈ ಕಾರ್ಯಕ್ಕೋಸ್ಕರ ಕೆಲವೊಂದು ಪುಣ್ಯಸ್ಥಳ ಅಥವಾ ಕೆಲವೊಂದು ರಮಣೀಯವಾದ ಸೃಷ್ಟಿ ಸೌಂದರ್ಯವುಳ್ಳ ಸ್ಥಳವನ್ನು ಆರಿಸಿಕೊಳ್ಳಬೇಕು. ಹೀಗೆ ಆರಿಸಿಕೊಂಡು ಉಚ್ಚಧಾರ್ಮಿಕ ಚರ್ಚೆಯಲ್ಲಿ ಎಲ್ಲರೂ ತೊಡಗಬೇಕು. ಗೋಷ್ಠಿಗಳ ಕಾಲದಲ್ಲಿ ಸಮಾಜದಲ್ಲಿ ಭೇದಭಾವವನ್ನು ಹುಟ್ಟಿಸುವ ಕಲಹಗಳ ಮಾತುಗಳು ಬೇಡ. ಇವುಗಳಿಂದ ಕೆಲ ಕಾಲ ದೂರವಿದ್ದು ಸಮಾಜ ಸುಧಾರಣೆಯ ಶ್ರೇಷ್ಠ ವಿಚಾರಗಳಲ್ಲಿ ತೊಡಗಿದಲ್ಲಿ ಅದು ನಿಜವಾದ ವಿಧಾಯಕ ಕಾರ್ಯವೆಂಬುದರಲ್ಲಿ ಏನೂ ಸಂದೇಹ ನಿರಲಾರದು.

ಶರಣರು ಕೈಕೊಂಡ ಅಸ್ಪೃಶ್ಯೋದ್ಧಾರ ಕಾರ್ಯ: — ಈ ಗ್ರಂಥದ ಸಂಪಾದಕರು ಶ್ರೀ ಜೀರಗೆ ಕಟ್ಟಿ ಬಸವಪ್ಪ. ಬಿ. ಏ ಮು. ಬೆಂಗಳೂರ, ಮತ್ತು ಶ್ರೀ ಎಸ್. ಆರ್. ಮಲ್ಲಪ್ಪ ಮು. ತಪಟೂರು ಇವರು ಇದ್ದಾರೆ. ಈ ಗ್ರಂಥದಲ್ಲಿ ಶರಣರ ೧೨೧ ಮಹಾ ವಾಕ್ಯಗಳು ಸಂಗ್ರಹಿಸಲ್ಪಟ್ಟಿವೆ. ಇದರಲ್ಲಿ ಶ್ರೀ ಬಸವೇಶ್ವರ, ಸರ್ವಜ್ಞಮೂರ್ತಿ, ನಿಷ್ಕಲ ಚಿದಾನಂದಯೋಗಿ, ಚನ್ನಪ್ಪ ಕವಿ ಈ ಮೊದಲಾದ ವಚನಕಾರರ ಮತ್ತು ಸಾಧು ಸತ್ಪುರುಷರ ಉಕ್ತಿಗಳಿವೆ. ಈ ಉಕ್ತಿಗಳಲ್ಲಿ ಅಸ್ಪೃಶ್ಯತೆಯನ್ನು ನಿರಾಕರಣೆ ಮಾಡುವ ಸ್ಪಷ್ಟ ವಾಕ್ಯಗಳಿವೆ. ಉಚ್ಚ ಧಾರ್ಮಿಕ ತತ್ವಗಳು ಮಾನವೀ ಪ್ರಾಣಿಗಳಲ್ಲಿ ಕೃತ್ರಿಮ ಭೇದಭಾವವನ್ನು ಎಂದೂ ಎಣಿಸಲಾರವೆಂಬುದು ಈ ಗ್ರಂಥದಿಂದ ಚನ್ನಾಗಿ ತಿಳಿದುಬರುತ್ತದೆ. ಶಿವಶರಣರು ಈ ತತ್ವವನ್ನು ಹೇಗೆ ಕೃತಿಯಲ್ಲಿ ತಂದರೆಂಬುದನ್ನು ಈ ಗ್ರಂಥದಿಂದ ಚನ್ನಾಗಿ ತಿಳಿದುಕೊಳ್ಳಬಹುದು. ದಿನಾಲು ಪಠಿಸಿ ಮನನಮಾಡಿಕೊಳ್ಳಲು ತಕ್ಕಂತೆ ಈ ಗ್ರಂಥವು ರಚಿಸಲ್ಪಟ್ಟಿದೆ. ಗ್ರಂಥವು ಶ್ರೀ ಎಸ್. ಆರ್. ಮಲ್ಲಪ್ಪ ಮು. ತಿಪಟೂರು ಇವರಲ್ಲಿ ದೊರೆಯುವದು. ಬೆಲೆ ೧ ರೂಪಾಯಿ

## ನಿಜ ಸುಖವಾವುದು ?

ಕನಸಿನ ಸಂಪದವೆಲ್ಲವು ।
ಕನಸಿಂದೆಚ್ಚತ್ತ ಮೇಲೆ ಕಾಣದ ಪೋಲೀ ॥
ಧನಭೋಗಭಾಗ್ಯಗಣಗಳ ।
ಕನಸಿನ ರೀತಿಯೊಳದೃಶ್ಯವಾಗ್ವುವು ವೇಮಾ ॥ ೨೩೨ ॥

ಗಿಡವು ಮೊದಲೊಳಿಲ್ಲ ಅರಿದು ಶಾಖೆಗಳಿಲ್ಲ ।
ಒಟ್ಟೆ ಬಯಲೊಳಿಹುವು ಕಣ್ಣು ಹಣ್ಣು ।
ತಿಂದರು ರುಚಿಯಿಲ್ಲ ಸಿಹಿ ಹುಟ್ಟಿಸುವುದದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೩೩ ॥

ಒಬ್ಬರನ್ನು ಬಡಿದು ಒಬ್ಬರು ತಿಂಬರು ।
ಅವರ ಬಾಯಿ ಮೃತ್ಯು ಬಡಿವಳೈದೆ ॥
ಮೀನ ಮರಿಯ ದೊಡ್ಡ ಮೀನೊಂದು ಬಡಿವುದು ।
ಅದನು ತಿಂದು ಬಿಡುವನೋರ್ವ ವೇಮಾ ॥ ೨೩೪ ॥

ಜಂತುರಾಶಿಯಲ್ಲಿ ಜನ್ಮಿಸಿ ಜನ್ಮಿಸಿ ।
ಹುಚ್ಚು ಹಿಡಿದ ತೆರದಿ ತಿರುಗಿ ತಿರುಗಿ ॥
ತನುವು ನಿತ್ಯವೆನಲು ದೈವವು ನಗುವುದೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೩೫ ॥

ತಂದೆಮಾತನು ಕೇಳಿ ತಾಯಿಯ ಕೊಲ್ಲುತೆ ।
ಪರಶುರಾಮನೇನು ಫಲವ ಪಡೆದ ॥
ನಿಲಲು ನೆರಳ ಕಾಣ ಮಲಯಾದ್ರಿಯೊಳಗಿರ್ದ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೩೬ ॥

ಪತಿಯ ಕಾಲದಲ್ಲಿ ಸತಿ ಕಷ್ಟ ವಹಿಸಲು ।
ಸುತರ ಕಾಲದಲ್ಲಿ ಸುಖವು ನಿಜವು ॥

ಕಷ್ಟ ಸುಖಗಳಿಳೆಯೊಳಾರಿಗು ತಪ್ಪವು ।
ಬಲವು ಪುತ್ರ ಬಂಧು ಬಲವೆ ವೇಮಾ ॥ ೨೩೭ ॥

ಭಾರ್ಗವನಾ ಯಯಾತಿಯು ಭಗೀರಥ ಶಿಬಿ ಮೊದಲಾದ।
ರಾಜಾಧಿರಾಜರೆಲ್ಲ ॥
ಪ್ರಖ್ಯಾತ ನೃಪತಿಗಳೀಲು ಒಂಭತ್ತು ಮತ್ತಂ ।
ಹದಿನಾರ್ವರು ಪ್ರಬಲರೆನಿಸಿ ! ॥ ೨೩೮ ॥

ಗಯನಂಬರೀಷನು ಘನಶಶಿ ಬಿಂದುವು ಜನ ।
ಘನು ಪೃಥು ಮರುದ್ವಂತನೈದೆ ॥
ಭರತ ಸಹೋದರ ನರ ರಾಮುಚುಂದ್ರನು ಧೀರ ।
ದಿಲೀಪ ಮಾಂಧಾತ ಸಗರ ॥ ೨೩೯ ॥

ಇಂತು ನೃಪಪರ್ಯಾರಗಣಿತ ನಶಿಸಿ ಪೋದರ್ ।
ನೋಡೆ ನೋಡಲ್ಕೆ ನಿನ್ನಯ ಮಾಯೆ ಚೋದ್ಯ ॥
ವಿಶ್ವದೊಳ್ಸರ್ವವೆಲ್ಲವಶಾಶ್ವತವದು ॥
ವಿಮಲ ಗುಣ ರಾಜಯೋಗೀಂದ್ರ ವೇಮನಾರ್ಯಾ ॥ ೨೪೦ ॥

ಉದರದೊಳ್ ದುರ್ಮಲವು ವೈಯೆಲ್ಲ ಎಲುಬಂಗಳ್ ।
ಬಿದಕಿಗೊಡೆ ಮೇಲೆಲ್ಲ ಕೊಳಕು ಚರ್ಮ ।
ಇಂಥ ದೇಹಸುಖವಿದೇನು ಸಂಸಾರವೋ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೧ ॥

ಹುಲಿಯಂದೆಂಥದೆನಲು ಭೂಲೋಕ ಮೃಗರಾಜ ।
ಕಲಿಯದೆಂಥದೆನಲು ಕಾಣಲರಿದು ॥
ಹುಲಿಕಲಿಗಳ್ಗಿಂತ ಕೊಲುವ ಹಸಿವಧಿಕವೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೨ ॥

ಜನನ ಮರಣಗಳೆಲ್ಲ ಸ್ವಪ್ನ ಸುಷುಪ್ತಿಗಳ್ ।
ಜಗಗಳೆಲ್ಲ ಬಿಸಿಲ್ಗುದುರೆಗಳೆಂಬರ್ ॥

ಅವನಿಯಲ್ಲಿ ಜನಗಳರಿಯರೀ ವಿಧವನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೩ ॥

ದ್ವಾರಬಂಧನವದು ತನಯರು ಸಂಪದ ।
ಬಂಧುವರ್ಗವೆಲ್ಲ ಪಾಳಿಗೋಡೆ ।
ಮೂಢರಾದ ನರರು ಬಲೆಯೊಳು ಸಿಗುವರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೪ ॥

ತನುವ ಬಿಟ್ಟು ತಾನು ಹೊರಟು ಹೋಗುವ ವೇಳೆ ।
ತನ್ನ ಸತಿಯು ಸುತರು ಹಿತರು ಯಾರು ॥
ಒಬ್ಬರಾದರು ಬರರು ಸಂಗೊಂದು ಹೊರತಾಗಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೫ ॥

ಬ್ರಹ್ಮ ಕರ್ತನಾಗೆ ಪಣೆಯೊಳು ಬರೆಯಲು ।
ತನ್ನ ಶಿರವ ಶಿವನು ಕಡಿಯಲೆಂದು ॥
ಬರೆದುಕೊಂಡನೇಕೆ ಚೋದ್ಯವಿದಲ್ತುರೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೬ ॥

ಕೊಳಕಿನಲ್ಲಿಯೆ ಹುಟ್ಟಿ ಕೊಳಕಿನಲ್ಲಿಯೆ ಬೆಳೆದು ।
ಕೊಳಕು ಬಾಳಿಗಿಂತು ಬಿಂಕವೇಕೋ ।
ಕೊಳಕು ತಿಳಿಯಲ್ಕವನು ಕೊಳಕಿನೊಳ್ಜನಿಪನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೭ ॥

ಅತ್ತೆಮಾವ್ಗಳುಚ್ಚೆ ಸತಿಯಾಗಿ ಜನಿಸಿದ್ಳ್ ।
ಗಂಡಹೆಂಡಿರುಚ್ಚೆಯಾದ ಸುತನು ॥
ಉಚ್ಚೆ ದೇಹಕಿಂತು ಉತ್ಸಾಹವೇತಕೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೮ ॥

## ದೇವರ ಸ್ವರೂಪು

ಬ್ರಹ್ಮವೇತ್ತರೆಂದು ಪೌರುಷ ಮಾಳ್ಪರು ।
ಬ್ರಹ್ಮವೆಂದಂದರ ಭಾವವೇನು ?
ಬಿಳುಪೋ, ಕಪ್ಪೊ, ಕೆಂಪೊ ತಿಳಿದರೆ ಪೇಳಿರಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೪೯ ॥

ಬ್ರಹ್ಮವೆಲ್ಲನುತ್ತ ಪಲ ತೆರ ನುಡಿಯುಲು ।
ದೇವತರಂಗು ತಿಳಿಸಲಳವೆ ಜಗದಿ ॥
ಬ್ರಹ್ಮವೆಲ್ಲೆಡೆಯೊಳು ಪೂರ್ಣವಾಗಿರ್ಪುದು ।
ವಿಶ್ವತೋಭಿರಾಮ ಕೇಳೊ ವೇಮಾ । ೨೫೦ ॥

ಮಣ್ಣು ಪಾತ್ರೆಯಂಥ ಮಾಯುಶರೀರವು ।
ಸಾವುದಿಂದು ನಾಳೆ ಸಾಯದಾತ್ಮ ॥
ಘಟಗಳೆಷ್ಟಾದರುಂ ಗಗನವು ತಾನೊಂದೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೫೧ ॥

ಯಾವ ಜಾತಿಯವನೊ ತಿಳಿಯುದು ಮೊದಲೊಳು ।
ನೀಚಬಾಳಿಗೇಕೆ ನಿಯಮವಿನ್ನು ।
ತಿಳಿವುದೀ ಜಗತ್ತು ಈಶ್ವರಮಯುವೆಂದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೫೨ ॥

ಎಲೆಯು ಅಡಿಕೆ ಸುಣ್ಣವಿವು ಮೂರು ಬಣ್ಣಗಳ್ ।
ಏಕವಾಗೆ ಕೆಂಪು ಬಣ್ಣವಹುದು ॥
ತ್ರಿಗುಣವಿಂತು ಬೆರೆದು ಪರಮಾತ್ಮ ಶೋಭಿಪ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೫೩ ॥

ಮಕ್ಕಾಕ್ಕೆ ಹೋಗಿ ತಾಂ ಮುತ್ತಿ ಬರ್ಪುದದೇಕೆ ।
ಏಕವಾದ ಚಿತ್ತವೆಲ್ಲಿಯಿಹುದು ॥

ಎಲ್ಲೆಡೆ ಪರಿಪೂರ್ಣನಲ್ಲಾ ಮಹಾತ್ಮನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೫೪ ॥

ಅರಿಯೆ ದಧಿಯೊಳ್ ಘೃತವು ಮರದೊಳು ಬೆಂಕಿಯು ।
ಸುಮದಿ ಪರಿಮಳಮದು ವ್ಯಾಪಿಸಿಹುದು ॥
ತಿಲದಿ ತೈಲದಂತೆ ತಾನಿರ್ಪುದು ಚಿದಾತ್ಮ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೫೫ ॥

ಕಂಗಳು ಕೋರ್ವುವು ಅರ್ಥಿಯೊಳ್ಬಣ್ಣದ ।
ಚಿತ್ರ ವಿಚಿತ್ರ ರೂಪಂಗಳನ್ನು ॥
ನಾಲಿಗೆ ಕೋರ್ವುದು ರುಚಿಗಳನನಿಶವು ।
ಒಗರು ಕಾರವು ಕಹಿ ಉಪ್ಪು ಸಿಹಿಯು ॥ ೨೫೬ ॥

ಮೂಗು ಬಯಸುವದರ್ಥಿಯೊಳ್ ಗಂಧವನ್ನು ।
ಕಿವಿಯು, ಕಣ್ಗಳು, ಚರ್ಮವು, ಜಿಹ್ವೆ, ಮೂಗು ॥
ಇಷ್ಟು ಉಂಟಾಗಿ ಹೊತ್ತಿಹುದೀ ಶರೀರ ।
ತನ್ನ ತಿಳಿಯಲು ಘಟಿಪುದು ನಿಜವು ವೇಮಾ ॥ ೨೫೭ ॥

ತೊಗಲು ಬೊಂಬೆ ಮಾಡಿ ತೆರೆಯೊಳಗಾಡಿಸಿ ।
ಭರದಿ ಭುವಿಯೊಳ್ಕೆಡಹಿ ಒದೆವ ರೀತಿ ॥
ತನ್ನನಿಂತು ಸೂತ್ರ ಪಿಡಿದಾಡಿಸುವನನ್ನು ।
ತಿಳಿಯರೇನು ಚೋದ್ಯವೈಯ್ಯ ವೇಮಾ ॥ ೨೫೮ ॥

ವೇದಶಾಸ್ತ್ರಗಳನು ಓದಿ ಕೇಳಿದೊಡೇನು ।
ಬರಿದೆ ತಿರುಗಿ ಸಾವರೆಲ್ಲರಂತೆ ॥
ಬ್ರಹ್ಮ ಮಹಿಮೆ ತಿಳಿದು ಬದುಕುವುದುಚಿತವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೫೯ ॥

ಪೂಜೆ ಮಾಡಿ ಮಾಡಿ ಪೂಜಾರಿ ತಾನಾದ ।
ಪೂಜೆ ವಸ್ತುವರಿಯ ಭುವಿಯೊಳ್ತಾನು ॥

ಎಲ್ಲಿ ಪೂಜೆ ಮಾಳ್ಪನೆಲ್ಲ ದಿಕ್ಕಿನೊಳ್ತಾನೆ ।
ತಾನೆ ನಾನು ನಾನೆ ತಾನೆ ವೇಮಾ ॥ ೨೬೦ ॥

ಶತ್ರು ವರ್ಗವರಸಿ ಕ್ಷಿಪ್ರದೊಳ್ ಖಂಡಿಸಿ ।
ಮಿತ್ರವರ್ಗಕೆಲ್ಲ ಮೇಲು ಮಾಡಿ ॥
ಪಿರಿದು ಬೆಳಕು ನೋಡಿ ಪಿಂಡದ ಮಧ್ಯದಿ ।
ಅರ್ಥಿ ನಿಲಿಸುವವನೆ ಹರನು ವೇಮಾ ॥ ೨೬೧ ॥

ನೀನಾಡಲು ನಾನಾಡುವೆ ।
ನೀನಿರಲಾನಿರ್ಪೆನೈದೆ ನಿರ್ವಿಣ್ಣತೆಯಿಂ ।
ನೀಂ ನೆನೆಯಲ್ ನಾಂ ನೆನೆವೇಂ ।
ನೀಂ ನಗಲಾಂ ನಗುವೆನಯ್ಯ ನಿಜವಿದು ವೇಮಾ ॥ ೨೬೨ ॥

ಕಲ್ಲಿನಲ್ಲಿ ಕಪ್ಪೆಗಲ್ಲಿ ಆಹಾರವ ।
ಸಲ್ಲಿಸುವನು ದೇವದೇವನವನು ॥
ಹುಟ್ಟಿಸಿರುವ ಸ್ವಾಮಿ ಹುಲ್ಲು ಮೇಯಿಸುವನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೬೩ ॥

ಗಾಳಿ ಗಾಳಿ ಕಲೆತು ಗಗನದಿ ಗಗನವು ।
ಮಣ್ಣು ಮಣ್ಣು ಕಲೆತು ಹುರಿಯೊಳ್ಪುರಿಯು ॥
ನೀರು ನೀರು ಕಲೆತು ನಿರ್ಮಲವಾದುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೬೪ ॥

ಮನೆಮನೆಗಳೊಳಗೆಲ್ಲ ಈಶ್ವರನಿರಲಾಗಿ ।
ತಿಳಿದು ನೋಡದೈದೆ ವಿಪಿನದೊಳಗೆ ॥
ಇರುವದುಚಿತವೆಂದು ವಾಸಿಪರ್ ಜೋಗಿಗಳ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೬೫ ॥

ಬರಗಳು ಗಂಡಗಳು ಕಠಿಣ ಕಷ್ಟದ ರೋಗಗಳೆಷ್ಟು ಬಂದರುಂ ।
ಕರುಣದಿ ಜೀವರಾಶಿಗಳಿಗಿತ್ತಿರಲಾಯುವ ದಿಟನಾಗಿ ತಾಂ ॥

ನೆರೆ ಪರಿತಾಪವೇಕೆ ಪಡಿಯೂಟಕೆ ದುರ್ಗತಿಯೆನ್ನಲೇಕೆ
ಮೂಢ ತಾ।
ನರಿಯೆ ದಯಾಳುವಾವ ಪರಮಾತ್ಮನದೋರ್ವನು ದಿಕ್ಕು
ವೇಮನೇ ॥ ೨೬೭ ॥

---

## ಸಂಸಾರ ಸುಖವು ಅಸ್ಥಿರವು.

ತಾಯಿಗರ್ಭದಿಂದ ತಾಂ ಬರುವ ಸಮಯದಿ ।
ಮೊದಲು ವಸ್ತ್ರವಿಲ್ಲ ತುದಿಗುವಿಲ್ಲ ॥
ನಡುವೆ ಬಟ್ಟೆಯುಡುವುದಪಹಾಸ್ಯವಲ್ಲವೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೬೭ ॥

ಮುಣಾಗಿ ಮುಣಾಗಿ ಮುಣಾಗಿ ಮುದ್ದೆಯು ತಾನಾಗಿ ।
ಒಣಗಿ ಒಣಗಿ ಒಣಗಿ ಕೃಶವದಾಗಿ ।
ತಿರುಗಿ ತಿರುಗಿ ತಿರುಗಿ ಬಳಲುವುದೊಂದೆಯೋ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೨೬೮ ॥

---

## ಬ್ರಹ್ಮಜ್ಞಾನದ ರೀತಿ

ನವರಂಧ್ರಯುಕ್ತ ಚೀಲಕೆ ।
ನವಕುಂದಣ ಭೂಷಣಂಗಳುಂ ಕುಲವೇಕೋ ॥
ತವೆ ನೋಡಲಸ್ಥಿರ ತನು ।
ಸುವಿವೇಕದೆ ಬ್ರಹ್ಮನಾನೆನುತ ತಿಳಿ ವೇಮಾ ॥ ೨೬೯ ॥

ವಿಜ್ಞಾನ ದೃಷ್ಟಿಯಿಂ ವಿಶ್ವವು ನಿನಗೆಲ್ಲ ಪರಮಾಣುವಾಗಿ
ತೋರುವುದು ನಿಜವು ।
ಅಜ್ಞಾನ ದೃಷ್ಟಿಯಿಂ ಸರ್ವವು ನಿಜವೆಂದುಕಾಣುತಲಿ ।
ಸರ್ವವು ಕ್ರಮದೊಳೈದೆ ॥ ೨೭೦ ॥

ಇಹದಿ ಸುಖವ ಪಡಲು ಹೇಮಕಾರಕ ವಿದ್ಯೆ ।
ಪರದಿ ಸುಖಿಸೆ ಬ್ರಹ್ಮವಿದ್ಯೆ ವಿದ್ಯೆ ।
ಮಿಕ್ಕ ವಿದ್ಯೆಗಳೆಲ್ಲ ಸುಳ್ಳು ಮೂಢರ ವಿದ್ಯೆ ।
ವಿಶ್ವತೋಽಭಿರಾಮ ಕೇಳೊ ವೇಮಾ || ೨೭೧ ||

ನಿನ್ನ ನೋಡಲಾಗಿ ತನ್ನ ತಾ ಮರೆವನು ।
ತನ್ನ ನೋಡಲಾಗಿ ನಿನ್ನ ಮರೆವ ॥
ಯಾವ ವಿಧದಿ ಮನುಜನರಿವ ನಿನ್ನಂ ತನ್ನ ।
ವಿಶ್ವತೋಽಭಿರಾಮ ಕೇಳೊ ವೇಮಾ || ೨೭೨ ||

ನಾಯಿ ಯೇಕಾಂತವು ಬಕನ ಕಪಟ ಧ್ಯಾನ ।
ಗಾರ್ದಭ ರಾಗ ರಸನೆಸಿತು ಸೊಗಸೋ ॥
ಆತ್ಮವರಿವ ಭಾವವದು ಯೇಕೆ ಮೂರ್ಖೆ ।
ವಿಶ್ವತೋಽಭಿರಾಮ ಕೇಳೊ ವೇಮಾ || ೨೭೩ ||

ಬೈದು ಬಡಿಯಲ್ಬೈದೆ ತಿರುಗಿ ಮಾತಾಡದೆ ।
ಅಲ್ಲಿಯಿಲ್ಲ ನೋಡಿ ಭಯವುಗೊಳದೆ ॥
ತನ್ನನಲ್ಲವೆಂದು ತತ್ತರ ಪಡದಿರು ।
ವಂಥ ನರನು ಬ್ರಹ್ಮವೇತ್ತು ವೇಮಾ || ೨೭೪ ||

ಬೆದಕಿ ಕಾಣಲಾರ ವೇದಾಂತವೇದ್ಯನ ।
ತತ್ವವೇತ್ತನಿಹನು ಧರಣಿಯಲ್ಲಿ ॥
ಕಂಡ ಜನರಿಗೆಲ್ಲ ಕಾಣನು ಸರ್ವದಾ ।
ವಿಶ್ವತೋಽಭಿರಾಮ ಕೇಳೊ ವೇಮಾ || ೨೭೫ ||

ಕತ್ತಲಲ್ಲಿ ಹುಟ್ಟಿ ಕತ್ತಲಿನೊಳ್ ಬೆಳೆದು ।
ಕತ್ತಲಮರೆಯಲ್ಲಿ ಸಿಗುವುದೇಕೆ ॥
ಕತ್ತಲು ತಿಳಿದೊಡೆ ಜಗವೆಲ್ಲ ಕಾಣ್ಬುದು ।
ವಿಶ್ವತೋಽಭಿರಾಮ ಕೇಳೊ ವೇಮಾ || ೨೭೬ ||

ನಾವು ಈ ಶಿವಶರಣರ ಚರಿತ್ರೆಗಳ ೧ ನೇ ಭಾಗದಲ್ಲಿ ೫೭ ಜನರ ಚರಿತ್ರೆಗಳನ್ನು ಪ್ರಸಿದ್ಧಿಸಿದ್ದೇವೆ. ಅವರಲ್ಲಿ ಅನೇಕ ಶಿವಶರಣರೂ, ವಚನಕಾರರೂ, ಸ್ತ್ರೀಯರೂ ಬಾಲ ಬಾಲಿಕೆಯರೂ ಇದ್ದಾರೆ. ಅವರೆಲ್ಲರೂ ಶಿವಾನುಭವಿಗಳಾಗಿ ಶಿವಾನುಭವದ ತತ್ವಗಳಂತೆ ಆಚರಿಸಿದ್ದಾರೆ. ಇದಕ್ಕೋಸ್ಕರ ಅವರು ಅನೇಕ ತರದ ಹಿಂಸೆಗೆ ಸಹ ಒಳಗಾಗಿದ್ದಾರೆ. ಹೀಗಿದ್ದರೂ ಕೂಡಾ ಅವರು ತಮ್ಮ ನಿಷ್ಠೆಯನ್ನು ಬಿಡದೆ ಅಚಲಮನಸ್ಕರಾಗಿ ತಮ್ಮ ಕರ್ತವ್ಯವನ್ನು ಮಾಡಿದ್ದು ಕಂಡುಬರುತ್ತದೆ.

ಈ ಚರಿತ್ರೆಗಳ ೨ ನೇ ಭಾಗದಲ್ಲಿ ೬೩ ಜನ ಶಿವಶರಣ ಶರಣಿಯರ ಚರಿತ್ರೆಗಳು ಬಂದಿವೆ. ಹೀಗೆ ಇವರು ಒಟ್ಟು ೧೧೪ ಜನರಾಗುತ್ತಿದ್ದು ಇವರಲ್ಲಿ ೫೫ ಜನ ವಚನಕಾರರಿದ್ದಾರೆ. ಈ ಮಹಾನುಭಾವರ ಮಹತ್ಕಾರ್ಯಗಳನ್ನು ಕುರಿತು ನಾವು ೨ ನೇ ಭಾಗದ ಪ್ರಸ್ತಾವನೆಯಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಇದರಲ್ಲಿ ಈ ಶಿವಶರಣ ಸಾಮಾನ್ಯ ನಿರೂಪಣೆಗಳು ಬಂದಿರುತ್ತವೆ.

ಈಗಿನ ೩ ನೇ ಭಾಗದ ಗ್ರಂಥದಲ್ಲಿ ೨೯ ಜನ ಶಿವಶರಣರ ಚರಿತ್ರೆಗಳು ಮಾತ್ರ ಬಂದಿವೆ. ಹೀಗೆ ೧೪೨ ಜನ ಶಿವಶರಣರ ಚರಿತ್ರೆಗಳು ಈ ಮೂರು ವಿಭಾಗಗಳಲ್ಲಿ ಬಂದಿವೆ. ಇವರು ಕೇವಲ ಕರ್ನಾಟಕ ಮಾತ್ರವಲ್ಲ, ಆಂಧ್ರದೇಶ, ಗುಜರಾಥ, ಸಿಂಧೂದೇಶ ಇವುಗಳಲ್ಲಿಯೂ ಪರದೇಶಗಳಾದ ಅಫಗಾಣಿಸ್ಥಾನ. ಇಂಡೋನೇಶಿಯಾ ಅರಬಸ್ಥಾನ ಇಲ್ಲಿಯೂ ಕೂಡ ಪ್ರಸಿದ್ಧರಾಗಿದ್ದಾರೆ. ಶೈವ ಸಂಸ್ಕೃತಿಯು ಒಂದು ಕಾಲದಲ್ಲಿ ಹಿಂದುಸ್ತಾನ ಮಾತ್ರವಲ್ಲ, ಪರದೇಶಗಳಲ್ಲಿಯೂ ಕೂಡಾ ಪಸರಿಸಿತ್ತೆಂದು ಕಂಡುಬರುತ್ತದೆ.

ಇನ್ನು ಮುಂದೆ ನಾವು ಈ ಶಿವಶರಣರ ಚರಿತ್ರೆಗಳ ೪ ನೇ ಭಾಗವನ್ನು ಪ್ರಾರಂಭಿಸುವೆವು. ಇವರಲ್ಲಿ ರೇವಣ ಸಿದ್ಧೇಶ್ವರ, ಮರುಳ ಸಿದ್ಧೇಶ್ವರ, ಏಕೋರಾಮ ಮೊದಲಾದವರ ಮತ್ತು ಬಸವೇಶ್ವರನ ಸಮಕಾಲೀನರಾದ ಅಲ್ಲಮಪ್ರಭು, ಸಿದ್ಧರಾಮ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ ಮಹಾದೇವಿಯಕ್ಕ ಮೊದಲಾದವರ ಚರಿತ್ರೆಗಳನ್ನು ಕೊಡು

ನೆವು. ಮುಂದೆ ೫ ನೇ ಭಾಗದಲ್ಲಿ ಕೇವಲ ಬಸವೇಶ್ವರನ ಚರಿತ್ರೆಯನ್ನು ಪ್ರಸಿದ್ಧಿಸಬೇಕೆಂದು ಸಂಕಲ್ಪಿಸಿದ್ದೇವೆ.

ಈ ವರೆಗೆ ಪ್ರಸಿದ್ಧವಾದ ಚರಿತ್ರೆಗಳನ್ನು ನಾವು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಜಂಗಮವರ್ಗದವರು ವೀರಶೈವ ಧರ್ಮ ಪ್ರಸಾರಕಾರ್ಯದಲ್ಲಿ ಕೆಲವೊಂದು ಮಹತ್ವನ ಭಾಗವನ್ನು ವಹಿಸಿ ಕಾರ್ಯಮಾಡುತ್ತ ಬಂದರೆಂಬುದು ತಿಳಿದುಬರುತ್ತದೆ. ಇದನ್ನು ನಾವು ಇಲ್ಲಿ ಸ್ಥೂಲ ತೆರನಾಗಿ ವಿವರಿಸುತ್ತೇವೆ.

## ಜಂಗಮರು

ಜಂಗಮರೆಂಬ ಕೆಲವೊಂದು ವರ್ಗವು ಬಸವೇಶ್ವರನಕಿಂತಲೂ ಮೊದಲು ಸಹ ಇತ್ತೆಂದು ಈ ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. ಹಿಂದುಸ್ತಾನದಲ್ಲಿ ಬೇರೆ ಬೇರೆ ಪಂಥಗಳಲ್ಲಿ ಹೇಗೆ ಧಾರ್ಮಿಕ ವರ್ಗಗಳು ಕಂಡುಬರುತ್ತವೆಯೋ ಹಾಗೆಯೇ ವೀರಶೈವರಲ್ಲಿಯೂ ಜಂಗಮರೆಂಬ ಮಹತ್ವದ ವರ್ಗವು ಪುರಾತನ ಕಾಲದಿಂದಲೂ ಇತ್ತೆಂದು ಕಂಡುಬರುತ್ತದೆ. ಶಂಕರಾಚಾರ್ಯನು ಜಂಗಮರನ್ನು ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಹಾಗೆಯೇ ಶೈವನಾದ ಬಾಣಕವಿಯೂ ಕೂಡ ಅವರನ್ನು ವರ್ಣಿಸಿದ್ದಾನೆ. ಜಂಗಮ ಮತವೆಂತಲೂ ಉಲ್ಲೇಖಗಳು ಪರಧರ್ಮೀಯರ ಗ್ರಂಥಗಳಲ್ಲಿ ದೊರೆಯುತ್ತವೆ.

### ಜಂಗಮರ ಹೆಸರುಗಳು.

ಆದರೆ ಜಂಗಮರಿಗೆ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಹೆಸರುಗಳು ಇದ್ದುದು ಕಂಡುಬರುತ್ತದೆ. ಇವುಗಳನ್ನು ಕೆಳಗೆ ವಿವರಿಸಿದ್ದೇವೆ.

ಪುರಾತರು, ಪುರಾತನರು, ಆದ್ಯರು :- ವಚನಕಾರರು ಬಹುಕಡೆಗೆ ಜಂಗಮರನ್ನು ಈ ಹೆಸರುಗಳಿಂದ ಕರೆದಿದ್ದಾರೆ. ತಮಿಳ ದೇಶದಲ್ಲಿ ಅನೇಕ ಧಾರ್ಮಿಕ ಪುರುಷರು ಆಗಿ ಹೋಗಿದ್ದಾರೆ. ಅವರಿಗೆ ಪುರಾತನರೆಂಬ ಹೆಸರು ಇದೆ. ಅವರು ೬೩ ಜನರು ಇದ್ದಾರೆ. ಪಿರಿಯ ಪುರಾಣವೆಂಬ ತಮಿಳ ಗ್ರಂಥದಲ್ಲಿ ಅವರ ಚರಿತ್ರೆಗಳಿವೆ. ಅವರು ಶಿವಭಕ್ತ

ರಾಗಿ ಆಗಮ ಧರ್ಮವನ್ನು ಪಾಲಿಸುತ್ತಿದ್ದದರಿಂದ ವೀರಶೈವರು ಅವರನ್ನು ಮನ್ನಿಸುತ್ತ ಬಂದಿದ್ದಾರೆ. ವೀರಶೈವ ವಚನಕಾರರು ತಮ್ಮ ವಚನಗಳಲ್ಲಿ ಜಂಗಮರನ್ನು 'ಪುರಾತ' ರೆಂಬ ಹೆಸರಿನಿಂದ ಕರೆದಿದ್ದಾರೆ. ತಮಿಳು ದೇಶದ ಪುರಾತನರಿಗೋಸ್ಕರ ಅವರು ವಹಿಸಿದ ಭಕ್ತಿಯ ಮೂಲಕ ಅವರು ಜಂಗಮರನ್ನು ಹೀಗೆ ಕರೆದಿರಬಹುದು.

ಪ್ರಮಥರು, ಗಣಂಗಳು, ಗಣಾಧೀಶ್ವರರು — ಗ್ರಂಥಕಾರರು ಈ ಹೆಸರುಗಳಿಂದಲೂ ಜಂಗಮರನ್ನು ಸಂಬೋಧಿಸಿದ್ದಾರೆ. ಜಂಗಮರಲ್ಲಿ ಅನೇಕರು ತಮ್ಮ ವಿದ್ವತ್ತೆಯ ಮೂಲಕ ಜನರ ಮನ್ನಣೆಗೆ ಪಾತ್ರರಾದರು. ಆಗ ಅವರು ಪರಮೇಶ್ವರನ ನೆರೆಯಲ್ಲಿರುವ ಗಣಗಳು ಅಥವಾ ಪ್ರಮಥರು ಜನರ ಉದ್ಧಾರಾರ್ಥವಾಗಿ ಪೃಥ್ವಿಯಲ್ಲಿ ಹೀಗೆ ಜನ್ಮ ತಾಳಿದರೆಂದು ಜನರು ಭಾವಿಸಿ ಅವರನ್ನು ಪ್ರಮಥರೆಂತಲೂ ಗಣಗಳೆಂತಲೂ ಕರೆದಿರಬಹುದು.

**ಶರಣರು:**— ಷಟ್ ಸ್ಥಲಗಳಲ್ಲಿ ಶರಣಸ್ಥಲವೆಂದಿದ್ದು ಇದು ಐನೆಯ ಸ್ಥಲವು. ಇದು ಐಕ್ಯಸ್ಥಲದ ಹಿಂದಿನ ಸ್ಥಲವು. ಶರಣಸ್ಥಲದವರು ಜ್ಞಾನಿಗಳು. ಆದ್ದರಿಂದ ಜಂಗಮರಲ್ಲಿ ಜ್ಞಾನಿಗಳಾದವರನ್ನು ವಚನಕಾರರು ಹೀಗೆ ಶರಣರೆಂದು ಕರೆದಿದ್ದಾರೆಂದು ತೋರುತ್ತದೆ.

**ಒಡೆಯರು, ಮಹಂತರು:**— ಜಂಗಮರು ಅನೇಕ ಕಡೆಗೆ ಮಠಗಳನ್ನು ಸ್ಥಾಪಿಸಿದ್ದು ಕಂಡುಬರುತ್ತದೆ. ಈ ಮಠಗಳಲ್ಲಿ ಅಧಿಕಾರಿಗಳಾಗಿ ನಿಯೋಜಿಸಲ್ಪಟ್ಟವರಿಗೆ ಈ ಹೆಸರುಗಳು ಬಂದಿರಬಹುದು.

ಹೀಗೆ ಜಂಗಮರಿಗೆ ಬೇರೆ ಬೇರೆ ಹೆಸರುಗಳು ಉಂಟಾಗಿರುತ್ತವೆ. ಈ ಹೆಸರುಗಳು ವೀರಶೈವ ವಾಙ್ಮಯದಲ್ಲಿಯೂ ಶಿಲಾಶಾಸನಗಳಲ್ಲಿಯೂ ದೊರೆಯುತ್ತವೆ.

## ಶೈವ ಭೇದಗಳು ಮತ್ತು ಜಂಗಮರು

ಜಂಗಮರೆಲ್ಲರೂ ಎಲ್ಲಕಡೆಗೂ ಶಿವೋಪಾಸಕರು ಮತ್ತು ಶಿವಚಿನ್ಹಗಳನ್ನು ಧರಿಸಿದವರು ಆಗಿದ್ದರು. ಶೈವರಲ್ಲಿ ಅನೇಕ ಪಂಗಡಗಳಿದ್ದುದು

ಆಗಮ ಗ್ರಂಥಗಳಿಂದ ತಿಳಿದು ಬರುತ್ತದೆ. ಐತಿಹಾಸಿಕವ ಕಾಲದಲ್ಲಿ ಪಾಶುಪತರು, ಕಾಳಾಮುಖರು, ವೀರಶೈವರು, ಕಾಪಾಲಿಕರು, ಶಿವಸಿದ್ಧಾಂತಿಗಳು, ತಾಂತ್ರಿಕರು, ಕಾಶ್ಮೀರಿ ಶೈವರು ತ್ರಿಕರು ), ವೀರ ಬಣಜಿಗರು ಎಂಬ ಅನೇಕ ಭೇದಗಳಿದ್ದುದು ಕಂಡುಬರುತ್ತದೆ. ಈ ಮತಸ್ಥರಿಗೆಲ್ಲ ಸ್ವತಂತ್ರ ಧರ್ಮಗ್ರಂಥಗಳೂ ಕೂಡ ಇರುತ್ತವೆ. ಇವರ ಧಾರ್ಮಿಕ ವರ್ಗದವರಿಗೂ ಕೂಡ ಗಣಂಗಳು, ಜಂಗಮರು ಎಂಬ ಹೆಸರುಗಳಿವೆ.

ಹಿಂದುಸ್ತಾನದಲ್ಲಿ ಶಿವಮತವನ್ನು ಪಾಲಿಸುವವರ ಸಂಖ್ಯೆಯು ಬಹು ದೊಡ್ಡದಾಗಿದೆ. ವಿಷ್ಣುಭಕ್ತರಿಗಿಂತಲೂ ಶಿವಭಕ್ತರ ಸಂಖ್ಯೆಯು ಅನೇಕ ಮಡಿ ಹೆಚ್ಚಿಗೆ ಇದ್ದುದು ಕಂಡು ಬಂದಿದೆ.

ಹಿಂದಿನಕಾಲದಲ್ಲಿ ಅನೇಕ ರಾಜರೂ ಕೂಡ ಶಿವಮತವನ್ನು ಅಂಗೀಕರಿಸಿದ್ದಾರೆ. ದಕ್ಷಿಣ ದೇಶದಲ್ಲಿ ಚೋಳರಾಜರು, ಪಾಂಡ್ಯ ಕೇರಳ ರಾಜರು, ಚಾಲುಕ್ಯ ರಾಜರಲ್ಲಿ ಬಹುಜನರು, ಉತ್ತರದೇಶದಲ್ಲಿ ಕಾಶೀ ರಾಜರು, ಕಾಶ್ಮೀರ ರಾಜರು ಶೈವ ಮತಾವಲಂಬಿಗಳಾಗಿದ್ದರು.

## ಜಂಗಮರು ದೇಶ ಪರ್ಯಟನ ಮಾಡುವರು

ನಾವು ಪ್ರಸಿದ್ಧಿಸಿದ ಚರಿತ್ರೆಗಳಿಂದ ಬಹು ಜನ ಜಂಗಮರು ಯಾವಾಗಲೂ ಸಂಚಾರದಲ್ಲಿ ಇರುತ್ತಿದ್ದ ಹಾಗೆ ಕಂಡುಬರುತ್ತದೆ. ಅವರು ಸಂಚರಿಸುತ್ತಲಿರುವಾಗ ಬೋಧೆಮಾಡುವದೇ ಅವರ ಮುಖ್ಯ ಕಾರ್ಯವಾಗಿತ್ತು. ಕೆಲವು ವಚನಕಾರರು ಜಂಗಮರನ್ನು ತಮ್ಮ ವಚನಗಳಲ್ಲಿ ದೇಶಾಂತರಿಗಳೆಂತಲೂ, ಪರದೇಶಿಯ್ಯಗಳೆಂತಲೂ, ದೇಶಿಕರೆಂತಲೂ ಕರೆದಿದ್ದಾರೆ. ಜಂಗಮರು ದೇಶಗಳಲ್ಲಿ ತಿರುಗಾಡುತ್ತಿದ್ದುದರಿಂದ ಅವರಿಗೆ ಈ ಬಗೆಯ ಹೆಸರುಗಳು ಬಂದಿರಬಹುದು.

ಪುರಾತನ ಕಾಲದಲ್ಲಿ ಜಂಗಮರಲ್ಲಿ ಎಲ್ಲರಿಗೂ ಮಠಗಳಿದ್ದವೆಂದು ಹೇಳಲು ಬಾರದು. ಆದರೆ ಅವರಲ್ಲಿ ಕೆಲವರು ಸ್ಥಾಯಿಕವಾಗಿ ಕೆಲವೊಂದು ಸ್ಥಳದಲ್ಲಿ ಉಳಿದು ತಮ್ಮಗೋಸ್ಕರ ಮಠಗಳನ್ನು

ಕಟ್ಟಿಸಿಕೊಂಡು ಅಲ್ಲಿ ಇದ್ದುದು ಕಂಡುಬರುತ್ತದೆ. ಉರಿಲಿಂಗಪೆದ್ದಿಯು ಗುರುವಾದ ಉರಿಲಿಂಗನು ಕಂಧಾರವೆಂಬ ಗ್ರಾಮದಲ್ಲಿ ಒಂದು ಮಠವನ್ನು ಕಟ್ಟಿಸಿಕೊಂಡು ವಾಸಮಾಡುತ್ತಿದ್ದನು. ಅವನು ಗುರುವೆನಿಸಿಕೊಂಡು ಭಕ್ತರಿಗೆ ದೀಕ್ಷಾದಿ ಕಾರ್ಯಗಳನ್ನು ಮಾಡುತ್ತಿದ್ದನೆಂದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಅದರಂತೆಯೇ ನಿರ್ಲಜ್ಜ ಶಾಂತಯ್ಯನೂ, ಸಕಳೇಶ ಮಾದರಸನೂ ಮಠಾಧಿಪತಿಗಳಾಗಿದ್ದರು ಇವರೆಲ್ಲರು ಬಸವೇಶ್ವರನ ಕಿಂತಲೂ ಸ್ವಲ್ಪ ಹಿಂದಿನವರು. ಆದರೆ ಅಸಂಖ್ಯ ಜಂಗಮರು ಹೀಗೆ ಒಂದೆಡೆಗೆ ಇರದೆ ಹಿಂದುಸ್ಥಾನದಲ್ಲೆಲ್ಲ ಪ್ರವಾಸಮಾಡುತ್ತ ಮುಖ್ಯ ಮುಖ್ಯ ಶಿವಕ್ಷೇತ್ರಗಳಿದ್ದಲ್ಲಿಗೆ ಹೋಗಿ ತೀರ್ಥಾಟನ ಮಾಡುವದರ ಕಡೆಗೆ ಹೆಚ್ಚಾಗಿ ಲಕ್ಷಕೊಡುತ್ತಿದ್ದಹಾಗೆ ಕಂಡುಬರುತ್ತದೆ. ಇದು ಕೆಳಗೆ ಕಾಣಿಸಿದ ಉದಾಹರಣೆಗಳಿಂದ ತಿಳಿದುಬರುವದು.

ಶಿರಿಯಾಳ ಚಂಗಳೆಯರ ಚರಿತ್ರೆಯು ವೀರಶೈವರಲ್ಲಿ ಪ್ರಸಿದ್ಧವಾಗಿದೆ. ಈ ಉಭಯತರ ಉಲ್ಲೇಖಗಳು ವಚನ ಗ್ರಂಥಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಈ ಉಭಯತರನ್ನು ಕಂಡು ಅವರಿಂದ ದಾನ ಬೇಡಿದವನು ಜಂಗಮನು. ಶಿರಿಯಾಳ ಚೆಂಗಳೆಯರಿದ್ದ ಪಟ್ಟಣವು ಕಾಂಚೀನಗರವು. ಅಮ್ಮವ್ವೆ ಅಥವಾ ಬಿಜ್ಜ ಮಹಾದೇವಿಯನ್ನು ಕಂಡು ಅವಳಿಗೆ ಪರಮಾತ್ಮನ ಸ್ವರೂಪವನ್ನು ಹೇಳಿಕೊಟ್ಟವನು ಒಬ್ಬ ಜಂಗಮನಾಗಿರುವನು. ಅಮ್ಮವ್ವೆಯ ಗ್ರಾಮವು ಮೈಸೂರು ಪ್ರಾಂತದಲ್ಲಿರುವ ಬಿಜ್ಜಾವರವು. ಬಳ್ಳಿಗಾವಿ ಬನವಾಸಿ ಪ್ರಾಂತದಲ್ಲಿ ಅನೇಕ ಶಿವಶರಣರು ಆಗಿಹೋಗಿದ್ದು ಇಲ್ಲಿಗೆ ಜಂಗಮರು ಯಾವಾಗಲೂ ಬರುತ್ತಿದ್ದರು. ಬನವಾಸಿಯು ಪ್ರಸಿದ್ಧ ಶೈವ ಕ್ಷೇತ್ರವಾಗಿದೆ. ಆದಯ್ಯನು ಪುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರದಲ್ಲಿದ್ದಾಗ್ಗೆ ಅನೇಕ ಜಂಗಮರು ಪಟ್ಟಣದ ಹೊರಗಿನ ಉದ್ಯಾನದಲ್ಲಿ ಬಾಗಿಲದಿದ್ದರು ಅವರನ್ನು ಕಂಡು ಆದಯ್ಯನು ಅವರನ್ನು ಉಪಚರಿಸುವದಕ್ಕೋಸ್ಕರ ತನ್ನ ಮನೆಗೆ ಬರಮಾಡಿಕೊಂಡನು ಇವರು ಸಂಚಾರದಲ್ಲಿದ್ದ ಜಂಗಮರೆಂದು ಆದಯ್ಯನ ಚರಿತ್ರೆಯಲ್ಲಿ ಹೇಳಿದೆ. ದೇವರ ದಾಸಿಮಯ್ಯನು ಮುದನೂರಲ್ಲಿ ತನ್ನ ನೆಯ್ಗೆಯ ಕಾಯಕವನ್ನು ಮಾಡುವಾಗ್ಗೆ ತಾನು ನೆಯ್ದ ಸುಂದರವಾದ ಒಟ್ಟೆಯನ್ನು ಬೇಡಿ ಅದನ್ನು ಹರಿದುಹಾಕಿದವನು ಒಬ್ಬ ಜಂಗಮನಾಗಿದ್ದಾನೆ. ಈ ಜಂಗಮನಿಗೋಸ್ಕರ ದಾಸಿಮಯ್ಯನೂ ಅವನ ಹೆಂಡತಿಯೂ ಬಹಳ ಭಕ್ತಿಯನ್ನು ವಹಿಸಿದವರು. ಬಸ

ವೇಶ್ವರನು ಕಲ್ಯಾಣ ಪಟ್ಟಣದಲ್ಲಿದ್ದಾಗ್ಗೆ ಅವನ ಖ್ಯಾತಿಯು ಎಲ್ಲ ಕಡೆಗೂ ಪಸರಿಸಲು ಅನೇಕ ದೇಶಗಳಲ್ಲಿ ಸಂಚಾರಮಾಡುತ್ತಿದ್ದ ಜಂಗಮರು ಅವನಿದ್ದಲ್ಲಿಗೆ ಬರುವವರಾದರು. ಉದ್ಭಟ ಅಥವಾ ಕುಮಾರಪಾಲ ಘೂರ್ಜರನು ಗುಜರಾಥ ದೇಶವನ್ನು ಆಳಿದ್ದಾನೆ. ಜಂಗಮರು ಅವನಲ್ಲಿದ್ದುದು ಅವನ ಚರಿತ್ರೆಯಲ್ಲಿ ಹೇಳಿದೆ. ಸಿಂಧುದೇಶದ ಸಿಂಧುಮರಾಳನ ಚರಿತ್ರೆಯಲ್ಲಿ ಒಬ್ಬ ಜಂಗಮನು ಅವನನ್ನು ಕಂಡು ಅವನ ಅರ್ಧ ಶರೀರವನ್ನು ಬೇಡಿದ್ದರ ಉಲ್ಲೇಖವಿದೆ. ಬಹು ಜನ ಜಂಗಮರು ಕಾಶೀ ಪಟ್ಟಣಕ್ಕೆ ಆಗಿಂದಾಗ್ಗೆ ಬರುವರು. ಅವರ ಉಲ್ಲೇಖಗಳು ಶಿವಶರಣರ ಚರಿತ್ರೆಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಕಾಶೀ ವಿಶ್ವೇಶ್ವರ ದೇವಾಲಯವು ಶೈವ ಧರ್ಮೀಯರಿಗೆಲ್ಲ ಪೂಜ್ಯ ಸ್ಥಾನವಾಗಿರುತ್ತದೆ. ಹಲಾಯುಧನೆಂಬ ಶಿವಶರಣನು ಬರ್ಬರದೇಶ ಅಂದರೆ ಈಗಿನ ಅಫಗಾಣಿಸ್ತಾನದಲ್ಲಿಯವನು. ಜಂಗಮರು ಅವನನ್ನು ಕಂಡಾಗ್ಗೆ ಅವನು ಅವರೊಡನೆ ವಾದಿಸಿದ್ದಾನೆ. ಅಫಗಾಣಿಸ್ಥಾನಕ್ಕೆ ಸಮೀಪವಾಗಿರುವ ಕಾಶ್ಮೀರ ದೇಶವು ಒಂದುಕಾಲದಲ್ಲಿ ಶೈವ ಧರ್ಮೀಯರ ಮುಖ್ಯ ಸ್ಥಾನವಾಗಿತ್ತು. ಅಲ್ಲಿ ಅಸಂಖ್ಯ ಜಂಗಮರು ವಾಸಮಾಡುತ್ತಿದ್ದರು. ಅವರ ಉಲ್ಲೇಖಗಳು ವೀರಶೈವ ಗ್ರಂಥಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಕಾಶ್ಮೀರಕ್ಕೆ ಸಮೀಪವಾಗಿ ಕೇದಾರನಾಥ ದೇವಾಲಯವಿರುತ್ತದೆ. ಈ ದೇವಾಲಯದ ಆಡಳಿತೆಯು ಪುರಾತನಕಾಲದಿಂದಲೂ ಜಂಗಮರಕಡೆಗೆಯೇ ಇದ್ದುದು ಗ್ರಂಥಗಳಿಂದ ತಿಳಿದುಬರುತ್ತದೆ ಶ್ರೀಪತಿ ಪಂಡಿತನು ಆಂಧ್ರ ದೇಶದವನು. ಅವನ ಗ್ರಾಮವು ಬೆಜವಾಡವು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಆಂಧ್ರ ದೇಶದಲ್ಲಿಯ ದ್ರಾಕ್ಷಾರಾಮ ಕ್ಷೇತ್ರದವನು. ಇವರಿಬ್ಬರ ಮೂಲಕ ಆಂಧ್ರ ದೇಶದಲ್ಲಿ ವೀರಶೈವ ಧರ್ಮದ ಪ್ರಸಾರವು ಕೆಲವು ಕಾಲ ಬಹು ಒತ್ತರದಿಂದ ನಡೆಯಿತು. ಆಗ ರೇಮನಾರಾಧ್ಯ, ಪಾಲ್ಕುರಿಕೆ ಸೋಮಾರಾಧ್ಯರು ಇಲ್ಲಿ ಉದಯವಾದರು. ಇವರ ಕಾಲದಲ್ಲಿ ಇತರ ಧರ್ಮೀಯರ ಕೂಡ ಯುದ್ಧಗಳುಂಟಾದವು. ಅವುಗಳಲ್ಲಿ ಜಂಗಮರು ಮುಖ್ಯ ಭಾಗವನ್ನು ವಹಿಸಿದವರಾಗಿದ್ದರು. ಹೀಗೆ ಜಂಗಮರು ಅನೇಕ ದೇಶಗಳಲ್ಲಿ ಸಂಚರಿಸುತ್ತ ಧರ್ಮಬೋಧೆ ಮಾಡುತ್ತಿದ್ದುದು ಕಂಡುಬರುತ್ತದೆ.

ಆದರೆ ಜಂಗಮರ ಸಂಚಾರಗಳು ಓಡಿಸಾ ಬಂಗಾಲ, ಬಿಹಾರಗಳಲ್ಲಿ ಹೆಚ್ಚಾಗಿ ಇದ್ದುದು ಶಿವಶರಣರ ಚರಿತ್ರೆಗಳಿಂದ ಕಂಡುಬರುವದಿಲ್ಲ.

ನನ್ನಯ್ಯ ಮತ್ತು ಸುಜ್ಞಾನಿ ದೇವರು ಮಾತ್ರ ಓಡಿಸಾ ಪ್ರಾಂತದವರೆಂದು ಹೇಳಲ್ಪಟ್ಟಿದೆ. ಸುಜ್ಞಾನಿದೇವನು ಮಠಾಧಿಕಾರಿಯಾಗಿ ಲಿಂಗದೀಕ್ಷೆಯನ್ನು ಕೊಡುವ ಕಾರ್ಯ ಮಾಡುತ್ತಿದ್ದನೆಂದು ಅವನ ಚರಿತ್ರೆಯಿಂದ ತಿಳಿದು ಬರುತ್ತದೆ. ಆದರೆ ಈ ದೇಶದಲ್ಲಿ ಜಂಗಮರಿದ್ದುದರ ಉದಾಹರಣೆಗಳು ಹೆಚ್ಚಿಗೆ ದೊರೆಯುವದಿಲ್ಲ. ಬಂಗಾಲ ಬಿಹಾರಗಳಲ್ಲಿ ಜಂಗಮರು ಸಂಚರಿಸುತ್ತಿದ್ದುದು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುವದಿಲ್ಲ.

ಮಹಾರಾಷ್ಟ್ರದಲ್ಲಿ ಹರಿಯುವ ಗೋದಾವರೀ ತೀರ ಪ್ರದೇಶಗಳಲ್ಲಿ ಜಂಗಮರು ಸಂಚರಿಸುತ್ತಿದ್ದುದರ ಬಗ್ಗೆ ಉಲ್ಲೇಖಗಳು ಕೆಲವು ಕಡೆಗೆ ದೊರೆಯುತ್ತಿವೆ. ಪರಿವಳಿಗೆ ಅಥವಾ ಈಗಿನ ಪರಳಿ ಇಲ್ಲಿ ವೈಜವ್ವೆಯು ವಾಸವಾಗಿದ್ದಳು. ಅವಳು ಜಂಗಮರನ್ನು ಆದರಿಸಿದ್ದಕ್ಕೋಸ್ಕರ ತನ್ನ ಗಂಡನಿಂದ ಹಿಂಸೆಯನ್ನು ಹೊಂದಿದಳು. ವೈಜನಾಥ ದೇವಾಲಯವು ಇಲ್ಲಿ ಅವಳ ಹೆಸರಿನಿಂದ ಉಗಮಿಸಿದೆ. ಇದು ಗೋದಾವರೀ ತೀರ ಪ್ರದೇಶವಾಗಿದೆ. ಈ ಭಾಗದಲ್ಲಿ ಕೋಲಂಬೆ, ಉರಿಲಿಂಗ, ಉರಿಲಿಂಗಪೆದ್ದಿ, ಕುಂಬಾರ ಗುಂಡಯ್ಯ ಇವರು ಪ್ರಸಿದ್ಧರಾಗಿದ್ದಾರೆ

## ಜಂಗಮರ ಸಂಚಾರದ ಮಾರ್ಗಗಳು.

ಒಟ್ಟಿಗೆ ಪುರಾತನ ಕಾಲದಲ್ಲಿ ಜಂಗಮರು ದೇಶದಲ್ಲಿ ಯಾವಾಗಲೂ ಪ್ರವಾಸ ಮಾಡುತ್ತಿದ್ದುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಅವರ ಸಂಚಾರದ ದಾರಿಗಳು ಕೆಳಗಿನಂತೆ ಇದ್ದುದಾಗಿ ತೋರುತ್ತದೆ. ಉತ್ತರ ಪ್ರಾಂತವಾದ ಕಾಶ್ಮೀರದಿಂದ ದಕ್ಷಿಣಕ್ಕೆ ಕಾಂಚೀಪಟ್ಟಣದ ವರೆಗೂ ಅವರು ಪ್ರವಾಸಮಾಡುತ್ತಿದ್ದರು

ಕಾಶ್ಮೀರದಲ್ಲಿ ಸಪಾದಲಕ್ಷ ಅಂದರೆ ಸವ್ವಾಲಕ್ಷ ದೇಶದಲ್ಲಿ ಶಿವ ಧರ್ಮೀಯ ರಾಜರು ಆಳುತ್ತಿದ್ದರು. ಇವರಲ್ಲಿ ಜಂಗಮರ ಬಹು ದೊಡ್ಡ ಗುಂಪು ವಾಸಮಾಡುತ್ತಿದ್ದಿತು. ಇವರು ಈ ಭಾಗದಿಂದ ಪಶ್ಚಿಮಕ್ಕೆ ಅಫಗಾಣಿಸ್ತಾನದಲ್ಲಿರುವ ಕಂದಹಾರದ ವರೆಗೆ ಮತ್ತು ಪೂರ್ವಕ್ಕೆ ಕೇದಾರದ ವರೆಗೆ ಹೋಗುವರು ಮುಂದೆ ಕಾಶ್ಮೀರದಿಂದ ಕಾಶೀಕ್ಷೇತ್ರದ ವರೆಗೂ ಹೋಗಿ ಅಲ್ಲಿ ನಿಲ್ಲುವರು ಮುಂದೆ ಅವರು ದಕ್ಷಿಣಕ್ಕೆ ಮಾಳವಾ ದೇಶದಲ್ಲಿರುವ ಉಜ್ಜಯಿನಿಯ ವರೆಗೂ ಮಾರ್ಗಕ್ರಮಣ ಮಾಡುವರು.

ಉಜ್ಜಯಿನಿಯು ಶೈವರ ಪ್ರಸಿದ್ಧ ಕ್ಷೇತ್ರವಾಗಿದೆ. ಇಲ್ಲಿಂದ ಜಂಗನರ ಕೆಲವು ತಂಡಗಳು ಪಶ್ಚಿಮಕ್ಕೆ ಗುಜರಥದೇಶವನ್ನು ಪ್ರವೇಶಿಸಿ ಸೌರಾಷ್ಟ್ರ ಸೋಮನಾಥನ ಸ್ಥಾನದ ವರೆಗೂ ತೆರಳುತ್ತಿದ್ದವು ಆದರೆ ಅವರ ಮುಖ್ಯ ತಂಡಗಳು ಉಜ್ಜಯಿನಿಯಿಂದ ಮುಂದೆ ಸಾಗಿ ಉದ್ಭಟದೇವನ ಚರಿತ್ರ ಯಲ್ಲಿ ಹೇಳಿದಂತೆ ರೇವಾನದಿ ಅಂದರೆ ಈಗಿನ ನರ್ಮದಾ ನದಿಯನ್ನು ದಾಟಿ 'ವರಹಾಟಕ' ಅಂದರೆ ಈಗಿನ ವರ್ಹಾಡವನ್ನು ಪ್ರವೇಶಿಸಿ ಗೋದಾವರೀ ನದಿಯನ್ನು ಪೈಠಣದ ಹತ್ತರ ದಾಟಿ ಕರ್ನಾಟಕವನ್ನು ಪ್ರವೇಶಿಸಿ ಕಲ್ಯಾಣಕ್ಕೆ ಬರುವವು. ಪೈಠಣದಿಂದ ಕೆಲವು ತಂಡುಗಳು, ಪಶ್ಚಿಮಕ್ಕೆ ಮಹಾರಾಷ್ಟ್ರವನ್ನು ಪ್ರವೇಶಿಸಿ ಕೊಲ್ಹಾಪುರದ ವರೆಗೂ ಹೋಗುತ್ತಿರ ಬಹುದು.

ಆದರೆ ಕಲ್ಯಾಣಕ್ಕೆ ಬಂದ ತಂಡಗಳು ಕರ್ನಾಟಕದಲ್ಲಿ ಜಂಗಮರ ಸ್ಥಾನಗಳು ಬಹು ವಿಪುಲವಾಗಿದ್ದದರಿಂದ ಅಲ್ಲಿಗೆ ಅವು ಹೋಗುತ್ತಿರಬಹುದು. ಈ ಸ್ಥಾನಗಳಲ್ಲಿ ಸೊನ್ನಲಿಗೆ, ಮಂಗಳವಾಡ, ಮುದನೂರು, ಕಪ್ಪಡಿಸಂಗಮ, ಪಟ್ಟದಕಲ್ಲು, ಪುಲಿಗೆರೆ, ಬನವಾಸಿ, ಬಳ್ಳಿಗಾವಿ, ಸಿದ್ಧಗಂಗಾ ಪ್ರದೇಶ ಇವು ಮುಖ್ಯವಾದವುಗಳು ಇಲ್ಲಿ ಜಂಗಮರ ದೊಡ್ಡ ದೊಡ್ಡ ವಸಾಹತ್ತುಗಳು ಇದ್ದ ಹಾಗೆ ತೋರುತ್ತದೆ

ಈ ಭಾಗಗಳಿಂದ ಜಂಗಮರ ತಂಡಗಳು ಪೂರ್ವಕ್ಕೆ ಪಂಪಾಕ್ಷೇತ್ರ ಶ್ರೀ ಶೈಲ, ಅಲ್ಲಿಂದ ಮುಂದೆ ಅಮರಗುಂಡ ಮತ್ತು ದಾಕ್ಷಾರಾಮ ಕ್ಷೇತ್ರ ಈ ಪಟ್ಟಣಗಳ ವರೆಗೂ ತೆರಳುತ್ತಿರಬಹುದು. ಯಾಕಂದರೆ ಇಲ್ಲಿ ಜಂಗಮರಿದ್ದ ಉಲ್ಲೇಖಗಳು ಆಗಿಂದಾಗ್ಗೆ ಗ್ರಂಥಗಳಲ್ಲಿ ಬರುತ್ತವೆ.

ಕಲ್ಯಾಣಪಟ್ಟಣಕ್ಕೆ ಬಂದ ತಂಡಗಳು ಮುಂದೆ ಸಾಗಿ ಮುಂದೆ ದಕ್ಷಿಣಕ್ಕೆ ಪಾಲ್ಕುರಿಕೆಯ ಭಾಗ ಅಂದರೆ ಈಗಿನ ಮೈಸೂರ ಸಂಸ್ಥಾನದ ಪೂರ್ವಭಾಗದೊಳಗಿಂದ ಹಾಯ್ದು ಕಪಿಲಾ ಕಾವೇರೀ ಸಂಗಮದ ವರೆಗೂ ಹೋಗುವವು. ಈ ಭಾಗಗಳಲ್ಲೆಲ್ಲ ಶಿವಶರಣರ ಸ್ಥಾನಗಳು ಅಸಂಖ್ಯಾತವಾಗಿವೆ. ಅವು ತುಮಕೂರ, ಅನಂತಪುರ ಜಿಲ್ಲೆಗಳಲ್ಲಿ ಹೆಚ್ಚಾಗಿ ಇವೆ.

# ಶಿವಾನುಭವ.

ಸಂಪುಟ ೨೫ ]          ( ಮಾಸಪತ್ರಿಕೆ )          [ ಸಂಚಿಕೆ ೫



ಮೇ ೧೯೫೧ ]          ವಿಜಾಪೂರ          [ ವೈಶಾಖ ೧೮೭೩

ವಾ. ಚಂ. ೫-೧೨-೦

# ವಿಷಯಾನುಕ್ರಮಣಿಕೆ

ಪುಟಗಳು




## ಶಿವಾನುಭವ ಪತ್ರಿಕೆ, ವಿಜಾಪುರ.

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ ೫-೧೨-೦

# ಶಿವಾನುಭವ

| ವರ್ಷ ೨೫ | ಮೇ ೧೯೫೦ | ಸಂಚಿಕೆ ೫ |
|---|---|---|


## ಶಿವಶರಣರ ಚಳವಳಿಯು ಮುಂದಿನ ಪರಂಪರೆಯು

### ಇತಿಹಾಸ

### ಲೇಖಾಂಕ ೨

( ಲೇಖಕ :— ಮಧುರಚೆನ್ನ - ಹಲಸಂಗಿ )

ಇನ್ನು ನಿರಂಜನ ವಂಶ ರತ್ನಾಕರದಿಂದ ತಿಳಿಯುವ ಇನ್ನುಳಿದ ಕೆಲವು ಸಂಗತಿಗಳನ್ನು ಹೇಳಿ ಈ ಲೇಖವನ್ನು ಮುಗಿಸುತ್ತೇನೆ.

ತಿಪ್ಪೇರುದ್ರಸ್ವಾಮಿ, ಬಸವಪ್ರಭುಸ್ವಾಮಿ, ಗೋಸಲ ಸಿದ್ಧೇಶ್ವರ ಸ್ವಾಮಿ ಈ ಮೂವರು ಮಹಾತ್ಮರು ಮೂರುಕಡೆಯಲ್ಲಿ ಧರ್ಮಪ್ರಚಾರ ಮಾಡಿದಂತೆ ತಿಳಿಯುತ್ತದೆ. ಅದು ಹೇಗೆಂದರೆ :—

**ತಿಪ್ಪೇರುದ್ರಸ್ವಾಮಿ** — " ( ಇವರು ) ಗಣಸಮೂಹದಲ್ಲಿ ಗುರು ನಮಶ್ಶಿವಾಯರೆಂಬ ಗುರುಬಸವದೇವರನ್ನು ಚಿದಂಬರದಲ್ಲಿರುವ ಮಠ ದಲ್ಲಿರುವದೆಂದಾಜ್ಞಾಪಿಸಿ, ಮತ್ತೊಬ್ಬ ಶಿವಜ್ಞಾನಿಯೆಂಬವರಿಗೆ ಸಂಜಿರುಜನ ( ತಂಜಾವರ? ) ಭಕ್ತಮಠದಲ್ಲಿರುವದೆಂದು ನಿರೂಪಿಸಿ, ತಿರುಣಾಮಲೆ ಯಲ್ಲಿರುವ ತಮ್ಮ ಮಠದಲ್ಲಿ ಶಂಕರೇಶನೆಂಬವರಿಗೆ ಇರುವದೆಂದಾಜ್ಞಾ ಪಿಸಿ, ಆಮೇಲೆ ಬಮ್ಮಯ್ಯಪಾಳ್ಯದ ಪಾಲಯ್ಯದೇವರು, ಪುಲಚೇರಿಯ ( ಪಾಂಡಿಚೇರಿ ) ಪಾದಪೂಜರೆಂಬ ಅಂಬಲರೆಂಬ ಶಿವಪ್ರಕಾಶರು

ಮುಂತಾದ ಗಣಂಗಳಿಗೆ ಷಟ್‌ಸ್ಥಲ ಜ್ಞಾನೋಪದೇಶವಂ ಮಾಡಿ (ದರು)"
— "ನಿರಂಜನವಂಶ ರತ್ನಾಕರ," ಪುಟ— ೨೦

**ಬಸವಪ್ರಭುಸ್ವಾಮಿಗಳು :—** "ಬಸವಪ್ರಭುಸ್ವಾಮಿಗಳು .... ಕೆಳದಿದೇಶ ಮುಂತಾದ ಸಕಲದೇಶಂಗಳಂ ಸಂಚರಿಸುತ್ತ ಅಲ್ಲಿಂದು ಹುಕ್ಕೇರಿನಾಡಿಗೆ ದಯಮಾಡಿಸಿ ಅಲ್ಲಿಂದ ಹನಗಂಡಿಯೆಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿರುವ ಜೈನ ಅರಸನಿಗೆ ಲಿಂಗಧಾರಣವಂ ಮಾಡಿಸಿ, ಆ ಮೇಲೆ ತೇರದಾಳವೆಂಬ ಊರಿಗೆ ದಯಮಾಡಿಸಿ, ಅಲ್ಲಿಯ ಭಕ್ತಗಣಂಗಳನ್ನು ಕರೆಯಿಸಿ ತಮ್ಮಾಯ ಶಿವಾನುಭವ ಚರಂತಿಗೆಯನ್ನು ಆದಿ ಲಿಂಗೇಶನೆಂಬ ಗಣವರರಿಗೆ ಮಾಡಿ ತಮ್ಮಯ ಕಮಂಡಲುವಾದ ಮಾಗಿಯನ್ನು ಪಾವುಗೆ, ಬೆತ್ತವ ಸಹಿತವಾಗಿ ಕೊಟ್ಟು ಸಮಸ್ತರಿಗೆ ಆಶೀರ್ವಾದವಂ ಮಾಡಿ ನಿರ್ವಯಲಾದರು. ಇವರ ತೋರಗದ್ದಿಗೆ ತೇರದಾಳದಲ್ಲಿರುವದು."

— "ನಿರಂಜನವಂಶ ರತ್ನಾಕರ" ಪುಟ-೨೧-೨೨

**ಗೋಸಲಸಿದ್ಧೇಶ್ವರ ಸ್ವಾಮಿಗಳು :—** ಇವರು ಐಹೊಳ್ಳಿಯ ಹಂದರಿಂದ (ವರ್ತಕರಿಂದ) ಕಟ್ಟಿಸಲ್ಪಟ್ಟ ಹರದನಹಳ್ಳಿಯ ಮಠಕ್ಕೆ ಸ್ವಾಮಿಗಳಾಗಿ, ತಮ್ಮ ನೂರೊಂದು ಗಣಗಳೊಂದಿಗೆ ತುಮಕೂರ ಬಳಿಯಲ್ಲಿರುವ ಸಿದ್ಧಗಂಗೆಯ ಬೆಟ್ಟಕ್ಕೆ ದಯಮಾಡಿಸಿ ಅಲ್ಲಿ ಎಲ್ಲರಿಗೆ ಒಂದೊಂದು ಗವಿಯನ್ನು ಕಟ್ಟಿಸಿಕೊಟ್ಟು ತಾವು ಆ ಬೆಟ್ಟದಲ್ಲಿಯೇ ನಿರ್ವಯಲಾದರು.

— "ನಿರಂಜನವಂಶ ರತ್ನಾಕರ" ಪುಟ ೨೬-೩೨

ಇದೆಲ್ಲ ವಿವರಣೆಯ ಮೇಲಿಂದ ತಿಪ್ಪೆರುದ್ರ ಸ್ವಾಮಿಗಳು ತಮಿಳು ನಾಡಿನಲ್ಲಿಯೂ, ಬಸವ ಪ್ರಭುಸ್ವಾಮಿಗಳು ಉತ್ತರ ಕರ್ನಾಟಕದಲ್ಲಿಯೂ ಗೋಸಲ ಚನ್ನಬಸವೇಶ್ವರು ದಕ್ಷಿಣಕರ್ನಾಟಕದಲ್ಲಿಯೂ ನೂರೊಂದು ವಿರಕ್ತರಗಿಂತು ಮುಂಚೆ ಧರ್ಮ ಪ್ರಚಾರ ಕಾರ್ಯಮಾಡಿ ಮಹಾಮಹಿಮರೆಂದು ಅನಿಸಿಕೊಂಡಿದ್ದರೆಂಬದು ಸ್ಪಷ್ಟವಿದೆ. ಈ ಮೂವರಲ್ಲಿ ಕೊನೆಯವರಾದ ಗೊಸಲ ಚನ್ನಬಸವೇಶ್ವರ ಸ್ವಾಮಿಗಳ ಶಿಷ್ಯರಾದ ಶಂಕರಾಚಾರ್ಯ ಸ್ವಾಮಿಗಳೇ ನೂರೊಂದು ಪುರಾತನರೊಂದಿಗೆ ವಿಜಯನಗರಕ್ಕೆ ಬಂದು

ಅಲ್ಲಿ ಕೆಲದಿನ ನೆಲಸಿದರೆಂದು ನಿರಂಜನ ವಂಶರತ್ನಾಕರವು ಹೇಳುತ್ತದೆ. ( ೩೨—೩೩ ). ಅದು ಹೇಗೆಂದರೆ:—

" ಶಂಕರಾಚಾರ್ಯ ಸ್ವಾಮಿಗಳು ವಾಣಿಜ್ಯಪುರದ (ಹರದನಹಳ್ಳಿ) ಭಕ್ತರ ಭಕ್ತಿಯೊಡನೆ ಪೂಜೋತ್ಸವಂಗಳನ್ನು ಕೈಕೊಳ್ಳುತ್ತ ತಮ್ಮ ಗಣ ಸಮೂಹದೊಡನೆ ಪಂಪಾಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿಯ ಪ್ರೌಢ ದೇವೇಂದ್ರನು ಪಂಪಾ ವಿರೂಪಾಕ್ಷನಾಲಯಕ್ಕೆ ಸಮೀಪವಾದ ವಿದ್ಯಾನಗರವಂ ಕಟ್ಟಿ ಆ ಪುರವ ಆ ನೃಪಾಲನು ಆಳುವಕಾಲದಲ್ಲಿ ಶ್ರೀ ಪರಮೇಶ್ವರನ ಆಜ್ಞೆಯಿಂದ ಕೈಲಾಸದಿಂ ಮರ್ತ್ಯಲೋಕಕ್ಕೆ ದಯಮಾಡಿಸಿ ಲೀಲೆಯಂ ಮಾಡಿ ಶಿವಭಕ್ತಿಯಂ ನೆಲೆಗೊಳಿಸಿದ ನೂರೊಂದು ವಿರಕ್ತರಾದ ಗುರುಗಳು ಕರಸ್ಥಲದ ವೀರಣ್ಣ ಒಡೆಯರು, ಕರಸ್ಥಲವನಾಗಿದೇವರು, ಗುರುಬಸವದೇವರು, ಬತ್ತಲೇಶ್ವರ, ನಿರ್ವಾಣಿಬೋಳೇಶ ಮುಂತಾದ ಗಣವರರಿಗೆ ಶಂಕರೇಶ್ವರ ಸ್ವಾಮಿಗಳು ಷಟ್‌ಸ್ಥಲಜ್ಞಾನೋಪದೇಶವಂ ಮಾಡಿ ಅಲ್ಲಿಂದ ತಮ್ಮಯ ಗುರುಗಳು ಶಿವಯೋಗದೊಡನೆ ತಪವಂಗೈದ ಕಾರಣದಿಂ ಗೋಸಲ ಶಿದ್ಧೇಶ್ವರನ ಹೆಸರಾದ ಬೆಟ್ಟಕ್ಕೆ ದಯಮಾಡಿಸಿ ಅದೇ ಬೆಟ್ಟದಲ್ಲಿ ನಿರ್ವಯಲಾದರು. ಇವರ ತೋರಗದ್ದುಗೆಯು ಪೆನುಗೊಂಡೆ ಸೀಮೆ ಕೋಟಗೆರೆ ಸಮೀಪದ, ಸಿದ್ದರಬೆಟ್ಟದಲ್ಲಿ ಇರುತ್ತದೆ.

— " ನಿರಂಜನವಂಶ ರತ್ನಾಕರ " ಪುಟ ೩೨-೩೩

ನೂರೊಂದು ವಿರಕ್ತರ ಇತಿಹಾಸವನ್ನು ಐತಿಹಾಸಿಕವಾಗಿ ಇನ್ನೂ ಹೆಚ್ಚಾಗಿ ಶೋಧಿಸಬೇಕೆಂಬುದು ಸುಸ್ಪಷ್ಟ. ಇದೀಗ ತಿಳಿದ ಮಟ್ಟಿಗೆ ನಾನಿಲ್ಲಿ ಪ್ರಸ್ತಾಪಿಸಿದ್ದೇನೆ. ಇದಿರಲಿ. ಆದರೆ ಇದೇಕಾಲದಲ್ಲಿ ಅಂದರೆ ಪ್ರೌಢದೇವರಾಯನ ಕಾಲದಲ್ಲಿದ್ದ ಇನ್ನೊಬ್ಬ ಪ್ರಸಿದ್ಧ ತಾತ್ವಿಕ ಕವಿಯ ವಿಷಯವನ್ನು ಹೇಳಿ ಈ ಎರಡನೆಯ ಘಟ್ಟದ ವಿಷಯವನ್ನು ಮುಗಿಸುವೆನು. ಆ ಕವಿ ಯಾರೆಂದರೆ " ಮಗ್ಗೆಯ ಮಾಯಿದೇವ. " ಈತನ " ಶತಕತ್ರಯ " ವು ವೀರಶೈವ ತತ್ವವನ್ನು ಬಹಳ ಸುಂದರವಾಗಿ ಪ್ರತಿಪಾದಿಸುತ್ತದೆಯೆಂಬುದನ್ನು ಎಲ್ಲರೂ ಬಲ್ಲರು. ಇದರ ಮೇಲೆ ಮುಂದೆ ಕೆಲವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಈತನು ಐಹೊಳ್ಳಿಯ ಸೋಮನಾಥ ದೇವರ ಭಕ್ತನು. ಆದರೆ "ಮಗ್ಗೆಯಪುರ" ದಲ್ಲಿ ಜನ್ಮತಾಳಿದ್ದನೆಂದು "ಬೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಹೇಳಿದೆ. ಚನ್ನಬಸವ ಪುರಾಣದಲ್ಲಿ, ಈತನು ವಿಜಯನಗರದ ಪ್ರೌಢದೇವರಾಯನಿಂದ ಪೂಜೆಹೊಂದಿದ್ದನೆಂದು ಹೇಳಲಾಗಿದೆ. (ಸಂಧಿ ೬೩, ಪದ್ಯ ೩೮) ಹೇಗಂದರೆ:— "ಪ್ರೌಢನಿಂ ಪೂಜೆಯಂ ಕೊಂಡು ಷಟ್‌ಸ್ಥಲ ಮಾರ್ಗನಂ ಸಕಲ ಶಿವಭಕ್ತ ಸಂತತಿಗೆ ತಿಳಿವೊಲನುಭವ ಸೂತ್ರವಾದಿ ಶಾಸ್ತ್ರಂಗಳಂ ಗೆಲವಿಸಿಂ ಪೇಳ್ದು ಮಗ್ಗೆಯ ಮಾಯಿದೇವ ಪ್ರಭುವರಸರದೆ ಮುಕ್ತನಹನು."

ಈತನಲ್ಲದೆ ಪ್ರೌಢದೇವರಾಯನ ಕಾಲದಲ್ಲಿ, ವಿಜಯನಗರದಲ್ಲಿ ರಾಜಮನ್ನಣೆಗೆ ಪಾತ್ರನಾಗಿ, ನಿಜಗುಣ ಶಿವಯೋಗಿಗಳಂತ ಅನೇಕ ಅನುಭವ ಗ್ರಂಥಗಳನ್ನು ಬರೆದು, ಬಹುಶಃ ಕೊನೆಗೆ ನೂರೊಂದು ವಿರಕ್ತರಲ್ಲಿ ಎಣಿಸಲ್ಪಟ್ಟ "ಗುರುಬಸವಾರ್ಯ" ನೆಂಬೊಬ್ಬ ಪ್ರಖ್ಯಾತ ಸ್ವಾಮಿಯು ಇದ್ದನು. ಇವನ ವಿಷಯವನ್ನು ಹೇಳದೆ ಬಿಟ್ಟರೆ ಪ್ರಸ್ತುತ ಇತಿಹಾಸವು ಅಪೂರ್ಣವೆಂದೆನಿಸುವಂತಿದೆ. ಆದುದರಿಂದ ಆತನ ವಿಷಯವನ್ನೂ ಒಂದಿಷ್ಟು ಹೇಳುವೆ.

ಈತನು "ಶಿವಯೋಗಾಂಗ ಭೂಷಣ", "ಸದ್ಗುರು ರಹಸ್ಯ" "ಕಲ್ಯಾಣೇಶ್ವರ" "ಸ್ವರೂಪಾಮೃತ" "ವೃಷಭಗೀತೆ" "ಅವಧೂತ ಗೀತೆ" "ಮನೋವಿಜಯ ಕಾವ್ಯ" ಈ ಗ್ರಂಥಗಳನ್ನು ಬರೆದಿದ್ದಾನೆ. ಈತನ ಮನೋವಿಜಯ ಕಾವ್ಯದ ಕೊನೆಯ ಗದ್ಯದಲ್ಲಿ "ಶಿವಯೋಗಿಜನ ವಿನುತ ಚರಣಾರವಿಂದ, ಷಟ್ ಸ್ಥಲ ಜ್ಞಾನ ಪ್ರಭಾಪುಂಜ ರಂಜಿತಾಂತರಂಗ, ವೀರಶೈವ ಮತಸ್ಥಾಪನಾಚಾರ್ಯನಪ್ಪ ಶ್ರೀಮದ್ಗುರು ಬಸವೇಶ್ವರಂ" ಎಂದು ಹೇಳಿಕೊಂಡಿರುವವರಿಂದ ಈತನು ಬಹಳ ಪ್ರಸಿದ್ಧನಾದ ವೀರಶೈವ ಗುರುವಾಗಿದ್ದಂತೆ ತಿಳಿಯುತ್ತದೆ.

ನೂರೊಂದು ವಿರಕ್ತರಲ್ಲಿ ಪ್ರಖ್ಯಾತರಾದ ಕರಸ್ಥಲದ ನಾಗಿದೇವ ಹಾಗೂ ಕರಸ್ಥಲದ ವೀರಣ್ಣೊಡೆಯರು ಶಿವಯೋಗ ಸಿದ್ಧಿಯನ್ನು ಪಡೆದುಕೊಂಡು ವಿಜಯನಗರಕ್ಕೆ ಬಂದಾಗ ಪ್ರೌಢದೇವರಾಯನು ಅವರಿಬ್ಬರನ್ನು ಪರೀಕ್ಷಿಸುವದಕ್ಕೆಂದು ಈ ಗುರುಬಸವಾರ್ಯನೆಡೆಗೆ ಕಳುಹಿಸಿಕೊಡು

ವನು. ಆಗ ಗುರುಬಸವಾರ್ಯನು ನಾಗಿದೇವನ ಶಿವಜ್ಞಾನಕ್ಕೆ ಮೆಚ್ಚಿ ಅನುಮಾನವಿಲ್ಲದೆ ಆತನಿಗೆ ನಮಿಸಿ ವಿರಕ್ತರನ್ನು ಕೂಡಿ ಸಿಂಗಾರ ತೋಟಕ್ಕೆ ಹೋಗುವನು ಎಂದು ಚನ್ನಬಸವ ಪುರಾಣದಲ್ಲಿ ಹೇಳಿದೆ. ( ಸಂಧಿ ೬೩, ಪದ್ಯ ೧೫-೧೭ )

ಇಂತಿವರೆಲ್ಲ ಮಹಾನುಭಾವರು ನೂರೊಂದು ವಿರಕ್ತರ ಕಾಲದಲ್ಲಿ ಶಿವಶರಣರ ತತ್ವ ಪ್ರಚಾರದ ಕಾರ್ಯವನ್ನು ಮಾಡಿದರು. ಮುಂದೆ ಸುಮಾರು ಐವತ್ತೇ ವರುಷಗಳಲ್ಲಿ "ತೋಂಟದ ಸಿದ್ಧಲಿಂಗಯತಿ"ಗಳೆಂಬ ಮಹಾಮಹಿಮರು ಏಳುನೂರು ಜನ ಶಿಷ್ಯರೊಂದಿಗೆ ಪ್ರಕಟರಾಗಿ ದೇಶದಾದ್ಯಂತ ತಮ್ಮ ಶಿಷ್ಯ ಪ್ರಶಿಷ್ಯರಿಂದ ಜನಸಾಮಾನ್ಯರಲ್ಲೆಲ್ಲ ಧರ್ಮಪ್ರಚಾರ ಹಾಗೂ ತತ್ವಪ್ರಚಾರ ಮಾಡಿಸಿದ್ದೇ ಈ ಶಿವಶರಣ ಚಳವಳಿಯ ಮೂರನೆಯ ಘಟ್ಟವು.

"ಪ್ರೌಢದೇವರಾಯನು ಸಾಂಬಲೋಕಕ್ಕೆ ಹೋದನಂತರ ಕೆಲವು ದಿವಸ ಆ ರಾಜ್ಯದಲ್ಲಿ ಅನಾಚಾರವು ಹೆಚ್ಚಾಗಿ ಶಿವಾಚಾರವಡಗಿ ಮೇಲಾ ಧರಣಿಯೊಳು ವೀರಶೈವಾಚಾರವಿಲ್ಲದೆ ಪರವಾದಿಗಳು ಘನವಾಗಲು ಕೈಲಾಸಕ್ಕೆ ನಾರದನು ಪೋಗಿ ಪರಮೇಶ್ವರನು ಓಲಗಂಗೊಟ್ಟಿಪ್ಪ ಸಮಯದೊಳು ಕಂಡು ಸಲ್ಲೀಲೆಯಿಂದೆರಗಿ ಮುಗುಳ್ಬಿದ್ದು ಬಿನ್ನೈಸಿದಂ ಭಯ ಭಕ್ತಿಯಿಂದ ಧರೆಯೊಳಗೆ ವೀರಶೈವಾಚಾರವಡಗಿತ್ತು. ಕರುಣದಿಂ ನೀವೆ ಚಿತ್ತೈಸಿ ಷಟ್‌ಸ್ಥಲವನುದ್ಧರಿಸೆಂದು ನಾರದಂ ಬಿನ್ನೈಸಲೀಶಂ ನಿರಂಜನ ಗಣೇಶ್ವರನೊಡನೆ ವರ ಗಣೇಶ್ವರರೇಳ್ನೂರ್ವರಂ ಕೂಡಿಕೊಂಡಿರದೆ ಭೂಮಿಯೊಳುದಯಿಸಿ ಜಂಗಮವಾಂತು ವರ ಷಟ್ ಸ್ಥಲವನುದ್ಧರಿಸೆಂದು ಕಳುಹಲವರೊಡಗೂಡಿ ( ತೋಂಟದ ಸಿದ್ಧಲಿಂಗ ಯತಿಯಾಗಿ ) ಭೂಮಿಗಿಳಿದನು."

—"ನಿರಂಜನವಂಶ ರತ್ನಾಕರ" ಪುಟ-೩೬

ಇದೇ ನಿರಂಜನವಂಶ ರತ್ನಾಕರದಲ್ಲಿ "ನರಸಣ್ಣರಾಯನಾಳಿಕೆಯಲ್ಲಿ ಈ ಸಂಗತಿ ನಡೆಯಿತೆಂದು ಹೇಳಲಾಗಿದೆ. ( ಪುಟ-೩೯ ) ಆದರೆ ಪ್ರೌಢದೇವರಾಯನ ಅನಂತರ ಇಬ್ಬರು ಅರಸರು ಆಳಿದಮೇಲೆ

ಆ ಮನೆತನದ ಅಂತವಾಗಿ ಬೇರೆ ಬೇರೆ ಎರಡು ಮನೆತನದ ನಾಲ್ಕುಜನ ನರಸಿಂಹರಾಜರು ರಾಜ್ಯವನ್ನಾಳಿದರು (೧ ಸಾಳ್ವ ನರಸಿಂಹ, ೨ ಇಮ್ಮಡಿ ನರಸಿಂಹರಾಯ, ೩ ತುಳುವ ನರಸರಾಯ, ೪ ವೀರನರಸಿಂಹ (ಕ್ರಿ. ಶ. ೧೪೭೮—೧೫೦೯)

ಈ ನಾಲ್ವರಲ್ಲಿ ಯಾವ ನರಸಿಂಹ ರಾಜನ ಕಾಲದಲ್ಲಿ "ತೋಂಟದ ಸಿದ್ಧಲಿಂಗಯತಿ" ಯು ಬಂದಿದ್ದಿರಬೇಕೆಂಬುದೇ ನಮ್ಮ ಇದಿರಿಗಿರುವ ಪ್ರಶ್ನೆ. "ನರಸ" ಎಂಬ ಹೆಸರು ಈ ನಾಲ್ವರಲ್ಲಿ ತುಳುವ ನರಸಿಂಹ ರಾಯನಿಗೇ ಇದ್ದಿತೆಂದು ಐತಿಹಾಸಿಕ ಗ್ರಂಥಗಳಲ್ಲಿ ಕಂಡುಬರುತ್ತದೆ. ಏಕೆಂದರೆ ಆತನು ಮೊದಲಿಗೆ ದಂಡನಾಯಕನು ಮಾತ್ರನಾಗಿದ್ದು "ನರಸ ದಂಡನಾಯಕ" ನೆಂದು ಇತಿಹಾಸ ಪುಸ್ತಕಗಳಲ್ಲಿ ಈತನನ್ನು ಸಂಬೋಧಿಸಲಾಗಿದೆ. ಈ "ನರಸದಂಡನಾಯಕ" ಎಂಬ ಶಬ್ದವೂ ನಿರಂಜನ ವಂಶ ರತ್ನಾಕರದ "ನರಸಣ್ಣರಾಯ" ನೆಂಬ ಶಬ್ದವೂ ಸ್ವಲ್ಪ ಮಟ್ಟಿಗೆ ಹೋಲುವದರಿಂದ ಕ್ರಿ. ಶ. ೧೪೯೬ ರಿಂದ ೧೫೦೪ರ ವರೆಗೆ ಆಳಿದ ತುಳುವ ವಂಶದ ಮೊದಲನೆಯ ದೊರೆಯಾದ ನರಶಿಂಹರಾಜನ ಕಾಲದಲ್ಲಿ ಮೇಲ್ಕಾಣಿಸಿದ ಮಹಾಪುರುಷರು ಉದಯಿಸಿರಬೇಕೆಂದು ಊಹಿಸಲಿಕ್ಕೆ ಅವಕಾಶವಿದೆ. ಚೆನ್ನಬಸವ ಪುರಾಣದಲ್ಲಿ ಸಹ "ಪ್ರೌಢರಾಯನ ವಂಶದ ವಿರೂಪಾಕ್ಷರಾಯನನ್ನು ಪಟ್ಟದಿಂದ ತಳ್ಳಿ 'ನರಸಣ್ಣನಾಯ್ಕ' ನು ವಿಜಯನಗರವನ್ನು ಹಿಡಿಯುಕೊಳ್ಳುವನು. ಆತನ ವಂಶದವರು ೫೧ ವರುಷ ಆಳುವರು" ಎಂದು ಹೇಳಿ ಆಮೇಲೆ "ತೋಂಟದ ಸಿದ್ಧಲಿಂಗ ಯತಿ" ಯ ಆಗಮನದ ಕಥೆಯನ್ನು ಮೇಲೆ ನಿರಂಜನವಂಶ ರತ್ನಾಕರದಲ್ಲಿ ಹೇಳಿದಂತೆಯೇ (ನಾರದ ಪರಮೇಶ್ವರ ಸಂವಾದ ಇತ್ಯಾದಿ) ಹೇಳಲಾಗಿದೆ.

ವಂದ್ಯ ಕವಿಚರಿತ್ರಕಾರರು ಪ್ರೌಢದೇವರಾಯನ ಮಗನ ಅನಂತರ ಆಳಿದ ವಿರೂಪಾಕ್ಷರಾಯನ ಕಾಲದಲ್ಲಿಯೇ ತೋಂಟದ ಸಿದ್ಧಲಿಂಗ ಯತಿಯು ಬಂದಹಾಗೆ ಭಾವಿಸಿ ಆತನ ಕಾಲವು ಸುಮಾರು ಕ್ರಿ. ಶ. ೧೪೭೦ ಆಗಬಹುದೆಂದು ಊಹಿಸಿದ್ದಾರೆ. ಆದರೆ ವಿರೂಪಾಕ್ಷರಾಯನ ಬದಲಾಗಿ ತುಳುವ ನರಸಿಂಹರಾಯನ ಆಳಿಕೆಯೆಂದು (ಕ್ರಿ. ಶ. ೧೪೯೬—೧೫೦೩) ಇಟ್ಟುಕೊಂಡರೆ ಇನ್ನೊಂದು ಮೂವತ್ತು ವರುಷ ಮುಂದಕ್ಕೆ ಬರಬೇ

ಕಾಗುತ್ತದೆ, ಇಷ್ಟೇ. ಹೀಗಾದರೆ ಸುಮಾರು ಕ್ರಿ. ಶ. ೧೫೦೦ ರ ಸುಮಾರು ಆತನ ಕಾಲವೆಂದು ಹೇಳಬೇಕಾಗುತ್ತದೆ. ಬಲ್ಲವರು ಹೆಚ್ಚಿಗೆ ಸಂಶೋಧಿಸಲಿ. ನನ್ನ ಊಹೆಯನ್ನು ನಾನಿಲ್ಲಿ ನಿರ್ದಿಷ್ಟಪಡಿಸಿರುವೆನು. ಯಾವುದಿದ್ದರೂ ಬಹಳವೇನೂ ಅಂತರವಿಲ್ಲ.

ಈ ತೋಂಟದ ಸಿದ್ಧಲಿಂಗಯತಿಗಳು ಸಾಕ್ಷಾತ್ ಶಿವಯೋಗ ಸಂಪನ್ನರು. ಇವರೊಂದು ತೋಟದಲ್ಲಿ ಅನೇಕ ವರುಷ ಶಿವಯೋಗ ಸಮಾಧಿ ಸ್ಥಿತಿಯಲ್ಲಿದ್ದದ್ದರಿಂದ ಇವರ ಹೆಸರಿನ ಹಿಂದೆ "ತೋಂಟದ" ಎಂಬ ಶಬ್ದವು ಬಂದಿದ್ದಿತೆಂದು ಚೆನ್ನಬಸವ ಪುರಾಣ ಹಾಗೂ ನಿರಂಜನವಂಶ ರತ್ನಾಕರ ಇವೆರಡರಲ್ಲಿಯೂ ಹೇಳಿದೆ. ಶ್ರೀ ಬಸವಾದಿ ಶಿವಶರಣರ ಅನಂತರ ಇವರ ಕಾಲದವರೆಗೆ ಇನ್ನಾರೂ ಪುನಃ ಸ್ವತಃ ವಚನಗಳನ್ನು ಬರೆದಿದ್ದಿಲ್ಲ. ೩೫೦ ವರುಷಗಳ ಅನಂತರ ಪುನಃ ಇವರೇ ತಮ್ಮ ಸ್ವತಃದ ವಚನಗಳನ್ನು ಬರೆದವರು. "ಷಟ್‌ಸ್ಥಲ ಜ್ಞಾನಸಾರಾಮೃತ"ವೆಂದು ಇವರ ವಚನ ಗ್ರಂಥಕ್ಕೆ ಹೆಸರಿದೆ. ಅದರಲ್ಲಿ ೭೦೧ ವಚನಗಳಿವೆ. "ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ" ಎಂಬುದು ಇವರ ವಚನಗಳ ಮುದ್ರಿಕೆಯಾಗಿದೆ.

ಇವರ ಏಳನೂರು ಶಿಷ್ಯರಲ್ಲಿದ್ದ ಬೇರೆ ಇನ್ನಿಬ್ಬರಾದ ಸಿದ್ಧಲಿಂಗೇಶ್ವರ, ಹಾಗೂ ದೊಡ್ಡ ಸಿದ್ಧಲಿಂಗೇಶ್ವರರಲ್ಲಿ ಬಹುಶಃ ಯಾರೋ ಒಬ್ಬರು "ಸ್ವತಂತ್ರ ಸಿದ್ಧಲಿಂಗೇಶ್ವರ ವಚನ" ಎಂಬ ಸ್ವತಂತ್ರ ವಚನ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ೪೩೦ ವಚನಗಳಿವೆ. "ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ" ಎಂಬುದು ಈತನ ವಚನಗಳ ಮುದ್ರಿಕೆಯಾಗಿದೆ. ತೋಂಟದ ಸಿದ್ಧಲಿಂಗಯತಿಯಿಂದ ಭಿನ್ನನಾದ ಇನ್ನೊಬ್ಬ ಸಿದ್ಧಲಿಂಗೇಶ್ವರನೆಂದು ನಿರ್ದಿಷ್ಟಪಡಿಸಿಕೊಳ್ಳುವದಕ್ಕಾಗಿ ಈ ವಚನಕಾರನು ತನ್ನ ಹೆಸರಿನ ಹಿಂದೆ "ಸ್ವತಂತ್ರ" (=ಬೇರೆ) ಎಂಬ ಶಬ್ದವನ್ನು ಇಟ್ಟಂತೆ ಕಾಣುತ್ತದೆ. "ಮುಕ್ತ್ಯಂಗನೆಯ ಕಂಠಮಾಲೆ" ಎಂಬುದೂ ಈತನ ವಚನಗಳಿಂದಲೇ ಸಂಗ್ರಹೀತವಾದ ಇನ್ನೊಂದು ವಚನಗ್ರಂಥವಿರುತ್ತದೆ. ಇದರ ಮುದ್ರಿಕೆಯಾದರೂ ಅದೇ.

ತೋಂಟದ ಸಿದ್ಧಲಿಂಗ ಯತಿಯ ಶಿಷ್ಯನ (ಬೋಳಬಸವೇಶನ) ಶಿಷ್ಯನಾದ ಗುಮ್ಮಳಾಪುರದ ಶಿದ್ಧಲಿಂಗೇಶ್ವರನು "ಷಟ್‌ಸ್ಥಲದ ಲಿಂಗಾಂಗ ಸಂಬಂಧದ ನಿರ್ವಚನ" ಎಂಬ ವಚನ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿಯ ವಚನಗಳು ಕೇವಲ ೧೫ ಮಾತ್ರ. ಸಾಕ್ರೆಟಿಸನ ಸಂವಾದ ದಂತಿರುವ "ಶೂನ್ಯ ಸಂಪಾದನೆ" ಯೆಂಬ ಪ್ರಖ್ಯಾತ ಗ್ರಂಥವನ್ನು ರೂಪಿಸಿದ ಗುಳೂರ ಸಿದ್ಧವೀರಣಾರ್ಯನು ಈ ತೋಂಟದ ಸಿದ್ಧಲಿಂಗ ಯತಿಯ ಶಿಷ್ಯನೇ ಆಗಿದ್ದನೆಂಬ ಮಾತು ಆ ಗ್ರಂಥದ ಪೀಠಿಕಾ ಸಂಧಿ ಯಲ್ಲಿಯೇ ಹೇಳಲಾಗಿದೆ. ಅಲ್ಲದೆ ಹಡಪದ ಅಪ್ಪಣ್ಣಗಳ ಪತ್ನಿ ಲಿಂಗಮ್ಮನ ವಚನಗಳಂತೆಯೇ ತೀರ ಚಿಕ್ಕದೂ ತೀರ ಚೊಕ್ಕವೂ ಆದ "ಘನಲಿಂಗ ವಚನಗಳು" ಎಂಬ ಗ್ರಂಥವನ್ನು ಬರೆದ ಘನಲಿಂಗದೇವನೂ ಸಹ ಮಹಾ ಯೋಗೀಶ್ವರನಾದ ತೋಂಟದ ಸಿದ್ಧಲಿಂಗಯತಿಯ ಶಿಷ್ಯನೇ ಎಂಬ ಮಾತು ಆತನ ವಚನಗಳಲ್ಲಿಯೇ ಹೇಳಲಾಗಿದೆ.

ತೋಂಟದ ಸಿದ್ಧಲಿಂಗಯತಿಯ ಪುರಾಣದಲ್ಲಿ ಅವರ ಶಿಷ್ಯನೆಂದು ಉಲ್ಲೇಖಿಸಲ್ಪಟ್ಟ ಮೊದಲನೆಯ ಗುಬ್ಬಿಯ ಮಲ್ಲಣ್ಣನು ಪುರಾತನ ಶಿವ ಶರಣರ ವಚನಗಳನ್ನು (ಇಂದು ವಚನ ಪಿತಾಮಹರಾದ ರಾವಬಹಾದ್ದೂರ ಶ್ರೀ ಫ. ಗು ಹಳಕಟ್ಟಿಯವರು ಶ್ರೀ ಬಸವೇಶ್ವರರ ವಚನಗಳ ಆಧುನಿಕ ಪದ್ಧತಿಯ ವರ್ಗೀಕರಣ ಮಾಡಿದಂತೆ) ಸಾಮಾನ್ಯ ಜನರಿಗೆ ಉಪ ಯೋಗವಾಗುವ ರೀತಿಯಲ್ಲಿ ವರ್ಗೀಕರಣ ಮಾಡಿ "ಗಣಭಾಷ್ಯ ರತ್ನ ಮಾಲೆ" ಎಂಬ ಪ್ರಖ್ಯಾತವಾದ ಸಂಗ್ರಹ ಗ್ರಂಥವನ್ನು ಸಿದ್ಧಗೊಳಿಸಿರು ವರು. ಮೊದಲಿನ ನೂರೊಂದು ಸ್ಥಲಗಳು ತಾತ್ವಿಕವಾದ್ದರಿಂದ ಅವು ಗಳನ್ನು ಕ್ರಮಾನುಸಾರವಾಗಿ ತಿಳಿದುಕೊಳ್ಳುವುದು ಸಾಮಾನ್ಯರಿಗೆ ಬಿಗಿ ಯಾದ ಕೆಲಸವಾಗಿದ್ದಿತು. ಆದ್ದರಿಂದ ಬೇರೆ ಬೇರೆ ವಿಷಯಗಳ ಸುಲಭ ವಾದ ವರ್ಗೀಕರಣವನ್ನು ಮಾಡಿ ೧೦೧ ವಿಭಾಗಗಳನ್ನು ಮಾಡಿ ನೂರೊಂದು ಸ್ಥಲವೆಂದೇ ಹೆಸರಿಟ್ಟು ಗಣಭಾಷ್ಯ ರತ್ನಮಾಲೆಯನ್ನು ಈತನು ಬಹು ಸುಲಭವಾಗುವಂತೆ ಹೆಣೆದಿದ್ದಾನೆ.

ಈ "ಗಣಭಾಷ್ಯ ರತ್ನಮಾಲೆಯು" ಗುಬ್ಬಿಯ ಮಲ್ಲಣನ ಮೊಮ್ಮಗ ನಾದ ಎರಡನೆಯ ಗುಬ್ಬಿಯ ಮಲ್ಲಣಾರ್ಯನು "ವೀರಶೈವಾಮೃತ ಪುರಾಣ" ವೆಂಬ ಬಹು ದೊಡ್ಡ ಗ್ರಂಥವನ್ನು ಬರೆದಿದ್ದಾನೆ. ಇದು

ವೀರಶೈವ ಧರ್ಮದ ಎನ್‌ಸಾಯ್‌ಕ್ಲೋಪೀಡಿಯೊ( ಜ್ಞಾನಕೋಶ )ವಾಗಿದೆ ಯೆಂದು ಒಬ್ಬ ಮೇಧಾವಿಗಳು ಒಮ್ಮೆ ನುಡಿದರು. ಕುಮಾರವ್ಯಾಸನ ಕನ್ನಡ ಭಾರತ ಹಾಗೂ ಚಾಟುವಿಠ್ಠಲನಾಥನ ಕನ್ನಡ ಭಾಗವತಗಳಂತೆ ಏಳೆಂಟು ಸಾವಿರ ಷಟ್ಪದಿ ( ವಾರ್ಧಕ ) ಗಳುಳ್ಳ ೧೩೬ ಅಧ್ಯಾಯ ಗಳಿಂದ ಕೂಡಿದ ಅಷ್ಟಕಾಂಡ ಗ್ರಂಥವಾಗಿದೆ. " ಇದರಲ್ಲಿ ವೀರಶೈವ ಸಿದ್ಧಾಂತವು ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ವೇದಾಗಮ ಪುರಾಣ ಇತಿಹಾಸ ಸ್ಮೃತಿಗಳಿಂದ ವಾಕ್ಯಗಳು ಸಾಕ್ಷಿಯೆಂದು ಅನುವಾದ ಮಾಡ ಲ್ಪಟ್ಟಿವೆ. ಅಲ್ಲದೆ ಶಿವನ ೨೫ ಲೀಲೆಗಳು, ಪುರಾತನ ನೂತನ ಶರಣರ ಕಥೆಗಳು, ಮುಂತಾದ ಅನೇಕ ವಿಷಯಗಳು ಈ ಗ್ರಂಥದಲ್ಲಿ ಉಕ್ತವಾಗಿವೆ" ಎಂದು ವಂದ್ಯ ಕವಿಚರಿತ್ರಕಾರರು ಹೇಳಿದ್ದಾರೆ. ( ಕರ್ನಾಟಕ ಕವಿಚರಿತ, ಸಂ—೨, ಪು-೧೯೫ )

" ಪೂರ್ವಕಾಲದಲ್ಲಿ ಲಕ್ಕಣ್ಣದಣ್ಣಾಯಕರು, ಭಂಡಾರಿ ಜಕ್ಕಪ್ಪ, ಕಲ್ಲಿಹದ ಕೇತಿಸೆಟ್ಟಿ ಇವರು ಲಕ್ಷ ಸಂಖ್ಯೆಯ ವಿತ್ತವಂ ವೆಚ್ಚಿಸುತ್ತ ಮಾಡಿದರೆಂಬುದು ಹೆಚ್ಚಲ್ಲ; ನಿಷ್ಪೃಹನಾಗಿ ಈ ಕಾವ್ಯವಂ ಮಾಡಿ ಸಕಲ ಮಾಹೇಶ್ವರರ ಕೃಪೆಗೆ ಪಾತ್ರನಾದ ಮಲ್ಲಣಾರ್ಯನ ಭಾಗ್ಯಕ್ಕೆ ಎಣೆ ಯುಂಟೆ ? ಎಂದು ಶರಣರು ಕವಿಯನ್ನು ಹೊಗಳಿದಂತೆ ಹೇಳಿದೆ. " ( ಕವಿಚರಿತ್ರೆ, ಸಂ-೨, ಪುಟ ೧೯೬ )

ಇದರಮೇಲಿಂದ ಈ ಗ್ರಂಥದ ಮಹತ್ವವು ತಿಳಿಯುವಂತಿದೆ.

ಈ ಎರಡನೆಯ ಮಲ್ಲಣಾರ್ಯನ ಮಗನಾದ ಶಾಂತೇಶ ಅಥವಾ ಶಾಂತದೇಶಿಕನೇ ತೋಂಟದ ಸಿದ್ಧಲಿಂಗಯತಿಯ ಪುರಾಣವನ್ನು ಬರೆ ದಿದ್ದಾನೆ. ಈ ಪುರಾಣದಲ್ಲಿ ಪುರಾಣ ಪುರುಷರಾದ ಯತಿವರರ ಚರಿತ್ರವು ಹೀಗೆ ಹೇಳಲ್ಪಟ್ಟಿದೆ: — " ಈ ಯತಿ ಹರದನಹಳ್ಳಿಯ ಗೋಸಲ ಚೆನ್ನ ಬಸವೇಶ್ವರನ ಶಿಷ್ಯನು. ಶಿವಗಂಗೆಗೆ ಬಂದು ಕಗ್ಗೆರೆಯ ಸಮೀಪದಲ್ಲಿರುವ ನಾಗಿಣೀ ನದಿಯ ತೀರದಲ್ಲಿ ತೋಂಟದೊಳಗೆ ಶಿವಯೋಗದಲ್ಲಿದ್ದನು. ಶಿಷ್ಯನಾದ ಚಂದ್ರಶೇಖರನಿಗೆ ಭುವನಕೋಶ, ಧರ್ಮಾಧರ್ಮ ವಿಚಾರ, ಶಿವನ ಪಂಚವಿಂಶತಿ ಲೀಲೆಗಳು, ಷಟ್‌ಸ್ಥಲ ಕ್ರಮ ಮುಂತಾದ ವಿಷ ಯಗಳನ್ನು ಹೇಳಿದನು. ಚಂದ್ರಶೇಖರನು ತಾನು ಕೇಳಿದ ಬೋಧೆ

ಯನ್ನು ಸಾಂಗವಾಗಿ ಕಾವ್ಯದಲ್ಲಿ ಹೇಳಬೇಕೆಂದು ಬೆಸಸಲು ಕವಿ ಅದೇ ಮೋರೆಗೆ ಬರೆದಂತೆ ಹೇಳುತ್ತಾನೆ" ( ಕವಿಚರಿತ ಸಂ. ೨, ಪುಟ ೨೯೭ )

ಈತನು "ತನ್ನ ಗ್ರಂಥವನ್ನು ಪಚ್ಚೆಯ ಕಂತೆಯಾರ್ಯನ ಕರ ಕಮಲದೋಳ್ ಜನಿಸಿ, ತೋಂಟದ ಸಿದ್ಧನಂಘ್ರಿಯ ಸರ್ಚೆಸತ್ತಂ ಉಪ ದೇಶವನ್ನು ಪಡೆದ ಚಂದ್ರಶೇಖರ ಗುರುವಿನ ಇಷ್ಟಾನುಸಾರವಾಗಿ ಬರೆ ದಂತೆ ಹೇಳುತ್ತಾನೆ" ಎಂದು ವಂದ್ಯ ಕವಿಚರಿತ್ರಕಾರರು ಹೇಳಿದ್ದಾರೆ. ( ಕವಿಚರಿತ್ರ ಸಂ ೨, ಪು ೨೯೬ )

ಇದೊಂದು ಗ್ರಂಥವಲ್ಲದೆ ಈ ತೋಂಟದ ಸಿದ್ಧಲಿಂಗಯತಿಯ ವಿಷಯಕ್ಕೆ ಅನೇಕ ಗ್ರಂಥಗಳು ಹುಟ್ಟಿವೆಯೆಂದು ವಂದ್ಯ ಕವಿಚರಿತ್ರ ಕಾರರು ಹೇಳಿದ್ದಾರೆ. ಅಲ್ಲದೆ ಮೈಸೂರನಾಡಿನ ಎಡೆಯೂರಲ್ಲಿರುವ ಈತನ ಸಮಾಧಿಯಿರುವ ಮಠದಲ್ಲಿ ಸುಮಾರು ಕ್ರಿ. ಶ. ೧೫೦೦ ರ ಸುಮಾರಿಗೆ ಈತನ ವಿಷಯದಲ್ಲಿ ಬರೆದ ಒಂದು ಶಿಲಾಶಾಸನವು ಸಹ ಇದೆಯಂತೆ. ಅದರಲ್ಲಿ ಈತನ ಬಗೆಗೆ ಹೀಗೆ ಹೇಳಿದೆಯಂತೆ :—

" ಇಂತಿಪ್ಪ ಅನಾದಿ ಜಂಗಮವೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮವೆಂತೆಂದಡೆ, ಜ್ಞಾನಕ್ರಿಯಾ ಸ್ವರೂಪನುಂ, ಸರ್ವಾಂಗಲಿಂಗಿ, ಷಟ್ ಸ್ಥಲಜ್ಞಾನಿ, ಸರ್ವಾಚಾರ ಸಂಪನ್ನ ಪಾದೋದಕ ಪ್ರಸಾದ ಪ್ರತಿಷ್ಠಾ ಚಾರ್ಯನುಂ, ಅಷ್ಟಾವರಣಾಲಂಕರಣ ದ್ವೈತಾದ್ವೈತ ತಿಮಿರಮಾರ್ತಾಂ ಡನುಂ, ಇಂತಪ್ಪ ದಿವ್ಯಶಿವಯೋಗಿ ಸಿದ್ಧಲಿಂಗೇಶ್ವರಂಗೆ ಸಮ್ಯಗ್‌ಜ್ಞಾ ನೋದಯವಾಗಿ ಸಂಸಾರಹೇಯಮಂ ಮಾಡೆ ಶರಣುಹೊಕ್ಕ ಶಿಷ್ಯಜನ ಗಳ ನಾಮಪರಿಕ್ರಮಂಗಳೆಂತೆಂದಡೆ-- ಸಪ್ಪೆದೇವರು, ಉಪ್ಪಿನ ಹಳ್ಳಿಯ ಸ್ವಾಮಿ ಸಿದ್ಧದೇವರು ನಂಜೆ ದೇವರು, ಬೋಳಬಸವರಾಜದೇವರು, ಗುಮ್ಮ ಳಾಪುರದ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣಸಿದ್ಧದೇವರು, ಶೀಲವಂತದೇವರು, ಚಿಟ್ಟಗದೇವರು ಇಂತೆ ಇರುವ ಮುಖ್ಯವಾದ ಭಕ್ತ ಮಹೇಶ್ವರರ್ಗೆ ಷಟ್‌ಸ್ಥಲಜ್ಞಾನ ಲಿಂಗಾಂಗಸಂಬಂಧ ಸಮರಸೈಕಾರ್ಥವುಂ ಬೋಧಿಸಿ ಮುಕ್ತರಂ ಮಾಡಿ, ಷಟ್‌ಸ್ಥಲೈಕಾರ್ಥವಾಗಿ ಮಾಡುವ ಕ್ರಿಯೆ ಗಳೆಲ್ಲ ನಿಷ್ಪತ್ತಿಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವ ಯೋಗಸಮಾಧಿ ಸನ್ನದ್ಧರಾದರು. "

— " ಕರ್ನಾಟಕ ಕವಿಚರಿತೆ " ಸಂ ೨ ಪುಟ ೯೮

ಚನ್ನಬಸವ ಪುರಾಣದಲ್ಲಿ ಈ ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಲ್ಲಿ ಇನ್ನೂ ೨೮ ಹೆಸರುಗಳನ್ನು ಹೆಚ್ಚಿಗೆ ಹೇಳಲಾಗಿದೆ. ಸಿದ್ಧೇಶ್ವರ ಪುರಾಣದಲ್ಲಿ ೮ ಹೆಸರುಗಳನ್ನು ಹೆಚ್ಚಿಗೆ ಹೇಳಿದೆ. ಒಟ್ಟಾರೆ ಈ ಮಹಾ ಯತಿಗಳಿಗೆ ಏಳುನೂರು ಜನ ಶಿಷ್ಯರಿದ್ದರೆಂದು ಚನ್ನಬಸವಪುರಾಣದಲ್ಲಿಯೂ ನಿರಂಜನ ವಂಶರತ್ನಾಕರದಲ್ಲಿಯೂ ಸಂಖ್ಯಾನಿರ್ದೇಶಮಾಡಲಾಗಿದೆ.

ಇವರು ಮಾಡಿದ ಧರ್ಮಪ್ರಚಾರದ ಸ್ವರೂಪವು ಹೀಗಿದೆ :—

" ತೋಂಟದಾರ್ಯ ಸ್ವಾಮಿಗಳವರು ಗಣಸಮೂಹದಿಂದ ವಾಣಿಜ್ಯಪುರವಂ ( ಹರದನಹಳ್ಳಿ ) ಬಿಟ್ಟು ದೇಶದೇಶಗಳಲ್ಲಿ ಉತ್ಸಹಂಗೊಳ್ಳುತ್ತ ಅಲ್ಲಿರುವ ಜೋಗಿನಾಥರು, ಸಿದ್ಧರು, ವೈಷ್ಣವ, ಬೌದ್ಧ, ಜೈನ, ಚಾರ್ವಾಕ ಕಾಳಾಮುಖ ಮುಂತಾದವರಂ ಶಾಸ್ತ್ರಮುಖದಿಂ ಮಹತ್ವದಿಂ ಗೆಲಿದು, ಅವರಿಗೆ ಶಿವಭಕ್ತಿಯನುಂಟುಮಾಡುತ್ತ ಕೆಲವು ಜನಂಗೆ ಲಿಂಗಧಾರಣವಂ ಮಾಡಿಸಿ ವೀರಶೈವವಂ ಉದ್ಧರಿಸುತ್ತ ( ಲಿರ್ದರು )

— " ನಿರಂಜನವಂಶ ರತ್ನಾಕರ " ಪುಟ ೪೪

ಮತ್ತು ಈ ಯತಿವರರು ಮಾಡಿದ ಮಠಮಾನ್ಯಗಳ ರಚನೆಯ ವಿಶಾಲ ಕಾರ್ಯದ ವಿವರವನ್ನು ನಿರಂಜನ ವಂಶ ರತ್ನಾಕರದಲ್ಲಿ ಹೀಗೆ ಹೇಳಿದೆ.—

" ಸ್ವಾಮಿಗಳವರು ಆ ಬಳಿಕ ಈ ಏಳ್ನೂರು ಚರವರರಿಗೆ ಏಳ್ನೂರು ಬುಡಕಟ್ಟುಗಳಂ ಅವರವರ ಸ್ವಾಭಾವಿಕ ಗುಣಗಳಮೇಲಿಂದ ನಿಯಮಿಸಿದರು. ಎಂದರೆ ಆ ಚರಪತಿಗಳೊಳಗೆ ಒಬ್ಬರು ಪಂಚಶಿಖೆಯಂ ಬಿಟ್ಟ ಕಾರಣದಿಂ ಲೋಚನ ಬುಡಕಟ್ಟೆಂತಲು, ಮತ್ತೊಬ್ಬರು ಲಿಂಗನಿಷ್ಠಾಪರರಾದ ಕಾರಣ ನೊಡ ( ? ) ಬುಡಕಟ್ಟೆಂತಲು, ಮತ್ತೊಬ್ಬರು ಶಿವಪೂಜಾನಿಷ್ಠರಾದ್ದರಿಂದ ಶಿವಪೂಜೆಬುಡಕಟ್ಟೆಂತಲು, ಮತ್ತೊಬ್ಬರು ಹಸುರು ಕಂಥೆಯಂ ಧರಿಸಿದಕಾರಣದಿಂ ಪಚ್ಚೆಕಂಥೆ ಬುಡಕಟ್ಟೆಂತಲು, ಒಪ್ಪತ್ತೆ ( ಪ್ರಸಾದ ) ಮುಗಿವ ಕಾರಣದಿಂ ಒಪ್ಪತ್ತಿನ ಬುಡಕಟ್ಟೆಂತಲು, ಮತ್ತೊಬ್ಬರು ಸ್ನಾನಕ್ಕೆ ಬಿಸಿ ಅಗ್ಗಣಿಯಲ್ಲದೆ ಉಳಿದ ತಣ್ಣೀರು ಒಲ್ಲದ ಕಾರಣದಿಂ ಬಿಸಿ ಅಗ್ಗಣಿ ಬುಡಕಟ್ಟೆಂತಲು, ಈ ಪ್ರಕಾರದಿಂ ನಿಯಮಿಸಿ ಹೆಸರಿಟ್ಟು —

“ಬುಡಕಟ್ಟಿನ ಮಠಸ್ಥರಾದ ಚರಮೂರ್ತಿಗಳಲ್ಲಿ ಸ್ಥಲಕೂಡಿ ಶಾಸ್ತ್ರ ಸಂಪಾದನೆಯಂ ಮಾಡಿಕೊಂಡ ಗಣವರರು (ಶಿಷ್ಯರು) ಈ ಬುಡಕಟ್ಟಿನ ಚರಮೂರ್ತಿಗಳಿಂದ ಚರಂತಿಗೆ ಪುಸ್ತಕವೆಂದರೆ ಚನ್ನಬಸವ ಪುರಾಣ, ಬಸವಪುರಾಣ ಮುಂತಾದ ಶಿವಪುರಾಣಗಳನ್ನು, ತಮ್ಮಿಂದ ಷಟ್‌ಸ್ಥಲಜ್ಞಾನೋಪದೇಶವಂ ಪಡೆದು ಷಟ್‌ಸ್ಥಲಾಶ್ರಮವಂ ಹೊಂದಿದ ತಮ್ಮಯ ಶಿಷ್ಯೋತ್ತಮನಿಗೆ ಭಕ್ತಗಣವರರ ಮಧ್ಯದಿ ಆ ಪುಸ್ತಕಗಳಂ ಕೊಟ್ಟು ತಮ್ಮ ಸ್ವಯಾಸನವಂ ಕೊಟ್ಟರೆ ಪುರಾಣಚರಂತಿಗೆ ಎಂತಲು ಪಳ್ಳಿಚರಂತಿಗೆ ಎಂತಲು ಈ ಎರಡು ನಾಮಗಳು ಇವರಿಗೆ ಬರುತ್ತವೆ.

“ಪ್ರಭುಚೆನ್ನಬಸವರಾಜೇಂದ್ರರು, ಶಿವಮೂರ್ತಿಯಾದ ಸೊನ್ನಲಿಗೆಯ ಸಿದ್ಧರಾಮೇಶಂಗೆ ನಿರೂಪಿಸಿದ ಗೊಹೇಶ್ವರನ ವಚನ, ಕರಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯವಚನ, ಪ್ರಭುದೇವರ ಸೃಷ್ಟಿಯವಚನ, ಸಿದ್ಧೇಶ್ವರನ ವಚನ, ಹಿರಿಯಮಂತ್ರಗೋಪ್ಯ, ಶೂನ್ಯಸಂಪಾದನೆ ಮುಂತಾದವುಗಳ ಸಂಗ್ರಹಿಸಿದ ಪುಸ್ತಕವ ಸಭಾಮಧ್ಯದಲ್ಲಿ ಗುರುವರನಕಡೆಯಿಂದ ಅಂಗತತ್ವ ೨೫ ಲಿಂಗತತ್ವ ೧೧ ಅಂತುಕೂಡಿ ೩೬ ತತ್ವವಂ ತಿಳಿದಾತನು ಶಾಸ್ತ್ರದ ಕಟ್ಟು ಹಿಡಿಯಬೇಕು. ಈ ಪ್ರಕಾರ ಪಡೆದಾತನೆ ವಿರಕ್ತನಹನು. ಈತನಿಗೆ ಶಿವಾನುಭವ ಪುಸ್ತಕವೆ ಆಗಲಿ, ಪುರಾಣ ಪುಸ್ತಕವೆ ಆಗಲಿ ಇವುಗಳನ್ನು ಗುರುಗಳಾದ ಚರಮೂರ್ತಿಗಳು ಸಭೆಯಲ್ಲಿಕೊಟ್ಟು ತಮ್ಮಾಸನದಲ್ಲಿ ಕುಳ್ಳಿರಿಸಲು ಆ ಗಣವರನೆ ಚರಮೂರ್ತಿ ಎನಿಸುವನು. ಈ ಶಿವಾನುಭವ ಚರಮೂರ್ತಿಯು ತಮ್ಮ ಶಿಷ್ಯರಾದ ಬ್ರಹ್ಮಚಾರಿಗಳಾದ ಮರಿಗಳು ಗುರುಉಪದೇಶವಂ ಪಡೆದರೂ, ಆ ಮರಿಗಳು ಕರಣ ಹಸಿಗೆ ಮುಂತಾದ ಶಿವಾನುಭವಶಾಸ್ತ್ರದ ನುಡಿಕಟ್ಟುಗಳು. ನೂರೊಂದು ಸ್ಥಲದ ವಿಚಾರಗಳು ಗುರುಗಳಿಂದ ಆ ಶಾಸ್ತ್ರವಂ ಸಂಪಾದನ ಮಾಡಿಕೊಳ್ಳದವರಿಗೆ ಆ ಶಾಸ್ತ್ರದ ನುಡಿಗಳಂ ಹೇಳಕೂಡದು, ಈ ಐದು ಶಾಸ್ತ್ರಬಾಹ್ಯದ ನಿರಕ್ಷರಿಗಳಿಗೆ ಶಿವಾನುಭವಚರಂತಿಗೆಯುಂ ಕೊಡಕೂಡದು, ಎಂದು ಆ ಗಣವರರಿಗೆ ನಿರೂಪಿಸಿ ಆಶೀರ್ವಾದವಂ ಕೊಟ್ಟು ದೇಶಾಟಣಕ್ಕೆ ಕಳುಹಿಸಿದರು.

" ಅನಂತರ ಆ ಚರವರರು ದೇಶಾಂತರವಂ ಮಾಡುತ್ತ ಗ್ರಾಮ, ಪೇಟೆ, ಮನೆಗೆ ದಯಮಾಡಿಸಿ ಅಲ್ಲಿಯ ಭಕ್ತಗಣಂಗಳಿಗೆ ಷಟ್‌ಸ್ಥಲ ಜ್ಞಾನೋಪದೇಶವಂ ಮಾಡುತ್ತ ಅನ್ಯ ಮತಸ್ತರಾದ ಪರವಾದಿಗಳಂ ಮಹತ್ವದಿಂ ಶಾಸ್ತ್ರಮುಖದಿಂ ಗೆಲಿವುತ ಶಿವಭಕ್ತಿಯನ್ನುಂಟುಮಾಡುತ್ತ ಆ ಭಕ್ತರ ಭಕ್ತಿಯಿಂ ದೇಶಮಧ್ಯದಿ ತಮ್ಮ ಮಠಮಾನ್ಯ ಕಾಣಿಕೆ ವರ್ಷಾಶನಗಳಂ ಪಡೆದು ಆ ಮಠಗಳಲ್ಲಿ ತಮ್ಮ ಸೂತ್ರಿಕರಾಗ ಮರಿಗಳಂ ಇಡುತ್ತ ದೇಶಂಗಳಲ್ಲಿ ಭಕ್ತರಿಂ ಕಾಣಿಕೆಯಂ ಎತ್ತಿ ತಮ್ಮಯ ಗುರು ಸನ್ನಿಧಿಗೆ ವಾಣಿಜ್ಯ ಪುರದ (ಹರದನಹಳ್ಳಿ) ಶೂನ್ಯ ಸಿಂಹಾಸನಕ್ಕೆ ಕಾರಣಕರ್ತರಾದ ತೋಂಟದಾರ್ಯ ಸ್ವಾಮಿಗಳವರ ದಾಸೋಹಕ್ಕೆ ಕಳುಹಿಸುತ್ತಲಿದ್ದರು.

" ಆ ಏಳನೂರು ಬುಡಕಟ್ಟಿನ ಚರಮೂರ್ತಿಗಳ ಹಸ್ತಾಬ್ಜದಿಂದ, ಸಂಜನಿತರಾದ ವಿರಕ್ತರು ಮೂರು ಸಾವಿರವಾದರು. ಅಂತು ಕೂಡಿ ಏಳ್ನೂರು ಚರಮೂರ್ತಿಗಳಿಗೆ, ಮೂರುಸಾವಿರ ವಿರಕ್ತ ಮಾಹೇಶ್ವರರಿಗೆ ತೋಂಟದಾರ್ಯ ಸ್ವಾಮಿಗಳವರೇ ಜಗದ್ಗುರುಗಳೆಂದೆನಿಸಿದರು."

—" ನಿರಂಜನವಂಶ ರತ್ನಾಕರ " ಪುಟ ೪೦-೪೩

ಈ ರೀತಿಯಿಂದ ಈ ತೋಂಟದ ಸಿದ್ಧಲಿಂಗ ಯತಿಗಳೆಂಬ ಮಹಾ ಮಹಿಮರಿಂದ ಘನ ಪ್ರಮಾಣದಲ್ಲಿ ದೇಶದಾದ್ಯಂತ ಶಿವಶರಣರ ತತ್ವದ ಪ್ರಚಾರವಾಗಿ, ಆ ಮೊದಲು ದೇಶದಲ್ಲಿದ್ದ ಜೋಗಿಗಳಾದ ನಾಥರು, ಸಿದ್ಧರು, ಪಾಶುಪತರು, ಲಕುಳೀಶ ಕಾಳಾಮುಖರು ಇವರೇ ಮೊದಲಾದ ನಾನಾ ಪ್ರಕಾರದ ಶೈವ ಹಾಗೂ ಸಿದ್ಧ ಸಂಪ್ರದಾಯಗಳೆಲ್ಲ ವೀರಶೈವ ವೊಂದರಲ್ಲಿಯೇ ಅಡಕವಾಗಿ ಹೋದವೆಂದು ಸ್ಪಷ್ಟವಾಗಿ ಅನಿಸುವದಿಲ್ಲವೇ?

ಈ ಮಹಾಮಹಿಮರಾದ ಶ್ರೀ ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯರಾದ ವಿರತರಲ್ಲಿ ಸಿದ್ಧಲಿಂಗೇಶ್ವರ, ಕಂಬಳಾದೇವರು ಸಿದ್ಧನಂಜೇಶ್ವರ, ಚೆನ್ನದೇವರು, ದೊಡ್ಡಸಿದ್ಧಲಿಂಗೇಶ್ವರ, ಮರುಳಸಿದ್ಧೇಶ್ವರ, ಜಕುನಿಯು, ಮುಂಗುಳದೇವರು, ಮಳೆಯದೇವರು, ಬತ್ತಲೇದೇವರು ರಾಚವಟ್ಟಿದೇವರು ಬೋಳಬಸವೇಶ ಮೊದಲಾದ ಏಳ್ನೂರು ವಿರತರು ಷಟ್ಸ್ಥಲ ಮಾರ್ಗವನ್ನು ನೆಲೆಗೊಳಿಸಿ ಪೂಜೆಗೊಂಡು ನಿಜಮುಕ್ತರಾದರು.

— ಶ್ರೀ ಚನ್ನಬಸವ ಪುರಾಣ ಅಧ್ಯಾಯ ೬೩

"ಅವರ ತರುವಾಯ ಹುಚ್ಚ ನಂಜೇಶ್ವರ, ಹುಚ್ಚ ವಿರೂಪಾಕ್ಷ ಮಾದಾಪುರದ ಮರುಳದೇವರು, ಹೊನ್ನಳ್ಳಿಯ ಸಿದ್ಧವೀರೇಶ, ನಿಡು ಮಾಗಡಿಯ ಕರಿಯ ಬಸವೇಶ, ಕರಡಿಯ ಹಾಲಸ್ವಾಮಿ, ಸರವೆಯ ಸಿದ್ಧರಾಮೇಶ, ಷಟ್‍ಸ್ಥಲ ಬ್ರಹ್ಮಿಯರಾದ ಕೋರಾಣ್ಯದಾರ್ಯ, ಬುಕ್ಕ ಸಾಗರದ ಕರಿಯ ಸಿದ್ಧವೀರೇಶ್ವರ, ನಾರಕಂಥೆಯದೇವರು, ಚೆಂಗಡಹಳ್ಳಿ ವೀರಪ್ಪ, ಮಾನಿನಹಳ್ಳಿ ಮಲ್ಲಪ್ಪ, ಆಗ್ರಾಮದ ಸಂಗಮೇಶ, ಗುಮ್ಮಳಾ ಪುರದ ವೀರಪ್ಪ, ಪ್ರಸಾದಿದೇವರು, ನಂಜರಾಯ, ಕೆಂಜ ಸೋಮಣ್ಣ ನಾಯಕ, ಎಳಂದೂರ ಚೆನ್ನೊಡೆಯರು, ಬಗಿರಿಯ ದೇವನಾಯಕ, ಬುಕ್ಕಣ್ಣೊಡೆಯ, ಸಿದ್ಧಮಲಿನಾಯಕ, ಜಂಬೂರ ದೊರೆಗಳು, ಕೇತ ಸಾಗರದ ಚಿಕ್ಕಣ್ಣಸೆಟ್ಟಿ, ಬಿಜ್ಜಾವರದ ಪ್ರಭುವು, ಚಿಕ್ಕಣಗೌಡ, ಸುಕು ಮಾರ ತಮ್ಮಣಗೌಡ, ತಗಡೂರ ಪ್ರಭುವು, ತಳಕಾಡ ಚಂದ್ರಶೇಖರ, ಭೋಗವಾಡಿಯ ಲಿಂಗರಾಯ, ಉಡವಂಕ ನಾಡಪ್ರಭು, ಸೋಲೂರ ಬಸವಪ್ಪ, ಸಂಗಯ್ಯ, ಮಹಾಂತಯ್ಯ, ಸಂಡಿಗೆಯ ಸಿದ್ದಪ್ಪ, ಮುದ್ದ ಸಂಗಪ್ಪ, ದಾಸೋಹದ ಲಿಂಗಪ್ಪ, ಮಲ್ಲಪ್ಪ ಕಾಬಣದಬಿಗಿ ಗಂಗಾಧರ, ಕಳಲೆಯ ವೀರಪ್ಪ, ಪೂಸನ ಹಳ್ಳಿಯ ನಾಗಪ್ಪ, ದಾತ್ತ ಬಸವಪ್ಪ, ಮೋಳಿಗಯ್ಯ, ಬಾಣಾವರದ ಸಿದ್ದಪ್ಪ, ಶೀಲವಂತ ಸಿರಿಯಾಳಯ್ಯ, ಹೋಳಿನ ಸಿದ್ದಪ್ಪ, ಹೊಸದುರ್ಗದ ಕಲ್ಲಪ್ಪ, ವಿರಕ್ತ ಬಸವಪ್ಪ, ತೈಲದ ಮುರುಳಪ್ಪ, ಮಾನಂಗಿ ಶಿಖರಪ್ಪ, ಬೆಟ್ಟಮುಂಡೆಯ ಪ್ರಭು, ಬಯಲಪ್ರಭು ಕಳಲಿಯ ಕಂಚಿದೇವರು, ಕಾನಾಪುರದ ಮುರುಳಸಿದ್ಧೇಶ, ಉಪ್ಪಲ ಗುಡಿಯ ಸಂಗಮೇಶ, ಕೊಟ್ಟೂರ ಬಸವಲಿಂಗೇಶ, ಆನೆಯಗೊಂದಿಬೆಟ್ಟ ದಲ್ಲಿರುವ ಹುಚ್ಚದೇವರು, ಬೆಳುಗಾವಿ ಹುಚ್ಚ ಸಿದ್ದರಾಮೇಶ ಇವರೇ ಮೊದಲಾದ ನಿರವಧಿಕ ಮಹಿಮೆಯ ಪುರುಷರು ಜಂಗಮ ದಾಸೋಹ ವನ್ನು ಮಾಡಿ ನಿಜಲಿಂಗೈಕ್ಯರಾದರು."

—ಶ್ರೀ ಚನ್ನಬಸವೇಶ್ವರ ಪುರಾಣ ಅಧ್ಯಾಯ ೬೩

ಇಲ್ಲಿಗೆ ವಿಜಯನಗರದ ಸಾಮ್ರಾಜ್ಯದ ಸಮಾಪ್ತಿಯಾಯಿತು. ಇದರ, ಮುಂದಿನ ಇತಿಹಾಸವು ಇಕ್ಕೇರಿ, ಕೆಳದಿ, ಸ್ವಾದಿ, ಮೈಸೂರ ಮೊದಲಾದ ಪ್ರಭುಗಳ ಕಾಲಕ್ಕೆ ಸಂಬಂಧಿಸಿದ್ದ. ಈ ವಿಷಯವನ್ನು ಬಲ್ಲವರು ಹೆಚ್ಚಿಗೆ ಸಂಶೋಧಿಸುವರೆಂದು ನಂಬುವೆನು.

# ಗದುಗಿನ ' ಸಾವಧಾನ ' ಪತ್ರಿಕೆಯ ' ಸ್ಪಷ್ಟವಾದಿಯ ವಿಚಾರಶಕ್ತಿಯ ದಾರಿದ್ರ್ಯ !

**ಹಿನ್ನೆಲೆಃ—** ಅಖಿಲ ಭಾರತ ಶಿವಾನುಭವ ಸಂಸ್ಥೆಯ ಪಾಕ್ಷಿಕ ಪತ್ರಿಕೆಯೆಂದು ಆದರ ಉದಾರಾಶ್ರಯದಲ್ಲಿ ಹೊರಡುವ ಸಾವಧಾನ ಪತ್ರಿಕೆಯು ಗದಗ ಹಡಗಲಿ ಮಠದಲ್ಲಿ ಶ್ರೀ ನಾಗಭೂಷಣ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಪ್ರಸಿದ್ಧಿಸಲ್ಪಡುತ್ತಿದೆಯಷ್ಟೇ.

ಈ ಪತ್ರಿಕೆಯಲ್ಲಿ ಸ್ಪಷ್ಟವಾದಿಯೆಂದು ಕರೆದುಕೊಳ್ಳುವ ಶ್ರೀಯುತ ಅಯ್ಯನಗೌಡ ಪಾಟೀಲ ಮಾಸ್ತರ ಮುನಸಿಪಲ್ ಹಾಯ್‌ಸ್ಕೂಲ ಗದಗ ಇವರು ದಿನಾಂಕ ೨೯-೬-೫೦ ನೇ ದಿನ ಒಂದು ಸಂಕುಚಿತ ಮತ್ತು ದ್ವೇಷಪೂರಿತ ಲೇಖನವನ್ನು ಬರೆದರು. ಅವರ ಸನಾತನೀ ದೃಷ್ಟಿಕೋನದ, ಜಾತ್ಯಾಭಿಮಾನದ ಮತ್ತು ಪ್ರತಿಗಾಮಿ ವಿಚಾರಗಳನ್ನು ಭಾವೋದ್ರೇಕದ ಕೆಲವು ವೀರಶೈವರು ಮನ್ನಿಸಿದರೇ ವಿನಃ, ವಿಚಾರಪರರಾದ ಯಾವ ಕನ್ನಡಿಗರೂ ಕವಡಿಯಷ್ಟು ಸಹ ಬೆಲೆಯನ್ನು ಕೊಡಲಿಲ್ಲ. ಇಷ್ಟೇ ಏಕೆ ? ಮೇಲಿನ ಶಿವಾನುಭವ ಸಂಸ್ಥೆಯ ಕೆಲವು ಸದಸ್ಯರೂ ಸಹ ಅಸಮಾನಹೊಂದಿ ನನ್ನ ಲಕ್ಷ್ಯವನ್ನು ಅತ್ತ ಸೆಳೆದರು. ಆಗ ನಾನು ಆ ಸಂಚಿಕೆಯನ್ನು ಕಳಿಸಿರೆಂದು ಧಾರವಾಡಕ್ಕೆ ಬರೆದೆನು. ಅದು ೧೯೫೦ ನೇ ಸಪ್ಟಂಬರ ತಿಂಗಳ ನನ್ನ ಕೈಸೇರಿತು. ಅದೇ ತಿಂಗಳದ " ಶಿವಾನುಭವ " ದಲ್ಲಿ ಸಾವಧಾನದ ಸ್ಪಷ್ಟವಾದಿಗೆ ಕೆಲವು ಪ್ರಶ್ನೆಗಳು ಎಂಬ ತಲೆಬರಹದ ಕೆಳಗೆ ನಾನು ಒಂದು ವಿಚಾರಪೂರ್ಣ ಮತ್ತು ಸ್ಪಷ್ಟವಾದ ಲೇಖನವನ್ನು ಬರೆದೆನು. ಆ ಪ್ರಶ್ನೆಗಳಿಗೆ ಇಲ್ಲಿಯವರೆಗೆ ಶ್ರೀ. ಅಯ್ಯನಗೌಡ ಮಾಸ್ತರರಿಂದ ಸರಿಯಾದ ಉತ್ತರವೇ ಇಲ್ಲ.

ಆ ಪ್ರಶ್ನೆಗಳಲ್ಲಿ ಪಾಟೀಲ ಮಾಸ್ತರರಂತೆ ಹೇಯವಾದ ಶಬ್ದಗಳನ್ನು ಪಯೋಗಿಸಿ, ಲೇಖನ ವ್ಯವಸಾಯಕ್ಕೂ ಶಿಕ್ಷಕ ವೃತ್ತಿಗೂ ಕಲಂಕವನ್ನು ತಂದಿಲ್ಲ. ಶಿವಾನುಭವ ಮಾಸಿಕದಲ್ಲಿಯ ನನ್ನ ಪ್ರಗತಿಪರ ಮತ್ತು

ವಿಚಾರಪೂರ್ಣ ವಿಚಾರಗಳನ್ನು ಓದಿದ ವಾಚಕರು ಪತ್ರ ಮುಖಾಂತರ ತಮ್ಮ ಹರ್ಷೋದ್ಗಾರಗಳನ್ನು ವ್ಯಕ್ತಪಡಿಸುತ್ತ ನನ್ನನ್ನು ಆಶೀರ್ವದಿಸುತ್ತಿರುವರು. ವಿಚಾರ ಆಚಾರಗಳ ಸಾಮರಸ್ಯದಿಂದ ಅಖಿಲ ಕನ್ನಡಿಗರ ಮನ್ನಣೆಗೆ ಪಾತ್ರರಾಗಿರುವ ವಚನ ಪಿತಾಮಹ ಶ್ರೀ. ಹಳಕಟ್ಟಿಯವರನ್ನೂ ಗಣ್ಯಮಾಸಿಕವನ್ನೂ ಅನುಚಿತವಾಗಿ ಟೀಕಿಸಿರುವ ಸ್ಪಷ್ಟವಾದಿಯ? ಕಂಣಿಗೆ ಕಾಮಣಿರೋಗ ಬಂದಿರುವದೋ ಹೇಗೆ? ಏಕೆಂದರೆ ಅವನು ೧೯೫೦ ನೇ ನವಂಬರ ಶಿವಾನುಭವ ಸಂಚಿಕೆಯಲ್ಲಿ ಪ್ರಕಟವಾದ "ಶರಣಮಾರ್ಗ" ಎಂಬ ನನ್ನ ಲೇಖವನ್ನು ದಿನಾಂಕ ೬—೧—೧೯೫೧ ನೇ ಸಾವಧಾನದಲ್ಲಿ ವಿಮರ್ಶಾತ್ಮಕ ಅರಿವಿಲ್ಲದೆ ಅಜ್ಞಾನದಿಂದ ಟೀಕಿಸುವ ಭರದಲ್ಲಿ ಗಣ್ಯ ಶಿವಾನುಭವವನ್ನೂ ಅದರ ಗಣ್ಯ ಸಂಪಾದಕರನ್ನೂ ಬೇಜವಾಬ್ದಾರಿತನದಿಂದ ಟೀಕಿಸಿರುತ್ತಾನೆ. ಹೀಗಿದ್ದರೂ ಸಹ ಸ್ಪಷ್ಟವಾದಿಯ ಲೇಖ ಬಂದರೆ ಶಿವಾನುಭವದಲ್ಲಿ ಅದನ್ನು ಪ್ರಕಟಿಸಿರೆಂದು ಶ್ರೀ. ಹಳಕಟ್ಟಿಯವರಿಗೆ ನಾನು ಬಿನ್ನವಿಸಿದ ಸತ್ಯಸಂಗತಿಯನ್ನು ವಿವಾಪೂರಕ್ಕೆ ಬರೆದು ಶ್ರೀ. ಅಯ್ಯನಗೌಡ ಮಾಸ್ತರರು ತಿಳದುಕೊಂಡು ನನ್ನ ನ್ಯಾಯಕವಾದ ನಿಲುವೆಯನ್ನು ಅರಿತುಕೊಳ್ಳಲಿ.

ದಿನಾಂಕ ೬—೨—೫೧ ನೇ ಸಾವಧಾನ ಪತ್ರಿಕೆಯಲ್ಲಿ ಸ್ಪಷ್ಟವಾದಿಯು ಬೆಂಗಳೂರಿನ ಶರಣಸಾಹಿತ್ಯ ಮಾಸಿಕವನ್ನು ಟೀಕಿಸಿರುತ್ತಾನೆ ಕಳೆದ ಫೇಬ್ರುವರಿ ತಿಂಗಳಿನ ಶರಣಸಾಹಿತ್ಯದಲ್ಲಿ ಅದರ ಸಂಪಾದಕರಾದ ಶ್ರೀ. ಶಿವಮೂರ್ತಿಶಾಸ್ತ್ರಿಗಳು ಸ್ಪಷ್ಟವಾದಿಯ ಬಗ್ಗೆ ಹೀಗೆ ಬರೆದಿದ್ದಾರೆ.—

" ಸರಿಯಾಗಿ ಓದಿ ಅರ್ಥಮಾಡಿಕೊಳ್ಳದ, ಚಿತ್ತಶುದ್ಧಿಯಿಲ್ಲದ ಲೇಖಕರೊಬ್ಬರು ಸ್ಪಷ್ಟವಾದಿ ಎಂಬ ಅಡ್ಡಹೆಸರಿನಿಂದ ಮನಬಂದಂತೆ ಟೀಕಿಸಿ ಶರಣಸಾಹಿತ್ಯ ಪತ್ರಿಕೆಯ ಮೇಲೆ ವಿಷವನ್ನು ಕಾರಿದ್ದಾರೆ. ಇಂತಹ ಅನುಚಿತ ಟೀಕೆಗೆ ವಿವೇಕಿಗಳು ಬೆಲೆ ಕೊಡುವದಿಲ್ಲ. ವಿಚಾರಪರರಾದ ಯಾವ ವೀರಶೈವರೂ ಬಸವಂಣನವರನ್ನು ಸ್ಪಷ್ಟವಾದಿಯ ಹಾಗೆ ಸಂಕೋಚದೃಷ್ಟಿಯಿಂದ ನೋಡಲಾರರು. ಸ್ಪಷ್ಟವಾದಿಯ ಲೇಖವು ಕಲಹಪ್ರಿಯ ಮತ್ತು ಅಪಪ್ರಚಾರದ್ದು. ಪ್ರಪಂಚಜ್ಞಾನವಿಲ್ಲದ ಸ್ಪಷ್ಟವಾದಿಯು ಶರಣಸಾಹಿತ್ಯವನ್ನು ಟೀಕಿಸಿರುವದು ಅತಿ ಸಂಕೋಚ ಮನಸ್ಸಿನ ನಿದರ್ಶನವಾಗಿದೆ. ಇತ್ಯಾದಿ ಇತ್ಯಾದಿ "

ಮತಾಂಧತೆಯಿಂದಲೂ, ಪೂರ್ವಗ್ರಹದೂಷಿತ ದೃಷ್ಟಿಯಿಂದಲೂ ಸ್ಪಷ್ಟವಾದಿಯು ಶ್ರೀ. ಅ. ನ. ಕೃಷ್ಣರಾಯರನ್ನೂ, ಶ್ರೀ. ಶ್ರೀನಿವಾಸ ಮೂರ್ತಿಗಳನ್ನೂ ಟೀಕಿಸುವದನ್ನು ನೋಡಿ ನನ್ನಂತೆ ಮತ್ತು ಶರಣಸಾಹಿತ್ಯ ಸಂಪಾದಕರಂತೆ ಅನೇಕರು ವ್ಯಸನಪಡುತ್ತಿದ್ದಾರೆ. ಸಾವಧಾನ ಪತ್ರಿಕೆಯ ಸಂಪಾದಕರನ್ನು ಭೆಟ್ಟಿಯಾಗಿ ಈ ಬಗ್ಗೆ ಕೇಳಲು ಅವರು ಹೀಗೆ ಹೇಳಿದರು —

" ಸ್ಪಷ್ಟವಾದಿಯ ಅಭಿಪ್ರಾಯಗಳು ವಯ್ಯಕ್ತಿಕ ವಿಚಾರಗಳು, ಅವುಗಳಿಗೂ ಸಂಪಾದಕರ ವಿಚಾರಗಳಿಗೂ ಸಂಬಂಧವಿಲ್ಲ. ಅವು ಪತ್ರಿಕೆಯ ವಿಚಾರಗಳಲ್ಲ. ಸ್ಪಷ್ಟವಾದಿಗೆ ಉತ್ತರ ಬರೆದು ಕಳಿಸಿದರೆ ಅದನ್ನೂ ಸಾವಧಾನದಲ್ಲಿ ಪ್ರಸಿದ್ಧಿಸುತ್ತೇವೆ."

ಟೀಕಿಸುವದು ಬೇಡವೇ ? ಈ ಮೇಗಿನ ವಿವೇಚನೆಯಿಂದ ಟೀಕಿಸುವದು ಬೇಡ ಎಂದು ಭಾಸವಾಗಬಹುದು. ಹಾಗೆ ಆಗತಕ್ಕದ್ದಲ್ಲ. ವಿಧಾಯಕವಾದ ಟೀಕೆಯು ಅವಶ್ಯವಾಗಿ ಬೇಕು. ವಿಧ್ವಂಸಕ ಟೀಕೆಯು ಬೇಡ. ಲೇಖನಶೈಲಿ, ರೀತಿನೀತಿ, ಸಂಸ್ಕೃತಿಗಳಿಗನುಸರಿಸಿ ಟೀಕಿಸಿದರೆ ಅದಕ್ಕೆ ವಿಧಾಯಕ ಟೀಕೆ ಅನ್ನುತ್ತಾರೆ. ಛಿದ್ರಾನ್ವೇಷಣ ಮತ್ತು ಅಪಪ್ರಚಾರದ ಬುದ್ಧಿಯಿಂದ ವೈಯಕ್ತಿಕ ದೋಷಾರೋಪಣೆಯನ್ನು ಹೊಣೆಗೆಟ್ಟ ರೀತಿಯಲ್ಲಿ ಮಾಡುವದು ವಿಧಾಯಕ ಟೀಕೆಯಲ್ಲ. ಈ ಸಂಗತಿಯನ್ನು ಗಮನದಲ್ಲಿಟ್ಟುಕೊಂಡು ಸ್ಪಷ್ಟವಾದಿಯು ಟೀಕಿಸಿದರೆ ಅದಕ್ಕೆ ಸದಾ ನಮ್ಮ ಸ್ವಾಗತವಿದೆ. ತನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಮಂಡಿಸಲು ಸ್ಪಷ್ಟವಾದಿಗೆ ಹಕ್ಕು ಇರುವಂತೆಯೇ ಪ್ರತಿವಾದಿಗೂ ಇದೆ. ಎಂಬುದನ್ನು ಮರೆಯಬಾರದು. ತನ್ನ ಅಭಿಪ್ರಾಯವೇ ಸತ್ಯವೆಂಬ ಹಟಬೇಡ.

ದಿನಾಂಕ ೭-೧-೧೯೫೧ನೇ ಸಾವಧಾನ ಪತ್ರಿಕೆಯಲ್ಲಿ ಸ್ಪಷ್ಟವಾದಿಯು 'ಶಿವಾನುಭವ ಹಾಗೂ ಶರಣ ಮಾರ್ಗದ ವಿಡಂಬನೆ' ಎಂಬ ತಲೆಬರೆಹದ ಕೆಳಗೆ ಒಂದು ಅಸಮಂಜಸವಾದ, ಮತ್ತು ಅವ್ಯವಸ್ಥಿತವಾದ ಮಿಶ್ರ ಲೇಖ ಬರೆದು ಅಜ್ಞಾನದಿಂದ ನನ್ನನ್ನು ಟೀಕಿಸಿದ್ದಲ್ಲದೇ ಅನ್ಯಾಯ

ವಾಗಿ ಶಿವಾನುಭವವನ್ನೂ ಅದರ ಮಾನ್ಯ ಸಂಪಾದಕರನ್ನೂ ಜರಿದ್ಯು ನುಡಿದಿರುವರು. ಇವರು ನಿಂತಿರುವ ತಳಹದಿಯೇ ಭದ್ರವಿಲ್ಲವೆಂದು ಸಿದ್ಧ ಮಾಡಿದರೆ ಇವರ ಲೇಖವು ತಾನೇ ಉರುಳಿ ಬೀಳುವದಲ್ಲವೇ ? ಆತ ಹೊರಳೋಣ.

ಸ್ಪಷ್ಟವಾದಿಯ ಲೇಖದ ಸಾರಾಂಶವು ಕೆಳಗಿನಂತಿರುವದು:—

(೧) ಬಾಲ ಲೀಲಾ ಮಹಂತ ಶಿವಯೋಗಿ, ಸ ನ ಮಠೇಶರು, ಸರ್ವ ಭೂಷಣ ಶಿವಯೋಗಿ, ಷಡಕ್ಷರಿ ಶಿವಯೋಗಿ, ನಿಜಗುಣ ಶಿವಯೋಗಿ, ಮೈಲಾರ ಬಸವಲಿಂಗ ಶರಣರು, ರಾಮಾಯಣ ಮತ್ತು ಮಹಾಭಾರತ, ಹಿತೋಪದೇಶ, ಪಂಚತಂತ್ರ, ಚಾಣಕ್ಯ ನೀತಿ, ಹದಿಬದೆಯ ಧರ್ಮ, ಶಕುಂತಲಾ ನಾಟಕ, ಈ ಮಹಾತ್ಮರ ಉಪದೇಶಗಳು ಮತ್ತು ಗ್ರಂಥಗಳ ಸಾರವು ಹೆಚ್ಚಾಗಿ ವಿಧಿ ನಿಷೇಧಗಳಿಂದಲೇ ಪ್ರಕಟವಾಗಿವೆ. ಹೀಗಿದ್ದರೂ ಶಿವಾನುಭವದ ನವ್ಹೆಂಬರ ಸಂಚಿಕೆಯಲ್ಲಿ ' ಶರಣಮಾರ್ಗ ' ಎಂಬ ಲೇಖ ದಲ್ಲಿ ಶಿಕ್ಷಕರೊಬ್ಬರು ( ಅಂದರೆ ಅನ್ನದಾನೀಶ್ವರ ವಿರಕ್ತಮಠ ಮಾಸ್ತರರು) ಪೂರ್ವದ ಅನುಭವಿಗಳ ವಿಧಿನಿಷೇಧಗಳೇ ಬೇಡವೆನ್ನುತ್ತಾರೆ. ಇದೇ ಸ್ವೇಚ್ಛಾಚಾರ ಅಥವಾ ಪಶುಮಾರ್ಗವೆನಿಸುವದು.

( ೨ ) ಇಂಥ ಲೇಖನದಿಂದ ಶಿಕ್ಷಕವೃತ್ತಿಗೇ ಕಲಂಕ ತರುವಲ್ಲಿ ಸಂದೇಹವೇನು ? ಶಿಕ್ಷಕನ ಕರ್ತವ್ಯವು ಕೇವಲ ಗ್ರಂಥಗಳ ವಿಷಯ ವನ್ನು ಬೋಧಿಸಿದರಾಯಿತೇ ? ಆ ಗ್ರಂಥಗಳಲ್ಲಿಯೂ ವಿಧಿನಿಷೇಧ ವಾಕ್ಯ ಗಳುಂಟಲ್ಲ ? ಅವನ್ನು ಬೋಧಿಸಕೂಡದೇ ? ತಾನು ಆದರ್ಶ ಆಚರಣೆ ಗಳನ್ನಿಟ್ಟುಕೊಂಡು ಅವನ್ನೇ ಶಿಷ್ಯರಿಗೆ ಬೋಧಿಸುವದೂ ಶಿಕ್ಷಕನ ಕರ್ತವ್ಯ ವಲ್ಲವೇ ?

( ೩ ) ಶಿಷ್ಯನ ಪ್ರಗತಿ ಪುಸ್ತಕದಲ್ಲಿ ನಡಾವಳಿ ಎಂಬ ಕೋಷ್ಟಕ ವುಂಟಲ್ಲವೇ ?

( ೪ ) ವಿಧಿ ನಿಷೇಧಗಳೆಂಬ ವಾಕ್ಯಗಳನ್ನುಪಯೋಗಿಸದೇ ಶಾಲೆಯ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ನೆಲೆಗೊಳಿಸುವ ಹೊಸ ಪದ್ಧತಿಯಿದ್ದರೆ ಈ

ಶಿಕ್ಷಕರು (ಅನ್ನದಾನೀಶ್ವರ ವಿರಕ್ತಮಠರು) ಒಂದು ಗ್ರಂಥವನ್ನು ಬರೆದು ಪ್ರಕಟಿಸಿದಲ್ಲಿ ದೇಶ ದೇಶಾಂತರಗಳ ವಿದ್ಯಾಯಾತ್ರೆಗೊಂದು ಮಹದುಪಕಾರವಾದೀತು. ಇಲ್ಲವಾದರೆ ಹೊಣೆಗೆಟ್ಟ ಸ್ವಕರ್ತವ್ಯ ಪರಾಙ್ಮುಖರೊಬ್ಬರು ಈ ಲೇಖ ಬರೆದಿರುವರೆಂಬ ಅಪವಾದ ಬಾರದಿರದು. ಇಂಥ ಲೇಖಗಳಿಗಿಂಬುಗೊಡುವ ಮಾಸಿಕವೂ ಕುಂದು ಹೊಂದದಿರದು.

(೫) ಈ ಲೇಖಕರು (ಅನ್ನದಾನೀಶ್ವರ ವಿರಕ್ತಮಠರು) ಶಿವಾನುಭವದಲ್ಲಿಯೇ ಪವಾಡಗಳಲ್ಲಿ ನಂಬಿಗೆಯಿಲ್ಲವೆಂಬ ನಾಸ್ತಿಕ ವಿಚಾರಗಳನ್ನು ಪ್ರಕಟಿಸಿರುವರು. ೨-೩ ವರ್ಷಗಳ ಕೆಳಗೆ ಪವಾಡಗಳಿಂದ ತುಂಬಿದ ಬಸವಲಿಂಗ ನಾಮಾವಳಿ, ತ್ರಿಷಷ್ಟಿ ಪುರಾತನ ಸ್ತೋತ್ರಾದಿಗಳನ್ನು ಪಾರಾಯಣ ಮಾಡಲು ಬೋಧಿಸಿದ್ದರು. ಜಗತ್ತು ಪ್ರಗತಿಯಲ್ಲಿದೆಯೆಂದು ಒಮ್ಮೆ ಬರೆದರೆ ಮರುತಿಂಗಳಲ್ಲಿಯೇ ನಾಶಮಾರ್ಗದಲ್ಲಿದೆಯೆಂದು ಇವರೇ ಬರೆಯುತ್ತಾರೆ. ಹೀಗೆ ಸುಸ್ಥಿರಚಿತ್ತರಲ್ಲದವರ ಲೇಖಕ್ಕೆ ಆಸ್ಪದಕೊಟ್ಟುದು ಶಿವಾನುಭವ ಮಾಸಿಕದ ಪಕ್ಷಪಾತ ಧೋರಣೆಯನ್ನು ತೋರಿಸುವದು.

(೬) ಪವಾಡಗಳು ಅಸತ್ಯವೆಂದು ಶಿವಾನುಭವ ಸಂಪಾದಕರೂ ಬರೆದಿರುವರು. ಅದೇಕಾಲಕ್ಕೆ ಪವಾಡಗಳಿಂದ ತುಂಬಿದ ಶಿವಶರಣರ ಚರಿತ್ರೆಗಳ ವಿಭಾಗಗಳನ್ನು ಪ್ರಕಟಿಸುತ್ತಿರುವರು. ಈ ಹಿಂದೆ ಅನೇಕ ಪವಾಡಪುರುಷರ ಚರಿತ್ರೆಗಳು ಶಿವಾನುಭವದಲ್ಲಿ ಬಂದಿವೆ. ಈಗೇಕೆ ಈ ವ್ಯತ್ಯಸ್ತ ಧೋರಣ ?

(೭) ಆಧ್ಯಾತ್ಮಿಕ ಶಿಕ್ಷಣ, ಈ ದೀಕ್ಷೆ ವಿಧಿನಿಷೇಧಗಳೆಂಬ ಸಂಕೋಲೆಗಳಿಲ್ಲದೇ ಹೇಗೆ ಕೊಡಬೇಕೋ ? ಅವರೇ ಸ್ಪಷ್ಟೀಕರಿಸಲಿ.

(೮) ಶಿಕ್ಷಣವೆಂದರೇ ವಿಧಿನಿಷೇಧಯುಕ್ತವಾದದ್ದು.

(೯) ರಾಷ್ಟ್ರಸೇವೆಯಲ್ಲಿ ಶಿಸ್ತೇ ನಮ್ಮ ಗುರಿಯಾಗಿರಬೇಕೆಂದು ಪಂಡಿತ ಜವಾಹರಲಾಲರು ಬೆಂಗಳೂರಲ್ಲಿ ಜನೇವರಿ ದಿನಾಂಕ ೧ ರಲ್ಲಿ ಸ್ವಯಂಸೇವಕರಿಗೆ ಉಪದೇಶಿಸಿರುವರು.

(೧೦) ಪ್ರೋಗ್ರೆಸ್ ಆಫ್ ಎಜ್ಯುಕೇಶನ್ ಮಾಸಿಕದ ಜೂನ ಸಂಚಿಕೆಯಲ್ಲಿ ಲಂಡನ್ನದ ಶಿಕ್ಷಕ ಸಂಘದ ಚೇರಮನ್ನರು ಇಂಗ್ಲಂಡದಲ್ಲಿ ಅಭ್ಯಾಸದಲ್ಲಿ ವಿದ್ಯಾರ್ಥಿಗಳಿಗೆ ಶಿಸ್ತನ್ನು ಒತ್ತಾಯ ಪಡಿಸದೇ ಸ್ವೇಚ್ಛಾಚಾರಕ್ಕಿಂಬುಗೊಟ್ಟುದರ ಪರಿಣಾಮವು ಎಷ್ಟು ಕೆಟ್ಟ ಆಗಿದೆಂಬುದನ್ನು ಸ್ಪಷ್ಟ ಪಡಿಸಿರುವರು. ಅವರು ತಾಗಿದಮೇಲೆ ಬಾಗುತ್ತಿರುವದನ್ನ ಕಂಡೂ ಕಂಡೂ ವಿಧಿನಿಷೇಧರಹಿತ ಸ್ವೇಚ್ಛಾಚಾರಕ್ಕಿಂಬುಗೊಡಬಹುದೇ ?

(೧೧) ಬೋಧೆಗೂ ಕೃತಿಗೂ ತಾಳಮೇಳವಿಲ್ಲದ ಲೇಖನಗಳನ್ನು ಬರೆದು ಶಿವಾನುಭವ ಹಾಗೂ ಶರಣಮಾರ್ಗಗಳನ್ನು ವಿಡಂಬಿಸುವದನ್ನು ಬಿಟ್ಟು ಗೊತ್ತಿದ್ದ ವಿಷಯಕವಾಗಿ ಸುಸಂಗತ ಲೇಖ ಬರೆಯುವದ ಹಿತಕರ. ಅಪ್ರಿಯವಾದರೂ ಪಥ್ಯಕರ.

### ಸ್ಪಷ್ಟವಾದಿಯ ಲೇಖನದ ಖಂಡನೆ —

ಮೇಲೆ ಸ್ಪಷ್ಟವಾದಿಯ ಲೇಖನದ ಸಾರಾಂಶವನ್ನು ಕೊಟ್ಟಿದ್ದೇನೆ ಅದನ್ನು (೧೧) ಮುದ್ದೆಗಳಲ್ಲಿ ಬರುವಂತೆ ಸಂಗ್ರಹಿಸಿದ್ದೇನೆ. ಇಲ್ಲಿ ಎಲ್ಲ ಮುದ್ದೆಗಳನ್ನೂ ವಿಚಾರ ಪೂರ್ಣವಾಗಿ ಖಂಡಿಸುತ್ತೇನೆ. ಶ್ರೀ ಅಯ್ಯನಗೌಡ ಮಾಸ್ತರರು ನಿಂತ ತಳಹದಿಯೇ ಭದ್ರವಾಗಿಲ್ಲವೆಂದು ತೋರಿಸಿಕೊಡುತ್ತೇನೆ.

ಸ್ಪಷ್ಟವಾದಿಯು ಪೂರ್ವಗ್ರಹದೂಷಿತ ದೃಷ್ಟಿಯಿಂದ ಎಂಥ ಅನರ್ಥ ಸಂಭವಿಸಬಹುದೆಂಬುದಕ್ಕೆ ಅವನ ಪ್ರಕೃತ ಲೇಖನವೇ ಸಾಕ್ಷಿಯಾಗಿದೆ. ಆಧುನಿಕ ವಿಮರ್ಶಾತ್ಮಕ ದೃಷ್ಟಿಯಿಲ್ಲದೇ, ಕೇವಲ ತಪ್ಪು ಗ್ರಹಿಕೆಯಿಂದ ಲೇಖ ಬರೆದರೆ ಹೇಗೆ ವಿಚಾರ ದಾರಿದ್ರ್ಯ ಪ್ರಾಪ್ತವಾಗುತ್ತದೆಂಬುದನ್ನು ತಿಳಿಯಲು ಸ್ಪಷ್ಟವಾದಿಯು ಉತ್ತಮ ಉದಾಹರಣೆಯಾಗಿದ್ದಾನೆ.

ಈಗ ಒಂದೊಂದೇ ಮುದ್ದೆಯನ್ನು ಖಂಡಿಸೋಣ. (೧) ಸ್ಪಷ್ಟವಾದಿಯು ಓದಿದ ಎಲ್ಲ ಮಹಾತ್ಮರ ಉಪದೇಶಗಳನ್ನೂ ಗ್ರಂಥಗಳನ್ನೂ ನಾನು ಓದಿದ್ದೇನೆ. ಅನವಶ್ಯಕವಾಗಿ ನಾನು ಅವುಗಳನ್ನು ಸಿಕ್ಕಸಿಕ್ಕಲ್ಲಿ ಉದಾಹರಿಸುವದಿಲ್ಲ. ಶಿವಯೋಗಿಗಳ, ಶರಣರ, ಮಹಾತ್ಮರ ಸ್ಫೂರ್ತಿ

ಯಂತೆ ನಡೆದು ನನ್ನ ಜನ್ಮವನ್ನು ಪಾವನಮಾಡಿಕೊಂಡಿದ್ದೇನೆಂಬು ದನ್ನು ಸ್ಪಷ್ಟವಾದಿಯು ಚನ್ನಾಗಿ ಲಕ್ಷದಲ್ಲಿಟ್ಟುಕೊಂಡಿರಲಿ. ಸ್ಪಷ್ಟವಾ ದಿಯು ಅಪೂರ್ಣನಿರುವಂತೆ ನಾನೂ ಅಪೂರ್ಣನಿರಬಹುದು. ಆದರೆ ಸ್ಪಷ್ಟವಾದಿಯಂತೆ ಶರಣಮಾರ್ಗದ ಮತ್ತು ಶಿವಾನುಭವದ ಗುತ್ತಿಗೆಗಾ ರನಂತೆ ನಾನು ನಟಿಸುವದಿಲ್ಲ. ನವ್ಹೆಂಬರ ತಿಂಗಳ ಶಿವಾನುಭವದಲ್ಲಿ ಪೂರ್ವರ ಅನುಭವಿಗಳ ವಿಧಿನಿಷೇಧಗಳು ಬೇಡವೆಂದು ನಾನು ಬರೆದಿ ರುವದಿಲ್ಲ. ಸ್ವೇಚ್ಛಾಚಾರ ಅಥವಾ ಪಶುಮಾರ್ಗವನ್ನು ಒಂದು ಸಾಲಿನ ಲ್ಲಿಯೂ ಎತ್ತಿಹಿಡಿದಿಲ್ಲ. ನನ್ನ ಹದಿನೈದು ವರ್ಷಗಳ ಸಾವಿರಾರು ಲೇಖ ನಗಳಲ್ಲಾಗಲೀ, ( ೧೩ ) ಹದಿಮೂರು ಪುಸ್ತಕಗಳಲ್ಲಾಗಲೀ, ವೈಯ ಕ್ತಿಕ ಜೀವನದಲ್ಲಾಗಲೀ ಒಂದಾದರೂ ಪಶುಮಾರ್ಗದ ಉದಾಹರಣೆ ಯನ್ನು ಶ್ರೀ. ಪಾಟೀಲ ಮಾಸ್ತರರು ಎತ್ತಿ ತೋರಿಸಲಿ.

"ಶರಣಮಾರ್ಗ" ಎಂಬ ಲೇಖದಲ್ಲಿ ನೀತಿ-ಅನೀತಿಗಳ ಕಡೆಗೆ ಶರಣರು ಲಕ್ಷಕೊಟ್ಟಿಲ್ಲವೆಂದು ಬರೆಯುವದು ಸಾಧ್ಯವಿದೆಯೇ? ಶರಣರು ಯಾವ ವಿಧಿನಿಷೇಧಗಳೆಂಬ ಸಂಕೋಲೆಗಳನ್ನು ಕತ್ತರಿಸಿದರೆಂಬುದನ್ನು ತಿಳಿದುಕೊಳ್ಳುವ ಸಾಮರ್ಥ್ಯವು ಸ್ಪಷ್ಟವಾದಿಯಲ್ಲಿಲ್ಲದಿದ್ದರೆ ನನ್ನನ್ನು ಕೇಳ ಬೇಕಾಗಿತ್ತು. ಜಾತಿ, ಜನ್ಮಮೂಲಕ ವಿಧಿನಿಷೇಧಗಳು ಪ್ರತಿಗಾಮಿ ದುಷ್ಟಶಕ್ತಿಗಳೆಂದು ಸ್ಪಷ್ಟವಾಗಿ ಅದೇ ಲೇಖನದಲ್ಲಿ ನಾನು ಬರೆದಿದ್ದರೂ ಸ್ಪಷ್ಟವಾದಿಗೆ ಸ್ಪಷ್ಟವಾಗದಿದ್ದುದು ಅವನ ವಿಚಾರದ ದಿವಾಳಿಯನ್ನೇ ಸೂಚಿಸುತ್ತದೆ. ವರ್ಣ, ಕುಲ, ಗೋತ್ರ, ವಂಶ, ಜಾತಿ, ಜನ್ಮಮೂ ಲಕವಾದ ವಿಧಿನಿಷೇಧಗಳು ಸಂಕೋಲೆಗಳು. ಇಂಥ ಸಂಕೋಲೆಗಳಿಂದ ಬಂಧಿಸಲ್ಪಟ್ಟ ಆತ್ಮವು ಸಚ್ಚಿದಾನಂದ ಸ್ವರೂಪವನ್ನರಿಯಲಾರದು. ಇದು ಸ್ಪಷ್ಟವಾಗಿ ೧ ನೇ ಪ್ಯಾರಾದಲ್ಲಿಯೇ ಇದ್ದರೂ ಸ್ಪಷ್ಟವಾದಿಯ ಕಣ್ಣಿಗೆ ಹೊಳೆಯದಿದ್ದರೆ ಅದು ಅವನ ಸಂಕುಚಿತ, ಅಸಪ್ರುಚಾರದ, ದುರುದ್ದೇ ಶದ ದೃಷ್ಟಿದೋಷವೇ ವಿನಃ ನನ್ನದೇನೂ ತಪ್ಪಿಲ್ಲ.

ಬಾಲಲೀಲಾ ಮಹಂತ ಶಿವಯೋಗಿ, ನಿಜಗುಣ ಶಿವಯೋಗಿ, ಬಸವ ಮುಂತಾದ ಅನೇಕ ಶರಣ ಮಹಾತ್ಮರ, ಶಿವಯೋಗಿಗಳ ಉಪ ದೇಶಾಮೃತವನ್ನು ಸ್ವತಃ ಪಾನಮಾಡಿ ಸ್ವದೇಶಬಾಂಧವರಿಗೆ ಪ ನಮಾ

ಡಿಸಲಿಕ್ಕೆ ೫—೬ ವರ್ಷಗಳ ವರೆಗೆ ಪೂರ್ಣವಾಗಿ ರಾತ್ರಿಹಗಲೆನ್ನದೇ ಪ್ರಾಪಂಚಿಕ ಲಾಭದ ಕಡೆಗೆ ಲಕ್ಷಿಸದೇ ದುಡಿದ ನಾನು ಅವುಗಳಿಗೆ ವಿರೋಧಿಯಾಗಿರುವೆನೋ ಏನೋ ಎಂಬ ಭಾವವಾಗ ... ಸ್ಪಷ್ಟವಾದಿಯು ಸಾವಧಾನದಲ್ಲಿ ದೀರ್ಘವಾಗಿ ಬರೆಯುವವನ್ನು ನೋಡಿದರೆ ಅವನ ವಿಕಾರಬುದ್ಧಿಯ ಬಗೆಗೆ ಕನಿಕರ ವೆನಿಸುತ್ತದೆ.

ಸ್ಪಷ್ಟವಾದಿಯು ಬಾಲಬುದ್ಧಿಗೆ ತಿಳಿಯುವಂತೆ "ಶರಣರ ದೃಷ್ಟ್ಯೈ ವಿಧಿನಿಷೇಧಗಳು" ಎಂಬ ಸ್ವತಂತ್ರ ಲೇಖವನ್ನೇ ಬರೆಯಬೇಕಾಯಿತು. ಅದನ್ನು ಓದಿದ ಮೇಲಾದರೂ ಸ್ಪಷ್ಟವಾದಿಯು ಅಸಂಬದ್ಧ ಪ್ರಲಾಪ ಗೈಯ್ಯುವದನ್ನು ಬಿಡಲಿ.

(೨) ಪೂರ್ವದ ಅನುಭವಿಗಳ ವಿಧಿನಿಷೇಧಗಳು ಬೇಡವೆಂದು ನಾನು ಬರೆದಿಲ್ಲ. ವರ್ಣ, ಕುಲ, ಜಾತಿ, ಜನ್ಮ, ಗೋತ್ರಮೂಲಕ ವಿಧಿನಿಷೇಧಗಳು ಬೇಡವೆಂದು ಶರಣರು ಹೇಳಿದ್ದನ್ನು ಬರೆದಿರುವೆನು. ಆದ್ದರಿಂದ ಶಿಕ್ಷಕ ವೃತ್ತಿಗೆ ಕಲಂಕ ತಂದಂತಾಗುವದಿಲ್ಲ. ಇಷ್ಟೇ ಅಲ್ಲ. ಶಿಕ್ಷಕನ ಉದಾರ ಧೋರಣೆಗೆ ಕಳೆ ತುಂಬಿದಂತಾಗುತ್ತದೆ. ಶಿಕ್ಷಣ ಕ್ಷೇತ್ರವನ್ನು ವ್ಯಾಪಕಗೊಳಿಸಿದಂತೆಯೂ, ಶಿಕ್ಷಣವು ಸರ್ವರ ಹಕ್ಕೆಂದೂ ನಾನು ಅಪ್ರತ್ಯಕ್ಷವಾಗಿ ಹೇಳಿದಂತಾಗುತ್ತದೆ. ಗ್ರಂಥಗಳಲ್ಲಿಯ ವಿಧಿನಿಷೇಧ ವಾಕ್ಯಗಳನ್ನು ಬೋಧಿಸಬಾರದೆಂದೂ, ಆದರ್ಶ ಆಚರಣೆಗಳನ್ನಿಟ್ಟುಕೊಂಡು ಶಿಷ್ಯರಿಗೆ ಬೋಧಿಸುವದು ಶಿಕ್ಷಕನ ಕರ್ತವ್ಯವಲ್ಲವೆಂದೂ ನಾನು ಎಲ್ಲಿಯೂ ಬರೆದಿಲ್ಲ. ಎಂದಮೇಲೆ ಈ ಅಪ್ರಾಸಂಗಿಕ ಪ್ರಶ್ನೆಗಳೇಕೆ ? ಎಂದು ಸ್ಪಷ್ಟವಾದಿಯನ್ನು ಕೇಳುತ್ತೇನೆ. ಸ್ಪಷ್ಟವಾದಿಯೇ, ಶಿಕ್ಷಕವೃತ್ತಿಯಲ್ಲಿ ನಾನು ಉತ್ತರೋತ್ತರ ಅಭಿವೃದ್ಧಿ ಹೊಂದುತ್ತಲೇ ಇದ್ದೇನೆ.

ನನ್ನ ಹದಿಮೂರು ವರ್ಷಗಳ ಶಿಕ್ಷಕವೃತ್ತಿಯಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ತನು, ಮನ, ಧನಗಳಿಂದ ಸಹಾಯ ಸಲ್ಲಿಸಿದ್ದೇನೆ. ನಾನು ಟ್ರೇನಿಂಗ ಹೊಂದಿದ ಶಿಕ್ಷಕನಿದ್ದು ಎಲ್ಲಿಯಾದರೂ ನನಗೆ ಸ್ವಾಗತವಿದೆ. ನಾನು ಅನುಭವಿಕ ಶಿಕ್ಷಕನೆಂದೂ, ಹುಟ್ಟಾ ಶಿಕ್ಷಕನೆಂದೂ ಅನೇಕ ಅಧಿಕಾರಿಗಳು ಶ್ಲಾಘಿಸಿದ್ದಾರೆ. ಸ್ಪಷ್ಟವಾದಿಯು ಹಳೇ ಪದ್ಧತಿಯ ಶಿಕ್ಷಕ

ನಿದ್ದು ಯಾವ ಟ್ರೇನಿಂಗನ್ನೂ ಹೊಂದದ ಗ್ರ್ಯಾಜುಯೇಟನಿರುತ್ತಾನೆ. ಇದಲ್ಲದೆ ಶಿಕ್ಷಣರಂಗಕ್ಕೆ ಇತ್ತೀಚೆಗೆ ಇಳಿದಿರುತ್ತಾನೆ. ಆದಕಾರಣ ಟ್ರೇಂಡ ಶಿಕ್ಷಕನಿಗೆ ಅನ್‌ಟ್ರೇಂಡ್ ಶಿಕ್ಷಕನು ಕಲಿಸುವ ಪದ್ಧತಿಯನ್ನು ಹೇಳಲಿಕ್ಕೆ ಹೊಂಡುವದು ಹಾಸ್ಯಾಸ್ಪದವೇ ಸರಿ.

(೩) ಶಿಷ್ಯನ ಪ್ರಗತಿ ಪುಸ್ತಕದಲ್ಲಿ ನಡಾವಳಿ ಎಂಬ ಕೋಷ್ಟಕ ಉಂಟು. ಯಾರು ಇಲ್ಲೆನ್ನುವರು ? ನಡತೆಗೆ ಮಹತ್ವವಿದ್ದೇ ಇದೆಯೆಂದು ಎಲ್ಲರೂ ಹೇಳುತ್ತಾರೆ. ನಾನು ಅದರ ವಿರೋಧವಾಗಿ ಎಲ್ಲಿ ಹೇಳಿದ್ದೇನೆ? ಸ್ಪಷ್ಟವಾದಿಯು ನನ್ನ ಶೈಕ್ಷಣಿಕ ವಿಚಾರಗಳು ಎಂಬ ಪುಸ್ತಕವನ್ನು ಓದಿ ನೈತಿಕ ಶಿಕ್ಷಣದ ಬಗ್ಗೆ ನನ್ನ ವಿಚಾರಗಳನ್ನು ತಿಳಿದುಕೊಳ್ಳಲಿ.

(೪) ವಿಧಿ ನಿಷೇಧಗಳೆಂಬ ವಾಕ್ಯಗಳನ್ನುಪಯೋಗಿಸದೇ ಶಾಲೆಯು ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ನೆಲೆಗೊಳಿಸುವದು ಶಕ್ಯವಿಲ್ಲವೆಂದು ಸ್ಪಷ್ಟವಾದಿಯು ಭಾವಿಸಿರುವನೋ ? ಹಾಗೆ ಭಾವಿಸಿದ್ದರೆ ಅದು ಅವನ ಕೇವಲ ಅಜ್ಞಾನ. ಶಿಸ್ತಿನಲ್ಲಿ ಎರಡು ಪ್ರಕಾರವುಂಟು. ಒಂದು ಬಾಹ್ಯ ನಿಯಂತ್ರಿತವಾದದ್ದು. ಇನ್ನೊಂದು ಸ್ವಯಂ ಪ್ರೇರಿತವಾದದ್ದು. ಬಾಹ್ಯ ನಿಯಂತ್ರಿತವಾದ ಶಿಸ್ತಿಗಿಂತಲೂ ಸ್ವಯಂಪ್ರೇರಿತ ಶಿಸ್ತು ಮೇಲೆಂದು ಎಲ್ಲ ವಿಚಾರವಂತ ಶಿಕ್ಷಣಪಟುಗಳೂ ಶಿಕ್ಷಣ ಶಾಸ್ತ್ರಜ್ಞರೂ ಅಭಿಪ್ರಾಯ ಪಡುತ್ತಿದ್ದಾರೆ. ಮಹಾತ್ಮಾ ಗಾಂಧಿ, ರಾಯಬರ್ನ, ವಿವೇಕಾನಂದ, ರಾಸ್, ಆ್ಯಡಾಮ್ಸ್, ಮಾಂಟೆಸರಿ, ರೂಸೋ, ಫ್ರಾಬೆಲ್, ಮುಂತಾದ ಎಲ್ಲ ಶಿಕ್ಷಣ ತತ್ವಜ್ಞರು ಈ ಬಗ್ಗೆ ತಮ್ಮ ವಿಚಾರಗಳನ್ನು ಪ್ರಕಟಿಸಿರುತ್ತಾರೆ. ಅಂತರಿಕವಾದ ಆತ್ಮಪ್ರೇರಿತವಾದ ಶಿಸ್ತು ಶಿಕ್ಷಕನ ವ್ಯಕ್ತಿತ್ವ, ಪ್ರೇಮದ ಸ್ವಾತಂತ್ರ್ಯದ ವಾತಾವರಣ, ಮತ್ತು ಮಕ್ಕಳ ಚಟುವಟಿಕೆಗಳು ಈ ಮೂರು ಸಂಗತಿಗಳ ಮೇಲೆ ಅವಲಂಬಿಸಿದೆಯೆಂದು ಆಧುನಿಕ ಶಿಕ್ಷಣ ತಜ್ಞರು ನಿರ್ಧರಿಸಿದ್ದಾರೆ. ಶಿಸ್ತು ಚೇತನ ಸ್ವರೂಪದ್ದು ಮತ್ತು ಸಾಮಾಜಿಕ ವಿವೇಕವನ್ನು ಸ್ಫುಟಗೊಳಿಸುವದು ಇರಬೇಕಾದರೆ ಅದು ಕ್ರಿಯಾಪರ ಇರಬೇಕು. ನಿಷೇಧಪರ ಇರಕೂಡದು ಎಂದು ರಾಯಬರ್ನರವರು ಒಂದು ಸ್ವತಂತ್ರ ಪುಸ್ತಕವನ್ನೇ ಬರೆದಿದ್ದಾರೆ. ಪ್ರೇಮವು ಶಿಸ್ತಿಗೆ ತಳಹದಿ. ಅದುವೇ ಶಿಸ್ತನ್ನು ನಿಯಂತ್ರಿಸುವದು ಎಂದು ಪೆಸ್ಟಲಾಜಿಯು ಹೇಳುತ್ತಾನೆ. ಕನ್ನಡದಲ್ಲಿ ಈ ಬಗ್ಗೆ ಕೆಲವು ಅನುವಾದಿತ ಗ್ರಂಥಗಳಿವೆ.

ಈ ಮೇಲಿನ ವಿವೇಚನೆಯಿಂದ ಶಿಸ್ತಿನಲ್ಲಿ ವಿಧಿನಿಷೇಧ ವಾಕ್ಯಗಳಿಗೆ ಪ್ರಥಮಸ್ಥಾನವಿಲ್ಲೆಂಬ ಸಂಗತಿಯನ್ನು ಸ್ಪಷ್ಟವಾದಿಯು ಚೆನ್ನಾಗಿ ತಿಳಿಯಲಿ. ಈ ಬಗ್ಗೆ ಇಂಗ್ಲೀಷಿನಲ್ಲಿ, ಹಿಂದಿಯಲ್ಲಿ ಮತ್ತು ಕನ್ನಡದಲ್ಲಿ ಗ್ರಂಥಗಳಿವೆ. ಆದಕಾರಣ ಸ್ಪಷ್ಟವಾದಿಯು ಅಪ್ಪಣೆವಿಧಿಸುವಂತೆ ಒಂದು ಗ್ರಂಥ ಬರೆದು ಪ್ರಕಟಿಸುವದು ಅಗತ್ಯವಿಲ್ಲ. ಎಂದಮೇಲೆ, ಸ್ಪಷ್ಟವಾದಿಯೇ, ಹೊಣೆಗೆಟ್ಟ ಸ್ವ ಕರ್ತವ್ಯ ಪರಾಙ್ಮುಖರು ಯಾರು ? ಶಿಕ್ಷಣದಲ್ಲಿ ಬೆಳವಣಿಗೆ ಹೊಂದಿರುವ ಆಧುನಿಕ ಶ್ರೇಷ್ಠ ಪದ್ಧತಿಗಳನ್ನುಪಯೋಗಿಸಿ, ಮಾದರಿಯ ಶಿಕ್ಷಣಕೊಡುತ್ತಿರುವ ನಾನೋ ? ಅಥವಾ ಹಳೆಯ ಗೊಡ್ಡು ವಿಧಿನಿಷೇಧಗಳನ್ನೇ ಕುಟ್ಟುತ್ತ ತೋರಿಕೆಯ ಶಿಸ್ತನ್ನು ಉಂಟುಮಾಡುತ್ತ ವ್ಯಕ್ತಿತ್ವವನ್ನು ವಿಕಾಸ ಮಾಡದ ಮೂಢ ರೂಢಿಯ ಗುಲಾಮನಾದ ನೀನೋ ? ಸುಮ್ಮನೇ ನಿನಗೂ ಸಾವಧಾನ ಪತ್ರಿಕೆಗೂ ಅಪಕೀರ್ತಿ ಬರುವಂತೆ ಅಪಾರ್ಥಮಾಡಿ ಅನ್ಯರನ್ನು ಧಿಕ್ಕರಿಸಬೇಡ.

( ೫ ) ಪವಾಡಗಳಲ್ಲಿ ನಂಬಿಗೆಯಿಲ್ಲವೆಂದರೆ ನಾಸ್ತಿಕ ವಿಚಾರಗಳನ್ನು ಪ್ರಕಟಿಸಿದಂತೆ ಎಂದು ಸ್ಪಷ್ಟವಾದಿಯು ಅನ್ನುತ್ತಾನೆ ವಾಹವ ! ಸ್ಪಷ್ಟವಾದಿಯೇ, ನಿನ್ನ ಅಗಾಧ ಪಾಂಡಿತ್ಯಕ್ಕೆ ಬೆಲೆಯಿಲ್ಲ. ಸ್ಪಷ್ಟವಾದಿಯೇ, ಶಿವಸಂಕಲ್ಪದಲ್ಲಿ ನನ್ನ ನಂಬಿಗೆಯಿದೆ. ಬದನೇಕಾಯಿ ಲಿಂಗ ಮಾಡುವದು, ಜೋಳವನ್ನು ಮುತ್ತುಮಾಡುವದು, ಮುಂತಾದ ಪವಾಡಗಳಲ್ಲಿ ನನ್ನ ವಿಶ್ವಾಸವಿಲ್ಲ. ಲಿಂಗಾಂಗೀ ಧರ್ಮವು ಭಕ್ತಿ-ಜ್ಞಾನ ಸಾಮರಸ್ಯವನ್ನು ಬೋಧಿಸುತ್ತದೆ. ಕೇವಲ ಭಕ್ತಿಯನ್ನಲ್ಲ. ಭಕ್ತ, ಮಹೇಶ ಪ್ರಸಾದಿ ಸ್ಥಲಗಳಲ್ಲಿ ಭಕ್ತಿಗೆ ಪ್ರಾಧಾನ್ಯತೆಯಿದ್ದರೆ ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳಲ್ಲಿ ಜ್ಞಾನಕ್ಕೆ ಪ್ರಾಮುಖ್ಯತೆ ಇದೆ. ಷಟ್ ಸ್ಥಲಗಳಲ್ಲಿ ಭಕ್ತಿಜ್ಞಾನಗಳು ಸಮರಸವಾಗಿವೆ. ಪವಾಡಗಳನ್ನು ನಂಬುವದು ಕೇವಲ ಭಕ್ತಿಯ ಕೆಲಸವಾಯಿತು. ಜ್ಞಾನಿಯು ಪವಾಡಗಳನ್ನು ನಂಬುವದಿಲ್ಲ. ಎಂದಮೇಲೆ ಈ ವಾದದಿಂದ ಸ್ಪಷ್ಟವಾದಿಯು ಲಿಂಗಾಂಗಿಯಲ್ಲವೆಂದು ಹೇಳಬಹುದೋ ? ಅಥವಾ ಲಿಂಗಾಂಗೀ ಧರ್ಮವನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೆಂದು ಅನ್ನಬೇಕೋ ? ಬಸವ ಪುರಾಣಕ್ಕಿಂತ ಬಸವ ವಚನ ಶ್ರೇಷ್ಠವೆಂಬುದನ್ನು ಸ್ಪಷ್ಟವಾದಿಯು ಸತ್ಯದೃಷ್ಟಿಯಿಂದ ತಿಳಿದುಕೊಳ್ಳಲಿ. ಶ್ರೀ. ಅಯ್ಯನಗೌಡ ಪಾಟೀಲ ಮಾಸ್ತರರು ಕೇವಲ ಸ್ಪಷ್ಟ

ವಾದಿಯೆಂದು ಕರೆದುಕೊಂಡರೆ ತೀರಲಿಲ್ಲ. ಸತ್ಯವಾದಿಯಾಗಲಿಕ್ಕೂ ಪ್ರಯತ್ನಿಸಬೇಕು.

ಬಸವಲಿಂಗ ನಾಮಾವಳಿ, ತ್ರಿಷಷ್ಠಿ ಪುರಾತನ ಸ್ತೋತ್ರಾದಿಗಳನ್ನು ನಾನು ಮೊದಲು ಪಾರಾಯಣ ಮಾಡಿ ನಂತರ ಜನರಿಗೆ ಪಾರಾಯಣ ಮಾಡಲಿಕ್ಕೆ ಬೋಧಿಸಿದ್ದೇನೆ. ನನ್ನ ಬೋಧೆಗೂ ಕೃತಿಗೂ ತಾಳಮೇಳ ವಿದೆ. ಆದರೆ ಸ್ಪಷ್ಟವಾದಿಯು ತಿಳಿದಂತೆ ಆ ಪವಿತ್ರ ಗ್ರಂಥಗಳು ಕೇವಲ ಜಾಮುವಿನಂಥ ಪವಾಡಗಳಿಂದ ತುಂಬಿಲ್ಲ. ಅಲ್ಲಿ ಪಾರಮಾರ್ಥಿಕ ಸಾಧನ ನೈತಿಕ ಏಳಿಗೆ, ಸಾಮಾಜಿಕ ಸಭ್ಯತೆ, ಜ್ಞಾನದ ತೇಜ, ನಿಷ್ಠೆ ಎಲ್ಲವೂ ಇವೆ.

ಬಸವಲಿಂಗ ನಾಮಾವಳಿಯ ವಿಮರ್ಶೆ ಎಂಬ ಚಿಕ್ಕ ಪುಸ್ತಕವನ್ನು ಬರೆದು ಅದನ್ನು ವೀರವಾಣಿಯಲ್ಲಿ ಪ್ರಕಟಿಸಿದ್ದೇನೆ. ಸ್ಪಷ್ಟವಾದಿಯು ಬೇಕಾದರೆ ಅದನ್ನು ಓದಿಕೊಳ್ಳಲಿ. ಈಗಲೂ, ಮುಂದೆಯೂ ಹಿಂದಿ ನಂತೆ ನಾನು ಬಸವಲಿಂಗ ನಾಮಾವಳಿ, ತ್ರಿಷಷ್ಠಿ ಪುರಾತನ ಸ್ತೋತ್ರ, ಗುರುಕರುಣ ತ್ರಿವಿಧಿ ಮುಂತಾದವುಗಳನ್ನು ಪಾರಾಯಣ ಮಾಡಲಿಕ್ಕೆ ಹೇಳಲಿಕ್ಕೆ ಎಷ್ಟೂ ಅನುಮಾನ ತೋರುವದಿಲ್ಲ.

ಜಗತ್ತು ಪ್ರಗತಿಯಲ್ಲಿದೆಯೆಂದು ಒಮ್ಮೆ ಬರೆದರೆ ಮರುತಿಂಗಳಲ್ಲಿಯೇ ನಾಶ ಮಾರ್ಗದಲ್ಲಿದೆಯೆಂದು ನಾನು ಬರೆಯುತ್ತೇನೆಂದು ಸ್ಪಷ್ಟವಾದಿಯು ಅನ್ನುತ್ತಾನೆ. ಸ್ಪಷ್ಟವಾದಿಯೇ, ಇದರಲ್ಲೇನು ಆಶ್ಚರ್ಯ ? ಪ್ರಗತಿಯ ಲ್ಲಿದ್ದರೆ ಪ್ರಗತಿಯಲ್ಲಿದೆಯೆಂದು ಬರೆಯುತ್ತೇನೆ. ನಾಶಮಾರ್ಗದಲ್ಲಿ ಹೋಗ ಹತ್ತಿದರೆ ಹಾಗೆಯೇ ಬರೆಯುತ್ತೇನೆ. ಸತ್ಯವಾದಿಯು ಹಾಗೆಯೇ ಬರೆಯ ಬೇಕಲ್ಲವೇ ?

ಸ್ಪಷ್ಟವಾದಿಯೇ, ಎರಡನೇಯವರಿಗೆ ಸುಸ್ಥಿರಚಿತ್ತವಿಲ್ಲದವರೆಂದು ಬರೆಯುವದಕ್ಕಿಂತ ಪೂರ್ವದಲ್ಲಿ ನಿನ್ನ ಆತ್ಮ ಅಥವಾ ಹೃದಯ ನಿರೀ ಕ್ಷಣೆಯನ್ನು ಮಾಡಿ ನೋಡಿಕೋ. ಜಗವ ಕಾಂಬ ಕಣ್ಣು ತನ್ನ ತಾ ಕಾಣಲರಿಯದೆಂದು ಶರಣ ಬಸವಣ್ಣನು ಹೇಳಿದ್ದನ್ನು ಸ್ಮರಿಸಿ ನಿನ್ನಎಡೆ

ಯಲ್ಲಿ ಬಿದ್ದಸತ್ತ ಕತ್ತೆಯನ್ನು ನೊದಲು ತೆಗೆದು ಒಗೆ. ಮಹಾ ಮಹಾ ಶರಣರು "ಎನ್ನ ಚಿತ್ತು ಅತ್ತಿಯ ಹಣ್ಣು ನೋಡಯ್ಯ. ವಿಚಾರಿಸಿದರೆ ಏನೂ ಹುರುಳಿಲ್ಲವಯ್ಯ" ಎಂದು ಹಾಡಿಕೊಂಡಿರುವಾಗ ನಿನ್ನಂಥ ಸಾಮಾನ್ಯ ಸಂಸಾರಿಯ ಪಾಡೇನು ?

ಶಿವಾನುಭಾವವು ಪಕ್ಷಪಾತ ಧೋರಣೆಯನ್ನು ಯಾವಾಗಲೂ ತೋರಿಸಿಲ್ಲ. ಅದು ನಿಷ್ಪಕ್ಷಪಾತ ಸತ್ಯಪಕ್ಷವನ್ನೇ ಸದಾ ಎತ್ತಿಹಿಡಿಯುತ್ತ ಬಂದಿರುತ್ತದೆ. ನಿನ್ನ ಒಂದು ಅಸಮಂಜಸ ಲೇಖವನ್ನು ಕೂಡಲೇ ಪ್ರಕಟಿಸಲಿಲ್ಲವೆಂಬ ಒಂದೇ ಕಾರಣದಿಂದ ಶಿವಾನುಭವಕ್ಕೆ ಕುಂದು ತರಲಿಕ್ಕೆ ಸಾಹಸಪಡುತ್ತಿರುವೆಯಾ ? ಶಿವಾನುಭವ ಮಾಸಿಕದ ೨೫ ವರ್ಷಗಳ ಸೇವೆಯನ್ನು ನಿಖಿಲ ಕನ್ನಡಿಗರೂ ಹೊಗಳುತ್ತಿರುವಾಗ ನಿನಗೆ ಮಾತ್ರ ಸಹನವಾಗಲಿಲ್ಲವೆ ? ನಿನ್ನಂತೆ ನಾನು ಸಿಟ್ಟಿನಿಂದ ಸಾವಧಾನ ಪತ್ರಿಕೆಯನ್ನ ಎಂದಾದರೂ ಧಿಕ್ಕರಿಸಿರುವೆನೋ ?

(೬) ಶಿವಾನುಭವ ಸಂಪಾದಕರು ಪವಾಡಗಳನ್ನು ನಂಬದಿದ್ದರೆ ಅದು ಅವರ ಆತ್ಮಕ್ಕೆ ಸಂಬಂಧಪಟ್ಟ ವಿಷಯ. ಪವಾಡಗಳನ್ನು ನಂಬಿದರೇನೇ ಸಮಾಜೋದ್ಧಾರವಾಗುವದೆಂದೂ ಆತ್ಮೋನ್ನತಿಯಾಗುವದೆಂದೂ ಸಿದ್ಧಮಾಡಲಿಕ್ಕೆ ಸ್ಪಷ್ಟವಾದಿಯು ಸಿದ್ಧನಿರುವನೊ ? ಶಿವಶರಣರ ಚರಿತ್ರೆಗಳಲ್ಲಿ ಪವಾಡಗಳಿದ್ದರೂ ಅವೇ ಮುಖ್ಯವಲ್ಲ. ಶರಣರ ಚರಿತ್ರೆಗಳಿಂದ ಅವರ ಆಧ್ಯಾತ್ಮಿಕ, ನೈತಿಕ, ಸಾಮಾಜಿಕ ಧಾರ್ಮಿಕ, ಮತ್ತು ಬೌದ್ಧಿಕ ಸಂಗತಿಗಳು ತಿಳಿದುಬರುತ್ತವೆ. ಅವರ ದೈನಿಕ ಜೀವನವು ಹೇಗೆ ದೈವಿಕವಾಯಿತು ? ಪ್ರಪಂಚದಲ್ಲಿದ್ದು ಪರಮಾರ್ಥವನ್ನು ಹೇಗೆ ಸಂಪಾದಿಸಿದರು ? ಕಷ್ಟಗಳನ್ನು ಹೇಗೆ ದಾಟಿದರು ? ಇತ್ಯಾದಿ ವಿಷಯಗಳು ತಿಳಿದು ಮಾನವನ ಉದ್ಧಾರವಾಗಲಿಕ್ಕೆ ಸಹಾಯ ದೊರೆಯುತ್ತದೆ. ಧರ್ಮ ಗುರುಗಳೂ, ಶಾಸ್ತ್ರಿಗಳೂ, ನಿನ್ನಂಥ ಭಕ್ತರೂ ಮಾಡಲಾಗದ ಕಾರ್ಯಗಳನ್ನು ಶ್ರೀ. ಹಳಕಟ್ಟಿಯವರು ಮಾಡಿದ್ದಾರೆ. ಮತ್ತು ಈಗಲೂ ಮಾಡುತ್ತಿದ್ದಾರೆ. ಅವರಲ್ಲಿ ವ್ಯತ್ಯಸ್ತಧೋರಣ ಎಂದಿಗೂ ಇಲ್ಲ.

(೭) ವಿಧಿನಿಷೇಧಗಳೆಂದರೆ ನೀತಿ ಅನೀತಿಗಳೆಂದೂ, ನೀತಿ ಅನೀತಿಗಳು ಬೇಡವೆಂದು ನಾನು ಅಭಿಪ್ರಾಯಪಡುತ್ತೆನೆಂದೂ ತಪ್ಪು

ಗ್ರಹಿಕೆಯ ಸ್ವಕಪೋಲ ಕಲ್ಪಿತ ಆಧಾರದಮೇಲೆ ಹೊರಟ ಸ್ಪಷ್ಟವಾದಿಯು ಈ ಪ್ರಶ್ನೆ ಕೇಳುವದು ಸ್ವಾಭಾವಿಕ. ಸ್ಪಷ್ಟವಾದಿಯು ಮೊದಲು ಶಿವಾನುಭವದ ೧೫ನೇ ದಿನಾಂಕದ ಜನೇವರಿ ಸಂಚಿಕೆಯಲ್ಲಿರುವ "ಆಧ್ಯಾತ್ಮಿಕತೆಯೆಂದರೇನು ?" ಎಂಬ ನನ್ನ ಲೇಖವನ್ನು ಓದಲಿ ಆ ಮೇಲೆ ಯಾವ ವಿಧಿನಿಷೇಧಗಳಿಗೆ ಸಂಕೋಲೆಗಳೆಂದು ಶರಣರು ಅನ್ನುವರು ? ಎಂಬ ನನ್ನ ಮುಂದಿನ ಲೇಖವನ್ನು ಓದಲಿ. ನಂತರ ಆಧ್ಯಾತ್ಮಿಕ ಶಿಕ್ಷಣ ಮತ್ತು ದೀಕ್ಷೆಗಳನ್ನು ಹೇಗೆ ಕೊಡಬೇಕೆಂಬುದು ಸ್ಪಷ್ಟವಾದಿಗೆ ತಾನೇ ಸ್ಪಷ್ಟವಾಗುವದು

(೮) ಶಿಕ್ಷಣದ ಬಗ್ಗೆ ಇರುವ ಸ್ಪಷ್ಟವಾದಿಯ ಮೂಢ ಮತ್ತು ಸಂಕುಚಿತ, ಹಳೇ ಮತ್ತು ವಿಕಾಸವಾಗದ ಗೊಡ್ಡು ವಿಚಾರಗಳನ್ನು ಓದಿದರೆ ಶಿಕ್ಷಣ ತಜ್ಞರಿಗೆ ನಗೆಬಾರದೇ ಇರದು. "ಶಿಕ್ಷಣವೆಂದರೇ ವಿಧಿನಿಷೇಧಯುಕ್ತವಾದದ್ದು" ಎಂದು ಶ್ರೀ ಅಯ್ಯನಗೌಡ ಪಾಟೀಲ ಮಾಸ್ತರರು ಅನ್ನುವದನ್ನು ಜೋರಿನಿಂದ ಅನ್ನುವದನ್ನು ಕೇಳಿದರೆ ಶಿಕ್ಷಣದಲ್ಲಿಯ ಹೊಸ ಪದ್ಧತಿಗಳು ಇವರಿಗೆ ಗೊತ್ತಿಲ್ಲವೆಂದು ತಟ್ಟನೆ ತಿಳಿಯುತ್ತದೆ. ಇವರು ಬಿ. ಟಿ. ಆಗಿಲ್ಲವೆಂದೂ, ಪ್ರತಿಗಾಮಿಧೋರಣದವರೆಂಬುವದೂ ಸ್ವಯಂ ಸಿದ್ಧವಾಗುತ್ತದೆ ಸಿ. ರಾಯಬರ್ನರವರ ಪುಸ್ತಕಗಳನ್ನಾಗಲೀ, ಮ್ಯಾಕ್‌ಡ್ಯೂಗಲ್‌ರ ಪುಸ್ತಕಗಳನ್ನಾಗಲೀ, ರಾಸ್, ವನ್, ಆಡ್ಯಾಮ್ಸ್, ರೂಸೋ, ಮಾಥ್ಯು, ಜೇಮ್ಸ್, ಸ್ಟ್ಯಾಂಡಫೋರ್ಡ ಮುಂತಾದವರ ಇಂಗ್ಲೀಷ ಪುಸ್ತಕಗಳನ್ನಾಗಲೀ ಶಿಕ್ಷಣತತ್ವ, ಶಿಕ್ಷಣ, ಜೀವನ, ಶಿಕ್ಷಣ ಮೂಲ ಶಿಕ್ಷಣ ಎಂಬ ಕನ್ನಡದಲ್ಲಿಯ ಪುಸ್ತಕಗಳನ್ನಾಗಲೀ ಸ್ಪಷ್ಟವಾದಿ ನಾಮಾಂಕಿತ ಅಯ್ಯನಗೌಡ ಮಾಸ್ತರರು ಕೂಡಲೇ ಓದಿ ಶಿಕ್ಷಣದ ಬಗೆಗಿರುವ ಮೂಢ ವಿಚಾರಗಳನ್ನು ತೊಲಗಿಸಿಕೊಳ್ಳಲಿ. ಬಿ. ಟಿ. ಆಗುವದು ಶಕ್ಯವಿಲ್ಲದಿದ್ದರೆ ಇಷ್ಟನ್ನಾದರೂ ಮಾಡಲಿ. ಶಿಕ್ಷಣದಲ್ಲಿ ವಿಧಿನಿಷೇಧವೇ ಪ್ರಾಮುಖ್ಯವಲ್ಲ. ಶಿಶು ಪ್ರಾಧಾನ್ಯ ಶಿಕ್ಷಣವೇ ಪ್ರಾಧಾನ್ಯವಾದದ್ದು. ಮಾನಸ ಶಾಸ್ತ್ರದ ಜ್ಞಾನವಿಲ್ಲದ್ದರಿಂದ ಸ್ಪಷ್ಟವಾದಿಯು ವಿಷಯ ಪ್ರಾಧಾನ್ಯ ಶಿಕ್ಷಣಕ್ಕೆ ಆರ್ಥಾತ್ ಹಳೆಯ ಗೊಡ್ಡು ಶಿಕ್ಷಣಕ್ಕೆ ಮಹತ್ವ ಕೊಡುತ್ತಾನೆ. ಡಾಕ್ಟರ ಜವಳಿಯವರು ಬರೆದ ಶೈಕ್ಷಣಿಕ ಮಾನಸಶಾಸ್ತ್ರವನ್ನಾಗಲೀ ಅಥವಾ ಮ್ಯಾಕ್‌ಡ್ಯುಗಲ್ಲರ ಎನರ್ಜೀಜ್ ಆಫ್ ಮೆನ್

ಎಂಬ ಪುಸ್ತಕವನ್ನಾಗಲೀ ಓದಿದರೆ ಸ್ಪಷ್ಟವಾದಿಯ ಭ್ರಮೆಯು ಬಯಲಾದೀತು. ಸಹಜ ಪ್ರವೃತ್ತಿಗಳ ಉದಾತ್ತೀಕರಣವೇ ಶಿಕ್ಷಣ ಎಂದು ಮಾನಸ ಶಾಸ್ತ್ರಜ್ಞರು ಹೇಳುವದನ್ನು ಸ್ಪಷ್ಟವಾದಿಯು ಓದಿ ಜ್ಞಾನ ಪಡೆಯಲಿ. ಈ ಬಗ್ಗೆ ಒಂದು ಗ್ರಂಥ ಬರೆಯುವಷ್ಟು ಸಾಮಗ್ರಿಯಿದ್ದರೂ ಅನವಶ್ಯಕವಾಗಿ ಹಾಗೆ ಮಾಡಲಿಕ್ಕೆ ಹೋಗುವದಿಲ್ಲ.

(೯) ರಾಷ್ಟ್ರಸೇವೆ, ಶಿಸ್ತುಗಳ ಬಗ್ಗೆ ಸ್ಪಷ್ಟವಾದಿಯು ಪಂಡಿತ ಜವಾಹರಲಾಲರ ಬೆಂಗಳೂರ ಭಾಷಣದ ಅವತರಣಿಕೆಯನ್ನು ಕೊಟ್ಟಿದ್ದಾನೆ. ರಾಷ್ಟ್ರಸೇವೆ ಮಾಡಬಾರದೆಂದಾಗಲೀ ಶಿಸ್ತು ಇರಬಾರದೆಂದಾಗಲೀ ಯಾರಾದರೂ ಹೇಳಬಹುದೇ ?

ರಾಷ್ಟ್ರಸೇವೆಯಲ್ಲಿ ಹರಿಜನೋದ್ಧಾರ, ಖಾದಿ ಪ್ರಚಾರ, ಗ್ರಾಮೋದ್ಯೋಗಗಳ ಪುನರುಜ್ಜೀವನ, ಸಮಾಜ ಶಿಕ್ಷಣ, ಮೂಲಶಿಕ್ಷಣ, ನಿರಕ್ಷರತಾ ನಿವಾರಣೆ, ಹಿಂದು ಮುಸ್ಲಿಂ ಐಕ್ಯ, ಜಾತೀಯತಾ ನಿರ್ಮೂಲನ, ಗ್ರಾಮಸೇವೆ, ಸಹಕಾರ ಚಳವಳಿ ಮುಂತಾದ ಕಾರ್ಯಗಳು ಸಮಾವೇಶವಾಗಿರುತ್ತವೆ. ಇವುಗಳಲ್ಲಿ ಯಾವ ಕಾರ್ಯವನ್ನೂ ಸ್ಪಷ್ಟವಾದಿಯು ಮಾಡದಿದ್ದರೂ ಸಹ, ಅವನ ವೈಯಕ್ತಿಕ ಜೀವನದಲ್ಲಿ ಶಿಸ್ತು ಇಲ್ಲದಿದ್ದರೂ ಸಹ, ಈ ಬಗ್ಗೆ ಸ್ಪಷ್ಟವಾದಿಗೆ ಬರೆಯಲಿಕ್ಕೆ ಹಕ್ಕು ಸ್ವಾತಂತ್ರ್ಯಗಳಿಲ್ಲವೆಂದು ಅನ್ನಲಿಕ್ಕೆ ಬಂದೀತೇ ? ಸ್ಪಷ್ಟವಾದಿಯು ಶಿಸ್ತಿಗೆ ಮೂಲ ಕಾರಣವಾದ ಶಾರೀರಿಕ ಶಿಕ್ಷಣದಲ್ಲಿ ಟ್ರೇನಿಂಗ ಹೊಂದಿರುವನೋ ?

ಶಾರೀರಿಕ ಶಿಕ್ಷಣದಲ್ಲಿ ಟ್ರೇನಿಂಗಹೊಂದದಿದ್ದರೇನಾಯಿತು ? ಅಭಿಪ್ರಾಯ ವ್ಯಕ್ತಮಾಡಲಿಕ್ಕೆ ಅವನಿಗೆ ಸ್ವಾತಂತ್ರ್ಯವಿದ್ದೇ ಇದೆ. ಆದರೆ ರಾಷ್ಟ್ರಸೇವೆಯಲ್ಲಿ ತನು, ಮನ, ಧನಗಳನ್ನು ವಿನಿಯೋಗಿಸಿ ಸ್ವರಾಜ್ಯ ಚಳವಳಿಯಲ್ಲಿ ಜೇಲುವಾಸವನ್ನನುಭವಿಸಿ, ಶಾರೀರಿಕ ಶಿಕ್ಷಣವನ್ನು ಮುಂಬೈಯಲ್ಲಿಯ ಕಾಲೇಜದಲ್ಲಿ ಪಡೆದು, ವೈಯಕ್ತಿಕ ಜೀವನದಲ್ಲಿಯೂ ಕಾಲೇಜ ಜೀವನದಲ್ಲಿಯೂ ಶಿಸ್ತನ್ನು ಪರಿಪಾಲಿಸುತ್ತಿರುವ ನನಗೆ ಆ ಬಗ್ಗೆ ಸ್ಪಷ್ಟವಾದಿಯು ಬೋಧಿಸುವದು ಗುಡ್ಡಕ್ಕೆ ಕಲ್ಲುಹೊತ್ತಂತೆ ಅನವಶ್ಯಕವಾಗಿರುತ್ತದೆಂದು ಸೂಚಿಸುತ್ತೇನೆ.

(೧೧) ಸ್ಪಷ್ಟವಾದಿಯು ಲಂಡನ್ ಶಿಕ್ಷಕ ಸಂಸದ ಚೆಅರಮನ್ನರ ಅಭಿಪ್ರಾಯವನ್ನು ಉದಾಹರಿಸಿರುವನು. ಶಿಸ್ತನ್ನು ಶಿಕ್ಷಣದಲ್ಲಿ ಒತ್ತಾಯಪಡಿಸದೇ ಸ್ವೇಚ್ಛಾಚಾರಕ್ಕಿಂಬುಗೊಟ್ಟರೆ ಕೆಟ್ಟ ಪರಿಣಾಮವಾಗುವದೆಂದು ಚೆಅರಮನ್ನರು ಅನ್ನುವರಂತೆ. ಆದ್ದರಿಂದ ವಿಧಿನಿಷೇಧರಹಿತ ಸ್ವೇಚ್ಛಾಚಾರಕ್ಕಿಂಬುಗೊಡಬಹುದೇ ? ಎಂದು ಸ್ಪಷ್ಟವಾದಿಯು ಪ್ರಶ್ನಿಸುತ್ತಾನೆ.

ಸ್ಪಷ್ಟವಾದಿಯೇ, ನಾನು ಬರೆದಿರುವ ಶರಣಮಾರ್ಗದಲ್ಲಿ ಸ್ವೇಚ್ಛಾಚಾರಕ್ಕಿಂಬುಗೊಡುವ ಪ್ರಶ್ನೆಯೇ ಉದ್ಭವಿಸುವದಿಲ್ಲ. ಆತ್ಮಸ್ವಾತಂತ್ರ್ಯದಿಂದ ವ್ಯಕ್ತಿಯ, ರಾಷ್ಟ್ರದ, ಜಗತ್ತಿನ ಪ್ರಗತಿಯಾಗುತ್ತದೆಂದು ಬರೆದಿರುತ್ತೇನೆ. ಆತ್ಮಸ್ವಾತಂತ್ರ್ಯಕ್ಕೆ ಸ್ವೇಚ್ಛಾಚಾರವೆಂಬ ಅರ್ಥವನ್ನು ಯಾವ ಶಬ್ದಕೋಶದಲ್ಲಿ ಹೊರಡಿಸಿರುವಿ ? ಆ ಅರ್ಥವು ಮೂರ್ಖರ ಶಬ್ದಕೋಶದಲ್ಲಿ ಮಾತ್ರ ಶಿಗುವದು. ಸ್ವಾತಂತ್ರ್ಯವೆಂದರೆ ಆತ್ಮದ ಮಧುರಗೀತೆ. ಆತ್ಮ ಸ್ವಾತಂತ್ರ್ಯದ ರಸಭರತ ಗೀತೆಗಳೇ ವಚನಗಳು. ಇಂಥ ಆತ್ಮ ಸ್ವಾತಂತ್ರ್ಯದಿಂದ ನಿಜವಾದ ಶಿಸ್ತು ಉದಯಿಸುವದು. ಲಷ್ಕರಿಯಲ್ಲಿ ಶಿಸ್ತನ್ನು ಒತ್ತಾಯಪಡಿಸಬಹುದು. ವಿದ್ಯಾಭ್ಯಾಸದಲ್ಲಿ ಒತ್ತಾಯಪಡಿಸಿದರೆ ವ್ಯಕ್ತಿತ್ವದ ಬೆಳವಣಿಗೆಯೇ ಆಗುವದಿಲ್ಲ. ವ್ಯಕ್ತಿತ್ವ ವಿಕಾಸವಿಲ್ಲದ ಮೇಲೆ ಶಾರೀರಿಕ, ಮಾನಸಿಕ ಮತ್ತು ನೈತಿಕ ಅಭಿವೃದ್ಧಿಯೆಲ್ಲಿ ?

ಶರಣರ ಸಂಸ್ಕೃತಿಯು ಆತ್ಮ ಸ್ವಾತಂತ್ರ್ಯದಿಂದ ಮುಂದೆ ಮುಂದೆ ಪ್ರವಹಿಸುತ್ತದೆ. ಸ್ವೇಚ್ಛಾಚಾರದಿಂದ ಸಂಸ್ಕೃತಿಯುಮಾತು ಉದ್ಭವಿಸುವದೇ ? ಫಾಕ್ಸ್, ಚಾರ್ಲಸ್, ಜೋಡ್, ಆಡ್ಯಾಮ್ಸ್, ಮ್ಯಾಕ್‌ಡೂಗಲ್ ರಾಸ ಮುಂತಾದವರು ಮಾನಸಶಾಸ್ತ್ರದಲ್ಲಿ ಆತ್ಮಸ್ವಾತಂತ್ರ್ಯದ ಮಹತಿಯನ್ನು ಬಣಿಸಿರುವಾಗ ಅಪ್ರಬುದ್ಧ ಬುದ್ಧಿಯ ಅಯ್ಯನಗೌಡ ಮಾಸ್ತರರಿಗೆ ಬೇರೊಂದು ಅಸಾರ್ಥತೋರಿದ್ದು ಅವನ ಸಂಕುಚಿತ, ಅಪಪ್ರಚಾರದ, ದುರುದ್ದೇಶದ ಪ್ರತೀಕವೇ ಸರಿ.

ವಿಧಿನಿಷೇಧಗಳೇ ಪ್ರಾಮುಖ್ಯವಾದ ಶಿಕ್ಷಣವು ಮರಣಕ್ಕಿಂತ ಕೀಳೆಂದು ಸ್ವಾಮಿ ವಿವೇಕಾನಂದರು ತಮ್ಮ ನ್ಯಾಶನಲ್ ರಿಜನರೇಶನ್

ಎಂಬ ಪುಸ್ತಕದಲ್ಲಿ ಸ್ಪಷ್ಟವಾಗಿ ಹೇಳುವಾಗ, ರಾಯಬರ್ನ್‌ರವರು ಕ್ರಿಯಾತ್ಮಕ ಶಿಕ್ಷಣದ ಮಹತ್ವವನ್ನು ಬಣ್ಣಿಸುವಾಗ ನಿಷೇಧಪರ ಶಿಕ್ಷಣವು ತ್ಯಾಜ್ಯವೆಂದು ಸ್ಪಷ್ಟ ಬರೆದಿರುವಾಗ, ಅಡಾಲ್ಫ್ ಫೇರಿಯವರು ಶಿಕ್ಷಣದಲ್ಲಿ ಸ್ವಾತಂತ್ರ್ಯದ ಮಹತ್ವದಬಗ್ಗೆ ಒತ್ತಿ ಬರೆದಿರುವಾಗ, ಆ್ಯಡ್ಯಾಮ್ಸರು ಇಮ್ಯಾನ್ಸಿಪೇಶನಿಜ್‌ಮ್ ಎಂಬ ಆತ್ಮಸ್ವಾತಂತ್ರ್ಯದ ಶಿಕ್ಷಣದ ವ್ಯಕ್ತಿತ್ವದ ವಿಕಾಸದಬಗ್ಗೆ ನಿಚ್ಚಳವಾಗಿ ಸಿದ್ಧಮಾಡಿರುವಾಗ, ಶ್ರೀ. ಅಯ್ಯನಗೌಡ ಮಾಸ್ತರರಾಗಲೀ ಅವರು ಉದಾಹರಿಸಿದ ಲಂಡನ್ ಶಿಕ್ಷಕ ಸಂಘದ ಚೇರಮನ್ನರಾಗಲೀ ಮೇಲೆ ಬರೆದ ಗ್ರಂಥಕರ್ತರಷ್ಟು ಪರಿಣತ ಅನುಭವಜ್ಞಾನ, ಪ್ರತಿಭೆ, ಪ್ರಭಾವಗಳುಳ್ಳ ವ್ಯಕ್ತಿಗಳಲ್ಲವಾದ್ದರಿಂದ ಅವರ ಉಕ್ತಿಗಳು ಸರ್ವರ ಆದರಕ್ಕೆ ಪಾತ್ರವಾಗಲಾರವು.

ಕೈಕಟ್ಟಿಕೊಂಡು ಕರಿ ಅನ್ನುವದು, ಸುಮ್ಮನೆ ಕುಳಿತುಕೊಳ್ಳುವದು, ಮುಂತಾದ ಬೇಡಿಗಳಾಗಲೀ, ಬೆದರಿಸಿ ನಿಷೇಧ ವಾಕ್ಯಗಳನ್ನು ರೂಢಿಯಲ್ಲಿ ತರುವದು, ಶಿಕ್ಷಿಸುವದು ಇತ್ಯಾದಿ ವಿಧಿನಿಷೇಧಗಳಿಂದ ಕೂಡಿದ ಸಾಲೆಗಳು ಉತ್ತಮ ಕೈದಿಖಾನೆಗಳೆಂದೂ ಅಂಥ ಶಿಕ್ಷಣಹೊಂದುವವರು ಉತ್ತಮ ಕೈದಿಗಳೆಂದೂ ಅಡಾಲ್ಫ್‌ಫೇರಿಯವರು ಹಾಸ್ಯದಿಂದ ನುಡಿದಿದ್ದಾರೆ. ಅಡಾಲ್ಫ್‌ಫೇರಿಯವರು ಕೃತಿಸಾಲೆಯ ತಾತ ಎಂದು ಹೆಸರಾಗಿದ್ದಾರೆ. ಅವರು ಅನ್ನುವದೇನಂದರೆ —

ಮಕ್ಕಳ ದೇಹ, ಮನಸ್ಸುಗಳ ಮೇಲೆ ಬಲುಮೆ ಮಾಡುವದನ್ನು ಸಹಿಸಕೂಡದು. ಅದರಿಂದ ಮಗುವಿನ ಬೆಳವಣಿಗೆ ಕುಗ್ಗುವದು. ಶಿಕ್ಷಣದಲ್ಲಿ ಸ್ವಾತಂತ್ರ್ಯದ, ಪ್ರೇಮದ ಕಳೆಯನ್ನು ತುಂಬಿದರೆ ಸ್ವಯಂ ಪ್ರೇರಿತ ಶಿಸ್ತು ಉಂಟಾಗುವದು. ಅಂದರೆ ಮಕ್ಕಳ ಅಂತಃಕರಣದಲ್ಲಿ ಹುದುಗಿದ ಚೈತನ್ಯಗಳನ್ನು ಬಯಲಿಗೆಳೆಯಲಿಕ್ಕೆ ಅನುಕೂಲವಾಗುವದು. ” ಸ್ವಾಮಿ ವಿವೇಕಾನಂದರು ಹೇಳಿದಂತೆ ಶಿಕ್ಷಣವೆಂದರೆ ಅಂತಃಕರಣದಲ್ಲಿಯ ದೇವತ್ವದ ಅಭಿವ್ಯಕ್ತಿಯೆಂದು ತಿಳಿದರೆ ದೇವತ್ವವು ಪ್ರಕಟವಾಗಬೇಕಾದರೆ ಸ್ವೇಚ್ಛಾಚಾರದಿಂದಾಗಲೀ, ಕೇವಲ ವಿಧಿನಿಷೇಧಗಳಿಂದಾಗಲೀ ಸಾಧ್ಯವಿಲ್ಲ. ಆಧ್ಯಾತ್ಮಿಕ ಮತ್ತು ಪ್ರಭಾವೀ ವ್ಯಕ್ತಿತ್ವವುಳ್ಳ ಶಿಕ್ಷಕನಿಂದಲೇ ಸಾಧ್ಯವೆಂದು ಸ್ವಾಮಿ ವಿವೇಕಾನಂದರೇ ಹೇಳಿದ್ದಾರೆ. ಸಮಾಜದ ಪುನರ್

ಚನೆಯು ಒತ್ತಾಯದಿಂದ ಆಗುವದಿಲ್ಲೆಂದು ರಾಯಬರ್ನ್, ಬುದ್ಧ, ಈನ್‌ಸ್ಟನ್, ಮಾರ್ಕೋನಿ, ಹೆಗಲ್ ಮುಂತಾದ ಎಲ್ಲ ದಾರ್ಶನಿಕರು ಬೋಧಿಸಿದ್ದಾರೆ. ಎಂದಮೇಲೆ ಸ್ವಾತಂತ್ರ್ಯವನ್ನು ಹತ್ತಿಕ್ಕಿ, ಶಿಸ್ತನ್ನು ಒತ್ತಾಯಪಡಿಸುವದು ಮೂರ್ಖತನದ ಪರಮಾವಧಿಯೆಂದೂ, ಹೀಗೆ ಮಾಡುವ ಗೊಡ್ಡು ಶಿಕ್ಷಕರಿಗೆ ಈಗಿನ ಹೊಸ ನವಯುಗವಲ್ಲಿ ಸ್ಥಾನವೇ ಇಲ್ಲವೆಂದೂ ಸಿದ್ಧವಾಗುವದಿಲ್ಲವೇ ?

ಸ್ಪಷ್ಟವಾದಿಯು ಉದಾಹರಿಸಿದ ಲಂಡನ್ ಶಿಕ್ಷಕ ಸಂಸ್ಥೆಯವರ ಮನ್ನಣೆಗಿಂತಲೂ ಎಷ್ಟೋ ಶ್ರೇಷ್ಠ ಅನುಭವಿಗಳಾಗಿರುವ ಮತ್ತು ಭಾರತೀಯ ಸಂಸ್ಕೃತಿಯ ಮೂರ್ತಿಮಂತ ಪ್ರತಿನಿಧಿಗಳಾಗಿರುವ ಜನತಾ ರಾಜ್ಯದ ಅಧ್ಯಕ್ಷ ಡಾಕ್ಟರ್ ರಾಜೇಂದ್ರ ಪ್ರಸಾದರು ಮಾರ್ಚ ೩ನೆಯ ದಿನಾಂಕದಲ್ಲಿ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕಟ್ಟಡದ ಶಂಕುಸ್ಥಾಪನೆಯ ಕಾಲಕ್ಕೆ ಹೇಳಿದ ಮಹತ್ವದ ವಿಚಾರಗಳನ್ನು ಸ್ಪಷ್ಟವಾಗಿಯು ಲಕ್ಷದಲ್ಲಿಟ್ಟುಕೊಳ್ಳಲಿ.

ಬಾಬು ರಾಜೇಂದ್ರ ಪ್ರಸಾದರು ಹೇಳಿದ್ದೇನಂದರೆ ಪರಂಪರೆಗೆ ಕಟ್ಟು ಬೀಳದೆ ಶಿಕ್ಷಣದಲ್ಲಿ ನವ ವಿಧಾನಗಳತ್ತ ತಿರುಗಬೇಕು. ಹಳ್ಳಿಯ ವಿಶ್ವ ವಿದ್ಯಾಲಯಗಳು ಹಳೆಯ ಪರಂಪರೆಗಳಂತೆ ಕಾರ್ಯ ಮಾಡುತ್ತವೆ. ಆದರೆ ಈಗ ನವವಿಧಾನಕ್ಕೆ ಸ್ವಾಗತವಿದೆ."

"ಮಾಡರ್ನ ಡೆವ್ಹಲಪ್‌ಮೆಂಟ್ಸ ಇನ್ ಎಜ್ಯುಕೇಶನ್" ಎಂಬ ಆಡ್ಯಾಮ್ಸರ ಪುಸ್ತಕದಲ್ಲಿ ನವ ವಿಧಾನಗಳನ್ನು ವಿವೇಚಿಸಿದ್ದಾರೆ. ಸ್ಪಷ್ಟವಾದಿಯು ಓದಿ ತನ್ನ ಭ್ರಮಾತ್ಮಕ, ಗೊಡ್ಡು ಕಲ್ಪನೆಗಳನ್ನು ದೂರ ಮಾಡಿಕೊಳ್ಳಲಿ

(೧೧) ಸ್ಪಷ್ಟವಾದಿಯು ಶಿವಾನುಭವ ಹಾಗೂ ಶರಣ ಮಾರ್ಗದ ಗುತ್ತಿಗೆ ಹಿಡಿದಿರುವನೋ?

ಶಿವಾನುಭವಿಗಳೂ ಶರಣಮಾರ್ಗದಲ್ಲಿರುವವರೂ ಶ್ರೀ. ಅಯ್ಯನಗೌಡ ಮಾಸ್ತರರಂತೆ ಆತ್ಮಸ್ತುತಿ ಪರನಿಂದೆಗಳನ್ನು ಮಾಡುವದಿಲ್ಲ. ಶಿವಾ

ನುಭವದ ಬಗ್ಗೆ ಮತ್ತು ಶರಣಮಾರ್ಗದ ಬಗ್ಗೆ ಬರೆಯಲಿಕ್ಕೆ ಸ್ಪಷ್ಟ ವಾದಿಯ ಹೊರತು ಉಳಿದವರಿಗೆ ಸ್ವಾತಂತ್ರ್ಯ ಮತ್ತು ಹಕ್ಕು ಇಲ್ಲವೋ? ನಮ್ಮ ಆತ್ಮಕ್ಕೆ ಒಪ್ಪಿಗೆಯಾದ ಶರಣರ ಶಿವಾನುಭವನ ಬಗ್ಗೆ ಬರೆದರೆ ಅದು ವಿಡಂಬನೆಯಾಗುವದೋ? ಹಾಗಾದರೆ ಸ್ಪಷ್ಟವಾದಿಯು ಬರೆದದ್ದು ಏಕೆ ವಿಡಂಬನೆಯಾಗುವದಿಲ್ಲ? ಸ್ವತಂತ್ರವಿಚಾರಗಳನ್ನು ಶರಣರು ಹಿರಿಯರು. ಅವರಹೃದಿಯಲ್ಲಿರುವ ನಾವು ಸ್ವತಂತ್ರ ವಿಚಾರಗಳನ್ನು ಬರೆದರೆ ಶ್ರೀ. ಅಯ್ಯನಗೌಡ ಮಾಸ್ತರರು ಏಕೆ ವಿಸಿಟಿಸುತ್ತಾರೋ ತಿಳಿಯದು. ಕರ್ಮಠನ ಕತ್ತಲೆಯಲ್ಲಿ ತೊಳಲುತ್ತಿರುವ ಸ್ಪಷ್ಟವಾದಿಗೆ ಸ್ವತಂತ್ರ ವಿಚಾರ, ಪ್ರಗತಿ, ಸ್ವಾತಂತ್ರ್ಯ ಇತ್ಯಾದಿಗಳ ಬೆಳಕು ಬೀಳಲೆಂದೇ ಅವರ ಎಲ್ಲ ಹನ್ನೊಂದು ಮುದ್ದೆಗಳಿಗೂ ಸತ್ಯವಾದ ಪ್ರತ್ಯುತ್ತರಗಳನ್ನು ಕೊಟ್ಟು ಅವರ ಅವಿವೇಕತನವನ್ನೂ ಪೂರ್ವಗ್ರಹದೂಷಿತ ದೃಷ್ಟಿಯನ್ನೂ ಬಯಲಿಗೆಳೆದಿದ್ದೇನೆ. ಸ್ಪಷ್ಟವಾದಿಯ ವಿಚಾರ ದಾರಿದ್ರ್ಯವು ದೂರಾಗಲಿ, ಅವನ ಕಣ್ಣಿಗೆ ಬಡಿದ ಕಾಮಣಿರೋಗವು ನಿವಾರಣೆಯಾಗಲಿ! ಸ್ವತಂತ್ರ ವಿಚಾರಕ್ಕೂ ಶರಣರಿಗೂ, ಶಿವಾನುಭಾವಿಗಳಿಗೂ ಜಯವಾಗಲಿ!!

## ಬ್ರಹ್ಮಜ್ಞಾನಿಯೇ ಬ್ರಾಹ್ಮಣನು.

ಯಜ್ಞಸೂತ್ರವ ಧರಿಸಲು ಪ್ರಜ್ಞೆಯಹುದೆ ।
ಯಜ್ಞಚಿತ್ತದೊಳಾಡುತೆ ಮಹಿಮನಾಗ್ವ ॥
ಬ್ರಹ್ಮಮಯನಾಗಲವನೆ ಬ್ರಾಹ್ಮಣನು ಸತ್ಯ ।
ವಿಮಲಗುಣರಾಜಯೋಗೀಂದ್ರ ವೇಮನಾರ್ಯ ॥ ೪೦೯ ॥

ಶೂದ್ರರಲ್ಲಿ ಹುಟ್ಟಿ ಶೂದ್ರರ ದೂಷಿಸಿ ।
ದ್ವಿಜರು ಎಂಬ ಹೆಸರು ನಿಜವ ಮಾಡೆ ॥
ಮನಸು ನಿಲಿಸದಿರಲು ಮತ್ತೆ ತಾಂ ಶೂದ್ರನೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೦ ॥

ಶೂದ್ರರೆಂದು ಭುವಿಯೊಳ್ ಶೂದ್ರರ ಬಿಡುತಿಹ ।
ಹೊಲೆಯನಿಂದ ಬೇರೆ ಹೊಲೆಯನಿಹನೆ ॥
ದ್ವಿಜನು ನಾನೆನ್ನಲು ದ್ವಿಜನವನಾಗ್ವನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೧ ॥

ಋಷಿಕುಲದೊಳು ತಾವು ರೂಢಿಯೊಳ್ ಜನಿಸಿ ।
ಕುಲವ ಗೋತ್ರವನ್ನು ಗೋಪ್ಯ ಮಾಡಿ ॥
ಬ್ರಹ್ಮಕುಲವಲ್ಲದೆ ಬ್ರಾಹ್ಮಣರೆಂತಹರ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೨ ॥

ತಾತನ ತಾಯ್ ತನ್ನ ತಂದೆಯ ತಾಯಿಯು ।
ತನ್ನ ಪಡೆದ ತಾಯಿ ತಾಯಿ ತಾಯಿ ॥
ತಾಯಿ ಶೂದ್ರಳಾಗಿ ತಾನೆಂತು ಬ್ರಾಹ್ಮಣ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೩ ॥

ತಲೆಯೊಳ್ ವಾಮಹಸ್ತವಭಯ ಹಸ್ತವನಿತ್ತು ।
ದರ್ಪಣದೊಳು ತನ್ನ ಮುಖವ ತೋರಿ ।
ಮಂಗಳವನು ಮಾಳ್ಪ ಕ್ಷೌರಿಕಹೀನನೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೪ ॥

## ಹೊಲೆಯನಾರು ?

ವರ್ಣಾಶ್ರಮಗಳಿಗೆ ಒದರ್ವರು ಗುರುವೆಂದು ।
ಮರಣವರಿಯದಿರ್ಪ ಹೊಲೆಯರವರು ।
ಗುರುವೆಂದು ಹೇಳಲು ಗುರುತಿಲ್ಲವೆಲ್ಲಿಯುಂ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೫ ॥

ಹುಲ್ಲು ಮೇವ ಪಶುವ ತಿನ್ನುವ ಮನುಜರ ।
ಹೊಲೆಯರೆಂದು ಪೇಳ್ವರವನಿ ಜನರು ।
ಹಂದಿ ಕೋಳಿ ತಿಂಬರವರತಿಪ್ರಾಜ್ಞರೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೬ ॥

ಚಂಡಾಲನೆಂದೇಕೆ ನಿಂದಿಸುತಿರ್ಪಿರಿ ।
ಒಡಲ ರಕ್ತಮಾಂಸವೆಲ್ಲವೊಂದೇ ।
ಅದರೊಳಗಡಗಿದವನ ಕುಲವಾವುದು ಪೇಳಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೭ ॥

ಹೆಚ್ಚುಕಡಿಮೆಯೆನುತ ಮನದೊಳು ಭಾವಿಸಿ ।
ಕುತ್ಸಿತವರಿಯದ ಮೂರ್ಖಜನರ ॥
ಮತ್ಸರದಿಂದಲಿ ಚಂಡಾಲರೆಂಬರು
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೮ ॥

ಹೊಲೆಯು ಹೊಲೆಯೆನುತ್ತೆ ನೀರೊಳು ಮುಳುಗುವರ್
ಹೊಲಸಿನಲ್ಲಿ ತನುವು ಮತ್ತೆ ಜನಿಸಿ ॥
ಹೊಲೆಯು ನಿಲುವ ಸ್ಥಳವೆ ಮನುಜನ ಜನ್ಮವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೧೯ ॥

ಹೊಲೆಯ ಹೊಲೆಯನಲ್ಲ ಧರೆಯೊಳು ನೋಡಲು
ಮಾತು ತಿರುಗಿಸದವ ಹೊಲೆಯನಲ್ತು ॥
ಅವನ ಹೊಲೆಯನೆನ್ನುವವನೆ ತಾಂ ಹೊಲೆಯನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೨೦ ॥

ಮಾದಿಗನೆಂದೊಡೆ ಬಹು ಹೀನನೆ  ರು ।
ಮಾದಿಗನಲ್ಲವೆ ಸುರರ ಮಾವ ॥
ಮಾದಿಗನ ಮಗಳರುಂಧತಿಯಲ್ಲವೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೨೧ ॥

ಮಾದಿಗನೆನೆ ಸಲ್ಲ ಮತ್ತೆ ವಸಿಷ್ಠಗೆ ।
ಮಾದಿಗನ ಪುತ್ರಿಯೇ ಸತಿಯುಳಲ್ಲಿ ॥
ಮಾದಿಗ ಗುಣವಿರೆ ದ್ವಿಜನು ತಾನೆಂತಾದ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೨೨ ॥

ಹೊಲೆಯ ಮುಟ್ಟಿದನೆಂದು ನೀರಿನೊಳ್ ಮುಳುಗುವರ್।
ಮೂಲಕರ್ಮದಿಂದ ಹೊಲೆಯನಾದ ॥
ಏಕೆ ತಿಳಿಯರಿವರು ಈ ನರಪಶುಗಳು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೨೩ ॥

ಹೊಲೆಯ ಮಾಂಸವ ತಿಂಬ ಮಹಿಯೊಳು ಜನರೆಲ್ಲ ।
ನೆಣವ ತಿಂಬರೊಂದೆ ಕುಲವದತ್ತೆ ॥
ಕುಲಗಳೆಲ್ಲ ಒಂದೆ ಕುಲವಾಗಿ ನೋಡಿರಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೨೪ ॥

---

## ಋಷಿಗಳ ಮೂಲ.

ಅಗಸಿತಿಗೆ ಹುಟ್ಟಿದನು ತಾಂ ।
ಬಗೆಯಲ್ಕಾರದನು ಪೇಳಲೇನಿನ್ನನ
ಜಗದೊಳಗೆಲ್ಲೆಡೆಯುಂ ಜನ ।
ರಗಣಿತಸಂಖ್ಯಾತರರಿತರಿದಹಂ ವೇಮಾ ॥ ೪೨೫ ॥

ಗಿಳಿಯುದರದಲ್ಲಿ ಶ್ರೀ ಶುಕಮುನಿಯುದಿಸುತ್ತೆ ।
ಪೆತ್ತೆ ಖರದೊಳವನು ಜಾತನಾದ ॥

ಇಂಥ ಋಷಿಯ ಕುಲವನೆಣಿಸಲು ಸಲ್ಲದು |
ವಿಶ್ವತೋಭಿರಾಮ ಕೇಳೊ ವೇಮಾ || ೪೨೬ ||

ಕೌಂಡನ್ಯನು ಮುಂಡೆಯ ಮಗ |
ಮಾಂಡವ್ಯನು ಕಪ್ಪೆಯುದರದೊಳು ಜನಿಸಿದ ತಾಂ ||
ಚಂಡಾಲಿ ಮತಂಗನು ತಾಂ |
ಪಿಂಡದೊಳುದ್ಭವಿಸಲಿಲ್ಲೆ ಧರೆಯೊಳು ವೇಮಾ || ೪೨೭ ||

---

## ಬ್ರಾಹ್ಮಣನಾರು ?

ಮಧ್ಯ ಘಟಕೆ ಬೂದಿ ಘನವಾಗಿ ಬಳಿದರುಂ |
ಅದರ ಕಂಪು ಒಳಗೆ ಅಡಗದೈದೆ ||
ಭುಜದಿ ದಾರವಿರಿಸೆ ಹೊಳಪಿನಿಂ ದ್ವಿಜನೇನು |
ವಿಶ್ವತೋಭಿರಾಮ ಕೇಳೊ ವೇಮಾ || ೪೨೮ ||

ಎಂಜಲೆಂಜಲೆನ್ನುತೀ ಬಾಯಿಯಿಂದಲೆ |
ವೇದವನ್ನು ನುಡಿವ ಹುಚ್ಚು ಜನರೆ ||
ಎಣಿಸಿ ನೋಡಲಿದುವೆ ತಾನೆಂಜಲಲ್ಲವೇ |
ವಿಶ್ವತೋಭಿರಾಮ ಕೇಳೊ ವೇಮಾ || ೪೨೯ ||

ಪರಧನಂಗಳಿಗೈದೆ ನೆರೆ ಕೈಯನೀಡುವರ್ |
ಸತ್ಯವಿಲ್ಲದಿರ್ಪ ಜಾರ ದ್ವಿಜರು ||
ದ್ವಿಜರೆಂದು ಪೇಳಲು ತೇಜವೇನಿರ್ಪುದು |
ವಿಶ್ವತೋಭಿರಾಮ ಕೇಳೊ ವೇಮಾ || ೪೩೦ ||

ತನ್ನ ಭ್ರಾತರೆಲ್ಲ ದಾನವ ಮಾಡಲು |
ತನಗೆ ಪುಣ್ಯವೆಂದು ಹೇಳೆ ಸಲ್ಲ ||
ತನ್ನ ಕಾಲು ಕಡಿಯಲನುಜನೇನಳುವನೇ |
ವಿಶ್ವತೋಭಿರಾಮ ಕೇಳೊ ವೇಮಾ || ೪೩೧ ||

ಭಾಗವತರೆಂದೊಡವರೆಂಥವರೊ ಜಗದಲ್ಲಿ ।
ಇದನು ತಿಳಿಯಲಾರರವನಿಜನರು ॥
ಆಡಿಪಾಡುವವರು ಭಾಗವತರಾಗುವರೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೩೨ ॥

ಪಿಂಡಗಳನು ಮಾಡಿ ಪಿತೃಗಳ ನೆನೆಯುತೆ ।
ಕಾಗೆಗಳಿಗಿಡುತಿರುವ ಕತ್ತೆಗಳಿರ ॥
ಹೇಲು ತಿಂಬ ಕಾಗೆ ಪಿತೃವಾಗಬಲ್ಲುದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೩೩ ॥

ಅಂಚು ಧೋತ್ರವನುಟ್ಟು ಅಂಚು ಪಾಗವ ಸುತ್ತಿ ।
ಸೃಷ್ಟಿ ವೈಷ್ಣವವಿದು ಭಯಪಡಿಪುದು ।
ಚಿಹ್ನಗಳಿಷ್ಟೆಯೇ ಶ್ರೀವೈಷ್ಣವನುಮಲ್ಲ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೩೪ ॥

ದಾರಕೊರಳೊಳಿರಿಸಿ ತನ್ನ ಶೂದ್ರತ್ವವು ।
ಹೋಯಿತೆಂದು ಪೇಳೆ ಬುದ್ಧಿ ಕಡಿಮೆ ॥
ಮನವು ನಿಲದೆ ದಾರವೇಂ ಬಣ್ಣ ತರುವುದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೩೫ ॥

ಸಂಧ್ಯ ಮಾಡಿದರೇನು ಜಪವ ಮಾಡಿದರೇನು ।
ವೇದಶಾಸ್ತ್ರಗಳನು ಓದಲೇನು ॥
ಭಕ್ತಿ ಇಲ್ಲದವನು ಬ್ರಾಹ್ಮಣನಲ್ಲವು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೩೬ ॥

ಬ್ರಾಹ್ಮಣಗಿಡಲಾಗಿ ಫಲವಿಹುದೆಂಬರು ।
ನಾಯಿಗಳ್ಗಿಡಲೇನು ಕೊರತೆಯಹುದು ॥
ಅಲ್ಲಿ ಇಲ್ಲಿ ಜೀವವೇಕವು ಜಗದೊಳು ॥
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೩೭ ॥

ಜಾತಿಜನಗಳೆಲ್ಲ ನೀತಿ ವಿದ್ಯೆಗಳಿಂದು |
ಜಾಣತನದೊಳೈದೆ ಮೆರೆಯುತಿರ್ಪರು ॥
ಬ್ರಾಹ್ಮಣರೇತಕೆ ಬ್ರಹ್ಮವ ತಿಳಿಯರು |
ವಿಶ್ವತೋಭಿರಾಮ ಕೇಳೊ ವೇಮಾ || ೪೩೮ ||

ಉತ್ಪತ್ತಿ ಶೂದ್ರನು ಉತ್ತಮೋತ್ತಮನೆಂತು |
ಸ್ತ್ರೀಯು ಶೂದ್ರಳನಿಶಮುವಸಿಯಲ್ಲಿ ॥
ತಾಯಿ ಶೂದ್ರಳಾಗಿ ತಾನೆಂತು ಬ್ರಾಹ್ಮಣ |
ವಿಶ್ವತೋಭಿರಾಮ ಕೇಳೊ ವೇಮಾ || ೪೩೯ ||

ನ್ಯಾಯವಲ್ಲ ಜಗದಿ ಪಂಚಾಂಗ ಹೇಳ್ವುದು |
ಕೊಂಚ ಬುದ್ಧಿಯಾದರಿಲ್ಲದವರು ।
ಬ್ರಹ್ಮವರಿಯದಿಂತು ಪೌರೋಹಿತವ ಮಾಡಿ |
ಧರೆಯ ಸುರರು ನಾವು ಎಂಬರ್ವೇಮಾ || ೪೪೦ ||

ದಾಸಯ್ಯನಾಕಬಹುದೈ ವೇಷನಿ ತಾಂ |
ಜಂಗಮಯ್ಯನಾಗಲು ಬಹುದೈ ||
ಲೇಶವು ಬ್ರಾಹ್ಮಣನಾಗುವ |
ಆಸೆಯು ತಾನಿಲ್ಲ ಜಗದಿ ಕೇಳೈ ವೇಮಾ || ೪೪೧ ||

ಕಾವು ಕಾವೆನುತ್ತ ಕಾಲಿದ್ದು ನುಡಿವರು |
ಕಾಗೆಯಂತೆ ಒದರ್ ಕಾಣದಿಹರು ॥
ಬ್ರಾಹ್ಮಣರಾದವರ್ ಬ್ರಹ್ಮನನರಿಯರು ।
ವಿಶ್ವತೋಭಿರಾಮ ಕೇಳೊ ವೇಮಾ || ೪೪೨ ||

ಜನನ ಕಾಲದಲ್ಲಿ ಜನಿವಾರವಿಲ್ಲವು |
ತನಗುಮಿಲ್ಲ ತನ್ನ ತಾಯಿಗಿಲ್ಲ ||
ನಡುವೆ ಧಾರ ಹಾಕೆ ನಗೆಗೀಡದಲ್ಲವೇ |
ವಿಶ್ವತೋಭಿರಾಮ ಕೇಳೊ ವೇಮಾ || ೪೪೩ ||

ಮುಂಜಿ ಬ್ರಾಹ್ಮಣರೆಲ್ಲ ಮುಂಜಿ ಮಂತ್ರಗಳಿಂದ ।
ಮುಂಜಿ ಮಾಳ್ಪೆವೆಂದು ಒದರಿಕೊಳುತ ॥
ಮುಸುರೆ ತಿಂಬ ಕಾಗಿ ಕಾವುಕಾನೆಂದಂತೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೪೪ ॥

ವಿಶ್ವವ ನಡೆಸುವ ವಿಶ್ವೇಶ್ವರನಿರಲ್ ।
ಬ್ರಾಹ್ಮಣರಿಗದೆಂತು ಘನತೆ ಬಂತು ॥
ವನದಿಹ ಕೋತಿಯು ವಸುಧೆಯನಾಳ್ವುದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೪೫ ॥

ಹಿಂಸೆಮಾಡದಿರುವುದೇ ಧರ್ಮವೆನ್ನುತೆ ।
ಹಿಂಸೆ ಮಾಳ್ಪರವನಿಸುರರು ಮತ್ತ ॥
ಸತ್ತ ಪಶುವ ತಿಂಬ ಚಂಡಾಲರೇ ಮೇಲು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೪೬ ॥

ಹೆಸರು ಸೋಮಯಾಜಿ ಬಹು ಸಿಂಹಬಲನು ತಾಂ ।
ಮೇಕೆಹೋತು ಹಿಡಿದುಕತ್ತುಮುರಿವ ।
ನಿಂತು ಕ್ರತುವಿನಿಂದ ಮುಕ್ತಿಯು ಬರುವದೇ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೪೭ ॥

ಸೋಮಯಾಜಿಯೆಂದು ಸೊಂಪಿನಿಂ ವೇಷವ ।
ಧರಿಸಿ ಮಾಂಸವೆಲ್ಲ ಸುಟ್ಟು ತಿಂಬ ॥
ದ್ವಿಜನೆಂದೊಡೆಂತವನಧಿಕನಾಗುವನಿಳೆಗೆ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೪೮ ॥

ವೇಮುಗಿಂತ ವಿಷವು ಹುಚ್ಚು ಕಳಿಂಗವು ।
ಹಾವಿಗಿಂತ ವಿಷವು ಪ್ರಥಮ ಶಾಖೆ ॥
ಶಾಖೆಗಿಂತ ವಿಷವು ಕರಿಯ ಹಾರುವನರಿಯ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೪೪೯ ॥

ವಿಪ್ರ ಶ್ರೇಷ್ಠರೆಂದು ವೇದಗಳೋದುತೆ ।
ಪ್ರಾಕೃತರನು ನೋಡಿ ಪರಿಹಸಿಸರು ॥
ಧರಣಿ ಸುರರಿಗಿಂತ ವಾಸನ ಮತ ಹೆಚ್ಚು ।
ವಿಶ್ವತೋಭಿರಾಮ ಕೇಳೊ ವೇಮಾ || ೪೫೦ ||

ತಾಯಿ ಮೊದಲು ಸೂಳೆ ಹೆಂಡತಿ ಪಂಚಮಳ್ ।
ತಾನು ಬ್ರಾಹ್ಮಣನದೆಂತು ಜಗದಿ ॥
ತಪಸಿನಿಂದ ದ್ವಿಜನು ಚರ್ಚಿಸೆ ಕುಲವೆಲ್ಲಿ ।
ವಿಶ್ವತೋಭಿರಾಮ ಕೇಳೊ ವೇಮಾ || ೪೫೧ ||

---

## ನಿಜವಾದ ಲಿಂಗವಂತರಾರು ?

ಅಂಗದಲ್ಲಿ ಲಿಂಗವತಿಯಾಗಿ ಕಟ್ಟುತೆ ।
ಲಿಂಗದಲ್ಲಿ ಭಕ್ತಿ ನಿಲಿಸಲಾರ ॥
ಮುಕ್ತಿಸಿಗದೆ ಕೊನೆಗೆ ಮೂರ್ಖನಾಗುವನಯ್ಯ ।
ವಿಶ್ವತೋಭಿರಾಮ ಕೇಳೊ ವೇಮಾ || ೪೫೨ ||

ಭಸ್ಮಧಾರಿಯು ನೋಡಿ ಪಾಪರೆಂಬರು ಮತ್ತೆ ।
ನಾಮಧಾರಿಯ ನೋಡಿ ನಗುವರವರು ।
ಭಸ್ಮನಾಮಗಳಿಗು ಪರಮಾತ್ಮನಾವನು ।
ವಿಶ್ವತೋಭಿರಾಮ ಕೇಳೊ ವೇಮಾ || ೪೫೩ ||

ಭವಿಗೆ ಸೂತ್ರದಲ್ಲಿ ಭರದಿ ಲಿಂಗವ ಕಟ್ಟಿ ।
ಭವಿಯು ಸುಟ್ಟು ಬೂದಿಯುವಗೆ ಬಳಿದು ।
ಭವಿಯ ಶಿವನ ತೆರದಿ ಭಾವಿಸಿ ತಿಳಿವುದು ।
ವಿಶ್ವತೋಭಿರಾಮ ಕೇಳೊ ವೇಮಾ || ೪೫೪ ||

ನರಕುಲದೊಳು ತಾಂ ಜನಿಸಿಯು ।
ನರಕುಲದೊಳು ತಾನು ಬೆಳೆದು ನರನಾಗಿಯು ತಾಂ ||
ನರಕುಲವನು ಛೀಯೆನುತಲಿ ।
ಹರಕುಲದೊಳು ಚರಿಸಲಾಗಿ ಹರನಹ ವೇಮಾ || ೪೫೫ ||

ಆಗ ಬಿಜ್ಜಳನು ಚಾಲುಕ್ಯರ ಮಾಂಡಲಿಕನಾಗಿ ಬನವಾಸಿಯಲ್ಲಿ ರಾಜ್ಯವಾಳುತ್ತಿದ್ದನು. ಜೈನರು ಅವನಲ್ಲಿಗೆ ಹೋಗಿ ದೂರು ಹೇಳಲು, ಜೈನರು ಬರಕೊಟ್ಟಿದ್ದ ಭಾಷಾ ಪತ್ರವನ್ನು ಅವನು ನೋಡಿ ಅವರ ದೂರನ್ನು ಕಡೆಗಣಿಸಿಬಿಟ್ಟು ಏಕಾಂತದ ರಾಮಯ್ಯನಿಗೆ ಏನೂ ಮಾಡ ಲಿಲ್ಲ.

**ಪೊಟ್ಟಲಕೆರೆಯಲ್ಲಿಯ ಘಟನೆಗಳು:—** ಪೊಟ್ಟಲಕೆರೆಯಲ್ಲಿ ಚಾಲುಕ್ಯಜಯಸಿಂಹ ರಾಜನು ೧೦೧೮ ರಿಂದ ೧೦೪೦ವರೆಗೆ ರಾಜ್ಯವಾಳಿದನು. ಅವನು ಜೈನಧರ್ಮದಂತೆ ನಡೆಯುವವನಾಗಿದ್ದನು. ಆದರೆ ಅವನ ಹೆಂಡತಿ ಯಾದ ಸುಗ್ಗಲೆಯು ಶಿವಶರಣನಾದ ದೇವರದಾಸಿಮಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದ್ದಳು. ಮುಂದೆ ದೇವರದಾಸಿಮಯ್ಯನು ರಾಜಧಾನಿ ಯಲ್ಲಿರುವಾಗ್ಗೆ ಜೈನರು ಅವನನ್ನು ಘಾತಿಸಬೇಕೆಂದು ಅನೇಕ ಉಪಾ ಯಗಳನ್ನು ಯೋಜಿಸಿದರು. ಆದರೆ ಅವೆಲ್ಲವೂ ನಿಷ್ಫಲವಾದವು. ಮುಂದೆ ದೇವರದಾಸಿಮಯ್ಯನಿಗೂ ಇತರ ಮತಾನುಯಾಯಿಗಳಿಗೂ ಅರಸನ ಸಮ್ಮುಖದಲ್ಲಿ ವಾದಗಳಾಗಲು ಅವುಗಳಲ್ಲಿ ದೇವರದಾಸಿಮಯ್ಯನು ಶಿವನು ವಿಶ್ವಗತನಾಗಿದ್ದಾನೆಂಬುದನ್ನು ಸಿದ್ಧಪಡಿಸಿದ್ದಲ್ಲದೆ ಆ ಬಗ್ಗೆ ಒಂದು ಪವಾಡ ವನ್ನು ಮಾಡಿದನು. ಆಗ ಪಟ್ಟಣದಲ್ಲಿದ್ದ ೭೦೦ ಬಸದಿಗಳು ಶಿವಾಲಯ ಗಳಾದವು. ಮತ್ತು ೨೦ ಸಾವಿರ ಜೈನರು ವೀರಶೈವ ದೀಕ್ಷೆಯನ್ನು ತೆಗೆದುಕೊಂಡರು. ಆದರೆ ಆ ಕಾಲದಲ್ಲಿ ಕಾಳಗವಾದದ್ದರ ಉಲ್ಲೇಖ ಗಳಿಲ್ಲ. ಅರಸನೂ ಅವನ ಹೆಂಡತಿಯೂ ದೇವರದಾಸಿಮಯ್ಯನನ್ನು ಪುರ ಸ್ಕರಿಸಿದ್ದರಿಂದ ಕಾಳಗವಾದಂತೆಯೂ ತೋರುವದಿಲ್ಲ.

**ಕಲ್ಯಾಣದ ಮೊದಲನೆಯ ಕಾಳಗ:—** ಕಲ್ಯಾಣದಲ್ಲಿ ಒಬ್ಬ ಜಂಗಮನಿಗೋಸ್ಕರ ಕಾಳಗವು ಸಂಭವಿಸಿತೆಂದು ಬಸವೇಶ್ವರನು ತನ್ನ ಒಂದು ವಚನದಲ್ಲಿ ಸ್ವತಃ ಹೇಳಿದ್ದಾನೆ. ಆ ವಚನವು ಯಾವು ದೆಂದರೆ:—

" ಅರಸು ವಿಚಾರ ಸಿರಿಯೂ ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು, ಕಲ್ಯಾಣ ಹಾಳಾಯಿತ್ತು ನೋಡಾ. ಒಬ್ಬ ಜಂಗಮನ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು, ಕೂಡಲ ಸಂಗಮ ದೇವ ನಿಮ್ಮ ಕಳವಳಿಕೆಗೆ "

ಇಲ್ಲಿ ಚಾಲುಕ್ಯರಾಯನಾರೆಂಬುದನ್ನು ಬಸವೇಶ್ವರನು ಸ್ಪಷ್ಟವಾಗಿ ಉಲ್ಲೇಖಿಸಿರುವದಿಲ್ಲ. ಈತನು ೧೧೫೦ ರಿಂದ ೧೧೬೫ ರ ವರೆಗೆ ಆಳಿದ ನೂರ್ಮಡಿ ತೈಲಪ ಅಥವಾ ತ್ರೈಲೋಕ್ಯಮಲ್ಲನಾಗಿರಬಹುದೆಂದು ತೋರುತ್ತದೆ. ಬಿಜ್ಜಳನು ೧೧೫೫ ರಿಂದ ೧೧೬೨ ವರೆಗೆ ಅವನಿಗೆ ಸಾಮಂತನಾಗಿ ಆಡಳಿತೆಯನ್ನು ವಹಿಸಿದ್ದನು. ಆದರೂ ಅವನು ಆಗ ಸರ್ವಾಧಿಕಾರಿಯಾಗಿ ರಾಜ್ಯವನ್ನು ತಾನೇ ನಡಿಸಿದ್ದನು. ಮತ್ತು ತೈಲಪನು ಹೆಸರಿಗೆ ಮಾತ್ರ ರಾಜನಾಗಿದ್ದನು. ಆದರೆ ೧೧೬೨ ತರುವಾಯ ೧೧೬೮ ವರೆಗೆ ಬಿಜ್ಜಳನು ರಾಜನಾಗಿ ರಾಜ್ಯವಾಳಹತ್ತಿದನು. ಮೊದಲು ರೇವಣಸಿದ್ಧೇಶ್ವರನೂ ಅವನ ತರುವಾಯ ಬಸವೇಶ್ವರನೂ ಬಿಜ್ಜಳನ ಆಸ್ಥಾನದಲ್ಲಿದ್ದು ಅವನಿಗೆ ಸಹಾಯುಮಾಡುತ್ತಬಂದರೆಂಬುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಈ ಕಾರಣಕ್ಕೋಸ್ಕರ ಚಾಲುಕ್ಯರಾಜನು ರೇವಣಸಿದ್ಧೇಶ್ವರ ಬಸವೇಶ್ವರರನ್ನೂ ಅವರ ಅನುಯಾಯಿಗಳಾದ ವೀರಶೈವರನ್ನೂ ಹಿಂಸಿಸುತ್ತಿರಬಹುದೆಂದು ಮೇಲಿನ ವಚನದಿಂದ ನಾವು ಊಹಿಸಬಹುದಾಗಿದೆ. ಇದರಿಂದ ಒಂದುಕಡೆಗೆ ರೇವಣಸಿದ್ಧೇಶ್ವರ ಬಿಜ್ಜಳರು ಮತ್ತು ಅವರಿಗೆ ಇದಿರಾಳಿಯಾಗಿ ಚಾಲುಕ್ಯರಾಜನು ಹೀಗೆ ಉಭಯ ಪಕ್ಷಗಳಲ್ಲಿ ಕಾಳಗವು ಕಲ್ಯಾಣದಲ್ಲಿ ಒಂದುಕಾಲದಲ್ಲಿ ಸಂಭವಿಸಿರಬಹುದು. ಇದರಲ್ಲಿ ಚಾಲುಕ್ಯರಾಜನು ಸೋತುಹೋಗಲು ಆಗ ಕಲ್ಯಾಣ ಪಟ್ಟಣವು ಹಾಳಾಗಿರಬೇಕು. ಮತ್ತು ಚಾಲುಕ್ಯರಾಜನು ಪದಚ್ಯುತನಾಗಿರಬೇಕು. ಈ ಕಾಳಗವನ್ನು ಬಸವೇಶ್ವರನು ಮೇಲಿನ ವಚನದಲ್ಲಿ ಉಲ್ಲೇಖಿಸಿರಬಹುದೆಂದು ತೋರುತ್ತದೆ. ಈ ಪ್ರಕಾರ ಚಾಲುಕ್ಯರಾಜನು ಪದಚ್ಯುತನಾದಬಳಿಕ ಬಿಜ್ಜಳನು ರಾಜ್ಯಭಾರವನ್ನು ವಹಿಸಿರಬೇಕೆಂದು ಈ ವಚನದಿಂದ ಕಂಡುಬರುತ್ತದೆ. ಆದ್ದರಿಂದ ಇದು ಶಿವಶರಣರೊಡನೆ ಆದ ಕಲ್ಯಾಣದ ಮೊದಲನೆಯ ಕಾಳಗವೆಂದು ನಾವು ಊಹಿಸುತ್ತೇವೆ.

**ಕಲ್ಯಾಣದಲ್ಲಿಯ ಘಟನೆಗಳು**:— ತೆಲುಗು ಜೊಮ್ಮಯ್ಯ, ಕೇಶಿರಾಜರು ಚಾಲುಕ್ಯ ರಾಜ್ಯವನ್ನು ೧೦೭೬ ರಿಂದ ೧೧೨೬ ವರೆಗೆ ಸುಮಾರು ೫೦ ವರ್ಷ ಅತ್ಯಂತ ವೈಭವದಿಂದ ಆಳಿದ ವಿಕ್ರಮಾದಿತ್ಯ ಅಥವಾ ಪೆರ್ಮಾಡಿರಾಯನಿಗೆ ಕೆಲವುಕಾಲ ಮಂತ್ರಿಗಳಾಗಿದ್ದರು. ಆದರೆ ಅವರ ಇದಿರಾಳಿಗಳ ವರ್ಚಸ್ಸಿನ ಮೂಲಕ ಅವರ ಅಮಾತ್ಯ ಪದವಿಯು ಬಹಳ

ದಿವಸ ಉಳಿಯಲಿಲ್ಲ. ಆದರೆ ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿ ಬಹು ಜಾಣತನದಿಂದ ರಾಜ್ಯಭಾರ ನಡಿಸುತ್ತಬಂದನು. ಅವನ ಕಾಲದಲ್ಲಿ ದೇಶದಲ್ಲಿದ್ದ ಅಸಂಖ್ಯ ಶಿವಶರಣರೂ ಜಂಗಮರೂ ಎಲ್ಲಕಡೆಯಿಂದ ಅವನ ಸನ್ನಿಧಿಯನ್ನು ಸೇರಿದರು. ಆಗ ಕಲ್ಯಾಣ ಪಟ್ಟಣದಲ್ಲಿ ಅನೇಕ ತರದ ಮತಭೇದಗಳೂ, ಮನಸ್ತಾಪಗಳೂ ಹೊಡೆದಾಟಗಳೂ ಸಂಭವಿಸುತ್ತಲೇ ಬಂದವು. ಆದರೆ ಬಸವೇಶ್ವರನು ಬಹು ಜಾಣತನದಿಂದ ಇವುಗಳನ್ನು ಸರಿಪಡಿಸುತ್ತ ತನ್ನ ವರ್ಚಸ್ಸನ್ನು ರಾಜ್ಯದಲ್ಲಿ ಕಾಯ್ದುಕೊಂಡು ರಾಜ್ಯವನ್ನಾಳುತ್ತಬಂದನು. ಇವುಗಳ ವಿವರಗಳನ್ನು ನಾವು ಮುಂದೆ ಬಸವೇಶ್ವರನ ಚರಿತ್ರೆಯಲ್ಲಿ ವಿಸ್ತರಿಸುವೆವು. ಮುಂದೆ ಹರಳಯ್ಯ ಮತ್ತು ಮಧುವಯ್ಯಗಳು ಬಿಜ್ಜಳನಿಂದ ಹಿಂಸೆಯನ್ನು ಹೊಂದಲಾಗಿ ಇನ್ನು ಶಾಂತತಾಯುಕ್ತ ರಾಜ್ಯಭಾರವು ನಡೆಯಲಾರದೆಂದು ಬಸವೇಶ್ವರನು ಭಾವಿಸಿ ಶರಣರ ಪಕ್ಷವನ್ನು ಪ್ರಬಲಗೊಳಿಸಬೇಕೆಂಬ ಉದ್ದೇಶವನ್ನು ತಾಳಿ ಸಿದ್ಧರಾಮೇಶ್ವರನು ವಾಸಿಸುತ್ತಿದ್ದ ಸೊನ್ನಲಿಗೆ ( ಸೊಲ್ಲಾಪುರ ) ಗೆ ಮೊದಲು ಬಂದನೆಂದು ಗ್ರಂಥಗಳಿಂದ ತಿಳಿಯುತ್ತದೆ. ಮುಂದೆ ಅವನು ಮಂಗಳವಾಡವಿದ್ದ ತರ್ದವಾಡಿ ನಾಡಿಗೆ ಬಂದು ವಾಸಿಸಿರಬಹುದು. ಯಾಕಂದರೆ ಇಲ್ಲಿ ಸಾಮಂತನಾಗಿ ಆಳುತ್ತಿದ್ದ ಬಿಜ್ಜಳನ ಮಗನಾದ ರಾಯಮುರಾರಿ ಸೋವಿದೇವನು ಬಸವೇಶ್ವರನಿಗೆ ವಿರೋಧಿಯಾಗಿರಲಿಲ್ಲ. ಅವನು ಬಸವೇಶ್ವರನಿಗೆ ಅನುಕೂಲನಾಗಿದ್ದನು. ಆದ್ದರಿಂದ ಬಸವೇಶ್ವರನು ಮಂಗಳವಾಡದಲ್ಲಿ ಕೆಲಕಾಲ ನಿಂತು ಮೊದಲು ಕರ್ಹಾಡದ ಶಿಲಾಹಾರನೊಡನೆ ಕಿಳ್ಳೀಗಾವಿ ಗ್ರಾಮದಲ್ಲಿದ್ದುಕೊಂಡು ಸಂಧಾನ ನಡಿಸಿ, ಆಮೇಲೆ ಕಡಪಟ್ಟಿಯಲ್ಲಿದ್ದುಕೊಂಡು ಜಮಖಂಡಿ ಮುಧೋಳ ಪ್ರಾಂತದಲ್ಲಿ, ಆಮೇಲೆ ಸ್ವಗ್ರಾಮವಾದ ಬಾಗೇವಾಡಿ, ಆಮೇಲೆ ಮುದ್ದೇಬಿಹಾಳಕ್ಕೆ ಸಮೀಪವಿರುವ ಕುಂಟೋಜಿ, ಈ ಗ್ರಾಮಗಳಲ್ಲಿ ನಿಂತು ತನ್ನ ಪಕ್ಷವನ್ನು ಬಲಪಡಿಸಲು ಯತ್ನಿಸಿದಹಾಗೆ ತೋರುತ್ತದೆ. ಅವನು ಈ ಸ್ಥಳಗಳಲ್ಲಿದ್ದದರಿಂದ ಅಲ್ಲಿ ಮಹತ್ವದ ಬಸವೇಶ್ವರನ ದೇವಾಲಯಗಳಾಗಿವೆ. ಆದರೆ ಬಸವೇಶ್ವರನ ಈ ಪ್ರಯತ್ನಗಳು ಸಾಧ್ಯವಾಗದೆ ಹೋಗಲು ಅವನು ಕಡೆಗೆ ಸಂಗಮಗ್ರಾಮಕ್ಕೆ ಬಂದು ಅಲ್ಲಿಯೇ ಸಮಾಧಿಸ್ಥನಾದನು. ಹರಳಯ್ಯ ಮಧುವಯ್ಯಗಳು ಹಿಂಸೆಯನ್ನು ಹೊಂದಿದಬಳಿಕ ಅವನು ಅಂಜಿಕೊಂಡು ಸಂಗಮಕ್ಕೆ ಓಡಿ ಹೋಗಿಲ್ಲ. ಅವನು ತನ್ನ ಪಕ್ಷವನ್ನು ದೇಶದಲ್ಲಿ ಬಲಪಡಿ

ಸಲು ಬಹಳ ಪ್ರಯತ್ನಿಸಿದ್ದಾನೆಂದು ನಮಗೆ ತೋರುತ್ತದೆ. ಅವನ ಅಂತ್ಯವು
ಹೇಗಾಯಿತೆಂಬುದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ. ಆದರೆ
ಅವನ ಸಮಾಧಿಯು ಮಲಾಪಹಾರೀ ನದಿಯು ಕೃಷ್ಣಾನದಿಗೆ ಕೂಡುವ
ಸ್ಥಳದಲ್ಲಿ ಒಂದು ದೊಡ್ಡ ಕಲ್ಲುಬಂಡೆ ( ಕರ್+ಪಡೆ=ಕಪ್ಪಡೆ, ದೊಡ್ಡ
ಪಡೆ ) ಇದ್ದು ಅದರಲ್ಲಿ ಒಂದು ಗವಿಯನ್ನು ಹೊಂದಿದ್ದು ಅಲ್ಲಿಯೇ ಬಸ
ವೇಶ್ವರನನ್ನು ಹೂಳಿದಹಾಗೆ ತೋರುತ್ತದೆ. ಈ ಗವಿಯ ಪ್ರವೇಶ
ದ್ವಾರವನ್ನು ಒಂದು ದೊಡ್ಡ ಕಲ್ಲಿನಿಂದ ಬಹು ಭದ್ರವಾಗಿ
ಮುಚ್ಚಿದ್ದುಂಟು. ಇದನ್ನು ನಾವು ಈಗಲೂ ಅಲ್ಲಿ ಕಾಣಬಹುದು. ಬಸ
ವೇಶ್ವರನು ಕಪ್ಪಡೆಯಲ್ಲಿ ಐಕ್ಯನಾದನೆಂದು ಯಾವಾಗಲೂ ವೀರಶೈವ
ಗ್ರಂಥಗಳಲ್ಲಿ ಉಲ್ಲೇಖಗಳು ಬರುತ್ತವೆ. ಈ ಕಪ್ಪಡೆಯು ಇದೇ ಇರ
ಬಹುದು. ಈ ಎಲ್ಲ ಸಂಗತಿಗಳ ಸವಿಸ್ತಾರವಾದ ವಿವರಗಳನ್ನು ನಾವು
ಮುಂದೆ ಬಸವೇಶ್ವರನ ಚರಿತ್ರೆಯಲ್ಲಿ ಕೊಡುವೆವು.

ಬಸವೇಶ್ವರನು ಪ್ರಚಾರಪಡಿಸುತ್ತಿದ್ದ ತತ್ವಗಳು ಈ ಆರಂಭ
ಕಾಲದಲ್ಲಿ ಜನತೆಯಲ್ಲಿ ಅಷ್ಟು ಪ್ರಬಲವಾಗಿ ಪ್ರಸಾರ ಹೊಂದಿದ್ದಿಲ್ಲೆಂದು
ತೋರುತ್ತದೆ. ಆದ್ದರಿಂದ ಅವನಿಗೆ ಜನತೆಯಿಂದ ಸಾಕಷ್ಟು ಬೆಂಬಲವು
ಈ ಕಾಲದಲ್ಲಿ ದೊರೆಯಲಿಲ್ಲವೆಂತಲೂ ಆಗಿನ ಸಾಮಂತರಾಜರಾದ ಶಿಲಾ
ಹಾರರು, ತೊರಗಲ್ಲು, ಬನವಾಸಿ ಮುಂತಾದ ನಾಡುಗಳ ಮಾಂಡಲಿಕ
ರಾಜರು ಬಲಿಷ್ಠನಾದ ಬಿಜ್ಜಳರಾಜನನ್ನು ಎದುರಿಸಲು ಧೈರ್ಯಮಾಡಿ
ಲ್ಲೆಂತಲೂ ನಾವು ಊಹಿಸುತ್ತೇವೆ.

**ಕಲ್ಯಾಣದ ೨ ನೇ ಕಾಳಗ:—** ಶಿವಶರಣರಾದ ಮಧುವರಸ
ಹರಳಯ್ಯಗಳನ್ನು ಬಿಜ್ಜಳನು ಘಾತಿಸಿದ್ದರಿಂದ ಕಲ್ಯಾಣ ಪಟ್ಟಣದಲ್ಲಿದ್ದ
ಶಿವಶರಣರು ಬಿಜ್ಜಳನನ್ನು ಕೊಲೆಮಾಡಬೇಕೆಂದು ನಿಶ್ಚಯಿಸಿದರು. ಈ
ಕಾರ್ಯವನ್ನು ಮಾಡಲು ಅವರು ಜಗದೇವ ಮಲ್ಲಿಬೊಮ್ಮಣ್ಣ ಇವ
ರನ್ನು ನಿಯಮಿಸಿದರು. ಆಗ ಅವರು ಬಿಜ್ಜಳನನ್ನು ಮುಚ್ಚುಮರೆ
ಇಲ್ಲದೆ ಬಹಿರಂಗವಾಗಿ ಕೊಂದುಹಾಕಿದರು. ಆಗ ಬಿಜ್ಜಳನ ಬೆಂಗಾವ
ಲಿಗರೊಡನೆ ಜಗದೇವ ಮಲ್ಲಿಬೊಮ್ಮಣ್ಣಗಳೂ ಅವರ ಜೋಡಿಗರೂ
ಕಾದಾಡುವ ಪ್ರಸಂಗವು ಉಂಟಾಯಿತು. ಆಗ ಚನ್ನಬಸವಣ್ಣನ ಅರ

ಮನೆಯಲ್ಲಿ ಗಾಯಮಾಡಿಕೊಂಡಿದ್ದ ಶಿವಶರಣರು ಅವರಿಗೆ ಸಹಾಯವಾಗಿ ಬಿಜ್ಜಳನ ದಂಡಿನೊಡನೆ ಯುದ್ಧವನ್ನು ಪ್ರಾರಂಭಿಸಿದರು. ಆದರೆ ಬಹು ಸಂಖ್ಯಾಕರಾಗಿದ್ದ ಬಿಜ್ಜಳನ ದಂಡಿನ ಮುಂದೆ ಶಿವಶರಣರು ಹಿಂದೆಗೆಯ ಬೇಕಾಯಿತು. ಆಗ ಕಲ್ಯಾಣಪಟ್ಟಣದಲ್ಲಿ ಎಲ್ಲೆಲ್ಲಿಯೂ ಕಾದಾಟಗಳು ಪ್ರಾರಂಭವಾದವು. ಈ ಸ್ಥಿತಿಯುಂಟಾಗಲು ಶಿವಶರಣರು ಕಲ್ಯಾಣವನ್ನು ತೊರೆದು ಹೊರಬೀಳಬೇಕಾಯಿತು. ಇದು ಕಲ್ಯಾಣದ ೨ ನೇ ಕಾಳಗವು.

**ಶ್ರೀಶೈಲಪ್ರಾಂತದಲ್ಲಿಯ ಕಾಳಗಗಳು:—** ಕಲ್ಯಾಣ ಪಟ್ಟಣದಲ್ಲಿ ಹೀಗೆ ಅನಾಹುತಗಳಾಗಲು ಅಲ್ಲಿ ನೆಲಿಸಿದ್ದ ಬಹುಜನ ಜಂಗಮರೂ ಶಿವಶರಣರೂ ಭದ್ರವಾದ ಶ್ರೀ ಶೈಲ ಪ್ರಾಂತದ ಕಾಡಿನಲ್ಲಿ ಹೋಗಿ ನೆಲಿಸಿದರು. ಇವರಿಗೆ ರೇವಣಸಿದ್ಧೇಶ್ವರನ ಪುತ್ರನಾದ ರುದ್ರಮುನಿಯು ಮೊದಲು ಮುಂದಾಳಾಗಿ ನಿಂತನು. ಅವನು ತನ್ನ ಶಿಷ್ಯನಾದ ಮುಕ್ತಿ ಮುನಿಗೆ "ಸಕಲ ದೇಶಗಳನ್ನು ಚರಿಸುತ್ತ ದುಷ್ಟಪರವಾದಿಗಳನ್ನು ಸಂಹರಿಸಿ ಶರಣರನ್ನು ರಕ್ಷಿಸು" ಎಂದು ಆಜ್ಞಾಪಿಸಿದನು. ಆಗ ಮುಕ್ತಿಮುನಿಯು ಅಜಾತಭಿಕ್ಷಾವರ್ತಿ ಎಂಬುವನಿಗೆ ಶ್ರೀಶೈಲದಲ್ಲಿ ಪಟ್ಟಗಟ್ಟಿ ತನ್ನ ಇನ್ನೊಬ್ಬ ಶಿಷ್ಯನಾದ ದಿಗಂಬರಮುಕ್ತಿ ಮುನಿಗೆ ನೀನೂ ಹೀಗೆಯೇ ಪರವಾದಿಗಳನ್ನು ಸಂಹರಿಸುತ್ತ ಹೋಗೆಂದು ಆಜ್ಞೆಯನ್ನಿತ್ತನು. ಈ ಮುಕ್ತಿಮುನಿಯ ವಂಶದಲ್ಲಿ ಕುಮಾರ ಚನ್ನಬಸವೇಶ್ವರನೆಂಬ ಇನ್ನೊಬ್ಬ ಪ್ರತಾಪಶಾಲಿಯು ಉದ್ಭವಿಸಲು ಅವನೂ ಕೂಡ ಶಿವಶರಣರ ರಕ್ಷಣೆಯಲ್ಲಿ ತೊಡಗಿದವನಾದನು. ಹೀಗೆ ಈ ಮಹಾನುಭಾವರೆಲ್ಲರು ಕೂಡಿಕೊಂಡು ಪರವಾದಿಗಳ ಕೂಡ ಶ್ರೀ ಶೈಲ ಪ್ರಾಂತದಲ್ಲಿ ಯುದ್ಧಗಳನ್ನು ಮಾಡುತ್ತ ಗಂಡಾಂತರದಲ್ಲಿದ್ದ ವೀರಶೈವ ಸಮಾಜವನ್ನು ರಕ್ಷಿಸಿದರು.

**ತೊರಗಲ್ಲು ಪ್ರಾಂತದಲ್ಲಿಯ ಕಾಳಗಗಳು:—** ಕಲ್ಯಾಣದ ೨ ನೇ ಕಾಳಗವಾದ ಬಳಿಕ ಕೆಲವರು ಶ್ರೀ ಶೈಲಕ್ಕೆ ಹೋಗಲು ಅವರ ಬಹು ಜನ ಶಿವಶರಣರೂ ಜಂಗಮರೂ ಚನ್ನಬಸವೇಶ್ವರ ಮಡಿವಾಳ ಮಾಚಿದೇವ ಇವರ ನೇತೃತ್ವದಲ್ಲಿ ಪಶ್ಚಿಮಕ್ಕೆ ತೊರಗಲ್ಲು ನಾಡಿಗೆ ಹೋಗುವವರಾದರು. ಈ ಕಾಲದಲ್ಲಿ ಚಾಲುಕ್ಯರ ರಾಜ್ಯದಲ್ಲಿ ಮಂಗಳವಾಡ, ಬನವಾಸಿ ಪ್ರಾಂತಗಳು ಹೇಗೆ ಮಹತ್ವದ ಪ್ರಾಂತಗಳಾಗಿದ್ದವೋ ಹಾಗೆಯೇ

ತೊರಗಲ್ಲು ನಾಡೂ ಒಂದು ಮಹತ್ವದ ಪ್ರಾಂತವಾಗಿತ್ತು. ಇದರಲ್ಲಿ ಈಗಿನ ಬೈಲಹೊಂಗಲ ಸವದತ್ತಿ ತಾಲೂಕುಗಳು ಸಮಾವೇಶವಾಗುತ್ತವೆ. ಇಲ್ಲಿಯ ಆಗಿನ ಮಂಡಲಾಧೀಶ್ವರನ ಸಹಾಯವನ್ನು ಬಯಸಿ ಈ ಪ್ರಾಂತಕ್ಕೆ ಶಿವಶರಣರು ಮೊದಲು ಆಗಮಿಸಿರಬಹುದೆಂದು ತೋರುತ್ತದೆ. ಬಿಜ್ಜಳನಿಗೆ ಸಿರಿಯಾದೇವಿ ಎಂಬ ಮಗಳಿದ್ದು ಅವಳನ್ನು ಅವನು ಎರೆಯಂಬರಗೆ ( ಯಲಬುರ್ಗಿ ) ಯ ಸಿಂದ ವಂಶದ ರಾಜನಾದ ಚಾವುಂಡರಾಜನಿಗೆ ಕೊಟ್ಟು ಲಗ್ನಮಾಡಿದ್ದನು. ಇವನೇ ಅಳಿಯ ಬಿಜ್ಜಳನು. ಬಿಜ್ಜಳನ ಮಗನಾದ ರಾಯಮುರಾರಿ ಸೋವಿದೇವನು ವೀರಶೈವರಿಗೆ ಅನುಕೂಲನಾಗಿದ್ದರಿಂದ ಅವನು ಶರಣರ ಕೂಡ ಯುದ್ಧ ಮಾಡಿಲ್ಲ. ಆದರೆ ಅಳಿಯನಾದ ಚಾವುಂಡರಾಯನು ಬಿಜ್ಜಳನ ಸೈನ್ಯಾಧಿಪತ್ಯವನ್ನು ವಹಿಸಿ ಶಿವಶರಣರನ್ನು ಬೆನ್ನಟ್ಟಿದ್ದಾನೆ. ಇದರಲ್ಲಿ ಅವನಿಗೆ ಜೈನರು ಸಹಾಯ ವಾಗಿದ್ದಾರೆ. ಉಭಯ ಪಕ್ಷಗಳಲ್ಲಿ ಈ ಪ್ರಾಂತದಲ್ಲಿರುವ ಕಡಕೋಳ, ಸತ್ತೀಗೇರಿ, ತಲ್ಲೂರು, ಮೊದಲೂರು, ಮುರಗೋಡ, ಇಂಚಲ, ಮೂಗಬಸವ, ಸಂಪಗಾವಿ, ನಾಗಳಾಪುರ, ಇಲ್ಲಿ ಹೋರಾಟಗಳಾಗುತ್ತ ಕಡೆಗೆ ಕಾದ್ರೋಳಿ ಎಂಬಲ್ಲಿ ತುಮುಲ ಯುದ್ಧವಾಯಿತು. ಅಳಿಯ ಬಿಜ್ಜಳನು ಈ ಕಾಳಗದಲ್ಲಿ ಶಿವಶರಣರತಂಡವನ್ನು ಪೂರ್ಣವಾಗಿ ಮುರಿಬಡಿಯಬೇಕೆಂದು ಇಚ್ಛಿಸಿದ್ದನು. ಆದರೆ ಅವನ ಈ ಪ್ರಯತ್ನಗಳು ನಿಷ್ಫಲವಾದವು. ಈ ಕಾಲದಲ್ಲಿ ಶಿವಶರಣರು ಕಾಳಗದಲ್ಲಿ ಅದ್ಭುತವಾಗಿ ಹೋರಾಡಿದರು. ಆದರೆ ಮಡಿವಾಳ ಮಾಚಿದೇವನು ಈ ಕಾಲದಲ್ಲಿ ಮರಣ ಹೊಂದಿರಬೇಕೆಂದು ನಮಗೆ ತೋರುತ್ತದೆ. ಅವನ ಸಮಾಧಿಸ್ಥಳವು ಹಿಪ್ಪರಗಿಯಾಗಿರದೆ ಈ ಭಾಗದಲ್ಲಿ ಸೊಗಲತೀರ್ಥದ ಪಕ್ಕಕ್ಕೆ ಕಾರೀಮನೆ ಎಂಬ ಗ್ರಾಮವಿದ್ದು ಅಲ್ಲಿ ಆಗಿರಬೇಕೆಂದು ಸ್ಥಾನಿಕ ಐತಿಹ್ಯಗಳಿವೆ. ಈ ಭಾಗದಲ್ಲಿ ದಟ್ಟವಾದ ಅಡವಿ ಇದೆ. ಇದರ ಆಶ್ರಯದಲ್ಲಿ ಶಿವಶರಣರು ಕಾಳಗಮಾಡಿದ್ದಾರೆ. ಇಲ್ಲಿಯೇ ಮಾಚಿದೇವನು ಅಂತ್ಯವನ್ನು ಹೊಂದಿದ್ದಾನೆ. ಮುಂದೆ ಕಾತರವಳ್ಳಿಯಲ್ಲಿ ತುಮುಲ ಯುದ್ಧವಾಗಲು ಅಲ್ಲಿ ಶಿವಶರಣರು ವೈರಿಗಳನ್ನು ಹಿಮ್ಮೆಟ್ಟಿಸಿದರು.

ಕಾತರವಳ್ಳಿಯ ಯುದ್ಧವಾದ ಬಳಿಕ ಶಿವಶರಣರ ಗುಂಪಿನಲ್ಲಿ ಎರಡು ಭಾಗಗಳು ಮಾಡಲ್ಪಟ್ಟವು. ಅವುಗಳಲ್ಲಿ ಒಂದು ಪಶ್ಚಿಮಕ್ಕೆ ಹಲ

ಸಿಯು ಕದಂಬರ ಪ್ರಾಂತದಲ್ಲಿರುವ ಕಕ್ಕೇರಿ, ಲಿಂಗನಮಠ, ಜಗಳಬೆಟ್ಟ ಇಲ್ಲಿಗೆ ಹೋಗಿ ಅಲ್ಲಿಂದ ಸಾಂಬ್ರಾಣಿ ಮಾರ್ಗವಾಗಿ ಮೆಲುಗೈಯಲ್ಲಾಪುರಕ್ಕೆ ಹೋಗಿರುತ್ತದೆ. ಈ ಸ್ಥಳಗಳಲ್ಲೆಲ್ಲ ಶಿವಶರಣರ ಕುರುಹುಗಳು ಈಗಲೂ ಇವೆ. ಇನ್ನೊಂದು ಭಾಗವು ತಡಕೋಡ, ಎತ್ತಿನಗುಡ್ಡ, ಇಲ್ಲಿಂದ ಧಾರವಾಡ, ಅಲ್ಲಿಂದ ಸತ್ತೂರು, ಅಮರಗೋಳ, ಉಣಕಲ್ಲ, ಮುಂದೆ ಕಲಘಟಗಿ ತಾಲೂಕಿನಲ್ಲಿರುವ ಹೊನ್ನೀಹಳ್ಳಿ, ತಂಬೂರು ಮಾರ್ಗವಾಗಿ ಮೆಲುಗೈಯಲ್ಲಾಪುರಕ್ಕೆ ಹೋಗಿರುತ್ತದೆ. ಈ ಸ್ಥಳಗಳಲ್ಲೆಲ್ಲ ಚನ್ನಬಸವೇಶ್ವರ ಮೊದಲಾದ ಶಿವಶರಣರ ಕುರುಹುಗಳು ಈಗಲೂ ಹೇರಳವಾಗಿ ದೊರೆಯುತ್ತವೆ. ಆಳಿಯ ಬಿಜ್ಜಳನ ದಂಡುಗಳು ಈ ಎಲ್ಲ ಸ್ಥಳಗಳಲ್ಲಿ ಶಿವಶರಣರನ್ನು ಬೆನ್ನಟ್ಟುತ್ತ ಅವರೊಡನೆ ಯುದ್ಧಮಾಡುತ್ತಲೇ ಬಂದಿರುತ್ತವೆ. ಹೀಗೆ ಈ ಪ್ರಾಂತಗಳಲ್ಲೆಲ್ಲ ಅನೇಕ ಕಾಳಗಗಳು ಸಂಭವಿಸಿರುತ್ತವೆ. ಈ ಕಾಲದಲ್ಲಿ ಚನ್ನಬಸವೇಶ್ವರ, ಕಿನ್ನರೀ ಬ್ರಹ್ಮಯ್ಯ, ಕೂಗಿನ ಮಾರಿತಂದ ಇವರು ಶಿವಶರಣರಿಗ ಮುಖ್ಯಸ್ಥರಾಗಿ ಕಾದಾಡುತ್ತ ಬಂದಿದ್ದಾರೆ.

**ಉಳಿವಿಯ ಕಾಳಗ:**—ಉಳಿವಿಯು ಇದ್ದ ಸ್ಥಳವು ಬಹುಬಿಕ್ಕಟ್ಟಿನದಾಗಿರುತ್ತದೆ. ಅದರ ಸುತ್ತಲೂ ಉನ್ನತವಾದ ಪರ್ವತಗಳು ಹಬ್ಬಿವೆ. ಅವುಗಳ ಮಧ್ಯದಲ್ಲಿ ಕಾಳೀನದಿ ಮತ್ತು ಕಿನ್ನರೀ ಬ್ರಹ್ಮಯ್ಯನ ಹೊಳೆ ಎಂಬ ಎರಡು ಹೊಳೆಗಳು ಹರಿಯುತ್ತವೆ. ಈ ಪ್ರದೇಶಕ್ಕೆ ಈಗ 'ಗುಂಡ ಫಾರೆಸ್ಟ' ಎಂಬ ಹೆಸರು ಇದ್ದು ಇದು ಅತ್ಯಂತ ಭೀಕರವಾದ ಅರಣ್ಯವಾಗಿದೆ. ಇದರ ಮಧ್ಯದಲ್ಲಿ 'ಮಹಾಮನೆ' ಗವಿಯು ಇದೆ. ಕಡಿದಾದ ಎರಡು ಪರ್ವತಗಳ ಮಧ್ಯದಲ್ಲಿ ಕಿನ್ನರೀ ಬ್ರಹ್ಮಯ್ಯನ ಹೊಳೆಯು ತಡಸಲು ತಡಸಲುಗಳಾಗಿ ಇಳಿಜಾರು ಪ್ರದೇಶದಲ್ಲಿ ಹರಿಯುತ್ತ ಬರುತ್ತದೆ. ಅದು ಗವಿಯ ದ್ವಾರದಿಂದ ೨೦೦ ಫೂಟು ಅಂತರದಲ್ಲಿ ಬರಲು ಅಲ್ಲಿ ಭೂಮಿಯನ್ನು ಅಗಿದು ಅದರ ಪ್ರವಾಹವನ್ನು ಗವಿಯ ದ್ವಾರಕ್ಕೆ ತಿರುವಿ ದ್ವಾರದಲ್ಲಿ ಅದುಬೀಳುವಂತೆ ಮಾಡಿದ್ದಾರೆ. ಈ ನೀರಿನಿಂದ ಈ ಗವಿಯ ಮುಂದೆ ಒಂದು ಅಗಳತವನ್ನು ಕಲ್ಪಿಸಿದಂತೆ ಆಗಿದೆ. ಇದರೊಳಗೆ ಬಿದ್ದ ನೀರು ಗವಿಯೊಳಗಿನ ಗೋಡೆಯಲ್ಲಿ ಎಡಕ್ಕೆ ಕೆಡಹಿದ ಒಂದು ತೂತಿನೊಳಗಿಂದ ಹಾಯ್ದು ಮುಖ್ಯ ಪ್ರವಾಹಕ್ಕೆ ಕೂಡುತ್ತದೆ. ಈ ತೂತನ್ನು

ನಾನು ಸ್ವತಃ ಪರೀಕ್ಷಿಸಿದ್ದು ಅದು ೩೧ ಫೂಟು ಅಗಲ ೪ ಫೂಟು ಎತ್ತರ ಇರುತ್ತದೆ. ಗವಿಯೊಳಗಿಂದ ನೀರಿನ ಪ್ರವಾಹವು ಅತ್ಯಂತ ಬಲವಾಗಿ ಹೊರಬೀಳುತ್ತಿದೆ. ಹೀಗೆ ಶಿವಶರಣರು ಮಹಾಮನೆ ಗವಿಯನ್ನು ಒಂದು ಬಹು ಭದ್ರವಾದ ಕೋಟೆಯಂತೆ ಮಾಡಿದ್ದಾರೆ. ಇಲ್ಲಿ ಒಬ್ಬಿಬ್ಬರು ಯೋದ್ಧರು ನಿಂತುಕೊಂಡಲ್ಲಿ ನೂರಾರು ಜನ ಸೈನಿಕರನ್ನು ಸುಲಭವಾಗಿ ತಡೆಯಬಹುದು. ಇಂಥ ಪ್ರದೇಶದಲ್ಲಿ ಬಿಜ್ಜಳನ ದಂಡಾಳುಗಳು ಶಿವಶರಣರನ್ನು ಮುತ್ತಿದ್ದಾರೆ. ಆದರೆ ಶಿವಶರಣರು ಅವರಿಗೆ ಮೊಗ ಹೂಗದೆ ಕಡೆಯವರೆಗೆ ಕಾದಾಡುತ್ತ ಇಲ್ಲಿಯೇ ದೇಹವಿಟ್ಟಿದ್ದಾರೆಂದು ನಾವು ಊಹಿಸುತ್ತೇವೆ. ಇವರಲ್ಲಿ ಚನ್ನಬಸವ, ಕೂಗಿನಮಾರಿತಂದೆ, ಕಿನ್ನರೀ ಬ್ರಹ್ಮಯ್ಯ ಇವರೇ ಮುಖ್ಯರಾಗಿರುತ್ತಾರೆ. ನಾಗಲಾಂಬಿಕೆಯು ಈ ಕಾಲದಲ್ಲಿ ಶರಣರೊಡನೆ ಇದ್ದು ಅವಳು ಯಾವಾಗಲೂ ತನ್ನ ಮಗ ಚನ್ನಬಸವನನ್ನು ಹಿಂಬಾಲಿಸುತ್ತ ಉಳವಿಯಲ್ಲಿ ದೇಹವಿಟ್ಟಿದ್ದಾಳೆ.

ಈ ಮಹಾಮನೆ ಗವಿಯು ಇದ್ದ ಎಡಕಿನ ಪರ್ವತ ಪ್ರದೇಶದ ಉನ್ನತ ಸ್ಥಾನದಲ್ಲಿ ಕಿನ್ನರೀ ಬ್ರಹ್ಮಯ್ಯನ ಸಮಾಧಿ ಇದೆ. ಇದರ ಮೇಲೆ 'ಕಿನ್ನರಯ್ಯ' ಎಂಬ ಹೆಸರುಳ್ಳ ಒಂದು ಶಿಲಾ ಶಾಸನವಿದೆ. ಅದನ್ನು ನಾನು ಕಣ್ಣಾರೆ ನೋಡಿದ್ದೇನೆ. ಈ ಸ್ಥಳದಿಂದ ಎಡಕ್ಕೆ ಸಾಲು ಸಾಲಾಗಿ ಕಲ್ಲು ಮಣ್ಣಿನಿಂದ ಕಟ್ಟಿದ ಅನೇಕ ಗುಂಪಿಗಳಿವೆ. ಅವುಗಳು ಸಮಾಧಿ ಸ್ಥಳಗಳೆಂದು ನನಗೆ ತೋರುತ್ತದೆ. ಇಷ್ಟೇ ಅಲ್ಲ, ಈ ಭಾಗದಲ್ಲಿ ಮಹಾಮನೆಯ ಗವಿಯು ಇದ್ದು ಅದರಮೇಲೆ ೬ ಫೂಟು ಎತ್ತರವಾದ ಒಂದು ಆಳವೇರಿ ಗೋಡೆಯು ಇದ್ದು ಅದನ್ನು ಈ ಕಂದರದ ಪಶ್ಚಿಮ ಉತ್ತರ ಭಾಗಗಳಲ್ಲಿ ಹಾಯಿಸಿ ನದಿಯ ದಂಡೆಯ ವರೆಗೆ ಪೂರ್ವಕ್ಕಿರುವ ಕೆಳಗಿನ ತಗ್ಗು ಪ್ರದೇಶದಲ್ಲಿ ಒಯ್ದಿದ್ದಾರೆ. ಹೀಗೆ ಈ ಭಾಗವೆಲ್ಲ ಅತ್ಯಂತ ಭದ್ರವಾದ ಕೋಟೆಯಂತೆ ಆಗಿದೆ. ಈ ಗೋಡೆಗಳು ಆತ್ಮ ರಕ್ಷಣೆಗಾಗಿ ರಚಿಸಿದವುಗಳೆಂಬುದು ಸ್ಪಷ್ಟವಿದೆ. ಆದರೆ ಯಾವಾಗ್ಗೆ ಇವು ನಿರ್ಮಿತವಾದುವೆಂಬುದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ. ಆದರೆ ಅವು ಬುದ್ಧಿ ಪುರಸ್ಸರವಾಗಿ ಕಟ್ಟಿದ ಗೋಡೆಗಳಾಗಿವೆ.

ಈಗಿನ ಮಹಾಮನೆ ಗವಿಯಲ್ಲಿ ೧೫೦-೩೦೦ ಜನರು ಮಾತ್ರ ಹಿಡಿಯಬಹುದು. ಕಲ್ಯಾಣವನ್ನು ಬಿಟ್ಟ ಸಾವಿರಾರು ಜನರಲ್ಲಿ ಇಷ್ಟು ಜನರು

ಗೋತ್ರ ಕಡೆಯುವರೆಗೆ ಉಳಿದು ಅವರು ಈ ಗುಹೆಯಲ್ಲಿ ಧರ್ಮ ರಕ್ಷಣೆಗಾಗಿ ಶತ್ರುಗಳೊಡನೆ ಹೋರಾಡುತ್ತ ತಮ್ಮ ಪ್ರಾಣವನ್ನು ಕೊಟ್ಟಿದ್ದಾರೆ.

ಈ ಪ್ರದೇಶವೆಲ್ಲ ಅತ್ಯಂತ ಭವ್ಯವಾದುದು. ಇದರ ಫೋಟೋ ತೆಗೆದುಕೊಳ್ಳಬೇಕೆಂದು ನಾನು ಬಹಳಸಾರೆ ಪ್ರಯತ್ನಿಸಿದೆನು. ಆದರೆ ಇದು ಬಹು ಖರ್ಚಿನ ಕಾರ್ಯವಾಗಿದೆ. ಆದ್ದರಿಂದ ನಾನು ಈ ಪ್ರಯತ್ನವನ್ನು ಬಿಟ್ಟು ಕೊಡಬೇಕಾಯಿತು. ಗವಿಯ ಮೇಲೂ ಸುತ್ತಲೂ ಶಿಲಾಶಾಸನಗಳಿವೆ ಎಂದು ನಾನು ಅನೇಕರ ಮುಖದಿಂದ ಕೇಳಿದ್ದೇನೆ. ಈ ಪ್ರದೇಶವನ್ನು ಸೂಕ್ಷ್ಮವಾಗಿ ಸಂಶೋಧಿಸುವದು ಬಹು ಅವಶ್ಯವೆಂದು ನಮಗೆ ತೋರುತ್ತದೆ.

**ವೀರಶೈವರಿಗೊದಗಿದ ವಿಪತ್ಕಾಲಃ—** ಉಳವಿಯ ಸಂಗ್ರಾಮದ ತರುವಾಯ ವೀರಶೈವರಿಗೆ ಅತ್ಯಂತ ಭೀಕರ ಕಾಲವು ಒದಗಿತೆಂಬುದು ಸ್ಪಷ್ಟವಿದೆ. ವೀರಶೈವ ಧರ್ಮಕ್ಕಾಗಿ ಅತ ಂತ ಶ್ರಮಿಸಿದಂಥ ] ಬಸವೇಶ್ವರ, ಚನ್ನಬಸವ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ, ಅಲ್ಲಮ ಪ್ರಭು, ಮಹಾದೇವಿಯಕ್ಕ, ಕಕ್ಕಯ್ಯ, ಇವರಲ್ಲಾರೂ ಈ ಕಾಲದಲ್ಲಿ ಉಳಿಯಲಿಲ್ಲ. ಶಿವಶರಣರು ಬಲಾಢ್ಯ ಶತ್ರುವಿನ ಮುಂದೆ ಹಿಂದೆಗೆಯಬೇಕಾಯಿತು. ಆದರೆ ಉಚ್ಚ ತತ್ವಗಳ ಪ್ರಚಾರದ ಪರಿಣಾಮಗಳು ಯಾವಾಗಲೂ ಸ್ಥಾಯಿಕವಾಗಿರುತ್ತವೆ. ಶಿವಶರಣರು ಹೀಗೆ ನಾಶ ಹೊಂದಿದರೂ ಅವರ ತತ್ವಗಳು ನಾಶಹೊಂದಲಿಲ್ಲ. ಜೈನ ಗ್ರಂಥಕಾರರು ಉಳವಿಯ ಸಂಗ್ರಾಮವನ್ನು ವರ್ಣಿಸುತ್ತ ತಾವು ಗೆದ್ದೆವೆಂದು ಬಹು ಆಢ್ಯತೆಯಿಂದ ಹೇಳಿಕೊಳ್ಳುವದುಂಟು. ಆದರೆ ಹೀಗೆ ವರ್ಣಿಸುತ್ತ ಅವರು ಈ ಸಂಗ್ರಾಮದ ತರುವಾಯ 'ದುಷ್ಟ' ಜಂಗಮರು ಎಲ್ಲಕಡೆಗೂ ಪಸರಿಸಿ ಬಸವನ ತತ್ವಗಳನ್ನು ಸಾರುತ್ತ ತಿರುಗಹತ್ತಿದರೆಂದು ಹೇಳುತ್ತಾರೆ. ಇದರಿಂದ ಶಿವಶರಣರ ತತ್ವಗಳು ಮುಳುಗದೆ ಅವುಗಳನ್ನು ಪ್ರಚಾರಗೊಳಿಸುವಂಥ ಬಹುಜನರು ದೇಶದಲ್ಲಿ ಹೊರಟರೆಂಬುದು ಸ್ಪಷ್ಟವಾಗುತ್ತದೆ. ಹೇಗೆ ಬಸವೇಶ್ವರನ ಕಾಲದಲ್ಲಿ ಅನೇಕ ವಚನಕಾರರು ಉಂಟಾದರೋ ಹಾಗೆಯೇ ಅನೇಕ ವಚನಕಾರರು ಅವನ ತರುವಾಯ ಎಲ್ಲಕಡೆಗೂ ಉಂಟಾಗಿ ಪ್ರಮು

ಥರ ತತ್ವಗಳನ್ನು ಹೆಚ್ಚಾಗಿ ಪ್ರಚಾರಪಡಿಸಹತ್ತಿದರೆಂದು ಕಂಡುಬರು ತ್ತದೆ. ಸತ್ವಶಾಲಿಗಳನ್ನು ಹಿಂಸಿಸಿದ್ದರ ಪರಿಣಾಮವು ಇದಾಗಿದೆ. ಅಷ್ಟ ರಲ್ಲಿ ಕೆಳಗೆ ಕಾಣಿಸಿದ ಘಟನೆಗಳು ದೇಶದಲ್ಲಿ ಸಂಭವಿಸಿದವು.

ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿಯು ಉಳಿವಿಯ ಸಂಗ್ರಾಮ ಕಾಲದಲ್ಲಿ ಕೆಲಕಾಲ ಉಳಿವಿಯಲ್ಲಿದ್ದು ಅಲ್ಲಿಯ ಶರಣರನ್ನು ಸಂದರ್ಶಿಸಿ ಕೂಡಲೆ ಕಲ್ಯಾಣಕ್ಕೆ ಹೋಗಿ ಅಲ್ಲಿಂದ ಶ್ರೀ ಶೈಲಕ್ಕೆ ಹೋದ ನೆಂದು ಶಿವಶರಣರ ಚರಿತ್ರೆಗಳಲ್ಲಿ ಉಲ್ಲೇಖಗಳಿವೆ. ಈ ಕಾಲದಲ್ಲಿ ಶ್ರೀಶೈಲ ಪ್ರದೇಶದಲ್ಲಿ ಶಿವಶರಣರು ಹೆಚ್ಚಿಗೆ ಜಯಶೀಲರಾಗಿದ್ದರು. ಆದ್ದರಿಂದ ಆಗ ಅಲ್ಲಿಗೆ ಬಂದ ರುದ್ರಮುನಿಯ ಪ್ರೇರಣೆಯಿಂದ ಅವರು ಮೊದಲು ಬಾಳೇಹಳ್ಳಿಗೆ ಹೋಗಿ ಅಲ್ಲಿ ಪರವಾದಿಗಳ ಕೂಡ ಯುದ್ಧ ವನ್ನು ಹೂಡಿ ಅದರಲ್ಲಿ ಜಯವನ್ನು ಸಂಪಾದಿಸಿದರು. ಇದೇ ಸಮ ಯದಲ್ಲಿ ಶಿವಶರಣರು ಪುಲಿಗೆರೆ, ಅಬ್ಬಲೂರು, ಮಾರುಡಿಗೆ, ಪಾನು ಗಲ್ಲು, ಅಲಂಪುರ ಮುಂತಾದ ಕಡೆಗೆ ಯುದ್ಧಗಳಲ್ಲಿ ಜಯವನ್ನು ಹೊಂದಿ ದವರಾಗಿದ್ದರು. ಈ ಗೆಲವುಗಳಿಂದ ತೊರಗಲ್ಲ ಪ್ರಾಂತ ಮತ್ತು ಉಳಿ ವಿಯ ಕಡೆಗೆ ಶಿವಶರಣರಿಗುಂಟಾದ ಸೋಲುಗಳು ಅವರ ಮೇಲೆ ಯಾವ ಪರಿಣಾಮಗಳನ್ನುಂಟು ಮಾಡಲಿಲ್ಲ. ಆದರೆ ಇಲ್ಲಿ ಶಿವಶರಣರಿಗೆ ಉಂಟಾದ ಹಿಂಸೆಗಳ ಮೂಲಕ ವೀರಶೈವರು ಮತ್ತಿಷ್ಟು ಕೆರಳಿದವರಾಗಿ ಹೆಚ್ಚು ತೀವ್ರ ತರವಾದ ಉಪಾಯಗಳನ್ನು ಕೈಕೊಂಡು ತಮ್ಮ ಧರ್ಮಪ್ರಸಾರ ಕಾರ್ಯ ಗಳಲ್ಲಿ ತೊಡಗಿದರೆಂದು ಶಿವಶರಣರ ಚರಿತ್ರೆಗಳಿಂದ ತೋರಿ ಬರುತ್ತದೆ.

**ಪೀಠಾಧಿಪತಿಗಳು** :— ಜಂಗಮರು ಉಳಿವಿಯ ಸಂಗ್ರಾಮದ ತರುವಾಯ ಎಲ್ಲಕಡೆಗೂ ಪಸರಿಸಿ ತಮ್ಮ ಪ್ರಚಾರಕಾರ್ಯಗಳನ್ನು ಕೈಕೊ ಳ್ಳುವಲ್ಲಿ ಅವರು ಮೊದಲು ನಾಲ್ಕು ಸ್ಥಳಗಳನ್ನು ತಮ್ಮ ಮುಖ್ಯ ಕೇಂದ್ರ ಗಳನ್ನಾಗಿ ಮಾಡಿದರೆಂದು ತೋರುತ್ತದೆ. ಅವು ಯಾವವೆಂದರೆ:—

ಉತ್ತರ ಕರ್ನಾಟಕದಲ್ಲಿ ಏಕೋರಾಮಾರಾಧ್ಯನು ಮುದನೂರ (ಚನ್ನ ಮುದ್ರಾಪುರ) ದಲ್ಲಿ ಇದ್ದುಕೊಂಡು ಈ ಕಡೆಗೆ ಅವನು ವೀರಶೈವ ಧರ್ಮವನ್ನು ವಿಸ್ತರಿಸಿದ್ದಾನೆ. ಮುದುನೂರು ಕಲಬುರ್ಗಿ ಜಿಲ್ಲೆಯಲ್ಲಿರು ತ್ತದೆ. ಇದು ೧ ನೇ ಕೇಂದ್ರವು.

ಬಾಳೇಹಳ್ಳಿಯಲ್ಲಿ ರುದ್ರಮುನಿಯ ಶಿಷ್ಯನಾದ ಮುಕ್ತಿಮುನಿಗೆ ಶಿಷ್ಯನಾದ ದಿಗಂಬರ ಮುಕ್ತಿಮುನಿ, ಆತನ ಶಿಷ್ಯರು ಕುಮಾರ ಚನ್ನಬಸವೇಶ್ವರ, ಅಜಾತಭಿಕ್ಷಾವರ್ತಿಗಳು ನೆಲಸಿ ವೀರಶೈವ ಧರ್ಮವನ್ನು ಪಶ್ಚಿಮ ಕರ್ನಾಟಕದಲ್ಲೆಲ್ಲ ವಿಸ್ತಾರಗೊಳಿಸಿದರು. ಇದು ಶಿವಶರಣರ ೨ ನೇ ಕೇಂದ್ರವು.

ಮಧ್ಯಕರ್ನಾಟಕವಾದ ಚಿತ್ರಕಲ್‌ದುರ್ಗ ಜಿಲ್ಲೆ, ಹರಪನಹಳ್ಳಿ ಮತ್ತು ಕೂಡ್ಲಿಗಿ ತಾಲೂಕುಗಳು ತುಮಕೂರ ಜಿಲ್ಲೆ ಇಲ್ಲಿ ಮರುಳಸಿದ್ಧನು ರೇವಣಸಿದ್ದೇಶ್ವರನಿಂದ ದೀಕ್ಷೆಯನ್ನು ಹೊಂದಿ ವೀರಶೈವ ಧರ್ಮದ ತಿರುಳನ್ನು ಈ ಕಾಲದಲ್ಲಿ ಪ್ರಚಾರಪಡಿಸಿದ್ದನೆ. ಬಳ್ಳಾರಿ ಜಿಲ್ಲೆಯಲ್ಲಿರುವ ಉಜ್ಜನಿಯೇ ಈತನ ಮುಖ್ಯಸ್ಥಾನವಾಗಿದೆ. ಇದು ವೀರಶೈವರ ೩ ನೇ ಕೇಂದ್ರವು.

ಪೂರ್ವ ಕರ್ನಾಟಕ ಮತ್ತು ಆಂಧ್ರದೇಶಗಳಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಪಂಡಿತಾರಾಧ್ಯನ ಹೆಸರಿನಿಂದ ಶಿವಶರಣರು ಶ್ರೀಶೈಲ ಪೀಠವನ್ನು ತಮ್ಮ ಕೇಂದ್ರವನ್ನಾಗಿ ಮಾಡಿಕೊಂಡು ಇದರ ಸುತ್ತಲಿನ ಪ್ರದೇಶಗಳಲ್ಲಿ ವೀರಶೈವ ಧರ್ಮವನ್ನು ವಿಸ್ತರಿಸಿದರು. ಇದು ಅವರ ೪ ನೇ ಕೇಂದ್ರವು.

ಕೇದಾರ ಮತ್ತು ಕಾಶೀಕ್ಷೇತ್ರಗಳು ಇವಾದರೂ ಸಿಂಹಾಸನ ಸ್ಥಳಗಳಾಗಿದ್ದು ಇಲ್ಲಿಂದಲೂ ಬಸವೇಶ್ವರನ ಕಾಲದಲ್ಲಿ ಧರ್ಮಪ್ರಸಾರ ಕಾರ್ಯಗಳು ನಡಿದಿವೆಂದು ಅನೇಕರ ತಿಳಿವಳಿಕೆ ಇದೆ. ಆದರೆ ಇಲ್ಲಿಂದ ಹೀಗೆ ಯಾವ ಕಾರ್ಯಗಳು ಜರಿಗಿದವು ಮತ್ತು ಯಾರಿಂದ ಎಂಬುದು ಏನೂ ತಿಳಿದುಬಂದಿಲ್ಲ. ಆದರೆ ಇಲ್ಲಿ ವೀರಶೈವರ ಮಹತ್ವದ ಮಠಗಳಿದ್ದು ಅವುಗಳಿಗೆ ರಾಜರಿಂದ ಬೇರೆ ಬೇರೆ ಕಾಲಗಳಲ್ಲಿ ಉಂಬಳಿಗಳು ಸಿಕ್ಕಿದ್ದು ಮಾತ್ರ ಕಂಡುಬಂದಿದೆ. ಆದರೆ ಕರ್ನಾಟಕದಲ್ಲಿ ಶಿವಶರಣರಿಗೆ ಒದಗಿದ ಘೋರ ಪ್ರಸಂಗಗಳಲ್ಲಿ ಬಹು ದೂರದಲ್ಲಿರುವ ಈ ಮಠಗಳಿಂದ ಅವರಿಗೆ ಯಾವ ಸಹಾಯವು ದೊರಕಿಲ್ಲೆಂದು ಕಂಡುಬರುತ್ತದೆ.

ಅಲ್ಲಮ ಪ್ರಭುವು ಬಸವೇಶ್ವರನಿದ್ದ ಕಾಲದಲ್ಲಿ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿದನು. ಆದರೆ ಕಲ್ಯಾಣದ ೨ನೇ ಯುದ್ಧವಾದ

ಬಳಿಕ ಅವನು ಕಲ್ಯಾಣವನ್ನು ಬಿಟ್ಟು ಶ್ರೀಶೈಲ ಪ್ರಾಂತಕ್ಕೆ ಹೋಗಿ ಅಲ್ಲಿಯೇ ಸಮಾಧಿಸ್ಥನಾದನು. ಅವನು ರುದ್ರಮುನಿ, ಮುಕ್ತಿಮುನಿ, ಮೊದಲಾದವರೊಂದಿಗೆ ಶ್ರೀಶೈಲದ ಕಾಳಗಗಳಲ್ಲಿ ಅಂಗವಹಿಸಿರುವದಿಲ್ಲ. ಆದರೆ ಅನಾದಿ ಗಣನಾಥ, ಆದಿ ಗಣನಾಥ ಎಂಬವರು ಅವನ ತರುವಾಯ ಕೆಲಕಾಲದ ನಂತರ ಶೂನ್ಯ ಸಿಂಹಾಸನಕ್ಕೆ ಅಧಿಪತಿಗಳಾದರೆಂತಲೂ ಅವ ರಾದರೂ ಅನೇಕ ಪ್ರಚಾರ ಕಾರ್ಯಮಾಡಿದರೆಂತಲೂ ಅವರ ಚರಿತ್ರೆ ಗಳಲ್ಲಿ ಹೇಳಿದೆ. ಆದರೆ ಆವರು ಉಳಿವಿಯ ಸಂಗ್ರಾಮದ ತರುವಾಯ ಕೆಲಕಾಲ ಗತಿಸಿದ ಬಳಿಕ ಇಂಥ ಕಾರ್ಯಗಳನು ಮಾಡಿದ್ದಾಗಿ ತೋರು ತ್ತದೆ. ಆದರೆ ಅವರು ಆರಂಭದ ಕಾಲದಲ್ಲಿ ಇರಲಿಲ್ಲ.

ಈ ಪ್ರಕಾರ ಶಿವಶರಣರು ನಾಲ್ಕು ಕೇಂದ್ರಗಳನ್ನು ಸ್ಥಾಪಿಸಿ ಕೊಂಡು ಮುಂದೆ ದೇಶದಲ್ಲಿ ಅವುಗಳಮೂಲಕ ಹೇಗೆ ತಮ್ಮ ಮತವನ್ನು ಬೆಳಿಸಿದರೆಂಬುದನ್ನು ತಿಳಿಯುವದು ಬಹು ಮಹತ್ವದ ವಿಷಯವಾಗಿದೆ. ಇದು ಕೆಳಗೆ ಹೇಳಲ್ಪಟ್ಟಿದೆ.

**ಮಠಗಳ ಸ್ಥಾಪನೆ:—** ಶಿವಶರಣರು ಮೊದಲು ಜಂಗಮರನ್ನೊ ಡಗೊಂಡು ಗ್ರಾಮಾಂತರಗಳಲ್ಲಿ ಮಠಗಳನ್ನು ಸ್ಥಾಪಿಸುತ್ತ ಹೋದದ್ದು ಕಂಡುಬರುತ್ತದೆ. ಉಳಿವಿಯ ಸಂಗ್ರಾಮದ ತರುವಾಯ ವಶರಣರ ದೇಶ ದಲ್ಲಿ ಜೀವಿಸಿರುವದು ಸಹ ಅವರಿಗೆ ಕಠಿಣವಾಯಿತು. ಆಗ ಅವರಿಗೆ ತಮ್ಮ ಮತ ತತ್ವ ಪ್ರಚಾರಕ್ಕೆ ಮತ್ತು ಆತ್ಮ ರಕ್ಷಣೆಗೆ ಕೆಲವೊಂದು ಸಹಾಯವು ಬೇಕಾಗಿದ್ದಿತು. ಆದರೆ ಅವರಿಗೆ ಬಸವೇಶ್ವರನಂಥ ಯಾವ ರಾಜಕೀಯ ವ್ಯಕ್ತಿಯು ಸಹಾಯಕ್ಕೆ ಉಳಿಯಲಿಲ್ಲ. ಇದಿರಾಳಿಗಳು ವೀರ ಶೈವರನ್ನು ನಾಶ ಮಾಡಲು ಎಲ್ಲಕಡೆಗೂ ಹಾತೊರೆಯುತ್ತಿದ್ದರು. ಆಗ ಶಿವಶರಣರು ಸ್ವಾವಲಂಬಿಗಳಾಗಿ ಹೋರಾಡುವ ಪ್ರಸಂಗವು ಉಂಟಾ ಯಿತು. ಆಗ ಅವರು ಸ್ವಾವಲಂಬಿಗಳಾದರು. ಅವರು ದೇಶದಲ್ಲೆಲ್ಲ ಮಠಗಳನ್ನು ಸ್ಥಾಪಿಸಿ ವೀರಶೈವ ಧರ್ಮವನ್ನು ಮತ್ತು ಸಮಾಜವನ್ನು ರಕ್ಷಿಸಿದರು.

ಶಿವಶರಣರು ಈ ಕಾಲದಲ್ಲಿ ಜನತೆಯ ಮನಸ್ಸನ್ನು ತಮ್ಮಕಡೆಗೆ ಮೊದಲು ಎಳೆದುಕೊಳ್ಳುವ ಕಾರ್ಯಗಳನ್ನು ಪ್ರಾರಂಭಿಸಿದರು. ಅವರು ವಚನಗಳನ್ನು ಸಾರುತ್ತ ಹಳ್ಳಿ ಹಳ್ಳಿಗಳಲ್ಲಿ ಅವುಗಳನ್ನು ಪ್ರಚಾರಮಾಡುವ

ಕಾರ್ಯವನ್ನು ಕೈಕೊಂಡರು. ಜೈನ ಗ್ರಂಥಕಾರರು ಹೀಗೆ ಅವರು ಮಾಡಿದರೆಂದು ಹೇಳುತ್ತಾರೆ. ಶಿವಶರಣರು ಕೆಲವೊಂದು ಗ್ರಾಮಕ್ಕೆ ಹೋದಬಳಿಕ ಅವರು ಜನರಿಗೆ ವಚನಗಳ ಮೂಲಕ ಮೊದಲು ಬೋಧಿಸುವರು. ಅವುಗಳ ವಿಶಾಲ ತತ್ವಗಳು, ವಿಶೇಷವಾಗಿ ಎಲ್ಲರೂ ಸಮಾನರೆಂಬ ಅವರ ಬೋಧೆಗಳು ಜನರ ಮನಸ್ಸನ್ನು ಹಿಡಿಯುವವು. ಇದರಿಂದ ಕೆಲವೊಂದು ಗ್ರಾಮದಲ್ಲಿ ವೀರಶೈವರಾಗಲು ಜನರು ಒಪ್ಪಲು ಅವರು ಅವರಿಗೆ ದೀಕ್ಷೆಯನ್ನು ಕೊಡುವರು ಮತ್ತು ತಮ್ಮ ಪ್ರಚಾರ ಕಾರ್ಯಕ್ಕೋಸ್ಕರ ಅಲ್ಲಿ ಒಂದು ಮಠವನ್ನು ಸ್ಥಾಪಿಸುವರು. ಆ ಮಠಕ್ಕೆ ಆ ಗ್ರಾಮದಲ್ಲಿಯ ವೀರಶೈವರೇ ಶಿಷ್ಯರು. ಹೀಗೆ ಜಂಗಮರೂ ಶಿವಶರಣರೂ ಗ್ರಾಮ ಗ್ರಾಮಗಳಲ್ಲಿ ಸಂಚರಿಸುತ್ತ ಮಠಗಳ ಮೂಲಕ ವೀರಶೈವ ಧರ್ಮವನ್ನು ಈ ಕಾಲದಲ್ಲಿ ದೇಶದಲ್ಲೆಲ್ಲ ಸ್ಥಾಪಿಸುತ್ತ ಹೋದರು.

ಶಿವಶರಣರು ಏರ್ಪಡಿಸಿದ ಮಠಗಳ ರಚನೆಯು ಅವರ ಜಾಣ್ಮೆಯನ್ನು ತೋರಿಸುತ್ತದೆ. ಇಂಥ ವ್ಯವಸ್ಥೆಯು ಜೈನ ಬೌದ್ಧರ ವಿಹಾರ ಮತ್ತು ಮಠಗಳಲ್ಲಿ ಸಹ ಕಂಡುಬರುವದಿಲ್ಲ. ಒಂದು ರಾಜ್ಯವನ್ನು ಕಟ್ಟಲು ಯಾವ ವ್ಯವಸ್ಥೆಯು ಬೇಕೋ ಅದನ್ನೆಲ್ಲ ಅವರು ಈ ಮಠಗಳಲ್ಲಿ ಇಟ್ಟಿದ್ದಾರೆ. ಮಠಗಳ ವ್ಯವಸ್ಥೆ ಹೇಗೆಂದರೆ:—

ಮಠಕ್ಕೆ ಅಧಿಪತಿಯೊಬ್ಬನಿದ್ದು ಅವನಿಗೆ ಪಟ್ಟಾಧಿಕಾರಿ ಅಥವಾ ಮಹಂತ ಎಂಬ ಹೆಸರು ಇದೆ. ಅವನಿಗೆ ಸಹಾಯಕನಾಗಿ ಒಬ್ಬ ಅಥವಾ ಅನೇಕ ಚರಂತಿಗಳು ಇರುತ್ತಾರೆ. ಇವರೆಲ್ಲರೂ ಜ್ಞಾನಿಗಳು. ಇವರು ಮಠದಲ್ಲಿದ್ದುಕೊಂಡು ಧರ್ಮ ಪ್ರಚಾರ ಮಾಡುವರು. ಇಂಥ ಪ್ರಚಾರ ಕಾರ್ಯ ಮಾಡುವಲ್ಲಿ ಇದಿರಾಳಿಗಳು ಮಠದ ಮೇಲೆ ದಾಳಿಯನ್ನು ಮಾಡಿ ಬೋಧೆಮಾಡುವವರನ್ನು ನಾಶಮಾಡುವ ಕಠಿಣ ಪ್ರಸಂಗಗಳು ಈ ಕಾಲಕ್ಕೆ ಉಂಟಾಗುತ್ತಿದ್ದವು. ಉಳಿವಿಯ ಕಾಳಗದ ತರುವಾಯ ಈ ಸ್ಥಿತಿಯು ಉಂಟಾಗಿತ್ತು. ಆಗ ಮಠಾಧಿಕಾರಿಗಳು ಕೆಲ ಸೈನಿಕರನ್ನು ಮಠದಲ್ಲಿ ಇಟ್ಟುಕೊಳ್ಳುತ್ತಿದ್ದರು. ಈ ಸೈನಿಕರಿಗೆ ಮಠಪತ್ತಿ (ಪತ್ತಿ = ಸೈನಿಕ) ಗಳೆಂಬ ಹೆಸರು. ಈ ಮಠಪತ್ತಿಗಳನ್ನು ಕಾಳಗಕ್ಕೆ ನಡಿಸಿಕೊಂಡು ಹೋಗುವವರು ಗಣಾಚಾರಿಗಳು. ವೀರಶೈವ ಸಿದ್ಧಾಂತದಲ್ಲಿ ಇದಿರಾಳಿಗಳು ವಿರೋ

ಧಿಸಿದಲ್ಲಿ ಅವರನ್ನು ಸದೆಬಡೆಯಬೇಕೆಂದು ಸ್ಪಷ್ಟ ಸಲಹೆಗಳು ಇವೆ. ಹೀಗೆ ಮಾಡುವದು ಗಣಾಚಾರವೆಂದು ಹೇಳಲ್ಪಡುತ್ತದೆ. ಗಣಾಚಾರಿಯು ಮಠಪತ್ತಿಗಳನ್ನು ಕಾಳಗಕ್ಕೆ ನಡಿಸಿಕೊಂಡು ಹೋಗುವನು. ಅವನಿಗೆ ಸಹಾಯಕರಾಗಿ ಕೆಲವು ಗಣಕುಮಾರರ ಏರ್ಪಾಡೂ ಮಠಗಳಲ್ಲಿದ್ದಿತು. ಇವರಲ್ಲದೆ ಸ್ಥಾವರವೆಂಬ ಮಠದ ಇನ್ನೊಬ್ಬ ಅಧಿಕಾರಿಯು ಇದ್ದು ಅವನು ಬಹುಶಃ ಗ್ರಾಮದ ಗೌಡನಾಗಿರುತ್ತಿದ್ದನು. ಅವನ ಮೂಲಕ ಮಠಾಧಿಕಾರಿಗಳು ಅಪ್ರತ್ಯಕ್ಷವಾಗಿ ರಾಜಕೀಯ ಬೆಂಬಲವನ್ನು ಸಹ ಪಡೆಯುತ್ತಿದ್ದರು. ಹೀಗೆ ಹಿಂದಿನ ಕಾಲದಲ್ಲಿ ಮಠಗಳ ವ್ಯವಸ್ಥೆ ಇದ್ದಿತು.

ಹೀಗೆ ಹಿಂದಿನ ಕಾಲದ ಮಠಗಳು ಕೇವಲ ಧರ್ಮಬೋಧೆ ಮಾತ್ರವಲ್ಲ, ಅವುಗಳ ಮೂಲಕ ವೀರಶೈವರು ಆತ್ಮರಕ್ಷಣೆಯನ್ನು ಸಹ ಮಾಡಿಕೊಂಡಿದ್ದಾರೆ. ಎಲ್ಲಾದರೂ ಪರವಾದಿಗಳು ವೀರಶೈವರನ್ನು ಹಿಂಸೆ ಮಾಡಿದುದು ತಿಳಿದ ಕೂಡಲೆ, ಸುತ್ತಲಿನ ಗ್ರಾಮಗಳಲ್ಲಿದ್ದ ಮಠಾಧಿಪತಿಗಳೂ ಮಠಗಳಿಗೆ ಸಂಬಂಧಿಸಿದ ಮಠಪತ್ತಿ ( ಕಾಲಾಳು ) ಗಳೂ ಗ್ರಾಮಗಳಲ್ಲಿದ್ದ ಭಕ್ತರೂ ಎಲ್ಲರೂ ಏಕಮತದಿಂದ ಮಿಲಿತರಾಗಿ ಯಾವಲ್ಲಿ ಇಂಥ ಹಿಂಸೆಗಳು ನಡೆದಿರುತ್ತವೆಯೋ ಅಲ್ಲಿಗೆ ಹೋಗಿ ಶತ್ರುಗಳ ಮೇಲೆ ಹೋಗಿ ಬೀಳುವರು. ಅವಶ್ಯತೋರಿದರೆ ಯುದ್ಧಮಾಡುವರು. ಹೀಗೆ ಉತ್ತರ ಕರ್ನಾಟಕ ಮತ್ತು ಮಧ್ಯ ಕರ್ನಾಟಕ ಪ್ರದೇಶಗಳಲ್ಲಿ ನಾವು ಹಿಂದೆ ವಿಸ್ತರಿಸಿದ ಪ್ರಕಾರ ಅನೇಕ ಕಾಳಗಗಳಾಗಿವೆ.

ಮಠಗಳ ಮೂಲಕ ಸಾಮಾನ್ಯ ಜನತೆಯಲ್ಲಿ ವೀರಶೈವ ಧರ್ಮವು ಮೇಲೆ ಹೇಳಿದಂತೆ ಪಸರಿಸಿತು. ಆಗ ಸಮಾಜದಲ್ಲಿ ಒಂದು ಪ್ರಬಲವಾದ ಸಾಮರ್ಥ್ಯವು ಉಂಟಾಯಿತು. ಆ ಸಾಮರ್ಥ್ಯದ ಮುಂದೆ ಬಿಜ್ಜಳನಂಥ ಬಲಾಢ್ಯ ಚಕ್ರವರ್ತಿಯ ರಾಜ್ಯಾಧಿಕಾರಿಗಳು ಏನನ್ನೂ ಮಾಡಲಾರದವರಾದರು. ಕರ್ನಾಟಕದಲ್ಲಿ ಅಲ್ಲಲ್ಲಿ ಪ್ರಬಲರಾದ ಸಾಮಂತ ರಾಜರು ಈ ಕಾಲಕ್ಕೆ ಆಳುತ್ತಿದ್ದರು. ಅವರು ಸವದತ್ತಿ ರಟ್ಟರು, ಹಲಸಿಯ ಮತ್ತು ಹಾನಗಲ್ಲಿನ ಕದಂಬರು, ಮೈಸೂರ ದೇಶದಲ್ಲಿ ನೋಣಂಬ ಪಲ್ಲವರು, ಸಾಂತರರು, ಮಲೆನಾಡಿನ ಮಲಪರು ಇವರೇ ಮುಖ್ಯರಾಗಿದ್ದರು. ಅವರಲ್ಲಿ ಅನೇಕ ರಾಜಮನೆತನಗಳು ಪರಧರ್ಮಿಗಳಾಗಿದ್ದರೂ

ಶಿವಶರಣರು ಪ್ರಸಾರಮಾಡುತ್ತಿದ್ದ ಧರ್ಮ ತತ್ವಗಳನ್ನು ಅವರೂ ಅವರ ಪ್ರಜೆಗಳೂ ಅಂಗೀಕರಿಸಿ ವೀರಶೈವರಾದುದು ಕಂಡುಬರುತ್ತದೆ. ಹೀಗೆ ಈ ಮಠಗಳ ಮೂಲಕ ದೇಶದಲ್ಲಿ ಒಂದು ಅದ್ಭುತ ಕ್ರಾಂತಿಯುಂಟಾಯಿತು. ಆಗ ಶರಣರಲ್ಲಿ ಇವನು ಸ್ಪೃಶ್ಯನು ಇವನು ಅಸ್ಪೃಶ್ಯನು, ಇವನು ಜಂಗಮನು, ಇವನು ಭಕ್ತನು ಇವನು ಈ ಜಾತಿಯವನು, ಅವನು ಆ ಜಾತಿಯವನು ಎಂಬ ಭೇದ ಭಾವಗಳು ಅಳಿದು ಹೋದವು. ಎಲ್ಲರೂ ಒಂದು ಗುಟ್ಟಾಗಿ ಪರಧರ್ಮಿಗಳೊಡನೆ ಹೋರಾಡಿದರು.

ಶಿವಶರಣರು ಮಾಡಿದ ಇಂಥ ಅದ್ಭುತ ಚಳವಳಿಯು ಹಿಂದುಸ್ಥಾನದ ಬೇರೆ ಯಾವ ಭಾಗದಲ್ಲಿಯೂ ಆದದ್ದು ಕಂಡುಬರುವದಿಲ್ಲ. ಬಸವೇಶ್ವರ, ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ ಕಕ್ಕಯ್ಯ ಇಂಥ ಮಹಾ ವಿಭೂತಿಗಳು ವೈರಿಗಳೊಡನೆ ಹೋರಾಡುತ್ತ ತಮ್ಮ ರಕ್ತವನ್ನು ಸೂರೆಮಾಡಿದ್ದರ ಪರಿಣಾಮವು ಇದಾಗಿದೆ.

ಹೀಗೆ ಕಾದಾಡಲಿಕ್ಕೆ ಈ ಧೈರ್ಯಶಾಲಿಗಳು ಈ ಕಾಲದಲ್ಲಿ ಹಿಂದೆಗೆಯಲಿಲ್ಲ. ಅವರ ಈ ವರ್ತನೆಯಿಂದ ನಾಡಿನಲ್ಲಿ ಒಂದು ಅದ್ಭುತ ಧರ್ಮ ಕ್ರಾಂತಿ ಯುಂಟಾಯಿತು.

ಶಿವಶರಣರ ಈ ಹೋರಾಟಗಳು ಉತ್ತರಕ್ಕೆ ಗೋದಾವರೀ ತೀರದಲ್ಲಿರುವ ಪರಿವಳಿಗೆ ಅಥವಾ ಪರಳಿಯಿಂದ ದಕ್ಷಿಣಕ್ಕೆ ತುಂಗಭದ್ರಾ ತೀರ ಪ್ರದೇಶದಲ್ಲಿದ್ದ ಬಾಳೇಹಳ್ಳಿ, ಹುಲಿಗೆರೆ ಮತ್ತು ಅಬ್ಬಲೂರು ಈ ಗ್ರಾಮಗಳ ವರೆಗೆ ಮತ್ತು ಪಶ್ಚಿಮಕ್ಕೆ ಬಾಳೇಹಳ್ಳಿ, ಉಳಿವಿ, ಮಂಗಳವಾಡಗಳಿಂದ ಪೂರ್ವ ಸಮುದ್ರ ತೀರಕ್ಕೆ ಸಮೀಪವಿರುವ ದ್ರಾಕ್ಷಾರಾಮ ಬೆಜವಾಡ ಈ ಪಟ್ಟಣಗಳ ವರೆಗೆ ಅನೇಕ ಕಡೆಗೆ ನಡೆದವು. ಇಲ್ಲಿ ಆಗಾಗ್ಗೆ ಧರ್ಮಯುದ್ಧಗಳು ಆಗಿವೆ. ಈ ಕಾಲದಲ್ಲಿ ಭಕ್ತಮಾಹೇಶ್ವರರು ಸುಸಂಘಟಿತರಾಗಿ ಅತ್ಯಂತ ಧೈರ್ಯ ಸಾಹಸಗಳಿಂದ ತಮ್ಮನ್ನು ಸಂರಕ್ಷಿಸಿಕೊಂಡರು. ಇಂಥ ಅದ್ಭುತ ವಾತಾವರಣದಲ್ಲಿ ವಚನ ವಾಙ್ಮಯವು ಬೆಳೆದಿರುತ್ತದೆ. ಇದರಿಂದ ವಚನಕಾರರ ನುಡಿಗಳಲ್ಲಿ ಒಂದು ಮಹತ್ವದ ಶಕ್ತಿಯು ಹೊರಹೊಮ್ಮುತ್ತಿರುವದನ್ನು ನಾವು ನೋಡುತ್ತೇವೆ.

ಈ ಭೀಕರವಾದ ಹೋರಾಟಗಳಲ್ಲಿ ಕಾದಾಡಿದ ಕೆಳಗೆ ಕಾಣಿಸಿದ ಶೂರರು ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತಾರೆ. ಕರ್ನಾಟಕದ

ಧಾರ್ಮಿಕ ಇತಿಹಾಸದಲ್ಲಿ ಅವರ ಹೆಸರುಗಳು ಚಿರಸ್ಥಾಯಿಯಾಗಿ ಉಳಿಯದೆ ಇರಲಾರವು.

ಬಸವೇಶ್ವರ, ನೀಲಾಂಬಿಕೆ, ಹಡಪದಪ್ಪಣ್ಣಗಳು ಮೊದಲನೆಯ ಆಘಾತದಲ್ಲಿ ಸಿಲ್ಕಿದವರಾಗಿ ಕೂಡಲಸಂಗಮ ಅಥವಾ ಕಪ್ಪಡಿಸಂಗಮದಲ್ಲಿರುವ ದೊಡ್ಡಪಡೆಯಲ್ಲಿ ಸಮಾಧಿಯನ್ನು ಹೊಂದಿದರು.

ತರುವಾಯ ಜಗದೇವ ಮಲ್ಲಿಬೊಮ್ಮಣ್ಣಗಳು ಬಿಜ್ಜಳನು ಶಿವಶರಣರಾದ ಹರಳಯ್ಯ ಮಧುವರಸರನ್ನು ಹಿಂಸಿಸಿದ್ದರ ಮೂಲಕ ಅವನನ್ನು ಘಾತಿಸಿದರು. ಅಂದಿನಿಂದ ಶಿವಶರಣರ ಧರ್ಮಯುದ್ಧವು ಪ್ರಾರಂಭವಾಯಿತೆಂದು ಹೇಳಬಹುದು.

ಮುಂದೆ ಮಡಿವಾಳಮಾಚಿದೇವ, ಚನ್ನಬಸವ, ಕಿನ್ನರೀ ಬ್ರಹ್ಮಯ್ಯ ಕೂಗಿನ ಮಾರಿತಂದೆ, ಕಕ್ಕಯ್ಯ, ನಾಗಲಾಂಬಿಕೆಯರು ಸಹಸ್ರಾರು ಶಿವಶರಣರನ್ನು ಕೂಡಿಕೊಂಡು ಅಳಿಯ ಬಿಜ್ಜಳ ಮತ್ತು ಜೈನರ ದಂಡಾಳುಗಳ ಕೂಡ ಯುದ್ಧಗಳನ್ನು ಅನೇಕ ಕಡೆಗೆ ಮಾಡುತ್ತ ಸಹ್ಯಾದ್ರಿಯ ಘೋರಾರಣ್ಯವನ್ನು ಪ್ರವೇಶಿಸಿ ಕಡೆಗೆ ಉಳವಿಯಲ್ಲಿ ದೇಹವಿಟ್ಟರು. ಅವರ ಸಮಾಧಿ ಸ್ಥಳಗಳು ಈಗಿನ ಬೈಲಹೊಂಗಲ, ಕಲಘಟಗಿ, ಖಾನಾಪುರ, ಹಲ್ಯಾಳ ಮತ್ತು ಯಲ್ಲಾಪುರ ತಾಲೂಕುಗಳಲ್ಲಿ ಪಸರಿಸಿರುತ್ತವೆ.

ಹೀಗೆ ಶಿವಶರಣರು ಚದುರಿಸಲ್ಪಟ್ಟ ಬಳಿಕ, ವೀರಶೈವ ಸಮಾಜಕ್ಕೆ ಅಳಿಗಾಲವು ಪ್ರಾಪ್ತವಾಯಿತೋ ಏನೋ ಎಂದು ಭಾಸವಾಗುವ ಪ್ರಸಂಗಗಳು ಒದಗಿದವು.

ಆಗ ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿಯು ಶಿವಶರಣರಿಗೆ ಮುಂದಾಳುವಾಗಿ ನಿಂತು ಯುದ್ಧಕ್ಕೆ ಎಲ್ಲರನ್ನು ಪ್ರೋತ್ಸಾಹಿಸಿದನು. ಅವನು ಶ್ರೀಶೈಲ ಪ್ರಾಂತದಲ್ಲಿ ಹೋರಾಡುತ್ತಿದ್ದ ಮುಕ್ತಿಮುನಿಗೆ ಸಹಾಯಕನಾಗಿ ಶಿವಶರಣರು ಅಲ್ಲಿ ಗೆಲ್ಲುವಂತೆ ಮಾಡಿದನು. ಮತ್ತು ಅಲ್ಲಿ ವೀರಶೈವರ ಸಿಂಹಾಸನವನ್ನು ಸ್ಥಿರಪಡಿಸಿದನು.

ಇಷ್ಟೇ ಅಲ್ಲ, ಅವನು ಶ್ರೀಶೈಲ ಪ್ರಾಂತದಿಂದ ಪಶ್ಚಿಮದ ಮಲೆನಾಡುಸೀಮೆಯಲ್ಲಿ ಹೋರಾಡುತ್ತಿದ್ದ ವೀರಶೈವರಿಗೆ ಸಹಾಯವನ್ನು ಸಲ್ಲಿಸಿ ಅವರು ಜಯವನ್ನು ಹೊಂದುವಂತೆ ಮಾಡಿ ಬಾಳೇಹಳ್ಳಿಯ ಪೀಠವು ಸ್ಥಿರವಾಗುವಂತೆ ಮಾಡಿದನು.

ಇದೇ ಕಾಲಕ್ಕೆ ವರದಾನಿ ಗುಡ್ಡವ್ವೆಯು ರಾಯಚೂರ ಜಿಲ್ಲೆ ಅಲಂಪುರದಲ್ಲಿ ವೈರಿಗಳನ್ನು ಸೋಲಿಸಿ ವೀರಶೈವ ಧರ್ಮವು ಪೂರ್ವ ಬಳ್ಳಾರಿ ಜಿಲ್ಲಾ ಮತ್ತು ಕಡಪಾ ಕರ್ನೂಲ ಪ್ರಾಂತಗಳಲ್ಲಿ ನೆಲೆಗೊಳ್ಳುವಂತೆ ಮಾಡಿದಳು.

ಮುಂದೆ ಸ್ವಲ್ಪ ದಿವಸಗಳಲ್ಲಿ ಪುಲಿಗೆರೆಯಲ್ಲಿ ಆದಯ್ಯನು ಮತ್ತು ಅಬ್ಬಲೂರಿನಲ್ಲಿ ಏಕಾಂತದ ರಾಮಯ್ಯನು ಪರವಾದಿಗಳನ್ನು ಸೋಲಿಸಿ ವೀರಶೈವ ಧರ್ಮವನ್ನು ಧಾರವಾಡ ಜಿಲ್ಲೆಯ ದಕ್ಷಿಣಭಾಗ ಮತ್ತು ಶಿವಮೊಗ್ಗ ಜಿಲ್ಲೆಯಲ್ಲಿ ಪ್ರತಿಷ್ಠಾಪಿಸಿದರು.

ಇದೇ ಕಾಲಕ್ಕೆ ಗಾರುಡಿಗೆಯ ನಾಚಯ್ಯ, ಕೋವೂರ ಬ್ರಹ್ಮಯ್ಯ ಬಿದರಕೋಟೆ (ಬೀದರ)ಯ ವೀರಸಂಗಯ್ಯ ಇವರು ವೈರಿಗಳನ್ನು ಸೋಲಿಸಿ ವಿಜಾಪೂರ ಮತ್ತು ಕಲಬುರ್ಗಿ ಜಿಲ್ಲೆಗಳಲ್ಲಿ ವೀರಶೈವ ಸಮಾಜದ ಮೇಲೆ ನಡೆಯುತ್ತಿದ್ದ ಅಘಾತಗಳನ್ನು ತಪ್ಪಿಸಿದರು.

ಪಂಡಿತಾರಾಧ್ಯನೂ ಅವನ ತರುವಾಯ ಅವನ ಶಿಷ್ಯರೂ ಗುಂಟೂರು ಗೋದಾವರಿ ಜಿಲ್ಲೆಗಳಲ್ಲಿ ಮತ್ತು ವರಂಗಲ್ಲ ಪ್ರಾಂತದಲ್ಲಿ ವೀರಶೈವರ ಮೇಲೆ ನಡೆಯುತ್ತಿದ್ದ ಹಿಂಸೆಗಳನ್ನು ತಪ್ಪಿಸಿದರು. ಆಗ ಅವರು ಅನೇಕ ಕಡೆಗೆ ವೈರಿಗಳೊಡನೆ ಕಾದಾಡುವ ಪ್ರಸಂಗಗಳು ಬಂದವು.

ಹೀಗೆ ರೇವಣಸಿದ್ಧೇಶ್ವರ, ದೇವರದಾಸಿಮಯ್ಯ, ಅಲ್ಲಮ ಪ್ರಭು, ಶಂಕರ ದಾಸಿಮಯ್ಯ, ಮಹಾದೇವಿಯಕ್ಕ, ಬಸವೇಶ್ವರ, ಸಿದ್ಧರಾಮೇಶ್ವರ ಈ ಮಹಾ ವಿಭೂತಿಗಳ ಮೂಲಕ ಪ್ರಸಾರ ಹೊಂದಿದ ಶಿವಶರಣರ ಸಂಸ್ಕೃತಿಗೆ ಮುಂದೆ ವಿಪತ್ಕಾಲವು ಪ್ರಾಪ್ತವಾಗಲು. ಅಂಥ ಸಮಯದಲ್ಲಿ ಮೇಲೆ ಹೇಳಿದ ಶಿವಶರಣರೂ, ಜಂಗಮವರ್ಗದವರೂ, ಭಕ್ತರೂ ಎಲ್ಲರೂ ಸುಸಂಘಟಿತರಾಗಿ ತಮ್ಮ ಧರ್ಮವನ್ನು ಕಾಪಾಡಿಕೊಂಡಿದ್ದಾರೆ.

ಆದರೆ ಕೆಲಕಾಲದ ಮೇಲೆ ವೀರಶೈವರಿಗೆ ಹೀಗೆ ಯುದ್ಧಮಾಡುವ ಪ್ರಸಂಗಗಳು ಉಳಿಯಲಿಲ್ಲ. ಯಾಕಂದರೆ ವೀರಶೈವ ಜನಾಂಗವು ಅಷ್ಟರಲ್ಲಿ ಎಲ್ಲ ಕಡೆಗೂ ಬಲವಾಗಿ ಬೆಳೆಯಿತು. ಅದರ ಸಂಖ್ಯೆಯು ದೇಶದಲ್ಲಿ ಹೆಚ್ಚಿದ ಹಾಗೆ, ವೀರಶೈವರನ್ನು ಯಾರೂ ಕೆಣಕಲಾರದವರಾದರು.

## ಮಠಾಧಿಕಾರಿಗಳ ಹೆಸರುಗಳಲ್ಲಿ ಬದಲಾವಣೆಗಳು

ಮಠಗಳಲ್ಲಿದ್ದ ಅಧಿಕಾರಿಗಳ ಹೆಸರುಗಳಲ್ಲಿ ಕೆಲವು ಬದಲಾವಣೆಗಳಾದದ್ದನ್ನು ನಾವು ಈಗ ಕಾಣುತ್ತೇವೆ. 'ಮಠಪತ್ತಿ' ಎಂಬ ಶಬ್ದವು ಹೋಗಿ 'ಮಠಪತಿ' ಎಂದಾಯಿತು. ಅವನು ಅಂತ್ಯ ಕ್ರಿಯೆಗಳನ್ನು ಈಗ ಮಾಡುವವನಾಗಿದ್ದಾನೆ. ಮಠಗಳಿಗೆ ಸೈನ್ಯಾಧಿಕಾರಿಯು ಅನವಶ್ಯಕವಾಗಹತ್ತಲು ಗಣಾಚಾರಿಯು ಹೆಸರಿಗೆ ಮಾತ್ರ ಉಳಿದನು. ಅವನು ಊರ ದೈವದವರನ್ನು ಸಭೆಗಳಿಗೆ ಕರೆತರುವ ಕಾರ್ಯವನ್ನು ಈಗ ಮಾಡುತ್ತಾನೆ. ಪಟೇಲನಾದ ಸ್ಥಾವರನಿಗೆ ಕೆಲವುಕಡೆ ಬಾಬುಗಳು ದೊರೆಯುತ್ತವೆ, ಕೆಲವುಕಡೆಗೆ ದೊರೆಯುವದಿಲ್ಲ. ಹೀಗೆ ಮಠಗಳ ವ್ಯವಸ್ಥೆಯಲ್ಲಿ ಕಾಲಕ್ಕನುಗುಣವಾಗಿ ಕೆಲವು ಬದಲಾವಣೆಗಳಾಗಿವೆ.

ಮಠಾಧಿಕಾರಿಗಳು ಬಿಕ್ಕಟ್ಟಿನ ಈ ಸಮಯದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ್ದರಿಂದ ಅನೇಕ ಕಡೆಗೆ ಅವರು ಬಹು ಬಲಶಾಲಿಗಳಾದರು. ಅಲ್ಲದೆ ಅವರಿಗೆ ಅಸಂಖ್ಯ ಶಿಷ್ಯ ಮನೆತನಗಳು ಉಂಟಾದವು. ಅವರ ಕೆಳಗೆ ಅನೇಕ ಮಹತ್ವದ ಮಠಗಳು ಸಹ ಸ್ಥಾಪಿಸಲ್ಪಟ್ಟವು. ಇಂಥ ಮಠಗಳಿಗೆ ಕಟ್ಟಿಮಠ, ಸಾವಿರದೇವರಮಠ, ಪಂಚಗ್ರಹಮಠ, ಎಂಬ ಹೆಸರುಗಳು ಉಂಟಾದವು.

## ಜಂಗಮರ ಜೀವನ ಕ್ರಮದಲ್ಲಿ ಬದಲಾವಣೆಗಳು

ಬಸವೇಶ್ವರನ ತರುವಾಯ ಜಂಗಮರ ಜೀವನ ಕ್ರಮದಲ್ಲಿ ಮಹತ್ವದ ಬದಲಾವಣೆಗಳಾದವು. ಜಂಗಮರು ಮೊದಲು ಕಾಶ್ಮೀರ ದೇಶದಿಂದ ದಕ್ಷಿಣದಲ್ಲಿ ರಾಮೇಶ್ವರದ ವರೆಗೂ ಯಾವಾಗಲೂ ಸಂಚಾರದಲ್ಲಿರುತ್ತಿದ್ದರು. ಅವರು ಶಿವಶಾಸ್ತ್ರಗಳನ್ನು ಬೋಧಿಸುತ್ತ ಪ್ರವಾಸಮಾಡುವರು.

ಆದರೆ ಬಸವೇಶ್ವರನ ತರುವಾಯ ಕರ್ನಾಟಕ ದೇಶದಲ್ಲೆಲ್ಲ ಅಸಂಖ್ಯ ಮಠಗಳುಂಟಾಗಲು ಆಗ ಜಂಗಮರು ಈ ಮಠಗಳಲ್ಲಿ ಅಧಿಕಾರಿಗಳಾಗಹತ್ತಿದರು. ಈ ಮಠಗಳಿಗೆ ಭಕ್ತರು ಬಹುತರವಾಗಿ ಭೂಸ್ವಾಸ್ಥ್ಯದ ವ್ಯವಸ್ಥೆ ಮಾಡಿದ್ದರಿಂದ ಜಂಗಮರು ಭಿಕ್ಷೆಯನ್ನು ಬೇಡುತ್ತ ದೇಶದಲ್ಲಿ ಸಂಚಾರ ಮಾಡುವದು ಅನವಶ್ಯಕವಾಯಿತು. ಶಿವಶರಣರು ತಮ್ಮ ವಚನಗಳಲ್ಲಿ ಜಂಗಮರು ಭಿಕ್ಷೆಯನ್ನು ಬೇಡದೆ ಕೆಲವೊಂದು ಕಾಯಕವನ್ನು ಮಾಡಿ ಜೀವಿಸಬೇಕೆಂದು ಪ್ರತಿಪಾದಿಸುತ್ತ ಬಂದಿದ್ದಾರೆ. ಆದ್ದರಿಂದ ಮಠಾಧಿಪತಿಗಳು ಕೆಲವೊಂದು ಉದ್ಯೋಗ ಮಾಡಿ ತಮ್ಮ ಜೀವನ ನಡಿಸಿದರೆ ಅದು ಹೀನ ವೃತ್ತಿಎಂದು ಈ ಕಾಲಕ್ಕೆ ಯಾರೂ ಭಾವಿಸಿರಲಿಲ್ಲ. ಇದರಿಂದ ಜಂಗಮರು ಸ್ವತಂತ್ರ ವೃತ್ತಿಯುಳ್ಳವರಾಗಲು ಶಕ್ಯವಾಯಿತು ಅ ರ ಗೆ ಬೇಕಾದಕಡೆಗೆ ಹೋಗಿ ತಮ್ಮ ಧರ್ಮವೃದ್ಧಿಯ ಕಾರ್ಯಗಳನ್ನು ಮಾಡಲಿಕ್ಕೆ ಸಂಧಿಯು ದೊರಕಿತು. ಇದರ ಉಪಯೋಗವನ್ನು ಅವರು ಪೂರ್ಣವಾಗಿ ಮಾಡಿಕೊಂಡರು. ಅವರು ಬೇಕಾದಲ್ಲಿಗೆ ಹೋಗುವರು, ವಚನಗಳನ್ನ ರಚಿಸುವರು, ಅವುಗಳನ್ನು ಸಾರುವರು, ಮಠಗಳಲ್ಲಿದ್ದು ಜನರಿಗೆ ಶಿಕ್ಷಣವನ್ನೂ ಕೊಡುವರು. ಅವರು ವಿದ್ವಾಂಸರಿದ್ದರೆ ಬಹುಜನರು ಅವರಲ್ಲಿಗೆ ಬಂದು ಅವರಿಂದ ಶಿಕ್ಷಣಹೊಂದುವರು. ಹೀಗೆ ಶಿಕ್ಷಣ ಕೊಡುವ ಮಠಾಧಿಪತಿಗಳಿಗೆ ಭಕ್ತರು ವಿಪುಲವಾಗಿ ಅನ್ನದಾನ ಮಾಡುವರು. ಇಂಥವುಗಳು ದಾಸೋಹ ಮಠಗಳೆಂದೆನಿಸಿಕೊಂಡವು. ಮಠದ ಶಿಷ್ಯರು ವಿದ್ಯಾರ್ಥಿಗಳ ಪೋಷಣೆಗಾಗಿ 'ಕೋರಾನ್ನ' ಭಿಕ್ಷೆಯನ್ನು ದೊರಕಿಸಿಕೊಂಡು ಬರುವರು. ಬ್ರಾಹ್ಮಣನಾದ ಬಿಬ್ಬಿ ಬಾಚಯ್ಯನು (ಶಿ. ಚ. ಭಾಗ ೨ ಪು. ೨೮೭) ಒಂದು ಬಂಡಿಯನ್ನು ಮಾಡಿಕೊಂಡು ಸುತ್ತಲಿನ ಗ್ರಾಮಗಳಿಂದ ಆಹಾರ ಪದಾರ್ಥಗಳನ್ನು ತಂದು ಈ ಬಗೆಯ ದಾಸೋಹ ಕಾಯಕ ಮಾಡುವನು. ಹೀಗೆ ಬಸವೇಶ್ವರನ ತರುವಾಯ ಜಂಗಮರು ವಿದ್ಯಾ ಪ್ರಸಾರದ ಮಹತ್ವದ ಕಾರ್ಯವನ್ನು ನಾಡಿನಲ್ಲಿ ಮಾಡುತ್ತಬಂದರು. ಇದರಿಂದ ವಚನಶಾಸ್ತ್ರವು ಮತ್ತಿಷ್ಟು ಬೆಳವಣಿಗೆಯನ್ನು ಹೊಂದಿತು. ಅಸಂಖ್ಯ ವಚನಕಾರರು ಉಂಟಾದರು. ವೀರಶೈವ ವಾಙ್ಮಯದ ಮಹತ್ವದ ಭಾಗಗಳು, ಅಂದರೆ ಸಾಂಗತ್ಯಗಳು, ಶತಕಗಳು ಮುಂತಾದವುಗಳು ಬಸವೇಶ್ವರನ ತರುವಾಯ ಈ ಕಾಲದಲ್ಲಿಯೇ ರಚಿಸಲ್ಪಟ್ಟಿರುತ್ತವೆ. ಆಗ ಮಠಾಧಿಕಾರಿಗಳು ಮಠಗಳಲ್ಲಿದ್ದುಕೊಂಡು ವಚನ

ಗಳನ್ನು ರಚಿಸುವದೂ ಇದ್ದವುಗಳ ನಕಲುಮಾಡುವದೂ ಅಥವಾ ಮಾಡಿ ಸುವದೂ ಈ ತೆರನ ಕಾರ್ಯಗಳನ್ನು ಮಾಡುವರು. ಇದರಿಂದ ವೀರ ಶೈವ ಮಠಗಳಲ್ಲಿ ಅಸಂಖ್ಯಾತ ಹಸ್ತಲಿಖಿತ ಗ್ರಂಥಗಳು ಸಂಗ್ರಹವಾಗ ಹತ್ತಿದವು. ಅವು ಈಗಲೂ ಅಲ್ಲಿ ದೊರಕುತ್ತವೆ.

ಅಲ್ಲದೆ ಮಠಾಧಿಪತಿಗಳು ಗ್ರಾಮದಲ್ಲಿ ಶುಭಾಶುಭ ಕಾರ್ಯಗ ಳನ್ನು ಭಕ್ತರಿಗಾಗಿ ನೆರವೇರಿಸುವರು. ಕರ್ನಾಟಕದಲ್ಲಿ ಈ ಕಾಲದಲ್ಲಿ ಪರನಾಡು ಮತ್ತು ಪರದೇಶಗಳ ಕೂಡ ದೊಡ್ಡ ವ್ಯಾಪಾರವು ನಡಿಯು ತ್ತಿದ್ದಿತು. ಇದರಲ್ಲಿ ಮುಖ್ಯ ಭಾಗವಹಿಸಿದವರು ವೀರಶೈವರೇ ಆಗಿದ್ದರು. ಇವರು ತಮ್ಮ ಪ್ರವಾಸಕಾಲದಲ್ಲಿ ಮಠಗಳ ಉಪಯೋಗವನ್ನು ಪೂರ್ಣ ವಾಗಿ ಮಾಡಿಕೊಳ್ಳಹತ್ತಿದರು. ಹೀಗೆ ಬಸವೇಶ್ವರನ ತರುವಾಯ ಮಠಗಳ ಸಂಖ್ಯೆಯೂ ಅವುಗಳ ಉಪಯುಕ್ತತೆಯೂ ದೇಶದಲ್ಲಿ ಬಹಳ ಬೆಳೆಯಲಾಗಿ ಜಂಗಮರ ಜೀವನ ಕ್ರಮದಲ್ಲಿ ಮೇಲೆ ಹೇಳಿದಂತೆ ಬಹ ಬದಲಾವಣೆಗಳಾದವು.

## ಜಂಗಮರು ವಿವಾಹಿತರಿರಬಹುದು.

ಮಠಾಧಿಕಾರಿಗಳು ಈ ಕಾಲಕ್ಕೆ ಅವಿವಾಹಿತರಾಗಿ ಉಳಿಯಬೇ ಕೆಂಬ ನಿರ್ಬಂಧವಿರಲಿಲ್ಲ. ಅವರು ವಿವಾಹಿತರಾಗುವದು ಅಥವಾ ಬಿಡು ವದು ಅವರ ಇಚ್ಛೆಯಮೇಲೆ ಅವಲಂಬಿಸಿತ್ತು. ಆದ್ದರಿಂದ ಮಠಾಧಿ ಕಾರಿಗಳೆಂದು ಹೆಸರುವಾಸಿಗಳಾದ ಎಡೆಮಠದ ನಾಗಿದೇವ, ನಿರ್ಲಜ್ಜ ಶಾಂತಯ್ಯ, ಸಕಳೇಶ ಮಾದರಸ, ರೇವಣಸಿದ್ಧೇಶ್ವರ, ಪಂಡಿತಾರಾಧ್ಯ, ವೇಮನಾರಾಧ್ಯ, ಇವರೆಲ್ಲರೂ ವಿವಾಹಿತರಾಗಿದ್ದರು. ಆದರೂ ಇದರಿಂದ ಅವರ ಧಾರ್ಮಿಕ ಉಚ್ಚಸ್ಥಾನಕ್ಕೆ ಎಷ್ಟು ಮಾತ್ರವೂ ಕುಂದುಂಟಾಗ ಲಿಲ್ಲ. ಆದರೆ ಜೈನ ಬೌದ್ಧರಲ್ಲಿ ಭಿಕ್ಷುಗಳು ಅವಿವಾಹಿತರಾಗಿ ಉಳಿಯ ಬೇಕೆಂಬ ನಿರ್ಬಂಧವಿದ್ದದರಿಂದ ಆ ಸಮಾಜಗಳಲ್ಲಿ ಕೆಲವು ಕಾಲದ ಮೇಲೆ ಅನೈತಿಕಾಚಾರವು ಬಹಳ ಬೆಳೆಯಿತು ಮತ್ತು ಆ ಸಮಾಜಗಳು ಬಹು ಬೇಗನೆ ಅವನತ ಸ್ಥಿತಿಯನ್ನು ಹೊಂದಿದವು. ಆದರೆ ವೀರಶೈವ ಸಮಾಜಕ್ಕೆ ಈ ಸ್ಥಿತಿಯು ಪ್ರಾಪ್ತವಾಗಲಿಲ್ಲ.

## ಭಕ್ತ ಜಂಗಮರಲ್ಲಿ ದುರಾಚರಣೆಗಳು.

ನಾವು ವಚನ ಶಾಸ್ತ್ರ ಗ್ರಂಥಗಳ ಪ್ರಕಟನೆಯಲ್ಲಿ ಮತ್ತು ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸುವಲ್ಲಿ ಅವುಗಳ ನಿರೂಪಣೆಯು ಶರಣರ ಶುದ್ಧ ನಡೆಗಳಿಗೆ ಮತ್ತು ಉಚ್ಚ ತತ್ವಗಳಿಗೆ ಪ್ರಾಧಾನ್ಯವನ್ನು ಕೊಡುತ್ತ ಬಂದಿದ್ದೇವೆ. ನಾವು ಅನಾಚಾರಗಳಿಗೆ ಯಾವತರದ ಸ್ಥಾನವನ್ನು ಕೊಟ್ಟಿರುವದಿಲ್ಲ. ಆದರೆ ಸಮಾಜವು ಎಂಥ ಉಚ್ಚ ಸ್ಥಿತಿಯನ್ನು ಹೊಂದಿದ್ದರೂ ಅದರಲ್ಲಿ ದೋಷಗಳು ತಲೆದೋರಹತ್ತುತ್ತವೆ. ಯಾಕಂದರೆ ಕೆಟ್ಟರು ಮತ್ತು ದುರ್ಜನರು ಎಲ್ಲಕಡೆಗೆ ಯಾವಾಗಲೂ ಇರುತ್ತಾರೆ. ಇಂಥ ಜನರು ಆ ಕಾಲದ ಮೇಲೆ ವೀರಶೈವ ಸಮಾಜದಲ್ಲಿದ್ದುದು ಶಿವಶರಣರ ಚರಿತ್ರೆಗಳಲ್ಲಿಯೂ ವಚನ ಗ್ರಂಥಗಳಲ್ಲಿಯೂ ನೋಡುತ್ತೇವೆ. ಇಂಥವರ ದುರ್ನಡೆಗಳಿಗೆ ನಮ್ಮ ಗ್ರಂಥಗಳಲ್ಲಿಯಾವಾಗಲೂ ಸ್ಥಾನ ಕೊಟ್ಟಿರುವದಿಲ್ಲ.

### ಜಾರತನ.

ವಚನಕಾರರು ಜಾರತನವನ್ನು ಯಾವಾಗಲೂ ನಿಷೇಧಿಸುತ್ತ ಬಂದಿದ್ದಾರೆ. ಲಿಂಗ ಭಕ್ತಿಯನ್ನು ಅವರು ಸ್ತ್ರೀ ಪುರುಷರ ಪ್ರೀತಿಗೆ ಹೋಲಿಸುತ್ತಾರೆ. ಇದರಲ್ಲಿ ಅವರು ಜಾರಿಣೀ ಸ್ತ್ರೀಯರ ಉದಾಹರಣೆಯನ್ನು ಎಂದೂ ತಕ್ಕೊಂಡಿಲ್ಲ. ಲಿಂಗಧಾರಣವು ಲಗ್ನವೆಂದು ತಿಳಿದು ಅದರ ವರ್ಣನೆಯನ್ನು ಅವರು ಮಾಡುವದುಂಟು. ಆದರೆ ಶಿವಶರಣರ ಚರಿತ್ರೆಗಳಲ್ಲಿ ಸೂಳೆಯರು ವೀರಶೈವ ಧರ್ಮವನ್ನು ಸ್ವೀಕರಿಸಿ ಅವರು ತಮ್ಮ ಸೂಳೆತನವನ್ನು ಜಂಗಮರು ಅಥವಾ ಭಕ್ತರೊಡನೆ ನಡಿಸುತ್ತಿದ್ದದರ ಉಲ್ಲೇಖಗಳು ಆಗಿಂದಾಗ್ಗೆ ದೊರೆಯುತ್ತವೆ. ಅನೇಕ ಪುರಾಣಗಳಲ್ಲಿ ವಿಟಜಂಗಮರ ಅಥವಾ ಮಿಂಡ ಜಂಗಮರ ಉಲ್ಲೇಖಗಳು ಇರುತ್ತವೆ. ಆದರೆ ಈ ರೀತಿಗಳು ಶಿವಶರಣರ ಆಚರಣೆಗೆ ವಿರೋಧವಾದವುಗಳು. ಆದರೂ ಕೂಡ ಸೂಳೆಯರು ಶಿವಶರಣರ ಮಾಲಿಕೆಯಲ್ಲಿ ಬಂದಿರುವದನ್ನು ನೋಡುತ್ತೇವೆ! ಈ ಸೂಳೆಯರ ಹೆಸರುಗಳು ಯಾವವೆಂದರೆ :—

ಸೂಳೆ ನಿಂಬಿಯಕ್ಕ, ಸೂಳೆ ಸಂಕಲದೇವಿ, ಸೂಳೆ ಚಾಮಲದೇವಿ, ಸೂಳೆ ಬೊಂತಾದೇವಿ, ಸೂಳೆ ವಚಿತಕಮಳವ್ವೆ, ಸೂಳೆ ಸೊಡ್ಡಳದೇವಿ,

ಸೂಳೆ ಬಾಚಲದೇವಿ, ಸೂಳೆ ಚೋಳಾದೇವಿ, ಸೂಳೆ ಸುಗ್ಗವ್ವೆ, ಸೂಳೆ ಪದ್ಮಲದೇವಿ, ಸೂಳೆ ಚೋಳಿಯಕ್ಕ, ಸೂಳೆ ವೀರಸಂಗವ್ವೆ, ಈ ಮೊದಲಾದವರು ಇದ್ದಾರೆ.

ಇಂಥ ಸೂಳೆಯರ ಸಹವಾಸ ಮಾಡಿದಂಥ ಅನೇಕ ಶಿವಶರಣರ ಚರಿತ್ರೆಗಳೂ ಇವೆ. ಇವರಲ್ಲಿ ಜೋಧರ ಮಾಯಣ್ಣ, ಮಿಂಡ ಸಂಗಯ್ಯ ಇವರು ಬರುತ್ತಾರೆ. ಹೀಗೆ ಜಾರತನವನ್ನು ಪ್ರೋತ್ಸಾಹಿಸಿದವರಲ್ಲಿ ಸಿಂಧು ಬಲ್ಲಾಳನು ಸಹ ಬರುತ್ತಾನೆ. ಇಂಥ ಚರಿತ್ರೆಗಳು ನಿಜವಾದವುಗಳೋ ಅಥವಾ ಕೃತಕತನದಿಂದ ಹಿಂದೆ ಜೋಡಿಸಿದವುಗಳೋ ಎಂಬುದನ್ನು ನಿರ್ಧರಿಸುವ ಗೊಡವೆಗೆ ನಾವು ಹೋಗದೆ ಇವು ತಿರಸ್ಕರಣೀಯವಾದವುಗಳು ಮತ್ತು ಉಲ್ಲೇಖಕ್ಕೆ ಅಯೋಗ್ಯವಾದವುಗಳೆಂದು ತಿಳಿದು ನಾವು ಇವುಗಳಿಗೆ ನಮ್ಮ ಗ್ರಂಥಗಳಲ್ಲಿ ಸ್ಥಾನವನ್ನು ಕೊಟ್ಟಿರುವದಿಲ್ಲ.

## ಚೌರ್ಯ

ಕೆಲವು ಶಿವಶರಣರು ಚೌರ್ಯವನ್ನು ಮಾಡಿದ ರೂ ಕೂಡ ಅವರಿಗೆ ಶಿವಶರಣರಲ್ಲಿ ಸ್ಥಾನವು ಉಂಟಾಗಿರುತ್ತದೆ. ಜನರು ಭಕ್ತರಿರಲಿ ಅಥವಾ ಭವಿಗಳಿರಲಿ, ಯಾರಿದ್ದರೂ ಅವರ ಮನೆಯಲ್ಲಿ ಕನ್ನವನ್ನು ಕೊರೆದು ಅವರ ದ್ರವ್ಯವನ್ನು ಅಪಹರಣ ಮಾಡುವದು ಯಾವಾಗಲೂ ಚೌರ್ಯವೆನಿಸಿಕೊಳ್ಳುತ್ತದೆ. ಈ ಕಾರ್ಯವು ಗಹ್ಯವಾದದ್ದು. ಆದರೆ ಚೌರ್ಯವನ್ನು ಮಾಡಿದ ಪಡಿಹಾರಿ ಬಸವಯ್ಯ, ಗುಂಡ ಬ್ರಹ್ಮಯ್ಯ, ಕನ್ನದ ಬ್ರಹ್ಮಯ್ಯ, ಪೆರ್ಮಾಡಿರಾಯ ಇವರು ಶಿವಶರಣರ ಮಾಲಿಕೆಯಲ್ಲಿ ಬಂದಿದ್ದಾರೆ. ಇದು ಒಂದುಕಾಲಕ್ಕೆ ಉಂಟಾದ ಸಮಾಜದ ಅವನತಿಯನ್ನು ತೋರಿಸುತ್ತದೆ. ಆದರೆ ಶಿವಶರಣರು ತಮ್ಮ ಉಕ್ತಿಗಳಲ್ಲಿ ಇಂಥ ವರ್ತನೆಯನ್ನು ಸಮರ್ಥನೆ ಮಾಡಿದ್ದು ಎಂದೂ ಕಂಡುಬರುವದಿಲ್ಲ. ಇಂಥ ಉಕ್ತಿಗಳು ಅಥವಾ ಕಥೆಗಳು ಎಲ್ಲಾದರೂ ಕಂಡುಬಂದರೆ ಅವು ಹಿಂದಿನಿಂದ ಸೇರಿಸಲ್ಪಟ್ಟವೆಂದು ನಾವು ತಿಳಿಯಬೇಕಾಗುತ್ತದೆ.

## ಭವಿಗಳ ಸಂಪರ್ಕ

ಬಸವೇಶ್ವರನ ಕಾಲದಲ್ಲಿ ಭವಿಯ ಸೇವೆಯನ್ನು ಕೆಲವೊಂದು ಧಾರ್ಮಿಕ ಸೇವಾಬುದ್ಧಿಯಿಂದ ಮಾಡಿದ್ದಾದರೆ ಅದು ದೋಷವೆಂದು

ಎಣಿಸಲ್ಪಡುತ್ತಿದ್ದಿಲ್ಲ. ಆದರೂ ಶಿವಶರಣರ ಚರಿತ್ರೆಗಳಲ್ಲಿ ಹಲವರು ಬನಿಯ ಸಂಪರ್ಕ ಮಾಡಿದಕೂಡಲೆ ಪ್ರಾಣ ತ್ಯಾಗಮಾಡಿದ್ದು ಕಂಡುಬಂದಿದೆ. ಆದರೂ ಇವರು ಶರಣರ ಮಾಲಿಕೆಯಲ್ಲಿ ಬಂದಿದ್ದಾರೆ. ವೀರ ಶಂಕರಯ್ಯ, ಪ್ರಸಾದಿ ದಾಸಯ್ಯ, ನಿಃಸಂಗದೇವ ಇವರೇ ಮೊದಲಾದವರು ಇಂಥವರಲ್ಲಿ ಬರುತ್ತಾರೆ. ಇದು ಆಚಾರದ ಅತಿರೇಕವೆಂಬರೇ ಹೇಳಬೇಕಾಗುತ್ತದೆ.

## ವ್ರತಭಂಗ

ಕೆಲವು ಶರಣರು ಕೆಲವೊಂದು ವ್ರತವನ್ನು ಇಟ್ಟುಕೊಂಡು ಅದಕ್ಕೆ ವ್ಯತ್ಯಯ ಬಂದಲ್ಲಿ ತಮ್ಮ ಪ್ರಾಣವನ್ನು ಕೊಟ್ಟಿದ್ದುಂಟು. ಇದು ಸಹ ಆಚಾರದ ಅತಿರೇಕವು. ಲಿಂಗಕ್ಕೆ ಧೂಪವನ್ನು ಸಮರ್ಪಿಸುವದು, ಚಂದನವನ್ನು ಅರ್ಪಿಸುವದು, ಒರತೆಯ ನೀರನ್ನು ಲಿಂಗಕ್ಕೆ ಉಪಯೋಗಿಸುವದು, ಗಂಧಲೇಪಿಸುವದು ಹೀಗೆ ವ್ರತಗಳನ್ನು ಶರಣರು ಇಟ್ಟುಕೊಂಡು ಅದಕ್ಕೆ ಭಂಗವಾದ ಕೂಡಲೆ ಅವರು ಪ್ರಾಣಾರ್ಪಣ ಮಾಡಿದ ಉದಾಹರಣೆಗಳಿವೆ. ಇವರು ಒರತೆಯ ಬೊಪ್ಪದೇವ, ಸೋಮವರ್ಮ, ಶಂಕಿದೇವ, ಅಣುಮೂರ್ತಿ, ಅರವಿಂದಯ್ಯ ಹೀಗೆ ಅನೇಕರು ಇದ್ದಾರೆ. ಇವರೆಲ್ಲರೂ ಹೀಗೆ ತಮ್ಮ ಪ್ರಾಣವನ್ನು ನೀಗಿದ್ದರಿಂದ ಇವರು ಶರಣ ಮಾಲಿಕೆಯಲ್ಲಿ ಸೇರಿಸಲ್ಪಟ್ಟಿದ್ದಾರೆ. ಇದಾದರೂ ಆಚಾರದ ಅತಿರೇಕವಾಗಿರುತ್ತದೆ. ಶಿವಶರಣರ ಚರಿತ್ರೆಗಳಲ್ಲಿ ಇಂಥ ಉದಾಹರಣೆಗಳು ಅನೇಕಾನೇಕ ಬಂದಿರುತ್ತವೆ. ಆದರೆ ವಚನಕಾರರು ತಮ್ಮ ವಚನಗಳಲ್ಲಿ ಶರಣರು ಕಾಯಕ ಮಾಡುವಲ್ಲಿ ಲಿಂಗದರ್ಶನ, ಗುರುದರ್ಶನ, ಮೊದಲಾದವೆಲ್ಲವನ್ನೂ ಬಿಡಬಹುದೆಂದು ಹೇಳಿದ್ದಾರೆ. ಇದೇ ನಿಜವಾದ ಶಿವಶರಣರ ನಡೆ ಎಂದು ನಮಗೆ ತೋರುತ್ತದೆ. ಇಂಥ ಕಥೆಗಳಿಗೆ ನಾವು ಶಿವಶರಣರ ಚರಿತ್ರೆ ಗ್ರಂಥಗಳಲ್ಲಿ ಸ್ಥಾನ ಕೊಟ್ಟಿಲ್ಲ. ಇಂಥ ನಡೆಗಳು ಆಚಾರದ ಅತಿರೇಕಗಳಾಗಿರುತ್ತವೆ.

## ಲಿಂಗ ಹೋದರೆ ಆತ್ಮಘಾತ ಮಾಡಿಕೊಳ್ಳುವದು.

ಅನೇಕರು ಲಿಂಗವು ಕಳೆದು ಹೋದರೆ ಆತ್ಮಘಾತಮಾಡಿಕೊಂಡಿದ್ದುಂಟು. ಇದು ತಪ್ಪುಮಾರ್ಗವೆಂದು ನಾವು ವಚನಶಾಸ್ತ್ರಸಾರ ಗ್ರಂಥದಲ್ಲಿ ವಚನಕಾರರ ಅನೇಕ ಉಕ್ತಿಗಳನ್ನು ಉದಹರಿಸಿ ಹೇಳಿದ್ದೇವೆ.

ಪ್ರಮಾದ ವಶಾತ್ ಹೀಗೆ ವ್ರತಭಂಗವು ಆದಲ್ಲಿ ಪ್ರಾಣಕಳೆದುಕೊಳ್ಳು ವದು ಆತ್ಮಘಾತ [illegible] ಕೊಳ್ಳುತ್ತದೆಂದು ಅವರು ಹೇಳಿದ್ದಾರೆ. ಶಿವಶರಣರು ಹೀಗೆ ಮಾಡದೆ ಉಂಟಾದ ಚ್ಯುತಿಯನ್ನು ಪರಿಹರಿಸಿಕೊಂಡು [illegible] ಮೊದಲಿನ ವ್ರತವನ್ನು ಪಾಲಿಸುತ್ತ ಹೋಗುವದೇ [illegible] ಯೋಗ್ಯವೆಂ[illegible]ದು ಹೇಳುತ್ತಾರೆ.

## ಸ್ಥಾವರ ದೇವತೆಗಳ ಪೂಜೆ.

ಶಿವಶರಣರ ತತ್ವಗಳ ಪ್ರಕಾರ ಸ್ಥಾವರ ಲಿಂಗಗಳನ್ನೂ ಇತರ ದೇವತೆಗಳನ್ನೂ ವೀರಶೈವರು ಎಂದೂ ಪೂಜಿಸಕೂಡದು. [illegible]ದರೆ ಉಳಿವಿಯ ಸಂಗ್ರಾಮದ ತರುವಾಯ ಜಂಗಮರು ಜನತೆಯಲ್ಲಿ ದೊಡ್ಡ ಪ್ರಚಾರಕಾರ್ಯಮಾಡಿದ್ದರಿಂದ ಬಹುಜನರು ವೀರಶೈವರಾದರು. ಅವರಲ್ಲಿ ಮೊದಲಿನ ಪಾಶುಪತರೂ, ಕಾಳಾಮುಖರೂ, ದೇವಾಲಯಗಳ ಅರ್ಚಕರೂ ಕೂಡ ಇದ್ದರು. ಇವರು ತಮ್ಮ ಮಹತ್ವದ ದೇವಾಲಯಗಳಲ್ಲಿ ಅರ್ಚನೆ, ಪೂಜೆ ಮೊದಲಾದವುಗಳನ್ನು ಕೂಡಲೆ ಬಿಟ್ಟು ಕೊಡುವದು ಅವರಿಗೆ ಆಗಲಿಲ್ಲ. ಅವರಂತೆಯೇ ಸಾಮಾನ್ಯ ಜನರೂ ಕೂಡ ವರ್ತಿಸಹತ್ತಿದರು. ಅವರೂ ಸ್ಥಾವರ [illegible]ರನ್ನು ಬಿ[illegible]. ಹೀಗೆ ಸ್ಥಾವರಲಿಂಗಗಳ ಮತ್ತು ಇತರ ದೇವತೆಗಳ ಪೂಜೆಯು ಪುರಾತನ ಕಾಲದಿಂದ ಈ ವರೆಗೂ ದೇಶದಲ್ಲಿ ನಡೆದಿರುತ್ತದೆ. ಆದರೆ ಹೀಗೆ ವರ್ತಿಸುವದು ಷಟ್‌ಸ್ಥಲ ಮಾರ್ಗವಲ್ಲ. ವೀರಶೈವರು ಇಷ್ಟಲಿಂಗ ಒಂದನ್ನೇ ಇಟ್ಟುಕೊಂಡು ಅದರ ಮೂಲಕ ತಮ್ಮಲ್ಲಿ ತ್ರಿಲಿಂಗ, ಷಡ್‌ಲಿಂಗಗಳನ್ನು ಜಾಗ್ರುತಪಡಿಸಿಕೊಳ್ಳತಕ್ಕದ್ದು. ಇದೇ ಅವರಿಗೆ ಯುಕ್ತಮಾರ್ಗವಾಗಿರುತ್ತದೆ. ಆದರೆ ಸ್ಥಾವರ ಲಿಂಗಗಳು [illegible] ಸಂಬಂ[illegible] ವುಗಳೆಂದು ಭಾವಿಸಿ ಬಹುಜನರು ಅವುಗಳಿಗೆ ಮನ್ನಣೆ ಕೊಡುತ್ತ ಬಂದಹಾಗೆ ತೋರುತ್ತವೆ.

## ಮಾಂಸಾಹಾರ

ವ[illegible] ಬೋಧೆಯು ಬಸ[illegible]ರ [illegible]ರುವಾಯ ನಾಡಿನಲ್ಲಿ ಎಲ್ಲಕಡೆಗೂ ಬಹು ಬಲವಾಗಿ [illegible]ಲಕಾಲ ನಡೆಯಿ[illegible]. ಇದರಿಂದ ಬಹು ಜನರು ವೀರಶೈವ ಧರ್ಮವನ್ನು [illegible] ವನರಾದರು. ಇದರಿಂದ

# ಶಿವಾನುಭವದ ಸತ್ಯಮಾರ್ಗ

ಶಿವಶರಣರ ಶಿವಾನುಭವದ ತತ್ವಗಳನ್ನು ಅರುಹುವ ಗ್ರಂಥವು ಇದಾಗಿದೆ ಶ್ರೀ ಶಿವಯೋಗಿಗಳು ಬಂಥನಾಳ, ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಸ್ವಾಮಿಗಳು ವಿಜಾಪುರ, ಶ್ರೀ ಮಹಾದೇವ ಸ್ವಾಮಿಗಳು ಸರ್ಪಭೂಷಣ ಮಠ ಬೆಂಗಳೂರ, ರಾ|| ಬ|| ಪಿ. ಜಿ. ಹಳಕಟ್ಟಿ ವಿಜಾಪುರ, ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಬಿ. ಎ. ಬಿ. ಟಿ. ಈ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧವಾಗಿದ್ದ ಮಹತ್ವದ ಲೇಖಗಳು ಇದರಲ್ಲಿವೆ. ಶಿವಶರಣರ ತಾತ್ವಿಕ ವಿಚಾರಗಳನ್ನು ತಿಳಿಯಲು ಬಹು ಉಪಯುಕ್ತವಾದ ಗ್ರಂಥವು ಉತ್ತಮ ಕಾಗದ, ಮತ್ತು ಉತ್ತಮ ಬಾಯಿಂಡವುಳ್ಳದ್ದಿದೆ.

**ದೊರೆಯುವ ಸ್ಥಳ:— ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ**

**ಬೆಲೆ:— ೧ ರೂ. ೧೦ ಆಣೆ (೧೩೮ ಪುಟಗಳು)**

---

# ಶ್ರೀ ಬಸವೇಶ್ವರನ ತತ್ವಗಳು

ಕೈ. ವಾ. ಸಿದ್ಧರಾಮಪ್ಪ ಪಾವಟೆ; ಕೈ. ವಾ. ವೀರಪ್ಪ ಬಿಳಿಅಂಗಡಿ, ರಾ|| ಬ|| ಪಿ. ಜಿ. ಹಳಕಟ್ಟಿ, ಶ್ರೀಯುತ ವೀರಪ್ಪ ಯಂಗಟಿ ಬಿ. ಎ. ಎಲ್. ಎಲ್. ಬಿ. ಮೊದಲಾದ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಮಹತ್ವದ ಲೇಖಗಳು ಇದರಲ್ಲಿವೆ. ಇದರಲ್ಲಿ ಬಸವೇಶ್ವರನ ನೈತಿಕ ಮತ್ತು ಸಾಮಾಜಿಕ ವಿಚಾರಗಳು, ಅವನು ಮಾಡಿದ ವಾಙ್ಮಯ ಕ್ರಾಂತಿ. ಇವೇ ಮೊದಲಾದ ಮಹತ್ವದ ವಿಷಯಗಳ ಮೇಲೆ ಲೇಖಗಳು ಬಂದಿರುತ್ತವೆ ಉತ್ತಮ ಕಾಗದ, ಉತ್ತಮ ಬಾಯಿಂಡವುಳ್ಳದ್ದಿರುತ್ತದೆ

**ದೊರೆಯುವ ಸ್ಥಳ:— ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ**

**ಬೆಲೆ:— ೧ ರೂ ೮ ಆಣೆ (೧೦೫ ಪುಟಗಳು)**

BOOK-POST R. N. B. 255

ಪುಟ—೧

ಚನ್ನಮಲ್ಲಪ್ಪ ಸಿದ್ದಪ್ಪ ಬಡೇವಿ

ಪೋ. ಬನಹಟ್ಟಿ

ವ್ಹಾಯಾ-ಕುಡಚಿ ಸ್ಟೇಶನ್

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ರಾ|| ಬಿ. ಪಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ ೧, ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂಟಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ವಿಷಯಾನುಕ್ರಮಣಿಕೆ



---

## ಶಿವಾನುಭವ ಪತ್ರಿಕೆ, ವಿಜಾಪುರ.

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ ೫-೧೨-೦

# ಶಿವಾನುಭವ


| ವರ್ಷ ೨೫ | ಜೂನ ೧೯೫೧ | ಸಂಚಿಕೆ ೬ |
|---|---|---|


## ಶಿವಯೋಗ


[ ಲೇಖಕರು :- ಶ್ರೀಮಾನ್ ಸಿ. ನಾ. ಮಹಾಂತಣ್ಣವರ ಹೂನೂರು ]


ಪ್ರಾಪಂಚಿಕ ವಿಷಯವನ್ನು ಕುರಿತು ಪರ್ಯಾಲೋಚಿಸಿದರೆ ನಮ್ಮೆಲ್ಲರ ಬಾಲ್ಯದಲ್ಲಿ ತಾಯಿತಂದೆಗಳ ಯೋಗವೂ, ಬಂಧುಬಳಗಗಳ ಯೋಗವೂ, ಬರಬರುತ್ತ ನೆರೆಹೊರೆಯ ಬಾಲಬಾಲಕಿಯರ ಯೋಗವೂ ಸಾಲೆಗೆ ಹೋಗಲು ಯೋಗ್ಯರಾದಂತೆ ಓರಿಗೆಯ ಹುಡುಗರ ಹಾಗು ನಮಗೆ ಶಿಕ್ಷಣ ಕೊಡುವ ಶಿಕ್ಷಕರ ಯೋಗವೂ' ಹಸ್ತದೊಳು ಪುಸ್ತಕದ ಯೋಗವೂ ನಯನದೊಳು ವಿಶ್ವದ ಯೋಗವೂ, ಕರ್ಣದೊಳು ಶ್ರವಣದ ಯೋಗವೂ, ರಸನೆಯೊಳು ರುಚಿಯ ಯೋಗವೂ, ಸ್ಪರ್ಶದೊಳು ಆಟಿಗೆಯ ಸಾಮಾನು ಹಾಗು ಉಡಿಗೆ ತೊಡಿಗೆ ಬಟ್ಟೆಗಳ ಯೋಗವೂ, ಘ್ರಾಣದೊಳು ವಾಸನಾ ಯೋಗವೂ, ಆಗುತ್ತಾಗುತ್ತ ತಾರುಣ್ಯವು ತಲೆದೋರುವಷ್ಟರಲ್ಲಿ, ಅಕ್ಷಯವಹ ಸಾಕ್ಷರಿಯೂ ಸುಸಂಸ್ಕೃತಿಯೂ ಸತ್ಸ್ಕಯಕದ ಸನ್ನಿಧಿಯೂ ಆಗಿ, ಗೃಹದೊಳು ದಿನದಿನದೊಳುಚಿತ ವೇಳೆಯೊಳು ಉಪಚರಿಸ ಆಪ್ತೇಷ್ಟರುಗಳ ಯೋಗವೂ

ಚತುರ್ದಶಿಯೊಳು ಶಿವಶರಣರ ಯೋಗವೂ, ಹಾಗು ಶಿವಾನುಭಾವಿ
ಗಳ ಯೋಗವೂ ಉಂಟಾಗಿ, ನಮ್ಮ ನಮ್ಮ ಹಿರಿಯರು ಹಾಕಿಕೊಟ್ಟ
ಗೃಹಪದ್ಧತಿಯಂತೆ ಆಚಾರಾನುಭವಗಳು ಸಾಗುತ್ತಿರುವವೆಂಬದುಎಲ್ಲರೂ
ಅರಿತ ವಿಷಯವಾಗಿದೆ.

ಹೀಗಿರಲು ಪ್ರೌಢಾವಸ್ಥೆಯು ಗಾಢವಾದದ್ದನ್ನು ಕಂಡು ಹಿಡಿದ
ಹಿರಿಯರು ವರನಿಗೆ ಕನ್ಯೆಯನ್ನು ನೋಡಬಯಸಿ, ಅವಳ ಜಾತಿ
ನೀತಿ ರೀತಿ ಭಾತಿ ಖ್ಯಾತಿಗಳನ್ನು, ಕುಲ ಛಲ ಶೀಲ ಸಚ್ಚಾರಿತ ವಿದ್ಯೆ
ವಿನಯಾದಿಗಳನ್ನೂ, ಶಾಂತಿ ದಾಂತಿ ಕಾಂತಿ ಕಮನೀಯಗಳನ್ನೂ,
ರೂಪಲಾವಣ್ಯ ಲಲಾಮತೆಗಳನ್ನೂ, ಜನ್ಮರಾಶಿ ನಕ್ಷತ್ರ ಕರಣ ಯೋ
ಗಾದಿಗಳನ್ನೂ, ವರಕನ್ಯೆಗಳ ಗುಣಸಂಖ್ಯಾದಿ ನಾಡಿಗಳನ್ನೂ, ನೋಡು
ವದಲ್ಲದೆ ಪ್ರಚಲಿತ ಪ್ರೌಢವಿವಾಹದಲ್ಲಂತೂ ವರನು ಸ್ವತಃ ಕನ್ಯೆಯನು
ಸರ್ವತೋಪರಿ ನಿರೀಕ್ಷಿಸಿ, ಸಿನೇಮಾದಲ್ಲಿಯ ಹೆಣ್ಣು ಪಾರ್ಟಿನ ವೇಷ
ಭೂಷಣಗಳನ್ನು ಹೋಲುವ ಭೂಷಣಾಂಬರಗಳನ್ನೂ, ಮಾತು ಕತೆ
ಗಳನ್ನೂ ವಿದ್ಯೆ ಬುದ್ಧಿಗಳನ್ನೂ, ಕುಶಲ ಪ್ರಶ್ನೋತ್ತರಗಳನ್ನೂ, ಶರೀರದ
ಆಯುರಾರೋಗ್ಯಗಳ ಬಂಧುರತ್ವವನ್ನೂ ಪರಾಮರ್ಶಿಸುತ್ತ ಅಂತರಂಗದ
ಅಂತಃಕರಣಗಳು ಪರಸ್ಪರ ಪ್ರೇಮೋದ್ರೇಕದಿಂದ ಬಿಗಿಯುವದನ್ನೂ
ಕಂಡು ಹಿಡಿದು" ವಿವಾಹ ವಾಗುವ ಲಕ್ಷಣವನ್ನು ತೋರ್ಪಡಿಸಲು
ತೊಡಗಲಾರಂಬಿಸುವನು. ವರನಂತೆ ಕನ್ಯೆಯಾದರೂ ತನ್ನಷ್ಟು ಅಥವಾ
ತನಗಿಂತ ಹೆಚ್ಚಿನ ಶಿಕ್ಷಣವನ್ನು ವರನು ಪಡೆದ ಸಂಗತಿಯನ್ನೂ, ಆತನ
ನಿಲವು ಬಲವು ಒಲವು ಛಲವು ಉಲುವುಗಳನ್ನೂ ಅರಿತು, ಕೋಟು
ಶರ್ಟು ಹ್ಯಾಟ ಬೂಟ ಪಾಟ್ಲೂನುಗಳ ಥಾಟು ನೋಟು ನೇಟುಗ
ಳನ್ನೂ ನಿರೀಕ್ಷಿಸಿ, ನಿಜದೃಷ್ಟಿಗೆ ನಲ್ಲನಾಗುವದಕ್ಕೆ ಸಲ್ಲುವನೆಂದು ಬಲ್ಲವಳಾಗಿ
ವಿವಾಹಕ್ಕೆ ಒನಪು ಒಯ್ಯಾರಗಳಿಂದ ಒಪ್ಪುವದಕ್ಕೆ ಸೊಪ್ಪು ಹಾಕು
ವಳು. ಹಿರಿಯರ ಹರಕೆ, ಉಭಯತರ ಮನವರಿಕೆ, ಪ್ರೇಮದ ತೋರಿ
ಕೆಗಳಿಂದ ಶುಭಯೋಗದೊಳು ಗುರು ಹಿರಿಯರೂ ಬಂಧುಬಳಗದ
ವರೂ ತಂದೆ ತಾಯಿಗಳೂ ಲಗ್ನಕಾರ್ಯವನ್ನು ಕೊನೆಗಾಣಿಸುವರು.
ಸತಿ ಪತಿಗಳು ಸಂಭ್ರಮದಿಂದ ಕೂಡಿ ಸಂಸಾರ ಸಡಗರದೊಳಿದ್ದು ಶಾಂತಿ
ಸಮರಸಗಳಿಂದ ಸುಖಪ್ರಪಂಚದೊಳು ನಲಿಯುವರು. ಹೀಗಿದ್ದರೂ

ಒಮ್ಮೊಮ್ಮೆ ಒಂದೊಂದು ಪ್ರಪಂಚದಲ್ಲಿ ನಲ್ಲಳ ನೆಳಲಲ್ಲಿ ನಲ್ಲಳರದೆ ಹೊರ ಪ್ರಪಂಚದಲ್ಲಿ ಒಳ್ಳೆ ನಲ್ಮೆಗಳನ್ನು ನಟಿಸಿ, ಅಂತರಂಗದಲ್ಲಿ ಅಲ್ಲದ ಸಲ್ಲದ ನಿಲ್ಲದ ನೀತಿಗಳಿಂದ ನಡೆದ ಉದಾಹರಣೆಗಳನ್ನೂ ನೋಡಬಹುದು. ವಿಷಯ ಸಂಸಾರದಲ್ಲಿ ವಿಷಮತ್ವವು ಕಾಣಬರುವದು ಸ್ವಾಭಾವಿಕವು "ನಲ್ಲನ ನೆರಳಿನೊಳು ನಲ್ಲಳಿರದಿದ್ದರೆ ನೋಡುವದೇನು? ಅವರ ಚಲ್ಲಾಪಿಲ್ಲಿ? ಲೌಕಿಕ ಪ್ರಾಪಂಚಿಕ ಯೋಗದೊಳು ಇಷ್ಟು ಎಡರು ತೊಡರುಗಳು ಬಂದ ಬಳಿಕ "ಅಂಗಲಿಂಗ ಅಥವಾ ಶರಣ ಸತಿ ಲಿಂಗ ಪತಿ" ಅಥವಾ ಶಿವಯೋಗಕ್ಕೆ ಶರಣಸತಿಯ ಆಚಾರ ವಿಚಾರಗಳೂ ನಡೆ ನುಡಿಗಳೂ ಶಿವಭಕ್ತಿ" ಸದ್ಭಾವಗಳೂಸತ್ಕ್ರಿಯೆ ಸಶೀಲಗಳೂ ಹೇಗಿರಬೇಕೆಂಬುದು ಮನಕ್ಕೆ ಮನವೇ ಸಾಕ್ಷಿ.

ಈ ವಿಷಯವಾಗಿ ಒಬ್ಬಾನೊಬ್ಬ ಶಿವಶರಣನು "ಕೇಳು ಕೇಳಿರಿ ಕೇಳಿರಿ ಎಲ್ಲರು. ಮನಕ್ಕೆ ಮನೋಹರವಾದ, ಕಂಗಳಿಗೆ ಮಂಗಳ ವಾದ, ಶೃಂಗಾರದ ನಲ್ಲ ಬಂದು, ಎನ್ನ ತನ್ನೊಳಗೆ ಮಾಡಿಕೊಂಡರು ಅಂದು ವಿಪರೀತ ಹೇಳುವೆ. ಮನ ಒಲಿದು ಆಲಿಸಿರವ್ವ ಎನ್ನ ತನು ವಿನೊಳಗೆ ತನ್ನ ಮನವಿಟ್ಟು. ಘನಾಘನವ ಮಾಡಿದ. ಎನ್ನ ಪ್ರಾಣ ದೊಳಗೆ ತನ್ನ ಪ್ರಾಣವನಿಟ್ಟು, ಚಿತ್ಪ್ರಾಣವಮಾಡಿದ. ಎನ್ನ ಜೀವದೊಳಗೆ ತನ್ನ ಜೀವನಿಟ್ಟು ಸದ್ಭಾವವ ಮಾಡಿದ. ಎನ್ನ ಕರಣಂಗಳೊಳಗೆ ತನ್ನ ಕರಣಂಗಳಿಟ್ಟು, ಚಿತ್ಕರಣಂಗಳ ಮಾಡಿದ. ಎನ್ನಿಂದ್ರಿಯಂಗಳೊಳಗೆ ತನ್ನಿಂದ್ರಿಯಂಗಳನಿಟ್ಟು ತನ್ನಿಂದ್ರಿಯಂಗಳ ಮಾಡಿದ. ಎನ್ನ ವಿಷಯಂಗಳೊಳಗೆ ತನ್ನ ವಿಷಯಂಗಳನಿಟ್ಟು, ನಿರ್ವಿಷಯಂಗಳ ಮಾಡಿದನು. ಆ ಅಖಂಡೇಶ್ವರನೆಂಬ ನಲ್ಲನೊಳಗೆ ಕರ್ಪೂರವೆಣ್ಣು, ಉರಿಯ ಪುರುಷನ ಅಪ್ಪಿ, ತಾನಳಿದಂ ತಾದೆನವ್ವ ಕೇಳಿರವ್ವ. ||೧|| ಮೋಣೋರ್ವನು "ಆರ ಪರಿಯಲ್ಲ ನಮ್ಮ ನಲ್ಲನು. ವಿಶ್ವವೆಲ್ಲ ಸತಿಯರು ಚೋದ್ಯದ ಪುರುಷನು. ಅವರವರ ಪರಿಯಲ್ಲಿ ಅವರವರ ನೆರವನು ಅವರವರಿಗೆ ಅವರಂತೆ ಸುಖಮಯನು ನೋಡಾ. ಅವರೆಲ್ಲರ ವಂಚಿಸಿ, ಎನ್ನನಗಲದ ಪರಿಯ ಹೇಳಾ ಕೆಳದಿ, ನೀನೊಳ್ಳೆ ದಳಾದರೆ. ಮಹಾಮಂತ್ರವ ಜಪಿಸಲು ಎನ್ನನಗಲ ನಿನ್ನಾಣೆ, ಉರಿಲಿಂಗದೇವ ತನ್ನಾಣೆ" ||೨||

ಚತ್ರ:

ಮತ್ತೊರ್ವನು "ಅಯ್ಯಾ ಶಿವಯೋಗದಲ್ಲಿ ನಿಂದ ಭೇದವೆಂತೆಂದೊಡೆ ಆ ನಿಲುಕಡೆಯ ಶ್ರೀಗುರು ಕಟಾಕ್ಷೆಯಿಂದ ನಿರೂಪಿಸಿಹೆನು. ಕೇಳಯ್ಯಾ ವರಕುಮಾರ ದೇಶಿಕೋತ್ತಮನೇ, ವಾಮ ಭಾಗ ಚಂದ್ರನಾಳ, ಚಂದ್ರನೇತ್ರ, ವಾಮ ಕರ್ಣದ್ವಾರಂಗಳು ಮೂರು ಈಡಾ ನಾಡಿ, ಎನಿಸುವದಯ್ಯ, ದಕ್ಷಿಣಭಾಗದ ಸೂರ್ಯನಾಳ, ಸೂರ್ಯನೇತ್ರ ದಕ್ಷಿಣ ಕರ್ಣದ್ವಾರಂಗಳು ಮೂರು ಪಿಂಗಳನಾಡಿ ಎನಿಸುವದಯ್ಯ ಅಧೋದ್ವಾರ, ಗುಹ್ಯದ್ವಾರ, ಜಿಹ್ವಾದ್ವಾರ ಇವು ಮೂರು ಸುಷುಮ್ನನಾಡಿ ಎನಿಸುವದಯ್ಯ ಮಣಿಪೂರಕನಾಡಿ, ವಿಶುದ್ಧಿನಾಡಿ, ಬ್ರಹ್ಮನಾಡಿ ಇವು ಮೂರು ಇಪ್ಪತ್ತೆರಡು ಸಾವಿರ ನಾಡಿಗಳಿಗೆ ಮೂಲ ಸೂತ್ರವಾದ ಮಧ್ಯನಾಡಿ ಎನಿಸುವದಯ್ಯ. ಇಂತೀದ್ವಾದಶ ದ್ವಾರಂಗಳಲ್ಲಿ ಚರಿಸುವ ಮನ್ಮಥ ವಿಕಾರವಂ ಗುರೂಪಾವಸ್ಥೆಯಿಂ ಹಿಂದುಮಾಡಿ, ತನ್ನಸತ್ಯವೇ ಮುಂದಾಗಿ ತನ್ನ ನಡೆನುಡಿಗಳ ತನ್ನ ತಾನೇ ವಿಚಾರಿಸಿ, ಸದ್ಗುರು ಲಿಂಗಜಂಗಮದಿಂದ ಶಿವದೀಕ್ಷೆಯ ಪಡೆದು, ಲಿಂಗಾಂಗ ಸಂಬಂಧಿಯಾಗಿ ಆಲಿಂಗ ಚೈತನ್ಯ ಸ್ವರೂಪವಾದ ಪಾದೋದಕ ಪ್ರಸಾದ ಮಾತ್ರದಿಂದ ಆ ತ್ರಿವಿಧ ನಾಡಿಗಳು ಮೊದಲಾಗಿ ದ್ವಾದಶ ನಾಡಿಗಳೇ ಕಡೆಯಾದ ಸಮಸ್ತ ನಾಡಿಗಳು ಪವಿತ್ರ ಸ್ವರೂಪವಾಗಿ, ಸರ್ವಾವಸ್ಥೆಯಲ್ಲಿ ಚಿದ್ಘನ ಮಹಾಲಿಂಗವ ಅಷ್ಟ ವಿಧಾರ್ಚನೆ ಷೋಡಶೋಪಚಾರವನೊಡಗೂಡಿ ಪರಿಪರಿಯಿಂದರ್ಚಿಸಿ, ಆಚಾರ ಭ್ರಷ್ಟರ ತ್ರಿಕರಣಗಳಿಂದ ಸೋಂಕದೆ ಅಂಗಕರಣಂಗಳೆಲ್ಲ ಲಿಂಗಕರಣಂಗಳಾಗಿ ಸತ್ಕ್ರಿಯೆ ಜ್ಞಾನಾನಂದವೇ ಪ್ರಭಾವಿಸಿ, ಶ್ರೀ ಗುರುಲಿಂಗ ಜಂಗಮ, ಪಾದೋದಕ ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಸದಾಚಾರ ಸದ್ಭಕ್ತಿ ಸತ್ಕ್ರಿಯೆ ಸಮ್ಯಜ್ಞಾನ, ಸದ್ವರ್ತನೆ ಎಂಬ ಚಿದೈಶ್ವರ್ಯದಲ್ಲಿ ಸಂತೃಪ್ತರಾಗಿ, ನಿಂದ ನಿಲುಕಡೆಯಲ್ಲಿ ಪೂರ್ಣ ಸ್ವರೂಪ ನಿಜಶಿವಯೋಗಿಗಳು ನಿಮ್ಮ ಶರಣರು ನೋಡಾ ಸಂಗನಬಸವೇಶ್ವರಾ"||೩||

ಬೇರೊರ್ವನು "ಯೋಗದಾಗವನರಿದು ಯೋಗಿಸಿಹೆನೆಂಬ ಯೋಗಿಗಳು ನೀವು ಕೇಳಿ. ನೆಲವಾಗಿಲ ಮುಚ್ಚಿ, ತಲೆವಾಗಿಲು ತೆರೆದು ಗಗನಗಿರಿಯ ಪೂರ್ವ ಪಶ್ಚಿಮ ಉತ್ತರ ದಕ್ಷಿಣದ ನಡುವೆ ಉರಿವ ಅಗ್ನಿಯ ಕಂಡು, ಆ ಅಗ್ನಿಯ ಮೇಲೆ ಸ್ವರ ನಾಲ್ಕರ ಕೀಲು ಕೂಟದ

ಸಂಚವ ಕಂಡು, ಆ ಸಂಚವಲ್ಲಿ ಅವ್ಯತ ಸ್ವರವ ಹಿಡಿದು ಕೂಡು ವದೇ ಪರಮಶಿವಯೋಗ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನಲ್ಲಿ ಅದೇ ಪರಮ ನಿರ್ವಾಣ.॥೪॥

ಇಂತಲ್ಲದೆ "ವಾಕು ಪ ಥನವ ನುಂಗಿ ನೀತಿ ನಿಜದಲ್ಲಿ ನಿಂದು ಥಾಂತು ಭ್ರಮೆಗಳನಳಿವಡಾತ ಯೋಗಿ॥ ಓತು ನಿಬ್ಬೆರಗು ನಿರ್ವಯಲ ನಿರ್ದೇಹ ನಿಜಾರ್ಕತ ಕೂಡಲ ಚನ್ನಸಂಗಯ್ಯನು॥೫॥

ಈ ಪ್ರಕಾರ ಯೋಗದ ಅನುಎನ್ನು ಅರಿದು ಆಚರಿಸಿದ ಮಹಾ ಶರಣರು ತಮ್ಮ ತಮ್ಮ ಶಿವಯೋಗಾನುಭವದ ಅನುವನ್ನು ಅನುಗೊಳಿಸಿದ್ದಾಗಿದೆ.

ಮೇಲೆ ಹೇಳಿದ ಶಿವಶರಣರಲ್ಲಿ ಎರಡನೇಯವನು ಶಿವಯೋಗಕ್ಕೆ ಮಹಾಮಂತ್ರ ಜಪವೇ ಮೂಲವೆಂದುಸುಗಿದಂತೆ ಶಿವಯೋಗಕ್ಕೆ ಪ್ರಾಣ ಲಿಂಗದ ಜಪಸಂಖ್ಯೆಯೂ ಆ ಲಿಂಗದ ಪೂಜಾಕ್ರಮವೂ ಸಕೀಲ ಜ್ಞಾನವೂ ಇರುವದು ಅವಶ್ಯ. ಯಾಕಂದರೆ ಶಿವಯೋಗವು ಪ್ರಾಣಲಿಂಗಿಯ ಅಂಗಸ್ಥಳದ ಭಾಗವಾಗಿದೆ. ಮತ್ತು ಈ ಸ್ಥಲವು ನಿರಾಕಾರದ ನಿಲಯವೂ ಚಿದಂಗದ ಚಿನ್ಮಯವೂ ಆದ್ದರಿಂದ ಶಿವಯೋಗಿಯು ಮಿತಾಹಾರಿಯೂ ಶಾಂತನೂ ನಿರುಪಾಧಿಯೂ ಏಕಾಗ್ರ ಚಿತ್ತನೂ ನಿರಂಗನೂ ನಿರ್ದೇಹಿಯೂ ನಿರ್ವಿಕಾರಿಯೂ ನಿಡುಗಣ್ಣಿನವನೂ ಇರಲೇ ಬೇಕೆಂಬದು ಸ್ಪಷ್ಟವು. ಈ ಸ್ಥಿತಿಯುಂಟಾಗಲು ನಿತ್ಯಸಾಧನವು ಸಾಧಿಸಲ್ಪಡಬೇಕು.

**ಪ್ರಾಣಲಿಂಗಿಸ್ಥಲ** :— ವಾಯು – ಸ್ಪರ್ಶ – ಮನ – ತ್ವಕ್ – ಪಾಣಿ – ಯೋಗಾಂಗ ಈ ಆರು ಪ್ರಾಣಲಿಂಗಿಯ ಅಂಗ। ಅಲ್ಲಿಂದ ಮೇಲೆ ಹೃದಯ ಸ್ಥಾನದಲ್ಲಿ। ಅನಾಹತಚಕ್ರ। ವಾಯು ಎಂಬ ಮಹಾಭೂತ। ಆ ಭೂತ ಮಾಂಜಿಷ್ಟ ವರ್ಣ। ಷಟ್ಕೋಣ। ದ್ವಾದಶದಳಪದ ಕುಂಕುಮವರ್ಣ। ಆದಳದಲ್ಲಿ ಕಖಗಘಙ ಚಛಜಝಞ ಟಠ, ಎಂಬ ಹನ್ನೆರಡು ಅಕ್ಷರ। ಕರ್ಣಿಕಾ ಮಧ್ಯದಲ್ಲಿ ವಕಾರವೆಂಬ ಬೀಜಾಕ್ಷರ। ಆ ವಕಾರ ಶ್ವೇತವರ್ಣ। ಅಲ್ಲಿ ಭೇರಿನಾದ ಅಲ್ಲಿ ಜಂಗಮ

ಲಿಂಗ । ಅದಕೆ ಕೆಂಪು ವರ್ಣವುಳ್ಳ ತತ್ಪುರುಷ ಮುಖ । ಶಾಂತಿಕಲೆ ಪರ್ಯಾಯ ನಾಮವುಳ್ಳ ಆದಿಶಕ್ತಿ । ಆ ಶಕ್ತಿಗೆ ಮಾಂಜಿಷ್ಟವರ್ಣ । ಅಲ್ಲಿ ಅಮೂರ್ತಿಸಾದಾಖ್ಯ । ಗೂಢವೆಂಬ ಸಂಜ್ಞೆ । ಪೂರ್ವದಿಕ್ಕು ಅಲ್ಲಿ ಅಥರ್ವಣ ವೇದವನುಚ್ಚರಿಸುತ್ತ ಸುಮನವೆಂಬ ಹಸ್ತದಿಂ ಸುಸ್ಪರ್ಶನ ದ್ರವ್ಯವನ್ನು ತ್ವಕ್ ಎಂಬ ಮುಖಕ್ಕೆ ಅನುಭವ ಭಕ್ತಿಯಿಂದ ಪಿರ್ಸುವಳಾದಿಶಕ್ತಿ ॥ ಈಶ್ವರ ಪೂಜಾರಿ ॥ ಶಕ್ತಿಕಂಕಾಳಿನಿ ॥ ಭೀಮಾನದಿ ದೇವತೆ / ಶಕ್ತಿಶಾಕಿನಿ ॥ ಇಂತಿವೆಲ್ಲಕ್ಕೂ ಮೂರ್ತ ಸ್ಥಾನವಾಗಿರುವದು ಮ ಕಾರವೆಂಬ ಬೀಜಾಕ್ಷರ ॥ ಇನ್ನು ಜಂಗಮಲಿಂಗದ ಜಪ ಎಷ್ಟೆಂದರೆ ॥ ೨೧೬೦೦ ॥ ಎಷ್ಟು ಹೊತ್ತಿಗೆ ಮುಗಿಯುವದೆಂದರೆ ೬೦ ಗಳಿಗೆಗೆ ೨೧೬೦೦ ಇನ್ನು ಮ ಕಾರವೆಂಬ ಬೀಜಾಕ್ಷರ । ಅದು ಪ್ರಣವದ ಅರ್ಧ ಚಂದ್ರಾಕೃತಿಯಲ್ಲಿಹುದು । ಓಂ ಓಂ ಓಂ ಮಾಂ ಮಾಂ ಮಾಂ । ಎಂಬ ಬ್ರಹ್ಮನಾದ । ಮಂತ್ರ ಮೂರ್ತಿ ಪ್ರಣವಕ್ಕೆ ನಮಸ್ಕಾರ ॥ ಜಂಗಮಲಿಂಗಕೆ ೧೦೮ ಮಣಿ ಮಾಲಿಕೆಯಿಂದ ೨೦೦ ವೇಳೆ ಪ್ರದಕ್ಷಣೆ ಮಾಡಲು ॥ ೨೧೬೦೦ ॥ ಜಪವಾಗಿಯಿತು.

"ದಿನದಿನದೊಳುಪಚರಿಪುದು ನಿನಗೆ ಕಾಳವೆಲೆಯೋಗಿ ಯಜಿಸು ಬಿಡದಿದನ." ಈ ಪದದಲ್ಲಿ ಶ್ರೀ ನಿಜಗುಣಾಚಾರ್ಯರು ಹೇಳಿದಂತೆ ಪ್ರತಿಯೊಬ್ಬ ಲಿಂಗಾಂಗಿಯು ಅಷ್ಟಾವರಣದಿಂದ ಇದ್ದು, ಅಷ್ಟಾವರಣ ಕ್ರಿಯೆಯನ್ನು ತನ್ನ ದೇಹದೊಳಗೆ ಕಂಡು ಹಿಡಿದು, ಗುರುಸೇವೆಯನ್ನು ಸತ್ಕಾಯಕದಿಂದಲೂ ಲಿಂಗಧ್ಯಾನಾನುಸಂಧಾನವನ್ನು ಕೂತಾಗ ನಿಂತಾಗ ಕೆಲಸ ಮಾಡುವಾಗ ಬಿಡುವಾಗ ಮಲಗುವಾಗ ಏಳುವಾಗ ಅಂದರೆ ತನ್ನ ಶರೀರದ ಕ್ರಿಯೆಯೊಳು ಲಿಂಗಕ್ರಿಯೆಯನು ಒದಗಲಿಸಿ, ಲಿಂಗದ ನಡೆ ನುಡಿಗಳಿಂದಲೂ, ಜಂಗಮ ದಾಸೋಹವನ್ನು ಸತ್ಕ್ರಿಯೆ ಸುಜ್ಞಾನಗಳಿಂದಲೂ, ಪಾದೋದಕವನ್ನು ಸರ್ವಾತ್ಮರೊಳು ಕರುಣಾದೃಷ್ಟಿಯಿಂದಲೂ, ಪ್ರಸಾದವನ್ನು ಪ್ರಸಾದಾನುಭವದಿಂದಲೂ, ರುದ್ರಾಕ್ಷಿ ವಿಭೂತಿಗಳಿನ್ನು ಧಾರಣದಿಂದಲೂ, ಮಹಾಮಂತ್ರವನ್ನು ಷಡಕ್ಷರಕಾಲಕ್ಕೆ ಜಪಿಸುವದಲ್ಲದೆ, ರೇಚಕ ಪೂರಕ ಕುಂಭಕ ಕಾರ್ಯಗಳೊಡನಾಡಿಂದಲೂ ಸಾಗಿಸಿ ತನ್ನ ಗೃಹದೊಳು ತ್ರಿಕಾಲದೊಳು ತ್ರಿಲಿಂಗಗಳ ಪೂಜೆಯನ್ನು ಮುಂಜಾನೆ ಮಧ್ಯಾಹ್ನ ಸಂಜೆಗೆ ಬಿಡದೆ ಸಾಗಿಸತ್ತ

ತನ್ನ ಯೋಗ್ಯತಾನುಸಾರವಾಗಿ ಭಕ್ತಿಸ್ಥಲದ ಉಪಾಧಿ ಮಾಟಸ್ಥಲವನ್ನಾ ಚರಿಸುತ್ತ ನಿರುಪಾಧಿ ಹಾಗು ಸಹಜ ಮಾಟಸ್ಥಲಗಳಿಂದ ಭಕ್ತಿಯೋಗವನಾಚರಿಸುವ ಅನುವನ್ನು ಅದರಿಸಿ ಶಿವಯೋಗಾನಂದವೊಳು ಸದ್ಭಕ್ತನು ಇರುವನೆಂಬುದು, ಪತ್ರಿಯೊಬ್ಬ ಸದಾಚಾರಿಗೆ ಸಹಜ ಹೊಳೆಯುದೆ ಇರದು.

ಲಿಂಗಾಂಗಿಗಳಲ್ಲಿ ಶಿವಾನುಕೂಲವಿದ್ದವರು ಪ್ರತಿದಿವಸ ಶ್ರೀ ಜಂಗಮ ಮೂರ್ತಿಯ ಯೋಗದ ಬಲದಿಂದ ಅಷ್ಟಾವರಣ ಕ್ರಿಯೆಯನ್ನು ಸಾಂಗಗೊಳಿಸಿ ಪಾದೋದಕ ಪ್ರಸಾದಗಳನ್ನು ನಿತ್ಯಶಃ ಪಡೆಯುವವರೂ ಉಂಟು. ಸಾಧಾರಣ ಅನುಕೂಲವಿದ್ದವರು ವಾರಕ್ಕೊಮ್ಮೆ ಅಂದರೆ ಪ್ರತಿ ಸೋಮವಾರಕ್ಕೊಮ್ಮೆ ಶ್ರೀ ಜಂಗಮ ಮೂರ್ತಿಯನಾಗಲಿ ವಾರದಯ್ಯನವರನ್ನಾಗಲಿ ಆಗಮಿಸಿಕೊಂಡು ಅವರಿಂದ ಪಾದೋದಕ ಪ್ರಸಾದನುಗ್ರಹಗಳನ್ನು ಪಡೆಯುವವರೂ ಉಂಟು. ಇದೂ ಆಗದ ಭಕ್ತರು ಪಕ್ಷಕ್ಕೊಮ್ಮೆ ಅಂದರೆ ಶುಕ್ಲ ಕೃಷ್ಣಪಕ್ಷಗಳಲ್ಲಿ ಚತುರ್ದಶಿಯ ದಿವಸ ಶಿವಶರಣರ ಕೂಟ (ಸಂಘ) ಗಳಿಗೆ ಹೋಗಿ ಅಲ್ಲಿ ಮಹಾ ಶಿವಶರಣರ ದಾಸೋಹದೊಳಿದ್ದು ಶ್ರೀ ಪಾದ ಪೂಜೆಯನ್ನು ಮನದಣಿ ನೋಡಿ, ಕಂಡು ನಿಜ ಪಾದತೀರ್ಥ ಪ್ರಸಾದಗಳನ್ನು ಪಡೆದು ಪವಿತ್ರರಾಗುವರು. ಹಾಗು ಮರ. ದಿವಸ ಪೂರ್ಣಿಮಾ ಅಮಾವಾಸ್ಯೆಗಳಲ್ಲಿ ಪ್ರತ್ಯಕ್ಷ ಶಿವಾನುಭವಿಗಳ ಕೂಡ ದಶ ವಿಧಪಾದೋದಕಗಳು ಏಕಾದಶ ಪ್ರಸಾದಗಳ ಅಂತರ್ಬಹಿರ್ಜ್ಞಾನಗಳಿಂದ ಆನಂದ ತುಂದಿಲರಾಗುವರು. ಇಂಥ ಮಹಾನಂದದಲ್ಲಿ ಓಲಾಡುವ ಪರಿಯು "ನೋಟ ಸಮರಸವಾಗಿ ಕೂಟ ನಿಬ್ಬೆರಗಾಗಿ। ನೋಟ ಕೂಟವೆಂಬ ಉಭಯವಳಿದು ‖ ದಾಂಟಿ ನಿಜವಲ್ಲಿ ನಿರ್ಮಯಲಾದ ಶಿವಯೋಗಿ। ನೋಟಕ್ಕೆ ತೆರಹಳಿದ ಪದವುತಾನೈ ‖ ೧ ‖ ಆ ಶಿವಶರಣರ ಕೂಟದ ಮಹಾಮನೆಯಲ್ಲಿ ಬಹಿರ್ನೋಟವನತಿಗಳೆದು ಅಂತರ್ದೃಷ್ಟಿಯೊಳು ನಿಂದ ನಿಲವಿನ ಅನುಭಾವಿಗಳೇ ಎಸೆದಿರ್ದರು. ಇದರಿಂದ "ಖೇಚರತ್ವದ ನೆಲೆಯ ಭೂಚರರು ಬಲ್ಲರೆ। ವಾಚಾಳಕರ ಮಾತಿಗಿದು ಸಲ್ಲದು ‖ ಆಚಾರದನುಭಾವ ಭಕ್ತಿ ನೆಲೆಗೊಂಡಂಗೆ ಸೂಚಿಸುವುದಾ ಮಹಾ ಪರಮ ಪದವು ‖ ೨೪ ‖ ಎಂಬ ಅನುಭವವು ಅಳಿಯುತ್ತಿರುವದು.

ಇಂಥ ಶಿವಶರಣರ ಕೂಟಗಳು ಪ್ರತಿವರ್ಷ ಸಹಕಾರಿ ಸಂಘಗಳ ಜಿಲ್ಹಾ ಸಮ್ಮೇಲನಗಳಾದಂತೆ ಪ್ರತಿ ಜಿಲ್ಹೆಯ ಪವಿತ್ರ ಸ್ಥಾನಗಳಲ್ಲಿ ಮಾಘ ಮಾಸದ ವ॥ ೧೪॥ ದಿವಸ ಲಿಂಗಾಂಗಿಗಳೆಲ್ಲ ಕೂಡಿ ಮಹಾ ಶಿವಯೋಗಾಚರಣೆಯನ್ನು ಸಾಗಿಸುವರೆಂಬುದು ಬದಾಮಿ ಹತ್ತರ ಶಿವಯೋಗಮಂದಿರ, ಧಾರವಾಡದಲ್ಲಿ ಶ್ರೀ ಮೃತ್ಯುಂಜಯ ಸ್ವಾಮಿಗಳ ಮಠ ಹಾಗು ಶ್ರೀ ಕುಮಾರ ಸ್ವಾಮಿಗಳ ನವಕಲ್ಯಾಣಮಠ, ಅಥಣಿಯಲ್ಲಿ ಶ್ರೀ ಮುರುಘಾರಾಜೇಂದ್ರ ಮಠ, ಲಚ್ಯಾಣದಲ್ಲಿ ಶ್ರೀ ಬಂಥನಾಳ ಶಿವಯೋಗಿಗಳ ಮಠ ಹೀಗೆ ಮಹಾ ಶಿವಯೋಗವನ್ನು ಆಚರಿಸುವ ಕೇಂದ್ರ ಸ್ಥಾನಗಳನ್ನು ನಾವು ಅಲ್ಲಲ್ಲಿ ನೋಡಬಹುದು. ಇದರಂತೆ ಕೇದಾರ, ಕಾಶಿ, ಶ್ರೀಶೈಲ, ಪಾಳಿ, ಉಜ್ಜನಿ, ಉಳವಿ, ಬಾಳೆಹಳ್ಳಿಗಳಲ್ಲಿಯೂ ಈ ಆಚರಣೆಯು ಬಹುದೊಡ್ಡ ಪ್ರಮಾಣದಲ್ಲಿ ನಡೆಯುವದೆಂಬುದು ಮಹತ್ವದ ಸಂಗತಿಯಾಗಿದೆ. ಹೋದವರ್ಷ ಧಾರವಾಡದಲ್ಲಿ ಪ್ರತಿವರ್ಷದಂತೆ ಮಹಾಶಿವಯೋಗಾಚರಣೆಯು ಆಚರಿಸಲ್ಪಟ್ಟಿತು. ಅಲ್ಲಿ ವಿದ್ವಜ್ಜನರೂ ಕೀರ್ತನಕಾರರೂ ಶಿವಾನುಭವಿಗಳೂ ಶಿವಶರಣೆಯರೂ ಶಿವಶರಣರೂ ಶ್ರೀ ಶಿವಯೋಗಿಗಳೂ ಕೂಡಿದ್ದಲ್ಲದೆ ಪ್ರೇಕ್ಷಕರ ಸಂಖ್ಯೆಗೆ ಲೆಕ್ಕ ಹತ್ತದಂತಾಗಿತ್ತು. ಗಮಾಯಿಗಳಿಂದ ಗೀತದ ಹಾಡುವರ ವರೆಗಿನ ಹಾಡುಗಾರರೂ ಶಿವಾನುಭವದ ವಚನಾನುಭವವನ್ನು ಸರಸಾಗಿ ಸಾಗಿಸುವ ಪ್ರವಚನಕಾರರೂ ನವರಸ ಭರಿತವಾದ ಶರಣ ಶರಣೆಯರ ಭಕ್ತಿಭಾವದ ಯುಕ್ತಿವಾದದ ಮುಕ್ತಿಪದದ ಅನುಕರಣೀಯವಾದ ಕೀರ್ತನಕಾರರೂ ದರ್ಶನ ಪಾದಸ್ಪರ್ಶನ, ಸಂಭಾಷಣ ಸಮರಸಾಳಿಗನುವಾದ ಶಿವಯೋಗಾನಂದ ಶ್ರೀ ಶಿವಯೋಗಿಗಳೂ, ಆಗಮಿಸಿದ್ದು, ಬಹಿರಂಗದಲ್ಲಿ ಶಿವಭಾವಿಗಳ ಮಹಾ ಸಭೆಯೋ ಏನೋ ಅನ್ನುವಂತೆ ಶೋಭಿಸುತ್ತಿತ್ತು. ಎಲ್ಲರ ಹೃದಯ ಪಟದಲ್ಲಿ ಶಿವಮಂತ್ರವು ತನ್ನ ಸಾಮ್ರಾಜ್ಯವನ್ನೆಸಗಿತ್ತು. ಇಂಥ ಶಿವಸಭೆಗೆ ಶ್ರೀ ಚಿತ್ರಕಲ್ಲ ಜಗದ್ಗುರುಗಳು ಅಗ್ರ ಸಿಂಹಾಸನದಲ್ಲಿ ವಿರಾಜಮಾನರಾಗಿದ್ದರು. ಪ್ರತಿಯೊಂದು ವ್ಯಕ್ತಿಯು ದೃಷ್ಟಿಯು ಅವರ ಪಾದದಲ್ಲಿ ಪವಡಿಸಿತ್ತು. ಮನವು ಸದ್ಭಕ್ತಿಯಿಂದ ಅಮನಸ್ಕಯೋಗವನ್ನು ಆಚರಿಸುತ್ತಿತ್ತು. ಕಣ್ಣು ಮನ ಪ್ರಾಣ ಭಾವಗಳು ಏಕಾಕಾರವಾಗಿ ನಿರಾಕಾರದಲ್ಲಿ ನಿಂತು ಬಿಟ್ಟಿದ್ದವು. ಅವರಲ್ಲಿ ಮನದಿಂದ ಕಾಯದಿಂದ ಅರ್ಪಣದಿಂದ ಅಳ

ಯದ ಭಕ್ತಿಯಿಂದ ಸಮರಸಾನಂದವನ್ನು ಹೊಂದುತ್ತಿದ್ದರು. ಮಹಾ ಸಮಾಜವೇ ಮೂರ್ತಿಗೊಂಡು ಒಂದೇ ಮೂರ್ತ ಸ್ವರೂಪವಾದುದು ಕಂಡು ಬರುತ್ತಿತ್ತು. ಆ ಚಿದ್ಘನ ವಸ್ತುವಾದ ಚಿದಾನಂದವಾದ ಚಿತ್ಪ್ರಕಾಶವಾದ ಶ್ರೀ ಜಗನ್ಮೂರ್ತಿಯು ತನ್ನ ಕರುಣಾದೃಷ್ಟಿಯನ್ನು ಎಲ್ಲ ಸಮಾಜದ ಹೃದಯ ಪಟದಮೇಲೆ ಒಗೆದು ನಿಬ್ಬೆರಗನೊಳು ನಿಂದು ಲೋಕಾದಿ ಲೋಕದೊಳು ಏಕೋಭರಿತನಾಗಿ ಕಂಗೊಳಿಸುವದನ್ನು ಮನದಂದರೆ "ಆಕಾಶದಮೇಲೆ ಅರದ ತಲೆಯನು ಕಂಡೆ। ಬೇಕು ಬೇಡನ್ನದದು ಸಾಕೆನ್ನದು॥ ಲೋಕಾದಿ ಲೋಕದೊಳಗೇಕೋ ಭರಿತನಾಗಿ ಸಾಕಾರವಡಗಿದ ಪರಮಯೋಗಿ ॥೧॥ ಈ ಮಹಾನುಭಾವವು ಮಹಾ ಶಿವಯೋಗಾಚರಣೆಯಲ್ಲಿ ಕಂಡು ಬರುತ್ತಿತ್ತು. ಇದಲ್ಲದೆ ಮಹಾಪಥದಲ್ಲಿ "ಆಚಾರಕ್ಕೆ ಸಮಾಸವು" ಎಂಬ ಜಾಹೀರನಾಮೆಯು ಅವರವರ ಸದಾಚಾರವು ಅವರವರಿಗೆ ಬೋಧಿಸುತ್ತಿತ್ತು. ಇಂಥ ಮಹಾ ಶಿವಯೋಗಾಚರಣೆಯಿಂದ ಸಮಾಜದ ಸಂಘಟನೆ, ಶಿವಾನುಭಾವದ ಆಚರಣೆ, ಶಿವಶರಣರ ಸಂದರ್ಶನೆ, ಶಿವಭಾವದ ಆದರಣೆ, ಸಮತೆ ಮಮತೆ ಮೊದಲಾದವುಗಳುಂಟಾಗಿ ಮಹಾ ಶಿವಯೋಗಿಗಳ ಕೃಪಾಬಲದಿಂದ ತಮ್ಮಲ್ಲಿ ಶಿವಯೋಗಾಚರಣೆಯು ಬಲಿಯುತ್ತ ಹೋಗಲು ಯಾವ ಆತಂಕವೂ ಇಲ್ಲ.

ಸತ್ಕಾಯಕವನೇ ಸ್ವೀಕರಿಸಿ, ಸದಾಚಾರವನಾಚರಿಸಿ, ಕಾಯಕದೊಳ್ಬಂದ ಪದಾರ್ಥವನೇ ಪಡೆದು, ಹಿಡಿದು, ಪ್ರಾಣಲಿಂಗಾರ್ಚನೆಗೋಸುಗ ಭಕ್ತಿಸತಿಗಿತ್ತು, ಕಾಯ ಪ್ರಸಾದವ ಸಿದ್ಧಗೊಳಿಸಿ ತೀರ್ಥಪ್ರಸಾದಕ್ಕಾಗಿ ಜಂಗಮಾರ್ಚನೆಯ ಸಾಂಗಗೊಳಿಸಿ, ಏಕಾದಶ ಪ್ರಸಾದಗಳ ಏಕೀಕರಿಸಿ, ರೂಪು, ರುಚಿ ತೃಪ್ತಿಗಳನು ಗುರುಲಿಂಗ ಜಂಗಮಕ್ಕೆ ಸಲ್ಲಿಸಿ ಶೇಷ ಪ್ರಸಾದವನು ಭೋಗಿಸುವ ಭಕ್ತಜಂಗಮರ ಸಂದೊಂದಾಗಿ ನಿಂದನಿಜವೇ ಉಭಯಸ್ಥಲದ ಶಿವಯೋಗವು. ನಿಜ ಜಂಗಮವು ಸಿಗದಿದ್ದಲ್ಲಿ ನಿಜಭಕ್ತನ ಸಹಜಾಗಮನವನ್ನು ನಿರೀಕ್ಷಿಸುತ್ತ ಪ್ರಾಣಲಿಂಗಾರ್ಪಿತ ಸಮಯದೊಳು ಸುಯೋಗವಾದರೆ ಆ ಭಕ್ತ ಭಕ್ತಂಗೆ ಅಡಿಯಿಟ್ಟು ಇದಿರೆದ್ದು ನಡೆದು ಹೊಡೆಗೆಡೆದು ಒಡಗೊಂಡು ಬಂದು ಲಿಂಗಾರ್ಚನೆಯಂ ಮಾಡಿಸಿ ಒಕ್ಕುದ ಕೊಂಡು ಓಲಾಡುತಿಪ್ಪುದೆ ಸದ್ಭಕ್ತಿಯಿಂದೊಡಗೂಡಿದ ಶಿವ

ಯೋಗವು. ಇಂಥ ಯೋಗವೂ ಸಂಧಿಸದ ಸಮಯದೊಳು ತನ್ನಲ್ಲಿ ಗುರುಲಿಂಗ ಜಂಗಮುವನರಿತು ಪ್ರಸಾದ ಮಂತ್ರದಿಂ ಇಷ್ಟಲಿಂಗದ ಪೀಠ, ಗೋಮುಖ ಗೋಳಕಗಳಾದ ಇಷ್ಟಪ್ರಾಣ ಭಾವಲಿಂಗಗಳಿಗರ್ಪಿಸಿ ಶೇಷಪ್ರಸಾದವ ಸಂತೃಪ್ತಿಸುವದೂ ಯೋಗವೇ. ತಾನು ಗುರುಲಿಂಗ ಜಂಗಮಾರ್ಪಿತ ಮಾಡುವಾಗ ಅನೇಕ ರೂಪದಿಂದ ಆತ್ಮತೃಪ್ತಿಗಾಗಿ ಯಾರಾದರೂ ಬಂದದ್ದಾದರೆ ಹಾಗೆಯೇ ಕಳಿಸದೆ ಅಷ್ಟರೊಳಗ ಅಷ್ಟನ್ನಾದರೂ ನೀಡಿ ಜೀವಾತ್ಮ ತೃಪ್ತಿಗೆಯ್ಯುವುದೇ ಯೋಗವು. ಇವೆಲ್ಲವುಗಳಲ್ಲಿ ಶಿವಯೋಗ, ಭಕ್ತಿಯೋಗ, ಸುಯೋಗ, ಸಹಯೋಗಗಳಾದವೆಂಬುದು ಪ್ರಾಣಲಿಂಗಾರ್ಚನಾತತ್ಪರರಿಗೆ ಹೊಳೆಯದೆ ಇರದು.

ಎಷ್ಟೋ ಶಿವಶರಣರು ಸತ್ಕಾಯಕವನೆಸಗುತ್ತ ತಮ್ಮ ಅಂಗ (ಜೀವ) ಲಿಂಗದೊಳು ಬೆರೆಸುತ್ತ, ತಮಗೆ ಅನುವುದೋರಿದಂತೆ ಚಿದೃಕ್ಕಿನಿಂದ ಚಿತ್ಸೂರ್ಯನನ್ನು ನೋಡಿ ನಲಿಯುತ್ತ ಆ ಶಿವಾನಂದದೊಳು ನಿಂದು, ನಿಜತತ್ವದೊಳು ಬೆರೆತು, ತಾವು ಮಾಡುವ ಕಾಯಕದ ಪರಿವೆಯಿಲ್ಲದ ಅದು ಮುಗಿದ ಮೇಲೆ ಆ ಕೆಲಸದ ಪೂರ್ಣತ್ವವನ್ನು ಹೊರದೃಷ್ಟಿಯಿಂದ ನೋಡಿ ಚಕಿತರಾದವರುಂಟು. ಇಂಥವರಲ್ಲಿ ಶ್ರೀ ದೇವರದಾಸಿಮಾರ್ಯರೊಬ್ಬರು. ಅವರು ಮಂತ್ರಯೋಗದೊಳಿದ್ದ ಶಿವಯೋಗವೆನಿಸಿದ ಅಮನಸ್ಕಯೋಗವನಾಚರಿಸುತ್ತ ತಮ್ಮ ನೇಗಿಯ ಕಾಯಕದೊಳು ಸೀರೆಯನ್ನು ನೇಯ್ಯುವದಾದ ಬಳಿಕ ನೇಗೆಯ ಕ್ರಿಯೆಗೂ ಶಿವಯೋಗಕ್ಕೂ ಹೋಲಿಸಿ "ಉಂಕಿಯ ನಿಗುಚಿ, ಸರಿಗೆಯ ಸಮಗೊಳಿಸಿ, ಸಮಗಾಲನಿಕ್ಕಿ, ಆಣಿಯೊಳು ಎಳವೆಟ್ಟಿದೆ. ಹಿಡಿದ ಲಾಳಿಯ ಮುಳು ಕಂಡಿಕೆಯ ನುಂಗಿತ್ತು. ಈ ಸೀರೆಯನ್ನುದವ ನಾನೋ ನೀನೋ ರಾಮನಾಥಾ" ಈ ಪ್ರಕಾರ ತಮ್ಮ ನಿಬ್ಬೆರಗನ್ನು ನಿಲ್ಲಿಸಿದ್ದಾರೆ.

ಒಟ್ಟಿನಲ್ಲಿ ಸಜ್ಜೀವಿಯಾಗಿ ಸತ್ಕಾಯಕವನೆಸಗುತ್ತ ಸತ್ಕ್ರಿಯೆಯನ್ನಾಚರಿಸಿ, ಸದ್ರೂಪವನಾಂತು, ಚಿದಂಗನಾಗಿ ಚಿತ್ಕ್ರಿಯೆಗಳನಚರಿಸಿ' ಚಿದ್ರೂಪವನಾಂತು, ಚಿಲ್ಲಿಂಗದೊಳು ಬೆರೆಯುವ ಪರಿಯೇ ಶಿವಯೋಗವು

ಕಂದ:—

ವಿಶ್ವದ ವಿವಿಧಾಕಾರೊಳ್ ।
ಶಾಶ್ವತವಸ್ತುವನರಿಯಲು, ಸಾಕಾರಗಳೊಳ್
ನಶ್ವರವನತಿಗಳೆದುಳಿಯುವ ।
ವಿಶ್ವಾತ್ಮಾಧೀಶನೈಕ್ಯವದು ಶಿವಯೋಗಂ ॥ ೧ ॥

ಶಿವಶರಣರ ದಾಸೋಹಂ ।
ಭವಮರಣಂಗಳ ಹರಿಯುವ ವರಸಾಧನವೈ ॥
ಸವೆಸುತ ತನುಮನಧನಗಳ ।
ನವವಿಧ ಭಕ್ತಿಯನವಧರಿಸುದೆ ಶಿವಯೋಗಂ ॥ ೨ ॥

ಇಷ್ಟದೆ ದೃಷ್ಟಿಯನಿಟ್ಟಿರೆ ।
ಸೃಷ್ಟಿಯ ಸೊಬಗಿನ ಸಚಿತ್ರ ಸೋಪಾಧಿಗಳಂ ॥
ನಷ್ಟಿಸಿ ಶಿವಸೃಷ್ಟಿಯೊಳಂ ।
ನಿಷ್ಠೆಯು ನೆಲೆಗೊಂಡಿರುತಿರೆ ಶಿವಯೋಗ ಸುಖಂ ॥ ೩ ॥

ಗುರುವಿಗೆ ಮುಖವುದುಲಿಂಗಂ ।
ಪರತರ ಲಿಂಗಮುಖಜಂಗಮಂ, ಭಕ್ತಮುಖಂ ॥
ವರಪಾದೊದಕಕೀಮೂರ್ ।
ಬೆರೆತಿರೆ ಸುಖವಾಯ ಸುತೀರ್ಥಮುದು ಶಿವಯೋಗಂ ॥ ೪ ॥

ಮದಮತ್ಸರಗಳ ಮೀರುತ ।
ಸದಮಲ ಹೃದಯಾಬ್ಜದ ನಡುನಾಳದೊಳಿರುತಂ ॥
ಕದಲದ ಮನ ಮುಳು ಮುಳುಗುತ ।
ಪಡೆದಿಹ ಲಿಂಗಾಂಗಸಂಗವದು ಶಿವಯೋಗಂ ॥ ೫ ॥

ವಚನ:—

ಲೌಕಿಕದೊಳಗಿದ್ದು ಗುರುಲಿಂಗ ಜಂಗಮದ ಪಾದದೊಳು ಬಿದ್ದು, ಪಾರಮಾರ್ಥವ ಗೆದ್ದು, ಸದ್ದಿಲ್ಲದ ತೀರ್ಥ ಪ್ರಸಾದವ ಮೆದ್ದು ಎಲ್ಲಿದ್ದೆನೆಂಬುದನರಿತಿದ್ದೊಡೆ ನೀನೇ ಹೇಳಾ ! ಸಿದ್ದೇಶ್ವರಾ ॥ ೧ ॥

ಬಾರವ್ವಾ ಬಾ ಗೆಳತಿ ? ಎನ್ನ ಬಾಳುವೆಯನೇನ
ಹೇಳಲಿ. ಎನ್ನ ನಲ್ಲನೊಳು ಒಂದಾಡಿದರೆ ಕಡಿಮೆ, ಎರಡಾ
ಡಿದರೆ ಹೆಚ್ಚು. ಮೂರಾಡಿ ಮೈಮರಿ ತಳಿಸಿಕೊಂಡು ನಾಚಿಕೆ
ಗೇಡಿಯಾಗಿ ನಾಲ್ವರೊಳು ಮುಖದೋರದೆ ಇದ್ದೆನವ್ವಾ.
ಈ ಪರಿಯ ಸಿದ್ಧೇಶ್ವರನೇ ಬಲ್ಲನವ್ವಾ ॥ ೨ ॥

ಹಲವು ದಳದೊಳು ಹಾರಾಡುವ ಜೀವ ಹಂಸನ
ಹಿಡಿದು, ಅದರ ಪಕ್ಕ ( ರೆಕ್ಕೆ ) ದೊಳಗಿರ್ದ ದುಷ್ಕ್ರಿಯೆ
ದುರಾಚಾರಗಳೆಂಬ ಪುಚ್ಛಗಳ ಕಿತ್ತು ಸತ್ಕ್ರಿಯೆ ಸದಾಚಾರ
ಗಳೆಂಬ ಪುಚ್ಛಗಳ ಬಂವಮಾಡಿ ಬಲಿಸಿ, ಹೃದಯಾಕಾಶದ
ಮಧ್ಯದೊಳು ಬಿಡೆ, ಮೆರೆಯುವ ಚಿತ್ಪ್ರಾಣಲಿಂಗವೆಂಬ ವೃಕ್ಷ
ದೊಳು ವಿಹರಿಸಿ ನಿಂದ ನಿಲವನೇನೆಂದು ಹೇಳಲಿ ಸಿದ್ಧೇಶ್ವರಾ ॥ ೩ ॥

ಮಾಡಿಸಲ್ಲದೆ ಮಂದಿರವಪ್ಪುದೇ ? ಕೂಡಿಸಲ್ಲದೆ
ಸಮರಸವಪ್ಪುದೇ ? ನೋಡಿಸಲ್ಲದೆ ನಿಶ್ಚೈಸಬಪ್ಪುದೇ ? ಹಿಡಿ
ಯದಿರ್ದೊಡೆ ಪಡೆಯಬಪ್ಪುದೇ ? ಹೊಳೆಯದಿರ್ದೊಡೆ
ತಿಳಿಯಬಪ್ಪುದೇ ? ಅದು ಕಾರಣ ನೋಟ ಮಾಟ ಕೂಟ
ನೇಟಾದಲ್ಲಿ ನಾಟುವ ನಮ್ಮ ಸಿದ್ಧೇಶ್ವರಾ ॥ ೪ ॥

ಸಚಿತ್ರವನು ಪರಿಸಿಟ್ಟು ವಿಚಿತ್ರದೊಳು ವಿಲೀನನಾಗಿ ಅಚಿತ್ರವ
ಕಂಡು ಅರಿಯದಂತಿರಿಸಿದಯ್ಯ ಸಿದ್ಧೇಶ್ವರಾ ॥ ೫ ॥

# ಪ್ರಾಚೀನ ವೀರಶೈವರ ಅಮೋಘ ಸಮಾಜ ಸೇವೆ.

§( ಲೇಖಕಃ- ಶ್ರೀ ಅನ್ನದಾನೀಶ್ವರ ವಿರಕ್ತಮಠ ಬಾಗಲಕೋಟೆ )§

ಪ್ರಾಚೀನ ವೀರಶೈವರಲ್ಲಿ ಸಾಮಾಜಿಕ ದೃಷ್ಟಿಯಿದ್ದಿತು ಅವರು ಅನೇಕ ಸಮಾಜ ಹಿತದ ಕಾರ್ಯಗಳನ್ನು ಮಾಡಿದ್ದಾರೆ. ಎಲ್ಲ ಜಾತಿಯ ಜನರಿಗೂ ಉಪಯೋಗ ಬೀಳುವಂಥ ಮಹತ್ವದ ಸಮಾಜ ಕಾರ್ಯಗಳನ್ನು ಎಸಗಿರುತ್ತಾರೆ ಸಮಾಜಸೇವೆಯು ವೀರಶೈವರ ಪರಂಪರಾಗತ ಧರ್ಮವೇ ಆಗಿದೆಯೆಂದು ಸ್ಥೂಲವಾಗಿ ಹೇಳಬಹುದು. ವೀರಶೈವರಲ್ಲಿ ಉದಾರ ತತ್ವಗಳಿರುವದರಿಂದಲೂ, ಅವರು ಬಸವನ ಸಮಾಜ ಸೇವಾ ಕಾರ್ಯದಲ್ಲಿ ನುರಿಸತೆ ಹೊಂದಿರುವದರಿಂದಲೂ, ಅವರಲ್ಲಿ ಅನೇಕರು ಪರದೇಶಗಳಲ್ಲಿ ಸಹ ಪರೋಪಕಾರದ ಸಂಸ್ಕೃತಿಯನ್ನು ಹಬ್ಬಿಸಿರುವದರಿಂದಲೂ ಈಗಿನ ವೀರಶೈವರಿಗೆ ಸಮಾಜಸೇವೆಯು ಇಲ್ಲವಾದ ಕಾರ್ಯವೇನೂ ಆಗಲಾರದು.

ಬಸವೇಶ್ವರನಿಗಿಂತ ಪೂರ್ವದಲ್ಲಿ ಸಹ ಲಿಂಗ ಯಜ್ಞೋಪವೀತ ಧಾರಿಗಳಾಗಿದ್ದ ಲಕುಲೀಶರು ಕರ್ನಾಟಕದಲ್ಲಿದ್ದರೆಂತಲೂ, ಈ ಲಿಂಗೋಪಾಸಕರಾಗಿದ್ದ ಲಕುಲೀಶರಲ್ಲಿ ವೀರ ಬಣಜಿಗರು ಉತ್ತಮ ಸಮಾಜ ಸೇವೆಯನ್ನು ಮಾಡುತ್ತಿದ್ದರೆಂದೂ ಇತಿಹಾಸಜ್ಞರು ಹೇಳುತ್ತಾರೆ.

ಮಿ॥ ರಾಯಿಸ್ ಸಾಹೇಬರವರು ಮೈಸೂರ ಪ್ರಾಂತದ ಶಿಲಾಲೇಖನಗಳ ಸಂಬಂಧವಾದ ಪುಸ್ತಕದಲ್ಲಿ ಷಿಕಾರಿಪುರ ತಾಲೂಕ ಬಳ್ಳಿಗಾವಿಯಲ್ಲಿಯ ವೀರ ಬಣಜಿಗರಬಗ್ಗೆ ಹೀಗೆ ಹೇಳುತ್ತಾರೆಃ—

"ಬಳ್ಳಿಗಾವಿಯಲ್ಲಿ ಮಾಣಿಕ್ಯಶೆಟ್ಟಿ, ಮಹಾದೇವಶೆಟ್ಟಿ ಇತ್ಯಾದಿ ಪ್ರಮುಖ ವೀರ ಬಣಜಿಗರು ನೇಪಾಳ, ಲಾಳ, ಬರ್ಬರ ಮೊದಲಾದ ದೇಶಗಳಿಗೆ ಜಲಸ್ಥಳ ಮಾರ್ಗಗಳಿಂದ ವ್ಯಾಪಾರಕ್ಕೋಸ್ಕರ ಹೋಗು

ತ್ತಿದ್ದರು " ಇದರಿಂದ ಇವರು ಶ್ರೀಮಂತರಾಗಿದ್ದರೆಂತಲೂ ಅನೇಕ ಪರೋಪಕಾರದ ರಚನಾತ್ಮಕ ಕಾರ್ಯಗಳನ್ನು ಮಾಡಿದರೆಂತಲೂ ಇತಿಹಾಸ ಸಂಶೋಧಕರ ಅಭಿಪ್ರಾಯವಾಗಿದೆ. ಇದೇ ವೀರಶೈವ ಬಣಜಿಗರು ಮುಂದೆ ಬಸವೇಶ್ವರನ ಸಾಮಾಜಿಕ ಕ್ರಾಂತಿಯಲ್ಲಿ ತೇಲಿಬಂದು ಶುದ್ಧ ಮತ್ತು ಸಂಘಟಿತವಾದ ಬಸವನ ವೀರಶೈವ ಅಥವಾ ಲಿಂಗವಂತ ಧರ್ಮದಲ್ಲಿ ಸೇರ್ಪಡೆಯಾದರೆಂದು ಧರ್ಮಜ್ಞರೂ, ಇತಿಹಾಸಜ್ಞರೂ ಇಬ್ಬರೂ ಹೇಳುತ್ತಾರೆ.

ಮುಂದೆ ವಿಜಯನಗರ ಸಾಮ್ರಾಜ್ಯದ ಘನತೆ ಗೌರವ ವೈಭವ ರಚನೆ ಭದ್ರತೆಗಳಿಗೆ ವೀರಶೈವರು ಎಲ್ಲ ಸಮಾಜದವರಿಗಿಂತಲೂ ಹೆಚ್ಚಾಗಿ ಸಹಾಯ ಮಾಡಿದರೆಂದು ಡಾ. ಸಾಲೆತೋರ ಎಂ. ಏ. ಪಿ. ಎಚ್. ಡಿ. ಯವರು " *The Veera-Shaiv Contribution to the Vijayanager Empire* " ಎಂಬ ಲೇಖನದಲ್ಲಿ ಸಿದ್ಧಮಾಡಿದ್ದಾರೆ.

ಅವರು ಹೇಳುವದೇನಂದರೆ:— " ವೀರಶೈವರು ಉಳಿದ ಎಲ್ಲ ಸಮಾಜದವರಂತೆ ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರಿಗೆ ಆ ಮಹಾರಾಷ್ಟ್ರವನ್ನು ಕಟ್ಟಲಿಕ್ಕೆ ಸಹಾಯ ಮಾಡಿದರು. ಆದರೆ ವೀರಶೈವರು ವಿಜಯನಗರ ಅಸ್ತಿತ್ವಕ್ಕೆ ಜೀವಾಳದಂತೆ ಪ್ರಮುಖ ಕಾರಣರಾಗಿದ್ದರು. ಅವರಷ್ಟು ಸೌಮ್ಯತನದಿಂದಲೂ, ಸದ್ದಿಲ್ಲದೆಯೂ ಯಾವ ಜಾತಿಯವರೂ ಅವರಂತೆ ಪ್ರಾಣ ಪ್ರತಿಷ್ಠಾಪನೆಯ ಕಾರ್ಯಗಳನ್ನು ಮಾಡಲಿಲ್ಲ.

ವಿಜಯನಗರದ ಅರಸರ ವ್ಯಾಪಾರದ ಸಾಹಸ ಕಾರ್ಯಗಳಲ್ಲಿ ವೀರಶೈವ ವ್ಯಾಪಾರಸ್ಥರ ಅನುಭವವು ಮಾರ್ಗದರ್ಶನ ಮಾಡಿತು. ಏಕೆಂದರೆ ಪಶ್ಚಿಮ ಹಿಂದುಸ್ಥಾನ ಮತ್ತು ದಕ್ಷಿಣ ಹಿಂದುಸ್ಥಾನದ ವ್ಯಾಪಾರವನ್ನು ವೀರಶೈವರು ಪ್ರಾಮುಖ್ಯವಾಗಿ ಜರುಗಿಸುತ್ತಿದ್ದರು. ವೀರಶೈವರ ಅಪಾರವಾದ ಸಂಪತ್ತು ಮತ್ತು ಅವರ ನಿಜದೇಶ ವಾತ್ಸಲ್ಯವು ವಿಜಯನಗರದ ಅರಸರಿಗೆ ಶಾಂತಿಯ ಮತ್ತು ಯುದ್ಧದ ಕಾಲಗಳಲ್ಲಿ ಶಕ್ತಿಯ ಸೆಲೆಯಾಗಿದ್ದವು. ವೀರಶೈವರ ಅಂತಸ್ಸತ್ವ ಮತ್ತು ದೇಶಭಕ್ತಿಯೂ,

ಅವರ ಸಮಾಜದೃಷ್ಟಿ ಮತ್ತು ರಾಜನಿಷ್ಠೆಯೂ, ಅವರ ಅನುಭವ ಮತ್ತು ಸಂಪತ್ತು ಇವೆಲ್ಲವೂ ಕೂಡಿ ವಿಜಯನಗರ ಸಾಮ್ರಾಜ್ಯದ ಘನತೆ ಗೌರವಗಳನ್ನು ಹೆಚ್ಚಿಸಲು ಕಾರಣಗಳಾದವು.

೧೨ ಮತ್ತು ೧೩ ನೇ ಶತಮಾನಗಳಲ್ಲಿ ವೀರಶೈವ ಧರ್ಮವನ್ನು ಮಹಾವಿಭೂತಿ ಬಸವನ ಸಂದೇಶಕ್ಕನುಗುಣವಾಗಿ ಸ್ವೀಕರಿಸಿದ್ದ "ವೀರ ಬಣಜಿಗ ಧರ್ಮ" ಎಂಬ ವ್ಯಾಪಾರದ ನೈತಿಕ ಕಾಯದೆಗಳನ್ನೇ ನಿರ್ಮಾಣ ಮಾಡಿದ್ದರು. ಈ ನೈತಿಕ ಕಾಯದೆಗಳಿಂದ ಸಮಾಜದ ಹಿತವಾಗುತ್ತಿತ್ತು.

ವಿಜಯನಗರದ ಸಾಮ್ರಾಜ್ಯದ ಪ್ರಾರಂಭದಿಂದಲೇ ಆ ಸ್ಥಾನಗಳಲ್ಲಿ ಪ್ರಬಲವರ್ಚಸ್ಸನ್ನುಗಳಿಸಿದ ವೀರಶೈವರು ತಮ್ಮ ವರ್ಚಸ್ಸನ್ನು ಸಮಾಜದ ಹಿತಕ್ಕಾಗಿಯೇ ವಿನಿಯೋಗಿಸುತ್ತಿದ್ದರು. ಇದು ನೆನಪಿನಲ್ಲಿಡತಕ್ಕ ವಾತು.

೧೩೫೭ ನೇ ಸಂವತ್ಸರದಲ್ಲಿ ಮಹದೇವಂಣನೆಂಬ ಘನವರ್ತಕನು ಸಂಗನಾಡಿನಲ್ಲಿ ದೊಡ್ಡಕಾಲುವೆಯನ್ನು ಬುಕ್ಕರಾಯನ ಅಪ್ಪಣೆ ಪಡೆದು ಕಟ್ಟಿಸಿ ಸಮಾಜಕ್ಕೆ ಮಹೋಪಕಾರ ಮಾಡಿದ್ದಾನೆ. ಬುಕ್ಕ ಒಡೆಯರ ಮಂತ್ರಿಯಾಗಿದ್ದ ಸೋವಪ್ಪನು ಅನೇಕ ನಾಡುಗಳ ಒಕ್ಕಲಿಗರ ಸಭೆ ಕರೆದು ಆ ಎಲ್ಲ ರೈತರ ಸಮ್ಮುಖದಲ್ಲಿ ರಾಜನ ಆದೇಶದಂತೆ ಮಹದೇವಂಣನಿಗೆ ಅವನ ಸಮಾಜಹಿತ ಕಾರ್ಯಕ್ಕಾಗಿಯೂ, ನಿಸ್ವಾರ್ಥ ಸೇವೆಗಾಗಿಯೂ ಇನಾಮುಕೊಟ್ಟ ಸಂಗತಿಯು ಇತಿಹಾಸದಲ್ಲಿ ಜನಜನಿತವಾಗಿದೆ.

ವಿಜಯನಗರದ ಕಾಲದ ವೀರಶೈವರಿಂದ ಜಾತಿಜಾತಿಗಳಲ್ಲಿ ಸಮರಸ ಭಾವನೆಯು ಅವರ ಸಮಾಜದೃಷ್ಟಿಯಿಂದ ಬೆಳೆಯಿತು.

೧೩೮೨ ನೇ ಸಂವತ್ಸರದಲ್ಲಿ ಹಂಪೆಯ ವಿರೂಪಾಕ್ಷನ ಭವ್ಯದೇವಸ್ಥಾನದಲ್ಲಿ ಮಹಾಪರಿಷತ್ತು ಸೇರಿತ್ತು. ಈ ಮಹಾಪರಿಷತ್ತಿಗೆ ವಿಜಯನಗರ ಸಾಮ್ರಾಜ್ಯದ ಅನೇಕ ಭಾಗಗಳಿಂದ ವೀರಬಣಜಿಗರ ಮುಂದಾಳುತನದಲ್ಲಿ ಅನೇಕ ಒಕ್ಕಲಿಗರೂ, ವ್ಯಾಪಾರಸ್ಥರೂ, ಮತ್ತು ಇತರ

ನಾಗರಿಕರೂ ಸೇರಿದ್ದರು. ೨ ನೇ ಹರಿಹರರಾಯನ ಮಂತ್ರಿವರ ಮುದ್ದ ದಣ್ಣಾಯಕನಿಗೆ ವೀರ ಬಣಜಿಗ ಮುಂದಾಳುಗಳು ಪೃಥ್ವೀಶೆಟ್ಟಿಯೆಂಬ ಬಿರುದನ್ನು ಕೊಟ್ಟು ಎಲ್ಲ ಜನರವತಿಯಿಂದ ವಜ್ರದ ಕಾಣಿಕೆಯನ್ನು ಕೊಟ್ಟರು. ಮುದ್ದ ದಂಣಾಯಕನ ಎಲ್ಲ ಜಾತಿಯ ಜನರಿಗೂ ಅವರವರ ಧರ್ಮಕ್ಕನುಸರಿಸಿ ಪ್ರೀತಿಯಿಂದ ನಡಿಸಿಕೊಳ್ಳುತ್ತಿದ್ದನು.

ವೀರಬಣಜಿಗರ ವ್ಯಾಪಾರೀ ಸಂಘಕ್ಕೆ ಸಲ್ಲತಕ್ಕ ವಾರ್ಷಿಕ ಕಾಣಿಕೆಯನ್ನು ಮುದ್ದ ದಂಣಾಯಕನಿಗೆ ಸಲ್ಲಿಸಬೇಕಾದರೆ ಸ್ವಾರ್ಥವನ್ನು ಮೂಲೆಗೊತ್ತಿ ಸಮಾಜ ಹಿತವನ್ನು ಪ್ರಾಧಾನ್ಯವಾಗಿಟ್ಟುಕೊಂಡು ನಡೆದ ವೀರಶೈವರ ನಡತೆಯು ಈಗಿನ ಎಲ್ಲ ಸಮಾಜದವರಿಗೂ ಆದರ್ಶವಾಗಿದೆಯೆಂದು ಹೇಳಬಹುದು.

೧೩೪೯ ನೇ ಸಂವತ್ಸರದಲ್ಲಿ ದೇವಲಿಂಗ ದೇವರು ಎಂಬ ಲಿಂಗವಂತ ಜಂಗಮ ವರೇಣ್ಯನು ಚಾಮರಾಜ ತಾಲೂಕಿನ ಎಡೆಯೂರಲ್ಲಿ ಸಾರ್ವಜನಿಕ ಕೆರೆಯನ್ನು ಕಟ್ಟಿ ಅಲ್ಲಿಯ ನಾಗರಿಕರ ಬರಗಾಲವನ್ನು ತಪ್ಪಿಸಿ ಮಹೋಪಕಾರಮಾಡಿದನೆಂದೂ, ಅವನಿಗೆ ಎಲ್ಲ ನಾಗರಿಕರೂ ಭಕ್ತಿಯಿಂದ ಭೂದಾನಮಾಡಿದರೆಂದೂ, ಶಿಲಾಲೇಖನದಲ್ಲಿ ಇದೆ.

ಡಾ॰ ಸಾಲೆತೋರರವರ ಮೇಲಿನ ಇತಿಹಾಸ ಜ್ಞಾನದಿಂದ ತುಂಬಿದ ಸತ್ಯಸಂಗತಿಗಳು ಈಗಿನ ವೀರಶೈವರಿಗಷ್ಟೇ ಅಲ್ಲ, ಎಲ್ಲ ಸಮಾಜದವರಿಗೂ ಮಾರ್ಗದರ್ಶನ ಮಾಡತಕ್ಕಂಥವುಗಳಾಗಿವೆ.

ವಿಜಯನಗರದ ಸಾಮ್ರಾಜ್ಯವು ಎಲ್ಲ ಜಾತಿಯ ಜನರಿಗೂ ಕಲ್ಯಾಣ ಮಾಡುತ್ತಿತ್ತು. ಎಲ್ಲ ಜಾತಿಯ ಜನರೂ ಸರಕಾರದೊಡನೆ ಸಹಕರಿಸುತ್ತಿದ್ದರು. ವೀರಶೈವರು ಮುಖ್ಯವಾಗಿ ಸಾಮ್ರಾಜ್ಯದ ಪ್ರಾಣದಂತಿದ್ದರು. ಅವರು ಸಮಾಜದ ಕಲ್ಯಾಣವನ್ನು ಸ್ವಾರ್ಥದ ಆಸೆಯಿಲ್ಲದೆ ಮಾಡುತ್ತಿದ್ದರು. ೩೦೦ ವರ್ಷಗಳವರೆಗೆ ಪ್ರಬಲ ಕಲ್ಯಾಣ ರಾಷ್ಟ್ರವಾಗಿ ( *Wel fare state* ) ವಿಜಯನಗರವು ಉಳಿಯಬೇಕಾದರೆ ವೀರಶೈವ ಮುಖ್ಯರಾದ ಎಲ್ಲ ಸಾರ್ವಜನಿಕರಲ್ಲಿ ಉದಾರಭಾವ, ಸಮಾಜಹಿತನಿಷ್ಠೆ, ದೇಶ

ಭಕ್ತಿ, ಈಶನಿಷ್ಠೆ ಮುಂತಾದ ಜಾಜ್ವಲ್ಯನೈತಿಕ ಗುಣಗಳೂ, ವ್ಯವಹಾರ, ಜ್ಞಾನ, ದೇಶ ವಿದೇಶಗಳ ಅನುಭವ, ಜಾಣತನ, ದೃಢಬುದ್ಧಿ ಮುಂತಾದ ಬೌದ್ಧಿಕ ಗುಣಗಳೂ ಪ್ರಮುಖಕಾರಣಗಳಾದವೆಂಬದನ್ನು ಸ್ಮರಿಸಬಹುದು.

ಈಗಿನ ಸರಕಾರವು, ಸಮಾಜವು ತನಗಿಂತ ದೊಡ್ಡದೆಂದು ಭಾವಿಸಿ ಸಮಾಜ ಸೇವೆ ಮಾಡಹತ್ತಿದರೆ, ಸಾರ್ವಜನಿಕರ ಸಹಕಾರವು ಸಿಗುವದರಲ್ಲಿ ಸಂದೇಹವೇನು ?

ವೀರಶೈವರು ಮುಖ್ಯವಾಗಿ ತಮ್ಮ ಪರಂಪರಾಗತ ಧರ್ಮವಾಗಿರುವ ಸಮಾಜ ಸೇವೆಯನ್ನು ಪ್ರಾಚೀನ ವೀರಶೈವರಂತೆ ಮಾಡಹತ್ತಬೇಕು. ಅಲ್ಲಲ್ಲಿ ಕೆಲಮಹನೀಯರು ಮಾಡುತ್ತಲೂ ಇದ್ದಾರೆ. ಶ್ರೀಮಂತ ವೀರಶೈವರು ಮತ್ತು ಬುದ್ಧಿವಂತ ವೀರಶೈವರು ತಮ್ಮ ಶಕ್ತಿಗಳನ್ನು ರಾಷ್ಟ್ರನಿರ್ಮಾಣಕಾರ್ಯಗಳಲ್ಲಿ ಉಪಯೋಗಿಸಿ ಸುಸಂಪನ್ನ, ಧೀರೋದಾತ್ತ ಸುಖಮಯ ಸಂಯುಕ್ತ ಕರ್ನಾಟಕವನ್ನು ಕಟ್ಟುವದರಲ್ಲಿ ಉದ್ಯುಕ್ತರಾಗಲಿ !!

# ಅಷ್ಟಾದಶ ಸ್ಥಳಗಳು

( ಲೇಖಕ :- ಶ್ರೀ ಬ. ಚ. ಪಟ್ಟೇದ ಹುಕ್ಕೇರಿ )

ಷಟ್‌ಸ್ಥಲಗಳಲ್ಲಿ ಪ್ರತಿಯೊಂದಕ್ಕೆ ಆ ಷಟ್‌ಸ್ಥಲಗಳನ್ನೇ ಸಂಬಂಧಿಸಿದರೆ ಮೂವತ್ತಾರು ಸ್ಥಲಗಳಾಗುವವೆಂಬುದನ್ನು ಶ್ರೀ ಬಸವಂಣನವರು ತಮ್ಮ ವಚನಗ್ರಂಥಗಳಲ್ಲಿ ಸ್ಪಷ್ಟವಾಗಿ ತೋರಿಸಿಯೇ ಇದ್ದಾರೆ. ಅವುಗಳನ್ನು ಅಂಗಸ್ಥಳಗಳೆಂದು ಕರೆಯಬಹುದು. ಅದೇ ಮೇರೆಗೆ ಷಡ್ಲಿಂಗಗಳಲ್ಲಿ ಪ್ರತಿಯೊಂದಕ್ಕೆ ಆ ಷಡ್ಲಿಂಗಗಳನ್ನು ಸಂಬಂಧಿಸಿದರೆ ಮೂವತ್ತಾರು ಲಿಂಗಸ್ಥಳಗಳಾಗುವವೆಂಬುದನ್ನು ಹಿಂದಿನ ಲೇಖದ ಕೊನೆಗೆ ಕೊಟ್ಟಿದ್ದನ್ನು ಷಟ್ ತ್ರಿಂಶತ್ ಲಿಂಗಾರ್ಪಿತ ಪಟದಲ್ಲಿ ಕಾಣಬಹುದು.

ಇದೇ ಮೇರೆಗೆ ಷಟ್ ಸ್ಥಲಗಳಲ್ಲಿ ಒಂದೊಂದಕ್ಕೆ ತ್ರಿಅಂಗ ಸ್ಥಳಗಳನ್ನು ಷಡ್ಲಿಂಗಗಳಲ್ಲಿ ಒಂದೊಂದಕ್ಕೆ ತ್ರಿಲಿಂಗಗಳನ್ನು ಸಂಬಂಧಿಸಿದರೆ ಅಷ್ಟಾದಶ ( ೧೮ ) ಅಂಗಸ್ಥಾನಗಳೂ, ಅಷ್ಟಾದಶ ಲಿಂಗ ಸ್ಥಾನಗಳೂ, ಹುಟ್ಟುತ್ತವೆ. ಅವುಗಳನ್ನು ಕೆಳಗಿನ ಪಟದಲ್ಲಿ ಕಾಣಬಹುದು.

# ಅಷ್ಟಾದಶ ಅಂಗಗಳನ್ನೂ ಅಷ್ಟಾದಶ ಲಿಂಗಗಳನ್ನೂ ತೋರಿಸುವ ಪಟ್ಟಿ.

| [illegible] | ಅಂಗಗಳ ಹೆಸರು | ತ್ಯಾಗಾಂಗ | | ಭೋಗಾಂಗ | | ಯೋಗಾಂಗ | |
|---|---|---|---|---|---|---|---|
| | | ಈಶ್ವರನ | ಮಹೇಶ್ವರನ | ಪ್ರಸಾದಿಯು | ಪ್ರಾಣಲಿಂಗಿಯು | ಶರಣನ | ಐಕ್ಯನ |
| ೧ | ತ್ಯಾಗಾಂಗ | ಗುರುಭಕ್ತ | ಇಹಲೋಕ ವೀರ | ಅರ್ಪಿತ ಪ್ರಸಾದಿ | ಆಚಾರ ಪ್ರಾಣಿ | ಇಷ್ಟ ಲಿಂಗಾರ್ಚಕ ಶರಣ | ಕಾಯ್ಯ ಲಿಂಗೈಕ್ಯ |
| ೨ | ಭೋಗಾಂಗ | ಲಿಂಗಭಕ್ತ | ಪರಲೋಕ ವೀರ | ಅವಧಾನ ಪ್ರಸಾದಿ | ಲಿಂಗ ಪ್ರಾಣಿ | ಪ್ರಾಣ ಲಿಂಗಾರ್ಚಕ ಶರಣ | ಜೀವ ಲಿಂಗೈಕ್ಯ |
| ೩ | ಯೋಗಾಂಗ | ಜಂಗಮ ಭಕ್ತ | ಸಹಜ ವೀರ | ಪರಿಣಾಮ ಪ್ರಸಾದಿ | ಜಂಗಮ ಪ್ರಾಣಿ | ಭಾವ ಲಿಂಗಾರ್ಚಕ ಶರಣ | ಭಾವ ಲಿಂಗೈಕ್ಯ |

# ಅಷ್ಟಾದಶ ಲಿಂಗಸ್ಥಲಗಳು

| ಸಂಖ್ಯೆ | ಲಿಂಗಗಳು | ಇಷ್ಟಲಿಂಗ | | ಪ್ರಾಣಲಿಂಗ | | ಭಾವಲಿಂಗ | |
|---|---|---|---|---|---|---|---|
| | | ಆಚಾರ ಲಿಂಗದ | ಗುರು ಲಿಂಗದ | ಶಿವಲಿಂಗದ | ಜಂಗಮ ಲಿಂಗದ | ಪ್ರಸಾದ ಲಿಂಗದ | ಮಹಾ ಲಿಂಗದ |
| ೧ | ಇಷ್ಟಲಿಂಗ | ಸದಾಚಾರ ಲಿಂಗ | ದೀಕ್ಷಾಗುರು ಲಿಂಗ | ಇಷ್ಟಕ್ರಿಯಾ ರೂಪ ಶಿವಲಿಂಗ | ಸ್ವಯ ಜಂಗಮ ಲಿಂಗ | ಶುದ್ಧ ಪ್ರಸಾದಲಿಂಗ | ಪಿಂಡಜ ಮಹಾಲಿಂಗ |
| ೨ | ಪ್ರಾಣಲಿಂಗ | ನಿಯತಾಚಾರ ಲಿಂಗ | ಶಿಕ್ಷಾಗುರು ಲಿಂಗ | ಪ್ರಾಣಲಿಂಗ ರೂಪ ಶಿವಲಿಂಗ | ಚರಜಂಗಮ ಲಿಂಗ | ಸಿದ್ಧ ಪ್ರಸಾದಲಿಂಗ | ಅಂಡಜ ಮಹಾಲಿಂಗ |
| ೩ | ಭಾವಲಿಂಗ | ಗಣಾಚಾರ ಲಿಂಗ | ಜ್ಞಾನಗುರು ಲಿಂಗ | ಭಾವಲಿಂಗ ರೂಪ ಶಿವಲಿಂಗ | ಪರಜಂಗಮ ಲಿಂಗ | ಪ್ರಸಿದ್ಧ ಪ್ರಸಾದಲಿಂಗ | ಬಿಂದ್ವಜ ಮಹಾಲಿಂಗ |

## ಈಶ್ವರ ಸ್ಥಳ.

ಈಶ್ವರ ಸ್ಥಳ :— ಇದರ ಅಂಗಸ್ಥಳಗಳು ಮೂರು, ಲಿಂಗಸ್ಥಳಗಳು ಮೂರು ಇರುತ್ತವೆ. ಪ್ರತಿಯೊಂದು ಅಂಗಸ್ಥಳದ ಮುಂದೆಯೇ ಅದರ ಲಿಂಗಸ್ಥಳವನ್ನು ಉಲ್ಲೇಖಿಸಿರುತ್ತದೆ. ಹೀಗೆಯೇ ಉಳಿದ ಕಡೆಯಲ್ಲಿಯೂ ಅನುಸರಿಸಿರುವದು.

ಸಂಸಾರ ಹೇಯ ಹೊಂದಿದ ಮನುಜನು, ತನಗೆ ದೇವ ಪ್ರಾಪ್ತಿಯ ಮಾರ್ಗ ತೋರಿಸಲೆಂದು ಗುರುಶೋಧಮಾಡಿ ಅವನಿಗೆ ಮೊರೆಇಟ್ಟರೆ, ಆ ಗುರುವು ಅವನಿಗೆ ದೀಕ್ಷೆಯನ್ನು ಮಾಡುವನು. ತಿಳಿಗೇಡಿತನವನ್ನು ಬಿಟ್ಟು ತಿಳಿವಿನ ಮಾರ್ಗವಿಡಿದು ನಡೆಯುವ ರೀತಿಯೇ ದೀಕ್ಷೆಯು. ಆ ದೀಕ್ಷೆಗೆ ಗುರುವು ಒಂದು ಆಕಾರಕೊಟ್ಟು ಅದನ್ನು ಪೂಜಿಸುವ ಸಲುವಾಗಿ ಕರದಲ್ಲಿಡುವದದೇ ಲಿಂಗವು. ಲಿಂಗವನ್ನು ಪೂಜಿಸುವದೆಂದರೆ ಕೆಟ್ಟ ಕಾರ್ಯಗಳನ್ನು ಬಿಟ್ಟು, ಒಳ್ಳೆಯ ಕಾರ್ಯಗಳನ್ನು ಮಾಡುತ್ತ ಹೋಗುವದೇ ಹೊರತು ಮತ್ತೇನು ಅಲ್ಲ. ಕರದ ಆ ಇಷ್ಟಲಿಂಗವನ್ನು ಜಲಪತ್ರ ಪುಷ್ಪಗಳಿಂದ ಔಪಚಾರಿಕವಾಗಿ ಮಾತ್ರ ಪೂಜಿಸಬೇಕು. ಅದೇನು ಲಿಂಗದ ನಿಜವಾದ ಪೂಜೆಯಲ್ಲ. ಆದರೂ ಅದನ್ನು ಎಂದೂ ಬಿಡಕೂಡದು. ವ್ಯವಹಾರದಲ್ಲಿ ಯಾವಾಗಲೂ ಸತ್ ಕ್ರಿಯೆ (ಕಾರ್ಯ) ಮಾಡುತ್ತ ಹೋಗುವದೇ ನಿಜವಾದ ಇಷ್ಟಲಿಂಗ ಪೂಜೆಯು. ತಾನು ಯಾವಾಗಲೂ ತಿಳಿವು ( ಅರಿವು—ಜ್ಞಾನ ) ಹಿಡಿದು ಎಚ್ಚರದಿಂದ ನಡೆಯಬೇಕೆಂಬುದರ ನೆನಪು ಕೊಡುವದಕ್ಕೇನೆ ಹೊರಗೆ ಇಷ್ಟಲಿಂಗವನ್ನು ಧರಿಸುವದು ಮತ್ತು ಪೂಜಿಸುವದು ಅವಶ್ಯವಾಗಿದೆ. ಅದಿಲ್ಲದಿದ್ದರೆ ಮನುಜನಿಗೆ ಅರಿವೇ ಉಳಿಯುವದಿಲ್ಲ.

( ಅ ) ೧ **ಗುರುಭಕ್ತ** :— ಗುರುವಿನಲ್ಲಿ ಭಕ್ತಿಯನ್ನಿಟ್ಟ ಈಶ್ವರನೇ ಗುರುಭಕ್ತನು. ಗುರುವೆಂದರೆ ದೀಕ್ಷೆ ಮಾಡಿದ ಮಹಾತ್ಮನು. ಅವನ ಸದಾಚಾರ ಶಿವಜ್ಞಾನಗಳನ್ನು ಕಂಡೇ ಅವನನ್ನು ಗುರುವಾಗಿ ಸ್ವೀಕರಿಸುವರು. ಅವಿಲ್ಲದೇ ಯಾರೂ ಅವನಿಗೆ ಮಾನ ನೀಯರು. ಆದುದರಿಂದ ಗುರುವೆಂದರೆ ಆತನ ದೇಹವಲ್ಲ; ಅವನಲ್ಲಿರುವ ಜ್ಞಾನಾಚಾರ

ಗುಣಗಳು. ಇಂತಹ ಗುರುವು ಪೂಜ್ಯನು. ಅಂತೇ ಈಶ್ವರನು ಗುರು ಭಕ್ತನಾಗುವದು ಅವಶ್ಯವದೆ.

೨ **ಸದಾಚಾರ ಲಿಂಗಃ—** ಗುರುಭಕ್ತನ ಲಿಂಗವು ಸದಾಚಾರ ಲಿಂಗವು. ಗುರುವೆಂದರೆ ಸದಾಚಾರ. ಗುರುವಿನಲ್ಲಿ ಭಕ್ತಿಯಿಡುವದೆಂದರೆ ಒಳ್ಳೆಯ ಕಾರ್ಯಗಳನ್ನು ಮಾಡುತ್ತ ಸದಾಚಾರ ಸದ್ಗುಣ ಸಂಪನ್ನನಾಗ ಲಿಕ್ಕೆ ಮನ್ನಿಸುವದೆಂದೇ ತಿಳಿಯಬೇಕು. ಹಾಗೇನು ಮಾಡದೆ ಸ್ವೇಚ್ಛಾ ಚಾರಿಯಾಗಿ ವರ್ತಿಸಹತ್ತಿದರೆ ಅದು ಗುರುಭಕ್ತಿ ಎನಿಸದು. "ತನುವೇ ಗುರು" ವೆಂತಲೂ ಹೇಳಿರುವರು. ಅದುದರಿಂದ ಈಶ್ವರನು ತನ್ನ ತನುವನ್ನು ಗುರು ಸ್ವರೂಪವಾಗಿ ಮಾಡುವದೆಶೆಯಿಂದ, ಅದರ ಮೂಲಕ ಯಾವಾಗಲೂ ಒಳ್ಳೆಯ (ಇಷ್ಟ) ಕಾರ್ಯಗಳನ್ನೇ ಮಾಡುತ್ತಿರಬೇಕು. ಅನಿಷ್ಟ (ಕೆಟ್ಟ) ಕ್ರಿಯಾ ಆಚಾರಾದಿಗಳನ್ನು ಸಹಸಾ ಮಾಡದೇ ಇರುವ ನಿಶ್ಚಯವನ್ನು ಮಾಡಬೇಕು. ಲಿಂಗವಂತನು ಇತರರನ್ನು ನೋಡಿ ಅವರ ಹೀನತನವನ್ನು ಕಲಿಯದೆ, ತನ್ನ ಉದ್ಧಾರದ ಕಡೆಗೇನೇ ದೃಷ್ಟಿ ಯುಳ್ಳವನಾಗಿರಬೇಕು. ಸದಾಚಾರಿಯಾಗಬೇಕಾದರೆ ಎಲ್ಲಕ್ಕೂ ಮೊದಲು ಬೇಡುವದನ್ನು ಬಿಡಬೇಕು. (ಭಿಕ್ಷೆಯು ವರ್ಜ್ಯ) ತರುವಾಯ ಪರರ ದೇನೂ ಹಿಡಿಯಕೂಡದು. ಕಳವು ಮಾಡಕೂಡದೆಂಬುದು ಇಲ್ಲಿ ಹೇಳಿದಂತಾಯಿತು. ಇವೆರಡೂ ನಿಷಿದ್ಧವಾದ ಮೇಲೆ ತನ್ನ ಸಂರಕ್ಷಣೆ ಗಾಗಿ ಈಶ್ವರನು ಯಾವದಾವರೊಂದು ಸತ್ಯ ಶುದ್ಧ ಕಾಯಕ (ಉದ್ಯೋಗ) ವನ್ನು ಹಿಡಿಯಲೇಬೇಕು. ಆದ್ದರಿಂದ ಅವನ ಹಾಗು ಕುಟುಂಬದ ಸಂರಕ್ಷಣೆಯಾಗುವದಲ್ಲದೇ ಸತ್ಪಾತ್ರದಲ್ಲಿ ಶಕ್ಯವಿದ್ದಷ್ಟು ದಾನ ಮಾಡ ಲಿಕ್ಕೂ, ಪರರಿಗೆ ಸಹಾಯ (ಸೇವೆ) ಸಲ್ಲಿಸಲಿಕ್ಕೂ ಅನುಕೂಲವಾಗು ವದು.

(ಬ) **ಲಿಂಗಭಕ್ತಃ—** ಲಿಂಗವೆಂದರೆ ತಿಳಿವು—ಅರಿವು—ಜ್ಞಾನ. ಅಜ್ಞಾನವನ್ನು ದೂರೀಕರಿಸಿ ಯಾವಾಗಲೂ ಜ್ಞಾನವಿಡಿದು ನಡೆಯದಿದ್ದರೆ ಆತನು ಲಿಂಗಧರಿಸಿದಂತಾಗಲಿಲ್ಲ. ಗುರುವಿನಿಂದ ಅದನ್ನು ಪಡೆದುದರ ಪ್ರಯೋಜನವೂ ಇಲ್ಲವಾಯಿತು. "ತನಗೆ ದೇವರ ಪ್ರಾಪ್ತಿಯ ಮಾರ್ಗ ತೋರಿಸು" ಎಂದು ಗುರುವನ್ನು ಹೊಂದಿದುದು ನಿರರ್ಥಕವಾಗಿ ಬಿಡು ವದು. ಆ ಕಾರಣ ಲಿಂಗ ಪಡೆದುದರ ಮೂಲ ಉದ್ದೇಶವು ಸಫಲ

ವಾಗುವಂತೆಯೇ ಲಿಂಗಾಂಗಿಯು ನಡೆಯಲಿಕ್ಕೆ ಸಹಸಾ ತಪ್ಪಬಾರದು. ನಿಜವಾದ ಲಿಂಗ ಪೂಜೆಯೆಂದರೆ "ಅನಿಷ್ಟ ಕಾರ್ಯಗಳನ್ನು ಬಿಟ್ಟು ಇಷ್ಟ ಕಾರ್ಯಗಳನ್ನು ಮಾಡುತ್ತ ಹೋಗುವದೇ" ಎಂದು ಮೇಲೆ ಹೇಳಿದುದು ನೆನಪಿರುವದಷ್ಟೇ! ಹಾಗೆ ಮಾಡದಿದ್ದರೆ ಅವಂತಹ ಲಿಂಗ ಭಕ್ತನೆನಿಸುವೆ? ಬರಿಯ ಕರದ ಇಷ್ಟಲಿಂಗವನ್ನೇ ಪೂಜಿಸುವವರು ನರ ಗುರಿಗಳೆಂದು ಶ್ರೀ ಪ್ರಭುದೇವರು ಹೇಳಿದ್ದಾರೆ. ಹೊರಗಿನ ಇಷ್ಟದ ಪೂಜೆ ನಡೆದಂತೆಯೇ ವ್ಯವಹಾರದೊಳಗಿನ ಪ್ರತಿಯೊಂದು ಕಾರ್ಯವು ಒಳ್ಳೆಯ ತಿಳುವಳಿಕೆಯಿಂದಲೇ ಸಾಗಬೇಕು. ನೀಚ ಸ್ವಾರ್ಥಕ್ಕಾಗಿ ವಂಚನೆ ಮರೆ ಮೋಸ ಇತ್ಯಾದಿಗಳು ನಡೆಯಲೇಬಾರದು. ಹೀಗೆ ನಡೆಯುವವನೇ ಲಿಂಗಭಕ್ತನು.

**ನಿಯುತಾಚಾರ ಲಿಂಗಃ—** ಇದು ಲಿಂಗಭಕ್ತನೆನಿಸುವ ಈಶ್ವರನು ಪೂಜಿಸುವ ಲಿಂಗವು. ನಿಯುತ+ಆಚಾರ = ನಿಯುತಾಚಾರ. ನಿಯುತ ಅಂದರೆ ಮರ್ಯಾದಿತವಾದ ಅಥವಾ ನಿಯಮಿತವಾದ ಆಚಾರವೆನಿಸುವದು. ಈಶ್ವರನ ನಡತೆ. ಈ ರೀತಿಗಳೆಲ್ಲ ಹೀಗೆ ಕಟ್ಟನಿಂದಲೇ ನಡೆಯಬೇಕಾಗುವದು. ದಿನಾಲು ಸ್ನಾನಾದಿಗಳಿಂದ ಶುಚಿರ್ಭೂತನಾಗಿ ಕರದಿಷ್ಟ ಲಿಂಗವನ್ನು ಭಕ್ತಿಯಿಂದ ವಿಭೂತಿ ಪತ್ರಿ ಪುಷ್ಪಾದಿಗಳಿಂದ ಪೂಜಿಸಬೇಕು. ತನ್ನ ಕಾರ್ಯಗಳ ಕ್ರಮವನ್ನು ಗೊತ್ತುಪಡಿಸಿ ತದನುಸಾರ ನಡೆಯಬೇಕು. ಇದಕ್ಕಾಗಿ ಅಂತರ್ಲಿಂಗ (ಮುಖ್ಯವಾಗಿ ಮನವು) ಸರಿಯಾದ ದಾರಿಯಲ್ಲಿ ನಡೆಯಲಿಕ್ಕೆ ಬಹು ನೆರವಾಗುವದು. ಇಂತು ವರ್ತಿಸುವದೇ ನಿಯುತಾಚಾರ ಲಿಂಗವನ್ನು ಪೂಜಿಸುವುದು ಎಂದರಿಯಬೇಕು.

(೪) **ಜಂಗಮ ಭಕ್ತಃ—** ಲಿಂಗಧಾರಣ ಹೊಂದಿ ಶಿವಾಚಾರ ಮಾರ್ಗದಲ್ಲಿ ನಡೆದು ಉದ್ಧಾರವಾಗಬೇಕೆಂದು ಬಯಸುವವರೆಲ್ಲರೂ ಜಂಗಮರು. ಇಂತಹ ಜಂಗಮರನ್ನು ನೋಡಿ ತಾನೂ ಅವರ ಅನುಕರಣ ಮಾಡುವದು ಈಶ್ವರನಿಗೆ ಬಹು ಉಪಯುಕ್ತವಾದುದು. ಅವರ ಸಹವಾಸದಲ್ಲಿದ್ದು, ಅವರ ಒಳ್ಳೆಯ ನಡತೆ ರೀತಿಗಳನ್ನು ನೋಡಿ ತಾನೂ ಹಾಗೆ ನಡೆಯುವದು ವಿಹಿತವಾಗಿದೆ. ಹೀಗೆ ಮಾಡುವದೇ ಜಂಗಮ ಭಕ್ತಿಯು. ಶಿವಾಚಾರ, ಶಿವಜ್ಞಾನ, ಸುನೀತಿಗಳಿಲ್ಲದೇ ಇರುವವರು ನಾವು

ಜಂಗಮರೆಂದು ಹೇಳಿಕೊಂಡರೂ ಅದೆಲ್ಲವೂ ವ್ಯರ್ಥ. ಇಂಥಹ ಸುಗುಣ ಶಾಲಿ ಈಶ್ವರನೇ ಜಂಗಮ ಭಕ್ತನು.

**ಗಣಾಚಾರಲಿಂಗ:** — ಇದು ಜಂಗಮ ಭಕ್ತ ಈಶ್ವರನ ಲಿಂಗವು. ಗಣವೆಂದರೆ ಸಮುದಾಯ, ಸಮಾಜ, ಲಿಂಗಧಾರಿಗಳ ವರ್ಗ. ಇವರೇ ವೀರಶೈವರು. ಇವರೆಲ್ಲರೂ ಸತ್ ಕಾಯಕದಿಂದಲೇ ಬಾಳಬೇಕು ಆ ಉತ್ಪನ್ನದಿಂದಲೇ ತಾವು ಸಕುಟುಂಬ ರಕ್ಷಣೆ ಹೊಂದಿ ಅನಾಥರೂ, ರೋಗಿಗಳೂ, ವಂಪ್ಪಿನವರೂ, ಅಶಕ್ತರೂ, ಅಂಗಹೀನರೂ, ಸ್ತ್ರೀಯರೂ, ಬಾಲರೂ, ಮೊದಲಾದವರಿಗೆ ಅವರವರ ಪರಿಸ್ಥಿತಿಯನ್ನು ಲಕ್ಷಕ್ಕೆ ತಂದು, ತನ್ನ ಯೋಗ್ಯತಾನುಸಾರ ದಾನವಮಾಡಬೇಕು. ಸಾರ್ವಜನಿಕ ಕಾರ್ಯಕಳಿಗೂ ಸಹಾಯ ಮಾಡಬೇಕು. ಮೇಲೆ ಹೇಳಿದಂತೆ ಸದಾ ಚಾರ ನಿಯತಾಚಾರಗಳಿಗೂ ಸಹಾಯ ಮಾಡಬೇಕು. ಮೇಲೆ ಹೇಳಿ ದಂತೆ ಸದಾಚಾರ ನಿಯತಾಚಾರಗಳಿಗೂ ಸರಿಯಾಗಿ ಅವಲಂಬಿಸಲ್ಪಡ ಬೇಕು. ಇದೇ ಗಣಾಚಾರವು.

## ೨ ಮಹೇಶ್ವರ ಸ್ಥಳ

ಮೇಲೆ ಹೇಳಿದಂತೆ ವರ್ತಿಸಿದ ಈಶ್ವರನು ಮುಂದೆ ಮಹೇಶ್ವರ ನಾಗುವನು. ಮಹೇಶ್ವರನು ಈಶ್ವರನಿಗಿಂತಲೂ ಹೆಚ್ಚಾಗಿ ಶಿವಮಾರ್ಗ ದಲ್ಲಿ ಪ್ರಗತಿಯನ್ನು ಪಡೆಯತಕ್ಕವನು. ಹೊರಗೆ ತೋರುವ ಪ್ರತಿಯೊಂದು ಆಚಾರದಲ್ಲಿಯೂ ಈತನು ಒಳ್ಳೆಯ ಉನ್ನತಾವಸ್ಥೆಯನ್ನು ಪಡೆಯಬೇ ಕಾಗುವದು. ಈತನಿಗೂ ಮೂರು ಅಂಗಸ್ಥಳಗಳೂ ಮೂರು ಲಿಂಗಸ್ಥಳ ಗಳೂ ಉಂಟು. ಅವು ಕ್ರಮದಿಂದ ಕೆಳಗೆಬರುವವು.

( ಅ ) **ಇಹಲೋಕ ವೀರ:**— ಇಹಲೋಕವೆಂದರೆ ಭೂಲೋಕ ಅಥವಾ ಸಂಸಾರ- ವೀರ ಅಂದರೆ ವಿದ್ಯೆಯಲ್ಲಿ ರಮಿಸುವವ. ಇಹ ಲೋಕ ವೀರನಾಗ ಬೇಕಾದರೆ ಆ ಮಹೇಶ್ವರನು ಸಂಸಾರದ ಎಲ್ಲ ಗುಣಾ ವಗುಣಗಳನ್ನು ( ಸುಖದು:ಖಗಳನ್ನು ) ಅನುಭವಿಸಿ ಜಾಣನಾಗಿರಬೇ ಕಾಗುವದು. ಸಂಸಾರಕ್ಕೆ ಬೇಸತ್ತು ಬೇರೆ ಜನರಿಗೆ ಸರಿಯಾದ ಮಾರ್ಗ ತೋರಿಸಲು ಸಮರ್ಥನಾಗಿರಬೇಕಾಗುವದು.

**ದೀಕ್ಷಾ ಗುರುಲಿಂಗಃ**— ಈತನು ದೀಕ್ಷಾಗುರುವಾಗಿ ಭಕ್ತ ಜನರಿಗೆ ಲಿಂಗಧಾರಣ ಮಾಡಬೇಕಾಗುವದು. ಏನೂ ತಿಳಿಸಿಕೊಡದೆ ಮೂಕನಂತೆ ಬರಿಯ ಲಿಂಗಧಾರಣೆಮಾಡಿದರೆ ತೀರದು. ದೀಕ್ಷೆ ಲಿಂಗಧಾರಣ ಲಿಂಗಪೂಜೆ ಮೊದಲಾದವನ್ನು ಮೇಲೆ ಹೇಳಿದಂತೆ ಮನಸ್ಸಿನ ಮೇಲೆ ಬಿಂಬಿಸಿಕೊಟ್ಟು, ಆದರಂತೆ ನಡೆಯಹಚ್ಚಬೇಕು. ಪ್ರಪಂಚಕ್ಕೆ ಬೇಸತ್ತವನಿಗೆ ಧೈರ್ಯಕೊಟ್ಟು, ಪ್ರಪಂಚದ ವಸ್ತು ಸ್ಥಿತಿಯನ್ನು ತಿಳಿಸಿ ಹೇಳಿ ಆ ಪ್ರಪಂಚದಲ್ಲಿಯೇ ಇದ್ದುಕೊಂಡು ಅದೆಂತು ಈಶ್ವರತ್ವ ಪಡೆಯಬೇಕೆಂಬುದನ್ನು ತಿಳಿಸಿಕೊಡಬೇಕು.

( ಬ ) ೧ **ಪರಲೋಕ ವೀರಃ** -ಪರಲೋಕವೆಂದರೆ ಕೈಲಾಸ ಅಥವಾ ಶಿವಲೋಕ, ಈ ಪರಲೋಕ ಸಂಬಂಧಿಯ ಸಂಗತಿಗಳೆಲ್ಲ ಗ್ರಂಥಗಳಲ್ಲಿ ಬಿತ್ತರಿಸಿದಂತೆ ಯೋಗ್ಯವಾಗಿ ಹೇಳಲಿಕ್ಕೆ ಈತನು ಬಲ್ಲವನಾಗಿರಬೇಕು. ಶಾಸ್ತ್ರ-ಪುರಾಣ-ಕಥಾ-ಕೀರ್ತನಾದಿಗಳನ್ನು ಸಹ ಅರಿತಿರಬೇಕು. ಶಿವಲೋಕದ ಹಾಗೂ ಶಿವಲೀಲೆಯ ಎಲ್ಲ ಸಂಗತಿಗಳನ್ನು ಸಾದ್ಯಂತವಾಗಿ ಓದಿ ಮನನಿಸಿರಬೇಕು. **ಸಾರಾಂಶಃ**- ಇವನು ಸುವಿದ್ಯನಿರಬೇಕೇ ಹೊರತು ಅಬಂಡೇಶ್ವರನಿರಬಾರದು.

೨ **ಶಿಕ್ಷಾಗುರು ಲಿಂಗಃ**— ಇದು ಪರಲೋಕ ವೀರನು ಭಜಿಸುವ ಲಿಂಗವು. ಬರಿಯ ದೀಕ್ಷೆ ಹೊಂದಿದವನಿಗೆ ಅದಾವ ಸಂಗತಿಗಳೂ ಗೊತ್ತಿರುವದಿಲ್ಲ ಅದೆಲ್ಲವನ್ನು ಸರಿಯಾಗಿ ತಿಳಿಸಿ ಕೊಡುವದೇ ಶಿಕ್ಷಾಗುರುವಿನ ಕಾರ್ಯವು. ಶಿಕ್ಷೆ ಎಂದರೆ ಶಿಕ್ಷಣ ಕೊಡುವದು. ಶಿವಮಾರ್ಗದ ಅವಶ್ಯವಾದ ವಿಷಯಗಳನ್ನೆಲ್ಲ ದೀಕ್ಷೆ ಹೊಂದಿದವನಿಗೆ ತಿಳಿಸಿಕೊಡದಿದ್ದರೆ, ಆತನು ತನ್ನ ಮನಸ್ಸಿಗೆ ಬಂದಂತೆ ವರ್ತಿಸುವನು. ಸುತ್ತುಮುತ್ತು ಇರುವ ಅಲಿಂಗಿಗಳನ್ನು ನೋಡಿ, ತಾನೂ ಹಾಗೆಯೇ ನಡೆಯಹತ್ತುವನು. ಎಂದಾದರೊಮ್ಮೆ ಪುರಾಣ ಕಥಾ ಕೀರ್ತನ ಕೇಳಿದರೆ ಅದರಿಂದೇನೂ ಆಗದು. ಅದನ್ನೆಲ್ಲ ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಟ್ಟು ಬಿಡುವನು. ಅದೆಲ್ಲ ಒಂದು ಸೊಗಸಿನಿಂದ ಹೊತ್ತುಗಳೆದುದರಲ್ಲಿ ಪರಿಣಮಿಸುವದು. ಇಲ್ಲಿ ಇನ್ನೊಂದು ಸಂಗತಿಯೆಂದರೆ, ಶಿಕ್ಷಾಗುರುವು ತಾನು ಸದಾಚಾರಿಯಾಗಿದ್ದು, ಹೇಳಿದಂತೆ ( ಶಿಕ್ಷಣ

ಕೊಟ್ಟಂತೆ ) ಸ್ವತಃ ನಡೆಯುತ್ತಿರಬೇಕು. ಇಲ್ಲವಾದರೆ ಆತನ ಶಿಕ್ಷಣ ವೆಲ್ಲ ಡಬ್ಬುಕೊಡದ ಮೇಲೆ ನೀರೆರೆದಂತೆ ಆಗಿಬಿಡುವದು. ಈಗಿನ ಲಿಂಗ ವಂತರಿಗೆ ಶಿಕ್ಷಾಗುರುತ್ವವಿಲ್ಲದೆ ಹೋದುದರಿಂದಲೇ ಅವರೆಲ್ಲರೂ ಪ್ರಮಥ ಮಾರ್ಗದಿಂದ ದೂರದೂರ ಸರಿದು ನಿಂತಿರುವರು.

( ೪ ) ೧ **ಸಹಜ ವೀರಃ—** ಮಹೇಶ್ವರನು ಹೆಚ್ಚಾಗಿ ಈಶ್ವರರ ಉದ್ಧಾರದ ಕಡೆಗೇನೇ ಲಕ್ಷಿಸುತ್ತಿರಬೇಕಲ್ಲದೆ, ತನ್ನ ಶ್ರಮದ ಕಡೆಗೆ ಇಲ್ಲವೆ ದುಡ್ಡಿನ ಕಡೆಗೆ ನೋಡುವವನಿರಕೂಡದು ಈಶ್ವರನ ಸ್ಥಳದವರು ಏನು ಕೊಟ್ಟರೂ ಅದರಲ್ಲಿಯೇ ಸಂತುಷ್ಟನಾಗಿರಬೇಕು. ಇಂತಿಷ್ಟುಕೊಟ್ಟರೇನೇ ಪುರಾಣ, ಕೀರ್ತನ ಉಪದೇಶ ಮುಂತಾದುವನ್ನು ನಡೆಸುವನೆಂಬ ಶರ್ತುಗಾರನು ಮಹೇಶ್ವರನಲ್ಲ. ಅವನು ವಿದ್ಯೆಯನ್ನು ಮಾರಿಕೊಂಡು ಹೊಟ್ಟೆ ಹೊರಕೊಳ್ಳುವವನು. ತಾನು ಮಾಡತಕ್ಕುದನ್ನು ಶುದ್ಧಭಾವದಿಂದ ನಡೆಸಹತ್ತಿದರೆ, ಅದೇ ಜನರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿ, ಅವರು ತಾವಾಗಿಯೇ ಬೇಕಾದಷ್ಟು ಕೊಡುವರು. ಬೇಡಿದರೆ ಸಿಕ್ಕುವದಿಲ್ಲ. ಬೇಡದೆ ತನ್ನ ಕರ್ತವ್ಯವನ್ನು ಸರಿಯಾಗಿ ನೆರವೇರಿಸಿದರೆ ಸಾಕುಸಾಕೆನ್ನುವಷ್ಟು ಸಿಗುವದು. ಇದು ಜನರ ಅನುಭವದ ಮಾತು. ಹೀಗೆ ನಡೆಯುವವನೇ ಸಹಜವೀರನು.

೨ **ಜ್ಞಾನ ಗುರುಲಿಂಗ :—** ಸಹಜವೀರನು ಪೂಜಿಸುವ ಲಿಂಗವು ಜ್ಞಾನಗುರುಲಿಂಗವು. ಅಂದರೆ ಅವನು ಜ್ಞಾನಬೀರುವ ಗುರುವಾಗಿ ನಡೆಯುವದು. ಹೀಗೆ ಜ್ಞಾನೋಪದೇಶ ಮಾಡಬೇಕಾದರೆ ಮೊದಲು ತಾನು ಸರಿಯಾಗಿ ಶಿವಜ್ಞಾನವಂತನಾಗಿರಬೇಕು. ತನ್ನದು ತನಗೇ ಗೊತ್ತಿಲ್ಲದಿರುವಂಥ ಅನೇಕ ಪಂಡಿತರು " ನಾನು ಗುರು ನಾನು ಗುರು " ಎಂದು ಕೂಗಿಕೊಳ್ಳುತ್ತಿರುವರು. ಇಂತಹದರಿಂದ ಸಮಾಜವು ಅಧೋಗತಿಗಿಳಿವುದಲ್ಲದೆ, ಎಂದೂ ಉನ್ನತಿ ಹೊಂದಲಾರದು. ಸರ್ವಜ್ಞ ಮೂರ್ತಿಯು :—

" ಬಳ್ಳಿಗುರುಗಳು ಕೂಡಿ ...... । ಇತ್ಯಾದಿ ಹೇಳಿದ್ದುದು ಇವರಿಗಾಗಿಯೇ!

ಸಿದ್ಧಾಂತ ಶಿಖಾಮಣಿಯಲ್ಲಿಃ - ಗುರುವೊ ಬಹವಃ ಸಂತಿ । ಶಿಷ್ಯ ವಿತ್ತಾಪ ಹಾರಕಃ ॥

ಗುರವೊ ವಿರಲಾಃ ಸಂತಿ ಶಿಷ್ಯ ವಿತ್ತಾಪ ಹಾರಕಾಃ ॥

ಎಂದು ಹೇಳಿದುದನ್ನು ಈ ಡಾಂಭಿಕ ಗುರುಗಳು ಗಮನಿಸಬೇಕು.

ಕಡೆಗೆ ಶ್ರೀ ನಿಜಗುಣ ಶಿವಯೋಗಿಗಳು ತಮ್ಮ ಕೈವಲ್ಯದಲ್ಲಿ ಉಪದೇಶಿಸುವದನ್ನು ಈ ಇಷ್ಟಲಿಂಗ ಪೂಜಕರಾದ ಈಶ್ವರ ಮಹೇಶ್ವರರಿಗೆ ಹೇಳಬಯಸುವೆನು.

ದುರಿತ ಕರ್ಮವನೊಲ್ಲದಿರು- ಕೆಟ್ಟ ಕೆಲಸ ( ಅನಿಷ್ಟಾಚಾರ ) ಮಾಡಬೇಡ.

ಪುಣ್ಯವನೆ ಮಾಡು — ಪುಣ್ಯವೆಂದರೆ ಸುಕೃತಿ, ಒಳ್ಳೆಯ ಕೆಲಸ ಮಾಡುವವರೇ ಪುಣ್ಯ, ಇವೇ ಇಷ್ಟವಾದ ಆಚಾರಗಳು.

ಹರನಡಿವಿಡಿ— ಶಿವನ ( ಲಿಂಗದ ) ಅಂದರೆ ಜ್ಞಾನದ ಪೂಜೆಯನ್ನು ಮಾಡು.

ಶಾಂತರೊಡನಾಡು— ಶಾಂತಿಯನ್ನು ಪಡೆದು ಎಲ್ಲರೊಡನೆ ಸಮಭಾವದಿಂದ ನಡೆಯುವ ಜಂಗಮ ( ಇಷ್ಟಲಿಂಗಾರ್ಚಕ ಶರಣ ) ರ ಸಂಗತಿಯಲ್ಲಿರು.

ಕರುಣ ವಿರಲಿ ಜೀವರೊಳು :— ಪ್ರಾಣಿಗಳಲ್ಲಿ ಮುಖ್ಯವಾಗಿ ಮನುಜರಲ್ಲಿ ಅಂತಃಕರಣ ಉಳ್ಳವನಾಗಿರು.

ನೀತಿವಿದನಾಗು — ಸುನೀತಿಯನ್ನೆಲ್ಲ ತಿಳದುಕೊಂಡು ತದನುಸಾರ ವರ್ತಿಸು.

ಪೊರೆಪೊರ್ದಿದರನು— ಹೆಂಡಿರು ಮಕ್ಕಳು ತಾಯ್ತಂದೆ ಮೊದಲಾದವರನ್ನು ರಕ್ಷಿಸು.

ನಿಂದಿಸಿ ನುಡಿಯದಿರಾರನು — ಯಾರ ನಿಂದೆಯನ್ನೂ ಮಾಡಬೇಡ.

ಮನಸಿಗೆ ಬಂದಂತೆ ಮಾಡಬೇಡ — ಸ್ವೇಚ್ಛಾಚಾರಿಯಾಗಿ ನಡೆಯಬೇಡ.

ಇಹದಲ್ಲಿ ಕುಂದುವಡೆಯದಿರು — ಲೋಕದಲ್ಲಿ ಹುಟ್ಟಿ ಬಂದು ಕಲಂಕ ಹಚ್ಚಿಕೊಳ್ಳಬೇಡ- ಸುಳ್ಳು, ಕಳವು ಬಿಟ್ಟುಬಿಡು.

**ಕಾಮಾದಿಗಳ ಜಯಿಸು** — ಕಾಮಕ್ರೋಧ ಮೊದಲಾದ ಅರಿಷಡ್ವರ್ಗಗಳನ್ನು ಗೆಲ್ಲು, ಮುಖ್ಯವಾಗಿ ಪರಧನ ಪರಸತಿ ವರ್ಜಿಸು.

## ೩ ಪ್ರಸಾದಿ ಸ್ಥಳ

ಅರ್ಪಿತ ಪ್ರಸಾದಿ, ಅವಧಾನ ಪ್ರಸಾದಿ, ಪರಿಣಾಮ ಪ್ರಸಾದಿ ಎಂಬ ಮೂರು ಅಂಗಸ್ಥಳಗಳೂ, ಇಷ್ಟಾದಿ ಮೂರು ಲಿಂಗಸ್ಥಳಗಳೂ ಇದರಲ್ಲುಂಟು. ಅವುಗಳ ವಿವರ:—

(ಅ) ೧ **ಅರ್ಪಿತ ಪ್ರಸಾದಿ**:— ಅರ್ಪಿತವೆಂದರೆ ಅರ್ಪಣ ಮಾಡಿದ (ಸಲ್ಲಿಸಿದ) ಪದಾರ್ಥ. ಪ್ರಸಾದಿಯು. ತನ್ನ ಶಿವಲಿಂಗಕ್ಕೆ ಸಲ್ಲಿಸದೆ ಅದಾವುದನ್ನೂ ತನಗೆಂದು ಕೈಕೊಳ್ಳುವದಿಲ್ಲ. ತನ್ನಲ್ಲಿ ಶಿವಲಿಂಗವೇ ಇರುವದೆಂದೂ, "ನಾನು" ಎಂಬ ಪದಾರ್ಥವೇ ತನ್ನೊಳಗೆ ಮೂಲತಃ ಇಲ್ಲೇ ಇಲ್ಲೆಂದೂ, ಈತನು ನಂಬಿರುವನು. ಆದುದರಿಂದ ಎಲ್ಲ ಪದಾರ್ಥಗಳನ್ನು ಭೋಗಿಸುವವನು ಶಿವನಲ್ಲದೇ ಅನ್ಯನಲ್ಲ. ಅಂತೇ ಲಿಂಗಾರ್ಪಿತ ಮಾಡದೆ ಪ್ರಸಾದಿಯು ಏನೂ ತಕ್ಕೊಳ್ಳುವದಿಲ್ಲ. ಲಿಂಗಾರ್ಪಿತ ಮಾಡುವದರಿಂದ ಆ ಪದಾರ್ಥವು ಪ್ರಸಾದ ಸ್ವರೂಪ ಹೊಂದುವದೆಂದು ಈತನ ಗ್ರಹಿಕೆ ಇರುವದು. ಹೀಗೆ ಮಾಡಿದ ಲಿಂಗಾರ್ಪಿತದೊಳಗೇ ಪ್ರಸಾದಿಯು ಆನಂದಿಸುವನು. ಆದುದರಿಂದ ತನ್ನ ಶರೀರವಾದರೂ ಪ್ರಸಾದ ಸ್ವರೂಪವಾಗುವದೆಂದು ದೃಢವಾಗಿ ತಿಳಿದುಕೊಂಡಿರುವನು. ಇಂತಹ ಪ್ರಸಾದಿಯೇ ಅರ್ಪಿತ ಪ್ರಸಾದಿಯು.

ಪ್ರಸಾದಿಯು ತಾನೂ ಕೂಡ ಪ್ರಸಾದಿಯೇ ಆಗಬೇಕಾಗಿರುವದರಿಂದ ತನ್ನ ದೇಹ, ಇಂದ್ರಿಯ, ಕರಣಾದಿಗಳು, ಭಾವ ಮೊದಲಾದವನ್ನು ಸಹ ತನ್ನಲ್ಲಿರುವ ಶಿವನಿಗೆ ಅರ್ಪಣ ಮಾಡಿ, ತಾನೂ ಅರ್ಪಿತವೇ ಆಗಿಬಿಡುವನು. ಹೀಗೆ ಮಾಡುವದಕ್ಕೆ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತವೆಂದು ಹೆಸರಿಟ್ಟಿದ್ದಾರೆ. "ಭಕ್ತ ಕಾಯೋ ಮಮಕಾಯಃ" ಎಂದು ಆಗಮಗಳಲ್ಲಿ ಶಿವನು ಹೇಳಿದುದಾದರೂ ಇವಕ್ಕಾಗಿಯೇ. ಪರಮಾತ್ಮನು ಮಹಾಜ್ಞಾನಸ್ವರೂಪನು. ಸಮ್ಯಕ್ ಜ್ಞಾನವು ಭಕ್ತ ದೇಹದಲ್ಲಿಯೇ ವಾಸಿಸುವನು. ಅವಕ್ಕೆ ಬೇರೆ ಆಧಾರವೇ ಇಲ್ಲ. ಈ ರೀತಿಯಿಂದಲೂ ಅರ್ಪಿತ ಪ್ರಸಾದಿ ಎನ್ನಬಹುದು.

**ಇಷ್ಟಲಿಂಗ:**— ಅರ್ಪಿತ ಪ್ರಸಾದಿಯು ಪೂಜಿಸುವ ಲಿಂಗವೆಂದರೆ ಇಷ್ಟಲಿಂಗವು. ತನ್ನ ಕಾಯಾದಿಗಳನ್ನು ಶಿವಾರ್ಪಿತ ಮಾಡಿದಮೇಲೆ ಅವು ಪ್ರಸಾದಿ ಭಕ್ತನವಾಗಿ ಉಳಿಯಲಿಲ್ಲ. ಅವುಗಳ ಒಡೆಯನಾದ ಶಿವನು ಎಲ್ಲ ಜನ ಸಮೂಹಕ್ಕೆ ಕಲ್ಯಾಣವಾಗುವಂಥ ಕಾರ್ಯಗಳನ್ನೇ ಮಾಡುವನು. ಅವನಿಗೆ ನೀಚವಾದ ದೇಹ ಸ್ವಾರ್ಥವು ಇರಲಾರದೆಂಬುದು ಸ್ಪಷ್ಟವೇ. ಆದಕಾರಣ ಅವನು ಇಷ್ಟ ( ಉದ್ಧಾರಕ ) ಕಾರ್ಯಗಳನ್ನೇ ಎಸಗುವನು. ಹೀಗೆ ಒಳ್ಳೆಯ ಕಾರ್ಯ ಸ್ವರೂಪವಾದುದೇ ಇಷ್ಟಲಿಂಗವು. ಇದನ್ನೇ ಅರ್ಪಿತ ಪ್ರಸಾದಿಯು ಪೂಜಿಸುವದು ಸ್ವಾಭಾವಿಕವು.

**( ಬ ) ಅವಧಾನ ಪ್ರಸಾದಿ:**— ಅವಧಾನವೆಂದರೆ ಎಚ್ಚರ. ತಾನು ಪ್ರಸಾದ ( ಶಿವ ) ರೂಪ, ದೇಹರೂಪವಲ್ಲ. ಎಂಬ ಎಚ್ಚರಿಕೆಯನ್ನು ಸರ್ವಕಾಲದಲ್ಲಿಯೂ ಹಿಡಿದು ವರ್ತಿಸುವವನೇ ಅವಧಾನ ಪ್ರಸಾದಿಯು. ಶಿವನು ಸರ್ವ ಸಮರ್ಥನು. ಅವನು ಏನು ಬೇಕಾದುದನ್ನು ಮಾಡಬಹುದು. ಅವನಿಗೆ ಪಾಪ ಪುಣ್ಯಗಳ ಸ್ಪರ್ಶವಿಲ್ಲ. ಆದರೆ ಮನುಜನು ತಾನು ( ಅಂದರೆ ದೇಹ ರೂಪ ) ಎಂದು ತಿಳಿದುಕೊಂಡು. ಸುಕೃತ ದುಷ್ಕೃತಗಳನ್ನು ಮಾಡುವದರಿಂದ, ಅವನಿಗೆ ಪುಣ್ಯ ಪಾಪಗಳು ಸಂಬಂಧಿಸಿ, ಅವನನ್ನು ಪುನಃ ಪುನಃ ಜನ್ಮಕ್ಕೆ ತರುವವು. ಇವನ್ನು ಕಳೆದು ತಾನು ಮುಕ್ತನಾಗುವ ದೆಸೆಯಿಂದಲೇ ಅವನು ಶಿವನಿಗೇ ಎಲ್ಲವನ್ನೂ ಅರ್ಪಿಸಿ ತಾನು ಇಲ್ಲವಾಗುವನು. ಆದುದರಿಂದಲೇ ಅವನು ಲಿಂಗದಲ್ಲಿ ಸಮರಸತೆ ಪಡೆಯಲು, ಮುಕ್ತದ್ವಾರವಾಗುವದು. ಅಂತೇ ಅವನು ಸದಾ ಅವಧಾನ ಪ್ರಸಾದಿಯಾಗಿರುವದು ಬಹು ಆವಶ್ಯಕವೂ ವಿಹಿತವೂ ಆಗಿದೆ

**ಪ್ರಾಣಲಿಂಗ:**--- ಇದೇ ಅವಧಾನ ಪ್ರಸಾದಿಯ ಲಿಂಗವು. ಪರಮಾತ್ಮನ ಅಂಶವೇ ತನ್ನ ದೇಹದಲ್ಲಿ ಸೇರಿ ಪ್ರಾಣಲಿಂಗವೆನ್ನಿಸುವದು. ಅದೇ ಚೈತನ್ಯ ಇಲ್ಲವೇ ಜೀವ. ಮನವೇ ಪ್ರಾಣದ ಮುಖ್ಯ ಮಂತ್ರಿ. ಆದುದರಿಂದ ಮನಕ್ಕಾದರೂ ಲಿಂಗವೆಂತಲೇ ಹೇಳಿರುವರು. ಮನವು ಜ್ಞಾನ ( ಲಿಂಗ ) ಕ್ಕೆ ಒಳಗಾಗಿ ನಡೆಯುದಿದ್ದರೆ, ಜೀವದ ಜೀವಭಾವನೆ ಎಂದೂ ಹೋಗಲಾರದು. ಅದು ಪರಮಾತ್ಮನ ಶುದ್ಧ ಅಂಶ ಸ್ವರೂಪ

ವಾಗದು. ಅವಾಗದೇ ಪರಮಾತ್ಮನಲ್ಲಿ ಐಕ್ಯವಿಲ್ಲ. ಆದುದರಿಂದ ಅವಧಾನ ಪ್ರಸಾದಿಯು ಪ್ರಾಣಲಿಂಗವನ್ನು ಪೂಜಿಸಲೇ ಬೇಕು. ಅಂದರೆ ಅದನ್ನು ಶುದ್ಧ ಆತ್ಮಸ್ಥಿತಿಗೆ ಒಯ್ಯಲೇಬೇಕು. ಇದೇ ಪ್ರಾಣಲಿಂಗದ ಪೂಜೆಯು.

( ಕ ) **ಪರಿಣಾಮ ಪ್ರಸಾದಿ**:— ಪ್ರಸಾದಿಯು ತನ್ನನ್ನು ಶಿವನಿಗೆ ಅರ್ಪಿಸಿಕೊಂಡು, ತಾನು ಇಲ್ಲವಾಗಿ, ಶಿವನೇ ಇರುವನೆಂಬುದು ಸಂಪೂರ್ಣವಾಗಿ ಅಳವಟ್ಟರೆ, ಆಗ ಅವನು ಪರಿಣಾಮ ಪ್ರಸಾದಿ ಎನ್ನಿಸುವನು. ಈತನಿಗೆ ತನ್ನ ದೇಹ–ಮನ–ಬುದ್ಧಿ ಮೊದಲಾದವುವೂ ತಿಲಮಾತ್ರವೂ ಸ್ಮರಣೆಗೆ ಬಾರದೆ, ಹೋಗಬೇಕಾಗುವದು. ಅವೆಲ್ಲ ಶಿವ ( ಲಿಂಗ ) ರೂಪವೇ ಆಗಿಬಿಟ್ಟಿರುವವು. ಹೀಗಾದರೆ ಮಾತ್ರ ಪ್ರಸಾದಿಯು ನಿಜವಾದ ಪ್ರಸಾದಿ ( ಶಿವ ) ಯಾಗಿಬಿಡುವನು. ಈತನೇ ಪರಿಣಾಮ ಪ್ರಸಾದಿಯು.

**ಭಾವಲಿಂಗ**:— ಪರಿಣಾಮ ಪ್ರಸಾದಿಯು ಪೂಜಿಸುವ ಲಿಂಗವು ಭಾವಲಿಂಗವು. ಭಾವಲಿಂಗವೆಂದರೆ, ಕೇವಲ ಸದ್ ಭಾವನೆಯಿಂದಲೇ ಪರಿಭಾವಿಸಿ ತಿಳಕೊಳ್ಳುವ ಲಿಂಗವು. ಅದು ಜಗದಲ್ಲೆಲ್ಲ ಹರಡಿಬಿಟ್ಟಿರುವದು. ಅದನ್ನು ಬಹಿರ್ನೇತ್ರದಿಂದ ಕಾಣಲಾರೆವು. ಅಂತರ್ದೃಷ್ಟಿಯಿಂದಲೇ ಮನನಿಸಿ ( ಭಾವಿಸಿ ) ಅರಿಯಬೇಕು. ಅದೇ ಪರಮಾತ್ಮ ಸ್ವರೂಪವು. ತಾನೂ ಸಹ ಆ ಪರಮಾತ್ಮನ ಶುದ್ಧವಾದ ಅಂಶವಾಗಿರುವದರಿಂದ ಪರಮಾತ್ಮನಲ್ಲಿ ಬೆರೆದು ಏಕವಾಗಲಿಕ್ಕೆ ಸಹಾಯಕಾರಿಯಾಗುವದು. ಭಾವಲಿಂಗ ಪೂಜಿಸದೇ ಹೋದರೆ ಲಿಂಗೈಕ್ಯರಾಗಲು ಮಾರ್ಗವೇ ಉಳಿಯಲಿಲ್ಲ.

## ೪. ಪ್ರಾಣಲಿಂಗಿ

ಪ್ರಾಣಲಿಂಗಿಯು ಸಹ ತ್ರಿವಿಧ ಸ್ವರೂಪವಿರುವನು. ಆಚಾರಪ್ರಾಣಿ ( ಪ್ರಾಣಲಿಂಗಿ ) ಲಿಂಗಪ್ರಾಣಿ, ಜಂಗಮಪ್ರಾಣಿ ಎಂದು ಕರೆಸಿಕೊಳ್ಳುವನು. ಸ್ವಯಜಂಗಮ, ಚರಜಂಗಮ, ಪರಜಂಗಮವೆಂದು ಈತನ ಜಂಗಮಲಿಂಗವಾದರೂ ತ್ರಿವಿಧವಾಗಿರುವದು, ಅವುಗಳ ವಿವರ–

(ಅ) ೧ **ಆಚಾರ ಪ್ರಾಣಿಃ**— ಆಚಾರವೆಂದರೆ ಇಷ್ಟಾಚಾರ ಅಥವಾ ಶಿವಾಚಾರ. ಈ ಆಚಾರವೇ ಅತಿ ಶ್ರೇಷ್ಠವಾದುದು. " ಆಚಾರವು ಗುರುವಿಗೂ ಬೇಕು. ಲಿಂಗಕ್ಕೂ ಬೇಕು. ಜಂಗಮಕ್ಕೂ ಬೇಕು " ಎಂದು ಹೇಳಿ ಆಚಾರದ ಮಹತ್ವವನ್ನು ತೋರಿಸಿದ್ದಾರೆ. ಆದುದರಿಂದ ಪ್ರಾಣಲಿಂಗಿಯು ಎಲ್ಲಕ್ಕೂ ಮೊದಲು ಆಚಾರವನ್ನು ಒಳಿತಾಗಿ ಅಳವಡಿಸಿಕೊಳ್ಳಬೇಕು. ಆಚಾರದಲ್ಲಿ ಎಳ್ಳಷ್ಟೇ ಆಗಲಿ, ತಪ್ಪಿದರೆ ಅವನು ತನ್ನ ಜೀವಹೋದಂತೆಯೇ ಕಷ್ಟಕ್ಕೊಳಗಾಗುವನು. ಹೀಗೆ ಬಹು ಜಾಗ್ರತೆಯಿಂದ ಆಚಾರ ಪಾಲಿಸುವದರಿಂದಲೇ ಅವನು ಆಚಾರ ಪ್ರಾಣಿಯಾಗಿರುವನು

೨ **ಸ್ವಯ ಜಂಗಮ ಲಿಂಗ ಃ**— ಜಂಗಮಲಿಂಗ ತ್ರಯದಲ್ಲಿ ಇದೇ ಮೊದಲನೆಯದು. ಜಂಗಮವೆಂದರೆ ಚೈತನ್ಯ ಇಲ್ಲವೇ ಜೀವ. ಅದು ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿಯೂ ಇರುವದು. ಪರಮಾತ್ಮಸ್ವರೂಪನೇ ಅದು. ಜಗವೆಂದರೆ ಮುಖ್ಯವಾಗಿ ಪ್ರಾಣಿಗಳು ಅದರಲ್ಲೂ ಮನುಷ್ಯಪ್ರಾಣಿ. ಅಂತೆಯೇ " ಜಂಗಮೋ ಜಗಮುಚ್ಯತೆ.- ಜಂಗಮೋ ಜಗದ್ಭರಿತ | " ಎಂಬ ವಾಕ್ಯಗಳು ರೂಢವಾಗಿವೆ. ಇಂತಹ ಜಂಗಮಲಿಂಗವನ್ನು ಪಡೆದು, ಅದರಲ್ಲಿ ಬೆರೆಯಬಿಚ್ಛಿಸುವನು. ಮೊದಲು ತಾನು ಸ್ವತಃ ಜಂಗಮನಾಗುವದು ಅತ್ಯವಶ್ಯವಿದೆ. ಅಂತೇ ಆತನು ತನ್ನನ್ನು ಜಂಗಮವೇ ಎಂದು ತಿಳಿಯುವನು. ಇದೇ ಸ್ವಯ ಜಂಗಮವಾಗಿರುವಿಕೆಯು. ಈತನಿಗೆ ಆದಿ ಪ್ರಸಾದಿ ಎಂತಲೂ ಅನ್ನುವದುಂಟು.

(ಬ) ೧ **ಲಿಂಗಪ್ರಾಣಿಃ**— ಲಿಂಗವೆಂದರೆ ಸೂಕ್ಷ್ಮದೇಹ. ಅದರಲ್ಲಿ ೧೭ ವಸ್ತುಗಳು ಬರುತ್ತಿದ್ದರೂ, ಅದರಲ್ಲಿ ಜ್ಞಾನ, ಬುದ್ಧಿ ಮನಗಳೇ ಮುಖ್ಯವಾಗಿರುತ್ತವೆ. ಈ ಮೂರಕ್ಕೂ ಪ್ರಾಣವೇ ಆಧಾರವಾಗಿದೆ. ತಸ್ಮಾತ್ ಪ್ರಾಣವನ್ನೇ ಲಿಂಗವೆಂದು ಹೇಳುವದುಂಟು. ಇಂತಹ ಶ್ರೇಷ್ಠವಾದ ಲಿಂಗವನ್ನು ರಕ್ಷಿಸಿಕೊಂಡು ನಡೆಯುವದು ಪ್ರಾಣಲಿಂಗಿಗೆ ಅವಶ್ಯವಾದ ಕರ್ತವ್ಯವು. ಕೈಯೊಳಗಿನ ಲಿಂಗವು ( ಒಳಗಿನ ಅಂಶದ ಕುರುಹು ) ಬಿದ್ದು ಹೋದರೆ, ಅಥವಾ ಅಜ್ಞಾನದಿಂದ, ಅಯೋಗ್ಯ ವರ್ತನವಾದರೆ ಪ್ರಾಣಲಿಂಗಿಯು ತಾನು ಇದ್ದರೂ ಕೂಡಾ ಸತ್ತಂತೆಯೇ ಆಗಿ ಬಿಡುವದು. ಈತನ ಮನವು ಸದಾ ಸುವಿಚಾರ ಮಗ್ನವಾಗಿರುವದು,

ಪ್ರಾಣಲಿಂಗದ ಪೂಜೆಗೆ ಮುಖ್ಯಕಾರಣವಾಗಿರುತ್ತದೆ. ಮನವನ್ನು ಲಿಂಗಕ್ಕೆ (ಸುಜ್ಞಾನಕ್ಕೆ) ನೀಡಬೇಕೆಂಬುದು ಇದಕ್ಕಾಗಿಯೇ ಉದ್ಭವಿಸಿರುವದು ಅದು ಚಂಚಲವಾಗಿ ಅತ್ತಿತ್ತ ಹರಿದಾಡಹತ್ತಿದರೆ, ಪ್ರಾಣಲಿಂಗದ ಪೂಜೆ ಎತ್ತೋ ಹೋಗಿಬಿಡುವದು. ಆದುದರಿಂದ ಲಿಂಗಪ್ರಾಣಿಯು ಬಹು ದಕ್ಷತೆಯಿಂದ ಮನವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವದು ಬಹು ಅವಶ್ಯ. ಇದೇ ಆತನ ಲಿಂಗಾರ್ಚನೆ.

ಒಳಗಿನ ಪ್ರಾಣಲಿಂಗವನ್ನೇ ಹೊರದೆಗೆದು, ಇಷ್ಟಲಿಂಗವೆಂದು ಪೂಜಿಸಲು ಗುರುವು ಕರಕಿತ್ತಿರುವನು. ಅದರಿಂದ ಪ್ರಾಣಲಿಂಗದಂತೆಯೇ ಅದು ದೇಹದಿಂದ ಅಗಲಬಾರದು. ೈ ಅಜಾಗ್ರತೆಯಿಂದ ಅದು ನಾಶವಾದರೆ ಅನೇಕ ಮುಗ್ಧಭಕ್ತರು ಕಡೆತಕನ ಇನ್ನೆಂತು ಬದುಕುವದು? ಎಂದು ಪ್ರಾಣವನ್ನೇ ತ್ಯಜಿಸುತ್ತಿದ್ದರು, ಆದರೆ ಅದು ಸರಿಯಲ್ಲೆಂದು, ಮುಂದೆ ಮತ್ತೆ ಗುರುವಿನಿಂದ ಅದನ್ನು ಪಡೆಯಹತ್ತಿದರು. ಹೀಗೆ ಮತ್ತೆ ದೊರೆದಾಗಲೇ ಲಿಂಗಪ್ರಾಣಿಗೆ ಜೀವ ಬಂದಂತಾಗುತ್ತಿರುವದು ಸಾಹಜಿಕ. ಇಂತಹ ಲಿಂಗ ಸಂರಕ್ಷಕನೇ ಲಿಂಗಪ್ರಾಣಿಯು.

೨ **ಚರಜಂಗಮ ಲಿಂಗ:—** ಲಿಂಗಪ್ರಾಣಿಯು ಚರಜಂಗಮ ಲಿಂಗವನ್ನು ಆರಾಧಿಸುವನು. ಯಾವ ಜ್ಞಾನವು ಹೆಚ್ಚಾಗಿ ಬೆಳಸುತ್ತ ಹೋದಂತೆ, ಒಂದೇಸವನೆ ಬೆಳೆಯುತ್ತಲೇ ಹೋಗುವದೋ, ಅದೇ ಚರಜಂಗಮ ಲಿಂಗವು. ಇಂತಹ ಶಕ್ತಿಯು ಮಾನವನ ಜ್ಞಾನದಲ್ಲುಂಟು. ಅವನು ಸಾತ್ವಿಕ ಮಾರ್ಗದಿಂದ, ಅದನ್ನು ಪ್ರಗತಿಪಡಿಸಹತ್ತಿದರೆ, ಕಡೆಗೆ ತಾನೇ ಶರಣನಾಗಿ ಬಿಡುವನು. ವಿಶ್ವವನ್ನೆಲ್ಲ ವ್ಯಾಪಿಸಿ ವಿಶ್ವನಾಥನೇ ಆಗಿಬಿಡುವನು. ಆದುದರಿಂದಲೇ ಲಿಂಗಪ್ರಾಣಿಯು, ಜನರನ್ನೆಲ್ಲ ಶಿವರೂಪವೆಂದೇ ಭಾವಿಸಿ, ಅವರೊಡನೆ ವ್ಯವಹರಿಸುವನು ಸೇವೆ ಸಲ್ಲಿಸುವನು. ಶಕ್ಯವಾದರೀತಿಯಿಂದ ನೆರವಾಗುವನು. ಮರೆ ಮೋಸಪೀಡೆ ಮೊದಲಾದವನ್ನೆಂದೂ ಮಾಡುವದಿಲ್ಲ. ಇಂತಹ ಚಂಜಂಗಮಲಿಂಗದಲ್ಲಿ ಬೆರೆದವನು ಅಂತ್ಯಪ್ರಸಾದಿ ಎನ್ನಿಸುವನು.

(ಕ) ೧ **ಜಂಗಮ ಪ್ರಾಣಿ:—** ಜಂಗಮವೆಂದರೆ ಜ್ಞಾನ. ಆದರಲ್ಲಿಯೂ ಅನುಭವದಿಂದ ಉದಿಸಿದ ಜ್ಞಾನ. ತನ್ನ ಅನುಭವಜನ್ಯ

ಜ್ಞಾನವನ್ನು ಈತನು ಯಾವಾಗಲೂ ಪರರಿಗೆ ಹೇಳುತ್ತಿರುವನು. ಅದು ಉಚ್ಚಾರ ಇಲ್ಲವೆ ನುಡಿ ಎನ್ನಿಸುವದು. ಈ ನುಡಿಯಂತೆಯೇ ಜಂಗಮ ಪ್ರಾಣಿಯು ನಡೆಯುತ್ತಿರುವನೆಂಬುದು ಸ್ಪಷ್ಟವೇ ಸರಿ. 'ಬಳಿಕ ಹಾಗೆ ನಡೆಯುವದು ವಿಹಿತವೆಂದೂ, ತನ್ನ ಉನ್ನತಿಗೆ ಸಹಾಯಕವಾಗುವ ದೆಂದೂ, ಅವನು ಅನ್ಯರಿಗೆ ಬೋಧಿಸುವನು. ಆದರೂ ಹೊನ್ನು ಹೆಣ್ಣು ಗಳು, ಅತ್ಯಂತ ಕಠಿಣವಾದ ಮಾಯಾಳು ಪದಾರ್ಥಗಳು. ಆದುದರಿಂದ ಜಂಗಮಪ್ರಾಣಿಯಿಂದ, ಸಹ ಅಪ್ಪಿತಪ್ಪಿ ದೋಷಗಳಾಗುವದುಂಟು. ಅದು ಅವನ ಮನಸ್ಸಿಗೆ ಹತ್ತಿ, ಸತ್ತಂತೆಯೇ ಆಗಿಬಿಡುವನು. ಮುಂದೆ ತನ್ನ ನುಡಿಗನುಸಾರವಾಗಿ, ತನ್ನ ನಡೆಯನ್ನು ಶಕ್ಯವಾದಷ್ಟು ಬೇಗನೆ ತಿದ್ದಿಕೊಳ್ಳುವನು. ಇಂತಹ ನುಡಿನಡೆಗಳೈಕ್ಯ ಉಳ್ಳವನೇ ಜಂಗಮ ಪ್ರಾಣಿಯು. ಈತನು ಸಕಲರಿಗೂ ಪೂಜ್ಯನಾಗಿ ತೋರುವದರಿಂದ, ಈತನನ್ನು ಪೂಜ್ಯ ಪ್ರಸಾದಿ ಎಂತಲೂ ಕರೆಯುವರು.

೨ **ಪರಜಂಗಮ ಲಿಂಗ:—** ಜಂಗಮಲಿಂಗದಲ್ಲಿ ಇದು ಕಡೆ ಯದು. ಶ್ರೇಷ್ಠವಾದುದು ಜಂಗಮ ಪ್ರಾಣಿಯು ಇದನ್ನು ಆರಾಧಿಸು ವನು. ಮನುಷ್ಯೇತರ ಪ್ರಾಣಿಗಳೆಲ್ಲ ಇವನಿಗೆ ಶಿವರೂಪವಾಗಿಯೇ ತೋರು ವವು. ಏಕೆಂದರೆ ಅವುಗಳಲ್ಲಿ ಕೂಡ ಚೈತನ್ಯವಿದ್ದೇ ಇರುವದು. ಜೀವ ತೋರಿದಲ್ಲೆಲ್ಲ ಅದು ಪರಮಾತ್ಮನ ಅಂಶವೇ ಎಂದು ಈತನು ಅರಿತಿರು ವನು. ಹೀಗೆ ಸಕಲಪ್ರಾಣಿಗಳನ್ನು ( ಮನುಷ್ಯ, ಪಶುಪಕ್ಷಿ, ಕ್ರಿಮಿ ಕೀಟಕಗಳನ್ನು ಕೂಡ ) ಸೇವಿಸುವದು ಜಂಗಮ ಪ್ರಾಣಿಯ ಧರ್ಮ ವಾಗಿದೆ. ಅವನ್ನು ಆದಷ್ಟು ಸುಖವಾಗಿರಿಸಲಿಕ್ಕೆ ಈತನು ಸಹಾಯ ಕನಾಗುವನು. ಹೀಗೆ ಪ್ರಾಣಿಕೋಟಿಯನ್ನೆಲ್ಲ ಕಾಣುವದೇ ಪರಜಂಗಮ ಲಿಂಗದ ಪೂಜೆಯು. ಹೀಗೆ ಜಂಗಮ ಪ್ರಾಣಿಯು ವರ್ತಿಸುವದರಿಂದ, ಅವನು ಸಕಲರಿಗೂ ಅನುಕರಣೀಯನೂ ಪೂಜ್ಯನೂ ಆಗಿರುವನು. ಅಂತೇ ಅವನಿಗೆ ಪೂಜ್ಯಪ್ರಸಾದಿ ಎಂದೂ ಹೇಳುವರು.

## ೫ ಶರಣ ಸ್ಥಲ

ಶರಣನ ಅಂಗ ಲಿಂಗಸ್ಥಳಗಳಾದರೂ ಕೂಡಿ ಆರೇ ಇರುವವು. ವಿವರ

(ಅ) ೧ **ಇಷ್ಟಲಿಂಗಾರ್ಚಕ ಶರಣ**:— ಈತನು ಯಾವಾಗಲೂ ಇಷ್ಟಕ್ರಿಯೆಗಳನ್ನು ಆಚರಿಸುವದರಲ್ಲಿಯೇ ತೊಡಗಿಕೊಂಡು, ಸಾತ್ವಿಕ ಭಾವನೆಯನ್ನು ಬೆಳಿಸಿ, ಶಿವಮಾರ್ಗವಿಡಿದು ನಡೆಯಲು ಮನಃಪೂರ್ವಕ ಹವಣಿಸುತ್ತಿರುವನು. ತನುವೇ ಸ್ಥೂಲ ಆಕಾರಉಳ್ಳದ್ದು (ಗುರುವು) ಆದುದರಿಂದ ಅದಕ್ಕೆ ಜ್ಞಾನ ಸಂಬಂಧಿಸುವದೆಂದರೆ, ಸದಾಚಾರವನ್ನೇ ಅವಲಂಬಿಸುವದರ ಹೊರತು ಬೇರೆ ದಾರಿಯೇ ಇಲ್ಲ. ಆದುದರಿಂದಲೇ ಗುರುವೆಂದರೆ ಆಚಾರವೆಂದು ಹೇಳಿದ್ದಾರೆ. ಶರಣನು ಭಾವಲಿಂಗ ಪೂಜಕರಲ್ಲಿ ಬರುತ್ತಿದ್ದರೂ, ಆತನೂ ಸಹ ಇಷ್ಟಲಿಂಗ ಪ್ರಾಣಲಿಂಗಗಳನ್ನು ಪೂಜಿಸಲೇ ಬೇಕು. ಪ್ರತಿಯೊಬ್ಬ ಶಿವ ಭಕ್ತನು, (ಷಡಂಗರು) ಅವನಾವ ಸ್ಥಳದಲ್ಲಿದ್ದರೂ, ಮೂರೂ ಲಿಂಗಗಳನ್ನು ಪೂಜಿಸಲೇ ಬೇಕು.

೨ **ಶುದ್ಧಪ್ರಸಾದ ಲಿಂಗ**:— ಇದು ಇಷ್ಟಲಿಂಗಾರ್ಚಕ ಶರಣನ ಲಿಂಗವು. ತಾನು ಭಿಕ್ಷೆ ಬೇಡದೆ, ಕದಿಯದೆ, ಸಾತ್ವಿಕರೀತಿಯಿಂದ ಕಾಯಕದಿಂದ ದೊರಕಿಸಿಯೇ, ಗುರುಲಿಂಗ ಜಂಗಮ ಸೇವೆಯನ್ನು ಪೂರೈಸುವದೇ ಸಕಲಲಿಂಗಾಂಗಿಗಳ ಅವಶ್ಯ ಕರ್ತವ್ಯವಾಗಿದೆ. ಇದರ ಹೊರತು ಇಷ್ಟಲಿಂಗಾರ್ಚಕನು ಮೇಲೆ ಹೇಳಿದಂತೆ, ಸರ್ವದಾ ಪರಿಶುದ್ಧವಾದ ಕ್ರಿಯೆಗಳನ್ನೇ ಮಾಡತಕ್ಕದ್ದು. ಅದರಿಂದಲೇ ನಿಜವಾದ ಶುದ್ಧತ್ವವು ಅವನಿಗೆ ಪ್ರಾಪ್ತವಾಗುವದು. ಹೀಗೆ ಗಳಿಸುವದರಲ್ಲಿಯೂ ಆಚರಿಸುವದರಲ್ಲಿಯೂ ತೀರ ಮಡಿಯಾಗಿ ವರ್ತಿಸುವದೇ ಶುದ್ಧ ಪ್ರಸಾದ ಲಿಂಗವು. ಅದರಲ್ಲಿ ಬೆರೆಯುವದೇ ಇಷ್ಟಲಿಂಗಾರ್ಚಕನ ಕರ್ತವ್ಯವು.

(ಬ) ೧ **ಪ್ರಾಣಲಿಂಗಾರ್ಚಕ ಶರಣ**:— ಈತನು ಶರಣ ಸ್ಥಳದಲ್ಲಿದ್ದರೂ ಪ್ರಾಣಲಿಂಗವನ್ನು ಪೂಜಿಸಲೇ ಬೇಕು. ವಿದ್ಯಾರ್ಥಿಯು ಮುಂದಿನ ವರ್ಗದಲ್ಲಿ ಸೇರಿದ್ದರೂ ಹಿಂದೆ ಕಲಿತುದನ್ನೆಲ್ಲ ಮರೆಯದೆ ಜಾಗ್ರತದಲ್ಲಿ ಇಟ್ಟುಕೊಳ್ಳುವದು ಹೇಗೆ ಇರುವದೋ ಹಾಗೆಯೇ ಈ ಶರಣನದಾದರೂ ಎಂದು ಅರಿಯಬೇಕು. ಸದಾಚಾರಗಳನ್ನೂ ಸುವಿಚಾರಗಳನ್ನೂ ಸಹಸಾ ಅತಿಕ್ರಮಿಸದೆ, ಪಾಲಿಸುತ್ತಲೇ ಅವನು ಮುಂದಿನ ಶರಣತ್ವವನ್ನು ಹೊಂದತಕ್ಕದ್ದಿರುವದು. ಹಿಂದಿನ ಸ್ಥಳದಲ್ಲಿ ಯಾವದಾ

ದರೂ ತುಸು ಹಸುಕಾಗಿದ್ದರೆ ಅದನ್ನು ಮೊದಲು ತಿದ್ದಿಕೊಳ್ಳುವದು ಅವಶ್ಯವಾದುದು. ಮನವು ಸಂಪೂರ್ಣವಾಗಿ ಈತನ ಸ್ವಾಧೀನವಾಗಿರ ತಕ್ಕದ್ದು. ಹಾಗಿರದಿದ್ದರೆ, ಜ್ಞಾನದಲ್ಲಿ ಪ್ರಗತಿಹೊಂದಿ ಅಗ್ರವೇರುವದು ಅವಶ್ಯವು

೨ **ಸಿದ್ಧಪ್ರಸಾದ ಲಿಂಗಃ** — ಪ್ರಾಣಲಿಂಗಾರ್ಚಕ ಶರಣನ ಲಿಂಗವೇ ಸಿದ್ಧಪ್ರಸಾದ ಲಿಂಗವು. ಸತ್ಯ ಶುದ್ಧ ಕಾಯಕದಿಂದ ಸಂಪಾದಿಸಿದ ವಸ್ತುವಿನಿಂದ ತಯಾರಿಸಿದ ಆಹಾರ ಸಾಮಗ್ರಿಯನ್ನು ಸ್ಪರ್ಶನದಿಂದ ಲಿಂಗಕ್ಕೆ ಕೈಮಾಡಿ ತೋರಿಸಿದಷ್ಟಕ್ಕೆ ಅದು ನೆರವೇರದು. ಆ ಪದಾರ್ಥಗಳ ನಾಮರೂಪ ಗುಣಗಳು ಅಳಿದು ಹೋಗಿ, ಅಲ್ಲಿ ಸತ್ ಚಿತ್ ಆನಂದಗಳು, ಉಳಿಯುದಿದ್ದರೆ ಅದು ನಿಜವಾದ ಪ್ರಸಾದವಾಗಲಾರದು. ಅದನ್ನು ಕೇವಲ ಜ್ಞಾನದೃಷ್ಟಿಯಿಂದಲೇ ಸಾಧಿಸತಕ್ಕದ್ದು. ಆ ತರದ ಭಾವನೆಯನ್ನು ಸದಾ ಬಲಿಸುತ್ತಲೇ ಹೋಗಬೇಕು. ಭಾವನಾರಹಿತವಾಗಿ ಏನು ಮಾಡಿದರೂ, ಅದೆಲ್ಲ ವ್ಯರ್ಥ! ಹೀಗೆ ಸಿದ್ಧವಾದ ನಿಜಪ್ರಸಾದ ಭೋಗದಿಂದಲೇ ಪ್ರಸಾದಕಾಯವಾಗುವದು. ಅದರಲ್ಲಿ ಸಾತ್ವಿಕತೆಯು ಹೆಚ್ಚುತ್ತ ಹೋಗುವದು. ಅವನು ಕಾಲಿಟ್ಟ ಸ್ಥಳವೇ ಕ್ಷೇತ್ರವಾಗುವದು. ಮುಟ್ಟಿದುದೆಲ್ಲ ಪಾವನವಾಗುವದು. ಮನವು ಪವಿತ್ರವಾಗಿದ್ದರೆ ( ಸುವಿಚಾರ ಸುಜ್ಞಾನ ವಶವಾಗಿದ್ದರೆ ) ಭಾವಿಸಿದುದೆಲ್ಲ ಸಿದ್ಧಿಗೆ ಹೋಗುವದು.

೮ ೧ **ಭಾವಲಿಂಗಾರ್ಚಕ ಶರಣಃ** — ಈತನಲ್ಲಿ ಕುಭಾವನೆಯ ನೆರಳು ಸಹ ತಲೆ ಎತ್ತಬಾರದು. ಕೇವಲ ಸದ್ಭಾವನೆಯೇ ನೆಲೆಸಬೇಕು. ಹಾಗೆ ಅದನ್ನು ಪಡೆಯುವದೇ ಭಾವಲಿಂಗ ಪೂಜೆಯು. ಜಗತ್ತಿನ ಎಲ್ಲ ವಸ್ತುಗಳೂ ಅವನ ದೃಷ್ಟಿಯಲ್ಲಿ, ಲಿಂಗ ಸ್ವರೂಪದಲ್ಲೇ ತೋರಬೇಕು. ಅವುಗಳ ನಾಮರೂಪಗಳು ತೋರಿದರೆ, ಭಾವಲಿಂಗದ ಬೆಳಕು ಅವನಲ್ಲಿ ಸರಿಯಾಗಿ ಹರಡಿಲ್ಲವೆಂದು ಅರಿಯಬೇಕು. ಹಾಗೆ ಉಳಿದಿದ್ದುದೇ ಕುಭಾವನೆಯು. ಅಜ್ಞಾನವು. ಭಾವಲಿಂಗಾರ್ಚನೆಯಲ್ಲಿ ಈತನು ಪ್ರಾವೀಣ್ಯ ಪಡೆಯಬೇಕಾಗುವದು. ಹಾಗಾದರೆ ಮಾತ್ರ ಸಂಪೂರ್ಣ ಪ್ರಸಾದವು ಈತನ ಹಸ್ತಗತವಾಗುವದು.

೬ **ಪ್ರಸಿದ್ಧ ಪ್ರಸಾದ ಲಿಂಗಃ—** ಸಿದ್ಧಪ್ರಸಾದಕ್ಕಿಂತ ಮುಂದೆ ಹೋದುದು ಪ್ರಸಿದ್ಧಪ್ರಸಾದವಾಗುವದು. ಈತನ ಸಂಪಾದನೆಯಲ್ಲಿ ಜಂಗಮದ ಪಾಲಾಗಬೇಕು. ತನಗೆ ವೆಚ್ಚವಾಗಿ ವುಳಿದುದೆಲ್ಲ, ಬೇರೆ ಜನರಿಗೂ ( ಸತ್ಪಾತ್ರ ಅಥವಾ ಅಪಾತ್ರವೇ ಇರಲಿ ) ಪ್ರಾಣಿಗಳಿಗೂ ಸಲ್ಲಬೇಕು. ಹೀಗಾದರೆ ಈತನು ಸೇವಿಸುವ ಎಲ್ಲ ವಸ್ತುಗಳು ಪ್ರಸಿದ್ಧ ಪ್ರಸಾದವಾಗುವವು. ಅವು ತನಗೆ ಅಥವಾ ಕೌಟುಂಬಿಕರಿಗೆ ಬೇಕೆಂದು ಬಚ್ಚಿಟ್ಟುಕೊಂಡರೆ, ಆತನ ವಿಷಯ ವಾಸನೆಯು ತಿಳಿಯದೆ ಉಳಿದಂತಾಗುವದು. ಅವನು ಪುನಃ ಜನ್ಮಕ್ಕೆ ಬರಬೇಕಾಗುವದು. ಆದುದರಿಂದ ತನ್ನವರು ಪರರು ಎಂಬ ಭೇದಭಾವವಿಡದೆ, ಎಲ್ಲರೂ ಶಿವ ಸ್ವರೂಪವೇ ಎಂದು ನಂಬಿ ಧನವನ್ನು ಜಂಗಮಕ್ಕೆ ( ಜನತೆಗೆ ) ಸಲ್ಲಿಸಬೇಕು. ತ್ರಿಪುಟಿಯೊಂದಾಗುವ ದೃಷ್ಟಿ ಬೇಕು. ಇದೇ ಪ್ರಸಿದ್ಧ ಪ್ರಸಾದ ಪಡೆಯುವ ಮಾರ್ಗವು.

## ೬ ಐಕ್ಯಸ್ಥಳ

ಐಕ್ಯನ ಅಂಗಸ್ಥಳಗಳುಃ— ( ೧ ) ಕಾಯ ಲಿಂಗೈಕ್ಯ ( ೨ ) ಜೀವ ಲಿಂಗೈಕ್ಯ. ( ೩ ) ಭಾವಲಿಂಗೈಕ್ಯವೆಂತಲೂ.

ಐಕ್ಯನ ಲಿಂಗಸ್ಥಳಗಳುಃ—( ೧ ) ಪಿಂಡಜಲಿಂಗ ( ೨ ) ಅಂಡಜ ಲಿಂಗ ( ೩ ) ಬಿಂದ್ವಜಲಿಂಗವೆಂತಲೂ ಇರುವವು.
ಅವುಗಳ ವಿವರ—

( ಅ ) ೧ **ಕಾಯಲಿಂಗೈಕ್ಯಃ-** ಈತನು ದೇಹವೆಂಬ ಲಿಂಗದಲ್ಲಿ ಕೂಡಿ ಒಂದಾಗುವನು. ಈತನು ಇಷ್ಟಲಿಂಗ ಸಂಬಂಧಿಯಾಗುವನು. ಸ್ಥೂಲ ಶರೀರವಾಗಲಿ ಸೂಕ್ಷ್ಮ ಶರೀರವಾಗಲಿ, ಕಾರಣ ಶರೀರವಾಗಲಿ, ಯಾವದಾದರೂ ಭೇದವೆಣಿಸದೆ ಅವೆಲ್ಲ ಒಂದೇ ರೂಪವೆಂದು ಭಾವಿಸಿ, ಅವುಗಳಲ್ಲಿ ತಾನು ಬೆರೆದು ಹೋಗುವವನೇ ಕಾಯ ಲಿಂಗೈಕ್ಯನು.

೨ **ಪಿಂಡಜಲಿಂಗಃ—** ಕಾಯ ಲಿಂಗೈಕ್ಯನು ಪಿಂಡಜ ಲಿಂಗವನ್ನು ಭಜಿಸುವನು. ಪಿಂಡವಾದರೂ ಸ್ಥೂಲ, ಸೂಕ್ಷ್ಮ, ಕಾರಣವೆಂದು ತ್ರಿವಿಧ

ವಾಗಿರುವದು. ಸ್ಥೂಲ ಪಿಂಡವು ಕಣ್ಣಿಗೆ ಕಾಣುವದು. ಮಲ್ಲಿಗೆ ಬಳ್ಳಿ ಗುಲಾಬಿ ಗಿಡ, ಕಬ್ಬು ಮುಂತಾದವುಗಳನ್ನು ಬೆಳೆಸುವದಾದರೆ, ಅವುಗಳ ತುಂಡುಗಳನ್ನು ನೆಲದಲ್ಲಿ ಹುಗಿದು ನೀರು ಹಾಕಿ, ಬೆಳೆಸುವದನ್ನು ನಾವು ನೋಡೇ-ನೋಡುತ್ತೇವೆ. ಇವೆಲ್ಲ ಸ್ಥೂಲ ಪಿಂಡದಿಂದಲೇ ಹುಟ್ಟುವದರಿಂದ ಇವನ್ನು ಪಿಂಡಜ ಲಿಂಗವೆನ್ನುವರು. ಅವುಗಳ ಒಳಮೈಯೇ ಸೂಕ್ಷ್ಮ ಪಿಂಡ, ಅದರೊಳಗಿನ ಸುಗಂಧ, ರುಚಿ ಮುಂತಾದುವು ಕಾರಣ ಪಿಂಡ.

( ಬ ) ೧ **ಜೀವ ಲಿಂಗೈಕ್ಯಃ**— ಜೀವವೆಂದರೆ ಪ್ರಾಣ. ಆದುದರಿಂದ ಮೊದಲು ಪ್ರಾಣವೆಂದು ಹೇಳಿದುದನ್ನೇ ಇಲ್ಲಿ ಜೀವಲಿಂಗವೆಂದರಿಯಬೇಕು. ಇದು ಪರಮಾತ್ಮನ ಅಂಶ ಮಾತ್ರವಾದ ಚೈತನ್ಯದಿಂದಲೇ ಲಭಿಸುವದು. ಚರ ಮತ್ತು ಅಚರವೆಂಬೆರಡು ವಿಧದ ವಸ್ತುಗಳಲ್ಲಿ ಜೀವ ( ಚೈತನ್ಯ ) ವಿದ್ದೇ ಇರುವದು. ವನಸ್ಪತಿ ವರ್ಗದಲ್ಲಿಯೂ ಅದು ಉಂಟು. ಈ ತರದ ಯಾವ ಭೇದವನ್ನೂ ಮಾಡದೆ ಅವೆಲ್ಲ ಒಂದೇ ಎಂದು ಅದರಲ್ಲಿ ಕೂಡಿಕೊಂಬುವದೇ ಈತನ ಕರ್ತವ್ಯವು.

೧ **ಅಂಡಜಲಿಂಗಃ**— ಅಂಡವೆಂದರೆ ತತ್ತಿ. ತತ್ತಿಯು ರೂಪದಿಂದ ಅನೇಕ ಪ್ರಾಣಿಗಳು ಮೊದಲು ಉತ್ಪತ್ತಿ ಹೊಂದುವದನ್ನು ನಾವು ಕಾಣುತ್ತೇವೆ. ಇವು ಸ್ಥೂಲಾಂಡಗಳು. ಮನುಷ್ಯ ಪ್ರಾಣಿಯು ಸಹ ಒಂದು ವಿಧದ ಹುದುಗಿನಲ್ಲಿಯೇ ಉದಿಸುತ್ತದೆ. ಇದು ಸೂಕ್ಷ್ಮಾಂಡ ಇಡೀ ಜಗತ್ತಿಗೆ ನಾವು ಬ್ರಹ್ಮಾಂಡವೆನ್ನುತ್ತೇವೆ. ಅದೆಲ್ಲ ಬ್ರಹ್ಮರೂಪ ಮೂಲ ವಸ್ತುವಿನ ಅಂಡದಿಂದಲೇ ಹುಟ್ಟುವದೆಂದ ಹಾಗಾಗುವದಿಲ್ಲವೇ ? ಇದು ಕಾರಣಾಂಡವು.

( ಕ ) ೧ **ಭಾವ ಲಿಂಗೈಕ್ಯಃ**— ಭಾವವೆಂಬುದು ಪ್ರತಿಯೊಂದು ವಸ್ತುವಿನಲ್ಲಿಯೂ ಉಂಟು ಎಷ್ಟು ಜನ ಮನುಷ್ಯರಿರುವರೋ ಅವರ ಭಾವಗಳೆಲ್ಲ ಭಿನ್ನ ಭಿನ್ನವಾಗಿಯೇ ಇರುವವು. ಪಶುಪಕ್ಷ್ಯಾದಿಗಳಲ್ಲಿಯೂ ಹೀಗೆಯೇ ಉಂಟು. ವನಸ್ಪತಿಗಳಿಗೂ ಭಾವ ಉಂಟೆಂದು ಸಿದ್ಧವಾಗಿದೆ. ಇದರಂತೆಯೇ ಖನಿಜ ಕೋಟಿಯ ಪದಾರ್ಥಗಳಿಗೂ ಭಾವ ಉಂಟೆಂಬುದು ಊಹೆಯಾಗುವದು. ಈ ಮಾತಿಗೆ ಅನೇಕ ಭಾವಗಳು ತೋರಿದಾಗ್ಯೂ

ಅವೆಲ್ಲ ಒಂದೇ ವಿಧವೆಂದು ನಿಶ್ಚಯಿಸಿ, ಅದರಲ್ಲಿ ತಾನೂ ಕೂಡಿ ಒಂದಾಗುವದೇ ಭಾವಲಿಂಗೈಕ್ಯವು.

**ಬಿಂದುಜ ಅಥವಾ ಬಿಂದ್ವಜ ಲಿಂಗ:—** ಬಿಂದುವೆಂದರೆ ರೇತಸ್ಸು. ಹೆಣ್ಣು ಪ್ರಾಣಿಯ ರಜಸ್ಸಿನಲ್ಲಿ ಗಂಡುಪ್ರಾಣಿಯ ಬಿಂದುವು ಸೇರಿ ಹೊಸ ಹೊಸ ಪ್ರಾಣಿ ( ಮನುಷ್ಯ ದನಕರು ) ಗಳು ಹುಟ್ಟುವುದನ್ನು ಎಲ್ಲರೂ ಬಲ್ಲರು. ಭೂಮಿಯಲ್ಲಿ ಕಾಳು ಬಿತ್ತಿ ಬೆಳಕೊಳ್ಳುವದಾದರೂ ಬಿಂದುಜ ದಲ್ಲಿಯೇ ಬರುವದು. ಇದೆಲ್ಲ ಸ್ಥೂಲ ಬಿಂದುವಿನ ವಿಷಯ. ಜಗವೆಲ್ಲ ತೇಜೋ ಮೇಘಗಳಿಂದಲೇ ನಿರ್ಮಾಣವಾದುದೆಂದು ವಿಜ್ಞಾನಿಗಳು ಹೇಳು ವರು. ಅದು ಸೂಕ್ಷ್ಮಲಿಂಗ. ಅದನ್ನೇ ಬಿಂದುಶಕ್ತಿ ಎಂತಲೂ ಶಾಸ್ತ್ರ ಕಾರರು ಹೇಳಿದ್ದಾರೆ. ಈ ಸ್ಥೂಲ ಸೂಕ್ಷ್ಮ ಎರಡೂ ವಿಧಿಗಳಿಗೆ ಮೂಲ ಕಾರಣವಾಗಿ ಪರಮಾತ್ಮ ರೂಪವು ಇದ್ದೇ ಇರುವದು. ಇದೆಲ್ಲ ಬಿಂದುಜ ವಾಯಿತು.

ಇನ್ನು ಬಿಂದ್ವಜವೆಂದರೇನೆಂಬುದನ್ನು ನೋಡೋಣ. ಬಿಂದು+ ಅಜ=ಬಿಂದ್ವಜ. ಬಿಂದುವಿನಿಂದ ಯಾವುದು ಹುಟ್ಟುವದಿಲ್ಲವೋ ಅದೇ ಬಿಂದ್ವಜ. ಹೀಗೆ ಹುಟ್ಟುವುದು ಯಾವುದೆಂಬುದನ್ನು ವಿಚಾರಿಸಿ, ತಿಳಿ ಯುವದು ಅವಶ್ಯವಿದೆ. ಶ್ರೀ ಬಸವಣ್ಣನವರು ತಮ್ಮ ವಚನ ಒಂದರಲ್ಲಿ ವರ್ಣಭೇದ ಕಲ್ಪಿಸುವ ಜನ'ಗೆ "ಕರ್ಣದಲ್ಲಿ ಜನಿಸಿದವರುಂಟೇ ?" ಎಂದು ಪ್ರಶ್ನೆ ಮಾಡಿದ್ದಾರೆ. ಎಲ್ಲರೂ ಯೋನಿಜರೆಂಬುದು ಸರ್ವಶ್ರುತ ವಿರುವದು. ಹಾಗೆ ಕೇಳುವದರಲ್ಲಿ ಅಣ್ಣನವರು ಮಂತ್ರ ಮೂಲಕವಾಗಿ ಲಿಂಗಾಂಗಿಗಳು ಕರ್ಣದಲ್ಲಿ ಗುರುಮುಖದಿಂದ । ಹುಟ್ಟುವರೆಂದೂ, ಆಗ ಅವರ ಸಂದೇಹವಳಿದು, ಹರದೇಹವಾಗುವದೆಂದೂ ಮನದಲ್ಲಿ ತಂದಿ ರುವರೆಂಬುದು ಸ್ಪಷ್ಟವದೆ. ಹೀಗೆ ತಾನು ಹರ ಸ್ವರೂಪವಾಗಿ ಜನಿಸು ವವರೆಲ್ಲರೂ ಬಿಂದ್ವಜ ಲಿಂಗ ಸ್ವರೂಪರು.

ಈ ಮೇರೆಗೆ ೧೮ ಅಂಗ ಸ್ಥಳಗಳೂ ೧೮ ಲಿಂಗಸ್ಥಳಗಳೂ ಸಂಕ್ಷೇ ಪವಾಗಿ ವಿವರಿಸಲ್ಪಟ್ಟವು. ಇವುಗಳಿಂದಲೂ ಷಟ್‌ಸ್ಥಲ ಜ್ಞಾನಕ್ಕೆ ಸಹಾಯವಾಗುವದು.

ಇನ್ನು ಕೊನೆಗೆ ಅಷ್ಟಾದಶ ಲಿಂಗಾರ್ಪಿತ ಪಟವನ್ನು ಕೊಟ್ಟು ಇದನ್ನು ಮುಗಿಸೋಣ.

## ಪ್ರೌಢ ಷಟ್ಪದಿ

ಸ್ಥಳಗಳ ವಿಷಯವಾಗೆಲ್ಲ ವಿಧಂಗಳಂ।
ತಿಳಿವುದು ತೀರಿತ್ತು ಮೊದಲಾರ್ ಸ್ಥಳಗಳಂ।
ಸಲೆ ಏಕೋತ್ತರ ಶತಂಗಳ ಸಹಮಾಗಿ ಬಿತ್ತರಿಸಿದನಗಲದೇ ||

ಸುಳಿದುವು ಷಟ್ ತ್ರಿಂಶದಂಗಳು ಮದರೊಡನೆ।
ಯುಳಿದಷ್ಟಾದಶ ಸ್ಥಳಗಳ ನುಸುರ್ದಿಹಂ।
ವಿಲಸನ್ಮನದಾಣ್ಮ ನರಿಯದರುಪಯೋಗ ಕೆಂದೀಗಳ ಮೋದದಿ॥೧॥

(ಇಲ್ಲಿ ೪।೫ ಮಾತ್ರೆಯ ಗಣಗಳು ಕ್ರಮವಾಗಿ ಬಂದಿವೆ. ಪ್ರತಿಯೊಂದು ಗಣದ ಮೊದಲನೆಯ ಹಾಗೂ ಮೂರನೆಯ ಮಾತ್ರೆಯ ಮೇಲೆ ಪೆಟ್ಟು ಹಾಕುತ್ತ ಪಠಿಸಿದರೆ ಛಂದಸ್ಸಿನ ಧಾಟಿಯು ಆಗುವದು.)

# ಅಷ್ಟಾದಶ ಲಿಂಗಾಶ್ರಿತ ಪಟವು.

| ಕ್ರಮಾಂಕ | ಲಿಂಗಗಳು | ಆಚಾರ ಲಿಂಗದ | ಗುರುಲಿಂಗದ | ಶಿವಲಿಂಗದ | ಜಂಗಮ ಲಿಂಗದ | ಪ್ರಸಾದ ಲಿಂಗದ | ಮಹಾ ಲಿಂಗದ |
|---|---|---|---|---|---|---|---|
| ೧ | ಇಷ್ಟಲಿಂಗ | ಭೋಜ್ಯದರೂಪ (ಹೊರಗಣ ಆಕಾರ) | ಪಾನ್ಯದ ರೂಪ | ಭಕ್ಷ್ಯದ ರೂಪ | ಭೋಗ್ಯದ ರೂಪ | ಲೇಹ್ಯದ ರೂಪ | ಸರ್ವದರ ರೂಪ |
| | | ( ಇಲ್ಲಿ ಆಹಾರ ದ್ರವ್ಯದ ಬಗ್ಗೆ ಮಾತ್ರ ಹೇಳಿದೆ. ಆದರೂ ಇದರಂತೆ ವಸ್ತ್ರ, ಆಭರಣ, ವಾಹನ ಮೊದಲಾದವೆಲ್ಲದರ ವಿಷಯದಲ್ಲಿ ತಿಳಿಯುವದು ಕಠಿಣವಲ್ಲ ) | | | | | |
| ೨ | ಪ್ರಾಣಲಿಂಗ | ಮಧುರ ರುಚಿ (ಒಳಗಣ ಗುಣ) | ಒಗರ ರುಚಿ | ಕ್ಷಾರ ರುಚಿ | ಆಮ್ಲ ರುಚಿ | ಕಹಿ ರುಚಿ | ಸರ್ವದರ ರುಚಿ |
| | | (ಇಲ್ಲಿ ರಸಗುಣದ ಪಂಚ ವಿಧಗಳನ್ನು ರುಚಿಎಂದು ಹೇಳಿದ್ದರೂ, ಆದರಂತೆ ಉಳಿದ ಗುಣಗಳ ಬಗೆಗೆ ಭಾವಿಸುವದೇನೂ ದುಸ್ತರವಲ್ಲ. ರುಚಿ ಶಬ್ದವನ್ನು ಎಲ್ಲ ಗುಣಗಳ ಆಸ್ವಾದನೆಯಲ್ಲಿ ಹೇಳಲಡ್ಡಿ ಇಲ್ಲ ) | | | | | |
| ೩ | ಭಾವಲಿಂಗ | ಮೇಲಿನವೆಲ್ಲದರ ತೃಪ್ತಿ | ಮೇಲಿನವೆಲ್ಲದರ ತೃಪ್ತಿ | ಮೇಲಿನವೆಲ್ಲದರ ತೃಪ್ತಿ | ಮೇಲಿನವೆಲ್ಲದರ ತೃಪ್ತಿ | ಮೇಲಿನವೆಲ್ಲದರ ತೃಪ್ತಿ | ಮೇಲಿನವೆಲ್ಲದರ ತೃಪ್ತಿ |

# ಎಚ್ಚರಗೊಳ್ಳಿರಿ.

( ಶ್ರೀ ಉಪಾಧ್ಯಾಯ ಮ. ಮಲ್ಲಪ್ಪ ಜನತಾ ಜ್ಞಾನ ಪ್ರಚಾರಕ )

ಎಚ್ಚರ ಎಂದೊಡನೆ ನಾವು ನಿದ್ದೆ ಮಾಡುತ್ತಿದ್ದೇವೆ ಎಂಬ ಪ್ರಶ್ನೆಯು ಜನಿಸ ಬಹುದಲ್ಲವೆ? ನಾವು ನಿದ್ದೆಯಲ್ಲಿರಲಿ ಇಲ್ಲದಿರಲಿ ಎಚ್ಚರಗೊಳ್ಳಬೇಕಾದ ಅಗತ್ಯ ಮಾತ್ರ ಇದ್ದೇ ಇದೆ. ಸ್ವತಂತ್ರ ಬಂದರೂ ನಾವಿನ್ನೂ ಸ್ವತಂತ್ರ ಘಟ್ಟವನ್ನು ಸಂಪೂರ್ಣವಾಗಿ ಕಾಣಲಿಲ್ಲವೆಂದರೆ ತಪ್ಪೇನಾಗಲಾರದು. ಮಾನವನ ಜೀವದ ಜೀವಾಳವು ಧರ್ಮವು ಧರ್ಮದ ತಿರುಳು ಹುರುಳು ನೀತಿಯಾಗಿರುತ್ತದೆ. ನಮ್ಮ ನಮ್ಮ ಧರ್ಮವನ್ನು ತಪ್ಪದೆ ಪಾಲಿಸಿಕೊಂಡು ಬಂದರೆ ಶ್ರೇಯಸ್ಸು ತಪ್ಪದು. ರಾಮನು ವನವಾಸಕ್ಕೆ ಹೊರಡುವ ಮೊದಲು ತಾಯಿಯ ಹರಕೆಯನ್ನು ಕೋರುವನು. "ಪ್ರೀತಿಯ ರಾಮ, ನೀನು ನಿನ್ನ ಧರ್ಮವನ್ನು ತಪ್ಪದೆ ಪಾಲಿಸಿದರೆ ಅದು ನಿನ್ನನ್ನು ಸಂಪೂರ್ಣವಾಗಿ ಬಿಡದೆ ಎಲ್ಲಿದ್ದರೂ ದರೆಯೇ ಕಾಪಾಡುತ್ತದೆ." ಎಂದು ಕೌಸಲ್ಯೆಯು ಹರಕೆ ಹಾಕಲು ಅದು ರಾಮನಿಗೆ ವನವಾಸವನ್ನು ಅರಮನೆಯ ವಾಸವನ್ನಾಗಿ ಮಾಡಿತು. ಇಂದು ನಮ್ಮ ನಮ್ಮ ಧರ್ಮಕ್ಕೆ ಚ್ಯುತಿ ಬರುತ್ತದೆ ಅದಕ್ಕೆ ಅವಕಾಶವಾಗದಂತೆ ಎಚ್ಚರಗೊಳ್ಳಿರಿ.

ಎಲ್ಲ ಧರ್ಮಕಿಂತಲೂ ಮಿಗಿಲಾದ ವೈಶಿಷ್ಟ್ಯವಿದೆ ವೀರಶೈವ ಧರ್ಮದಲ್ಲಿ. ಪ್ರಾಚೀನತಮವು ಶ್ರೇಷ್ಠತಮವಾಗಿದೆ ಇದು. ಯಂ ಸರ್ವಂ ಸೃಜತಿ ಪ್ರಲಾಯತಿ ಜಾಶೇಷಂ ಹರಿಷ್ಯತ್ಯಪಿ। ದೇವಾನಾಂ ಜಗತೋऽಪಿಯಃ ಸುಶರಣೋ ಗೌರೀ ಪತಿರ್ಯೋಹರಃ। ತ್ವಂ ದೇವಂ ಪ್ರಣಮಾಮಿ ಶೂಲಿನಮಚಿಂತ್ಯಂ ನೀಲಕಂಠಂ ಶಿವಂ। ಭೋದೇವೇಶ ಮಮ ಕ್ಷಶಾವ್ಯ ಕುಮಲಂ ಪಾಪಂಚ ಸರ್ವಂ ಸದಾ॥ ಎಂದರೆ ಯಾರು ಸಕಲ ಜಗತ್ತನ್ನು ಸೃಜಿಸಿರುವನೋ। ಕಾಪಾಡುವನೋ ಮತ್ತು ನಾಶಮಾಡುವನೋ, ಯಾರು ಸಕಲ ದೇವತೆಗಳಿಗೆ ಪಾಲಕನಾಗಿರುವನೋ

ಯಾರು ಪಾರ್ವತಿಗೆ ಗಂಡನಾಗಿರುವನೋ ಅಂತಹ ಶಿವನಿಗೆ ನಮ ಸ್ಕಾರ ಮಾಡುತ್ತೇನೆ. ಎಲೈ ದೇವಾಧಿ ದೇವನಾದ ಪರಮೇಶ್ವರನೇ। ನನ್ನ ಸಕಲ ಪಾಪಗಳನ್ನೂ, ದೋಷಗಳನ್ನೂ ಪರಿಹರಿಸು ಎಂದು *Radeu mas poerbatiaraka* ಎಂಬ ಮುಸಲ್ಮಾನ ಪಂಡಿತ ಜಾವಾದ್ವೀಪದಲ್ಲಿ ಹೇಳಿರುವನು. ಕನ್ನಡ ಕುಲಗುರು ಬಸವಣ್ಣನವರು "ಸ್ವಾಮಿ, ನೀನು ಶಾಶ್ವತನು ಎತ್ತಿದೆ ಬಿರಿದು ಜಗವೆಲ್ಲರಿಯಲು, ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋ ದೇವ ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲ ಸಂಗಮ ದೇವ" ಎಂದು ಪರಮೇಶ್ವರನನ್ನು ಸ್ತುತಿಸಿರುವರು. ಲಿಂಗ ರೂಪದಲ್ಲಿ ಪರಮೇಶ್ವರನನ್ನು ನಿಚ್ಚಳದಿಂದ ಪೂಜಿಸಿ ಜನ್ಮ ಸಾರ್ಥಕ್ಯ ವನ್ನು ಹೊಂದುವ ನಾವು "ಲಿಂಗಕ್ಕೆ ಕಡೆಯಿಲ್ಲ ಲಿಂಗಿಲ್ಲನೆಡೆಯಿಲ್ಲ। ಲಿಂಗದೊಳು ಜಗವು ಅಡಗಿಹುದು ಲಿಂಗವನು। ಹಿಂಗಿದವನುಂಟೆ ಸರ್ವಜ್ಞ ॥ ಎಂಬುದನ್ನು ಕೂಲಂಕುಷವಾಗಿ ವೀಕ್ಷಿಸಬೇಕು. ಲಿಂಗ ಮಧ್ಯೆ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ। ಲಿಂಗ ಬಾಹ್ಯಾತ್ಪರಂ ನಾಸ್ತಿ ತಸ್ಮಾತ್ ಲಿಂಗ ಪ್ರಪೂಜಯೇತ್ ಎಂಬ ಈಶಾವಾಸ್ಯೋಪನಿಷ ತ್ತಿನ ವಾಣಿಯೇ ಸಾಕಾಗಿದೆ ಲಿಂಗದ ಶ್ರೇಷ್ಠತೆಗೆ. ನಮ್ಮ ನಾಡಿನವರೆ ಲ್ಲರೂ ಕೂಡ ಆಸ್ತಿಕರೇ ಸರಿಯಷ್ಟೆ. ದೇವರಿದ್ದಾನೆ ಎಂಬ ಭಾವನೆ ಯನ್ನು ಒಪ್ಪಿಕೊಂಡು ಮೂರ್ತಿ ಪೂಜೆಯಲ್ಲಿ ಹೆಚ್ಚು ಸುಧಾರಣೆಯನ್ನೂ ಸೌಲಭ್ಯವನ್ನೂ ಕೆಲವು ಶೈವರು ಕಲ್ಪಿಸಿಕೊಂಡ ಫಲಿತವೇ ಲಿಂಗಪೂ ಜೆಯು. ಪ್ರತಿಯೊಬ್ಬನೂ ಹೆಚ್ಚು ಖರ್ಚಿಲ್ಲದೆ ಮತ್ತೊಬ್ಬರ ಗೊಂದಲು ಗೋಜಿಲ್ಲದೆ ಅನುಕೂಲ ಪರಿಸ್ಥಿತಿಯಲ್ಲಿ ಭಗವಂತನನ್ನು ಆರಾಧಿಸಲು ಏರ್ಪಾಡಾದ ಪದ್ಧತಿಯನ್ನು ಕಂಡು ಹಿಡಿದವರು ಜಾಣರಲ್ಲವೇ? ವೀರ ಶೈವರು ಪೂಜೆಮಾಡತಕ್ಕ ಶಿವಲಿಂಗವು ತತ್ವಜ್ಞಾನ ದೃಷ್ಟಿಯಿಂದಲೂ ಸಾಧನ ಸೌಲಭ್ಯ ದೃಷ್ಟಿಯಿಂದಲೂ ಅತ್ಯಂತ ಶ್ಲಾಘನೀಯವಾಗಿದೆ. ಶಿವಲಿಂಗದ ಆಕಾರವು ಗುಂಡಾಗಿಯೂ, ಅದರ ಬಣ್ಣವು ಶ್ಯಾಮಲ ವರ್ಣವುಳ್ಳದ್ದಾಗಿಯೂ ಇರುವುದು ಈಶ್ವರೀ ಸಂಪತ್ತಿಗೆ ನಿದರ್ಶನವೆನಿ ಸಿದೆ. ವೀರಶೈವನು ಲಿಂಗತತ್ವಕ್ಕನುಗುಣವಾಗಿ ನಡೆದೊಡೆ ಆತನಿದ್ದ ಲ್ಲಿಯೇ ಸ್ವರ್ಗ ಕಲ್ಪವೃಕ್ಷವು ಕರತಲಾಮಲಕವೇ ಸರಿಯಷ್ಟೆ.

ಲಿಂಗವು ಕ್ರಮಬದ್ಧವಾಗಿ ನಮಗೆ ಸೇರುವಂತೆ ಮಾಡಬೇಕು. 'ಗುಡ್ಡಿಗೊಂದು ಲಿಂಗ, ಮುದ್ದೆಗೊಬ್ಬ ಅಯ್ಯ' ಎಂಬಂತೆ ಆಗಬಾರದು. ವೀರಶೈವರಿಗೆ ಅಸಾಧಾರಣ ಧಾರ್ಮಿಕ ಲಾಂಛನವು ಲಿಂಗಧಾರಣವು. ಲಿಂಗಧಾರಣವು ವೀರಶೈವರ ಮುಖ್ಯ ಚಿಹ್ನೆಯಾದವರೂ ಲಿಂಗಧಾರಿಗಳಿಲ್ಲದೂ ವೀರಶೈವರೆನಿಸುವದಿಲ್ಲ. ಶಿವದೀಕ್ಷಾ ಸಂಸ್ಕಾರದಿಂದ ಪರಿಶುದ್ಧನಾಗಿ, ಕ್ರಿಯಾಪ್ರಧಾನವಾದ ಗುರು, ಲಿಂಗ ಜಂಗಮ, ಪಾದೋದಕ ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಅಷ್ಟಾವರಣ, ಜ್ಞಾನಪ್ರಧಾನವಾದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲ, ಪಂಚಾಚಾರ, ಲಿಂಗಾಂಗ ಸಾಮರಸ್ಯಾದಿ ಸಾಧನ ಸಂಪತ್ತುಗಳು ಇಲ್ಲದೆ, ಸಾಧಕನು ವೀರಶೈವನು ಎನಿಸಿಕೊಳ್ಳಲು ಯೋಗ್ಯನಾಗನು. ಶಿವದೀಕ್ಷೆಯು ಮನುಜನ ಜನನ ಮರಣಕ್ಕೆ ಕಾರಣೀಭೂತವಾದ ಆಣವ, ಮಾಯಾ, ಕಾರ್ಮಿಕ ಮಲತ್ರಯಗಳನ್ನು ನಾಶಪಡಿಸಿ, ಜೀವವನ್ನು ಶುದ್ಧಗೊಳಿಸಿ, ಆತನಿಗೆ ಶಿವಾರ್ಚನಾಧಿಕಾರವನ್ನುಂಟು ಮಾಡುತ್ತದೆ. ಕೆರೆಯ ಪದ್ಮಾಸನು ದೀಕ್ಷಾಯೋಧೆಯಲ್ಲಿ "ಯಥಾ ವ್ಯಾಗಪತಿಂ ದೃಷ್ಟ್ವಾ ಯಥಾ ಭೀತೋ ವನೇ ಗಜಃ। ಅದೀಕ್ಷಿತೋರ್ಚಯಲ್ಲಿಂಗಾತ್ ತಥಾ ಭೀತೋ ಮಹೇಶ್ವರಃ॥" ಎಂದು ಹೇಳುವುದನ್ನು ನೋಡಿದರೆ ಶಿವದೀಕ್ಷೆಯ ಮಹತ್ವವು ಗೊತ್ತಾಗುತ್ತದೆ. ಲಿಂಗಧಾರಣವು ವೇದಸಮ್ಮತವೆಂದು ಪ್ರಾಚೀನರು ನುಡಿದಿರುವರು. ಈ ಶಿವದೀಕ್ಷೆಯು ಕಾಲದಲ್ಲಿ ಶ್ರೀ ಗುರುವು ತನ್ನ ಮಂತ್ರಶಕ್ತಿಯಿಂದಲೂ, ತಪಶ್ಶಕ್ತಿಯಿಂದಲೂ, ಶಿಷ್ಯನನ್ನು ಪರಿಶುದ್ಧಗೊಳಿಸುತ್ತಾನೆ. ಸ್ಪರ್ಶ ಮಣಿಯು ಸೋಂಕಿದ ಲೋಹವು ಭಂಗಾರವಾಗುವಂತೆ ಶಿವದೀಕ್ಷೆಯಿಂದ ಸಂಸ್ಕೃತನಾದ ಜೀವನು ಪರಿಶುದ್ಧನಾಗುತ್ತಾನೆ. "ಗುರು ದೀಕ್ಷೆಯಿಲ್ಲದ ಲಿಂಗವು ಧರೆಯ ಕಲ್ಲೆನಿಸಿತ್ತು. ಗುರುದೀಕ್ಷೆಯಿಲ್ಲದ ನರನು ಶರಣರ ಸಮಯಕ್ಕೆ ಸಲ್ಲನು. ಅದೆಂತೆಂದಡೆ ಸುಟ್ಟ ಮಡಿಕೆಯಲ್ಲಿ ನೀರು ತುಂಬಿದೊಡೆ ದಿಟವಾಗಿ ನಿಲ್ಲುವುದಲ್ಲದೆ ಹಸಿಯ ಮಡಿಕೆಯಲ್ಲಿ ನೀರು ತುಂಬಿದೊಡೆ ದಿಟವಾಗಿ ನಿಲ್ಲುವುದೇ ಹೇಳಾ? ಇದು ಕಾರಣ ಗುರುದೀಕ್ಷೆಯಿಲ್ಲದವ ಎಷ್ಟು ಜ್ಞಾನಿಯಾದೊಡೆ ಅವನ ಜ್ಞಾನವು ಪ್ರಯೋಜನಕ್ಕೆ ಬಾರದು. ಅವನು ಎಷ್ಟು ಕ್ರಿಯೆಯನಾಚರಿಸಿದಡೆ ಅವನ ಕ್ರಿಯೆಯು ನಿಷ್ಫಲ ನೋಡಾ ಅಖಂಡೇಶ್ವರ" ಎಂಬ ಶಿವಶರಣ

ವಚನವೇ ಸಾಕಾಗಿದೆ ಗುರುವಿಲ್ಲದೆ ಲಿಂಗಧಾರಣವು ಸರಿಯಲ್ಲ ಎಂಬು
ದಕ್ಕೆ ಆಚಾರ್ಯರ ಪುರಾಣದ ಬದನೆ ಕಾಯಿಗೆ ಲೆಕ್ಕವೇ ಇಲ್ಲ ಎನ್ನ
ಬಹುದು ಆದರೆ ಗತಾನು ಗತಿ ಲೋಕೋನಲೋಕಃ ಪಾರಮಾರ್ಥಿಕಃ
ಎಂಬಂತೆ ಅತ್ತಿತ್ತ ಕಿವಿಗೊಡದೆ ಏಕಾನು ಸಂಧಾನಿಗಳಾದರೆ ಲೇಸು.
ಪರಧರ್ಮದಲ್ಲಿನ ಹಿತಕ್ಕಿಂ ತಸ್ವಧರ್ಮದಲ್ಲಿನ ಅಹಿತವೇ ಲೇಸು ಎಂದು
ಗೀತೋಕ್ತಿಯಿರುವಲ್ಲಿ ಎಷ್ಟೇ ಕಷ್ಟಗಳು ಬಂದರೂ ಕೂಡ ನಮ್ಮ ಧರ್ಮ
ವನ್ನು ಬಿಡಬಾರದು. ಧರ್ಮಾಚರಣೆಯು ಪರೀಕ್ಷೆಯು ಅಗ್ನಿ ಪರೀಕ್ಷೆಯು.
ಇದರಲ್ಲಿ ಜಯವು ಸಿಕ್ಕಿದ ಮೇಲೆ ಇನ್ನಾವ ಪರೀಕ್ಷೆಯನ್ನು ಮಾಡಬೇ
ಕಾದುದಿಲ್ಲ. ಇದರಿಂದಲೇ ''ಹರ ತನ್ನ ಭಕ್ತರ ತಿರವಂತೆ ಮಾಡುವ
ಒರೆದು ನೋಡುವ ಸುವರ್ಣದ ಚಿನ್ನದಂತೆ. ಅರಿದು ನೋಡುವ
ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದೊಡೆ ಕರವಿಡಿದೆತ್ತಿಕೊಂ
ಬ ರಾಮನಾಥ'' ಎಂದು ಹಿರಿಯರು ಹೇಳಿರುವುದು ಇದು ಸುಳ್ಳೇ?
ಗಾಂಧಿಯು ಸ್ವರಾಜ್ಯಸಾಧನೆಗಾಗಿ ಇಡೀ ತನ್ನ ಸಕಲ ಸಂಪತ್ತನ್ನು
ತ್ಯಜಿಸಿ, ಸುಖಭೋಗಗಳನ್ನು ತೃಣೀಕರಿಸಿ ಹಲವಾರು ಬಾರಿ ಕೃಷ್ಣ
ಜನ್ಮ ಗೃಹವಾಸವನ್ನು ಪಡೆದು, ಆತ್ಮಗೌರವವನ್ನು ಪೆಟ್ಟಿಗೆ ಗುರಿಮಾಡಿ
ಸಹನಾದೇವಿಯ ಪ್ರತಿಅವತಾರವಾಗಿ ಪರಿಣಮಿಸಿ ಇದಿರಾಳುಗಳಿಗೆ ಏಕೈಕ
ಮಂತ್ರವಾದ 'ಅಹಿಂಸಾ ಪರಮೋಧರ್ಮಃ' ಎಂಬುದನ್ನು ಪ್ರದರ್ಶಿಸಿ
ಅವರಿಂದಲೇ ತನ್ನ ಸಿದ್ಧಿಯನ್ನು ಪಡೆದು ಕೀರ್ತಿ ಶರೀರಿಯಾದನು.
''ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ಎಚ್ಚರವಾಗದಿದ್ದೊಡೆ ಅಂಗೈಯ
ಲ್ಲಿದ್ದ ಲಿಂಗವು ಘಟಸರ್ಪ''ವಾಗುವುದಂತೆ. ಇದನ್ನು ತಿಳಿದಮೇಲೆ
ಅದನ್ನು ಸನ್ನಿವೇಶಕ್ಕನುಗುಣವಾಗಿ ನಮ್ಮ ಕೈಯ್ಯಲ್ಲಾದಷ್ಟು ಮಟ್ಟಿಗೆ
ಜೀವನಸಿದ್ಧಿಗಾಗಿ ಅನುಸರಿಸಿಕೊಂಡು ಆಚರಿಸಬೇಕು. ಲಿಂಗವ ನೆರೆ
ನಂಬಿದವರೆಲ್ಲರಿಗೂ ಯಾವ ಭೇದವಿಲ್ಲದೆ ಇದು ಫಲವನ್ನು ಕೊಡು
ವುದು.

ಹೆಂಗಸೆಂದು ಕೀಳೆಣಿಸುವ ಹಾಗಿಲ್ಲ. 'ಹೆಣ್ಣು ಹೆಣ್ಣಲ್ಲ ಪ್ರತ್ಯಕ್ಷ
ಕಪಿಲ ಸಿದ್ಧ ಮಲ್ಲಿಕಾರ್ಜುನಾ' ಆಗದೆ. ಹೆಣ್ಣು ಗಂಡಸಿಗೆ ಧರ್ಮ
ದಲ್ಲಿ ಎಷ್ಟು ಹಕ್ಕಿದೆಯೋ ಅಷ್ಟೇ ಹಕ್ಕು ಹೆಂಗಸಿಗೂ ಇದೆ. ಆದ
ರಿಂದಲೇ ''ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮಸ

ಣಿಯ ಭಕ್ತಿ, ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ, ಭಾಂಡ ಭಾಜನ ಶುದ್ಧಿಯಿಲ್ಲದವನ ಭಕ್ತಿ, ಹೆಂಡದ ಮಡಕೆಯ ಹೊರಗೆ ತೊಳೆದಂತೆ ಕೂಡಲ ಸಂಗಮ ದೇವ" ಎಂದು ಭಕ್ತ ಪುರುಷೋತ್ತಮ ಬಸವಣ್ಣನವರು ನುಡಿದಿರುವನು. ಹೆಂಗಸು ಬರಿ ಭೋಗ ವಸ್ತುವಲ್ಲ. ಆಕೆಯೂ ಕೂಡಾ ನಮ್ಮಂತೆಯೇ ಜೀವಿ. ಸಂಸಾರ ರಥದ ಗಾಲಿಯೊಂದು ಹೆಂಡತಿ ಅವಳನ್ನು ನಮಗಿಂತ ಕೀಳೆನ್ನುವುದು ನಮ್ಮೆಲ್ಲರ ಮೌಢ್ಯವೇ ಸರಿಯು. ಹಲವಾರು ಹೆಂಗಸರು ಹಣೆಗೆ ಬರೀ ಕುಂಕುಮವನ್ನೇ ಧರಿಸುತ್ತಿರುವುದು ಕಾಣ ಬರುತ್ತಿದೆ. ಕುಂಕುಮದ ಬೊಟ್ಟು ಹೆಂಗಸಿನ ಸೌಂದರ್ಯ, ಗಾಂಭೀರ್ಯವನ್ನು ಹೆಚ್ಚಿಸಿ ಮಂಗಳ ಪ್ರದಾಯಕವಾಗುವ ಗುರುತೇ ಹೊರತು ಸಿದ್ಧಿ ಪ್ರದಾಯಕವಲ್ಲ. "ನೀರಿಗೆ ನೈದಿಲೆಯೇ ಶೃಂಗಾರ, ಸಮುದ್ರಕ್ಕೆ ತೆರೆಯೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ, ನಾರಿಗೆ ಗುಣವೇ ಶೃಂಗಾರ, ನಮ್ಮ ಕೂಡಲ ಸಂಗನ ಶರಣ ಶರಣೆಯರ ನೊಸಲಿಗೆ ವಿಭೂತಿಯೇ ಶೃಂಗಾರ. ಎಂಬ ಮಹಾನು ಭಾವಿ ಬಸವಣ್ಣನವರ ವಚನವು. ಲಲಾಟಗ್ರಿಹಿತಂ · ಭಸ್ಮ ತಿಲಕಂ ಧಾರಯೇತ್ಸದಾ ಎಂಬ ನೀಲಕಂಠ ಶಿವಾಚಾರ್ಯರ ವಚನವೂ ಎಲ್ಲರ ಗಮನಕ್ಕೆ ಬಂದರೆ ವಿಭೂತಿಯ ಅಗತ್ಯವು ಅರಿವಾಗುವುದು. ತೊಟ್ಟಿಲನ್ನು ತೂಗುವ ಕೈಯೇ ಜಗತ್ತನ್ನು ತೂಗ ಬಲ್ಲದಂತೆ! ಇಂತಹ ಸಮಾಜ ದೀಪಸ್ತಂಭವು ಸರಿಯಾಗಿರಬೇಕು. ಪುರುಷನಿಗಿಂತ ಸ್ತ್ರೀಗೆ ಹೆಚ್ಚಿಗೆ ಜವಾಬ್ದಾರಿಯು ಇದೆ ಎಂಬುದು ಇದರಿಂದ ತಿಳಿಯ ಬರುತ್ತದೆ. ಎದು ವರೆಗೆ ನಮ್ಮಲ್ಲಿ ಮಹಿಳಾ ಪ್ರಗತಿಯು ಎದ್ದು ಕಾಣುವದಿಲ್ಲವೋ ಅದು ವರೆಗೂ ನಾವು ಪ್ರಗತಿ ಪಥವನ್ನು ಕಾಣಲಾರೆವು. ಅದುಕಾರಣವೇ ಎಚ್ಚರ ಗೊಳ್ಳಿರಿ ಎಂಬುದು ಅಂದ ಮಾತ್ರಕ್ಕೆ ಹೆಂಗಸರಿಗೆ ಪಟ್ಟ ಗಟ್ಟಿ ಗೆಯನ್ನು ಕೊಟ್ಟು ವೀರ ಸಿಂಹಾಸನಾಧೀಶ್ವರಿಣಿಯರನ್ನಾಗಿ ಮಾಡಿ ಅವರ ನಿರಂಕುಶ ಪ್ರಭುತ್ವಕ್ಕೆ ಒಳಪಡೋದು ಬೇಕಾಗಿಲ್ಲ. ಕೇವಲ ಅಲ್ಪಕಾಲದಲ್ಲಿಯೇ ಹತ್ತಾರು ಮಂದಿಯ ಪ್ರಗತಿಯನ್ನು ಒಬ್ಬಳೇ ಒಬ್ಬಳಲ್ಲಿ ಕಾಣಬಹುದು ಇಲ್ಲವೇ ಹತ್ತಾರು ಮಂದಿಯ ಅಧೋಗತಿ ಯನ್ನು ಒಬ್ಬಳೇ ಒಬ್ಬಳಲ್ಲಿ ನೋಡಬಹುದು. ಆದಕಾರಣ ಮೊದಲೇ ಎಚ್ಚರಗೊಂಡು ಗುಣಕಿಂತ ನಿವಾರಣೆಯೇ ಒಳ್ಳೆಯದು ಎಂಬುದನ್ನು

ಅರಿತುಕೊಂಡು ಯಥೋಚಿತಕಾರ್ಯಕ್ರಮವನ್ನು ಕೈಗೊಳ್ಳಬೇಕು. ಲಿಂಗದ ನೆಲೆ ಸೆಲೆಯನ್ನು ಕೇಳುವ ಕಾಲವು ಇಷ್ಟರಲ್ಲಿಯೇ ಬಂದೀತು ಅಂದು ನಮ್ಮವರು ನಿಶ್ಶಕ್ತರಾಗದೆ ಯಥೋಚಿತ ಯತ್ನದಿಂದ ಜಯಶಾಲಿಗಳಾಗಬೇಕು. ಎಲ್ಲ ಬಲ್ಲವರು ಜಗತ್ತಿನಲ್ಲಿ ಯಾರೂ ಇಲ್ಲ. ಅರಿವಿನ ಅರ್ಜನೆಗೆ ಸಹವಾಸ ಬೇಕು. ಶ್ರಮ ಅಗತ್ಯ, ಯತ್ನ ಆವಶ್ಯಕವು. ಅದಕ್ಕಾಗಿ ಶಿವಾನುಭವ ಸಂಘಗಳ ನಿರ್ಮಾಣವಾಗಬೇಕು. ಸಂಘದ ಮೂಲಕ ಎಲ್ಲರೂ ದುಡಿದು ತಮ್ಮ ತಮ್ಮ ಸಿದ್ಧಿಯನ್ನು ಪಡೆಯಬೇಕು.

'ಶಿವಾನುಭವ' ಶಬ್ದವನ್ನು ವಿಜಾಪುರದಲ್ಲಿ ರಾ| ಬ| ಹಳಕಟ್ಟಿಯವರ ಸಂಪಾದಕತ್ವದಲ್ಲಿ ಹೊರಡುತ್ತಿರುವ ಶಿವಾನುಭವ ಮಾಸಿಕದಿಂದ ಎಲ್ಲರೂ ಕೇಳಿರ ಬಹುದು. ಇದು ಈಗಾಗಲೇ ಇಪ್ಪತ್ತು ಐದನೆ ವರ್ಷದ ಅಂತ್ಯಕ್ಕೆ ಬರುತ್ತಿದೆ. ಈ ಇಪ್ಪತ್ತು ನಾಲ್ಕು ವರ್ಷಗಳಲ್ಲಿ ಹಲವಾರು ಕಡೆ ಶಿವಾನುಭವ ಸಂಘಗಳು ನಡೆಯುವಂತಾಗಿವೆ ಇದರ ಮೂಲಕ ಶಿವಾನುಭವ ಸಾಹಿತ್ಯ ಮತ್ತು ತತ್ವ ಪ್ರಚಾರ ಕಾರ್ಯವು ನಡದಿದೆ. ಇದು ಹಳಕಟ್ಟಿಯವರನ್ನು ಯಾರೂ ಕೂಡ ಮರೆಯದಂತೆ ಮಾಡಿದೆ. ಈಗೀಗ ಗದುಗಿನ 'ವೀರಶೈವ ಸಂಸ್ಕೃತಿ ಪ್ರಚಾರ' ಸಂಘದವರು ಸಾಹಿತ್ಯ ತತ್ವ, ಸಂಸ್ಕೃತಿಗಳ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದಾರೆ. ಇದರ ಹೃದಯ ಪಂಡಿತ ನಾಗಭೂಷಣ ಶಾಸ್ತ್ರಿಗಳು. ಇದಕ್ಕೆ ಬೆಂಬಲವಾಗಿ ಶರಣಸಾಹಿತ್ಯ, ಸದ್ಧರ್ಮ ದೀಪಿಕೆ, ಪಂಚಾಚಾರ್ಯ ಪ್ರಭಾ, ನವಸಂದೇಶ, ಲಿಂಗಾಯತ ಸಾಹಿತ್ಯ ಸಮಿತಿ ಪತ್ರಿಕೆ, ವಿಭೂತಿ ಪತ್ರಿಕೆಗಳು ಎಲ್ಲಕ್ಕೂ ಮೂಲವು ಅನುಭವವು. ಅನುಭವವಿಲ್ಲದ ಬ್ರಹ್ಮದ ವಿಚಾರವು ಹಸ್ಲಿನ ರಸಾಸ್ವಾದದ ಕಥೆಯು. ಅನುಭವಕ್ಕೆ ಮೊದಲು ಅನುಭಾವವಿದ್ದರೆ ಬಲು ಚನ್ನು. ಮನುಜನಿಗೆ ಮನುಷ್ಯತ್ವವನ್ನು ಕೊಡುವುದು ಅನುಭಾವವು. ಭಕ್ತಿ ಮತ್ತು ಜ್ಞಾನವು ಜನಿಸಬೇಕಾದರೆ ಅನುಭಾವವು ಅಗತ್ಯವು. ಆತ್ಮೋನ್ನತಿಯ ದೃಷ್ಟಿಯಿಂದ ಇದು ಅತ್ಯಂತ ಮಹತ್ವವುಳ್ಳದ್ದು. ಅನುಭಾವಿಗಳು ಪ್ರಪಂಚದಲ್ಲಿದ್ದು ಕಮಲ ಪತ್ರ ಜಲದಂತೆ ಪಾರಮಾರ್ಥಿಕತೆಯನ್ನು ಸಾಧಿಸಬೇಕು. ಅಲ್ಲಿಲ್ಲಿನ 'ನಾಣ್ಯವಾಗಿ ಬಾಳು' ಎಂಬ ರೂಢಿಯ ಮಾತು ಎಲ್ಲರಿಗೂ ತಿಳಿದ

ವಿಷಯವೂ ಸರಿಯೆ. ಜೀವನದ ಎರಡು ಮುಖಗಳು ಚನ್ನಾಗಿದ್ದರೇ ತಾನೆ ನಮಗೆ ಅನುಕೂಲಸಿದ್ಧಿಯು. ಆದುದರಿಂದಲೇ ಭಕ್ತಿ ಭಂಡಾರಿ ಬಸವಣ್ಣನವರು "ಮರ್ತ್ಯ ಲೋಕವೆಂಬುವದು ಕರ್ತಾರನ ಕಮ್ಮಟ ವಯ್ಯ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ, ಇಲ್ಲಿ ಸಲ್ಲದ ವರು ಅಲ್ಲಿಯೂ ಸಲ್ಲರಯ್ಯಾ" ಎಂದಿದ್ದು ಇಂದಿನ ಪರಿಸ್ಥಿತಿಯನ್ನು ನೋಡಿದರೆ ಬರೀ ಬಾಹ್ಯಾಡಂಬರವು ಬೊಬ್ಬೆಏಳಿಸುತ್ತಲಿದೆ. ವಿಪರೀತ ವಾಗಿ ಉಪಚಾರದ ಪೂಜೆಯೇ ನಡೆದಿರುತ್ತದೆ. "ಸುಮ್ಮನೆ ಉಪ ಚಾರ ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು ಕೂಡಲ ಸಂಗಮ ದೇವ" ಎಂಬುದು ಸುಳ್ಳೇ? ಶರಣರ ವಚನವು 'ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಯಾಗಿರಲು ಇದನ್ನು 'ಸಾವಧಾನ' ದಿಂದ ವಿಮರ್ಶಿಸಿ ಒಂದು ಊರು ಅಲ್ಲಿ ಮಹನೀಯರೊಬ್ಬರು ಪೂಜೆ ಮಾಡುತ್ತಿದಾರೆ. ಘಂಟಾನಾದವು ಭೋರ್ಗರೆಯುತ್ತಿದೆ. ಹೂವಿನ ಮಳೆ ಸುರಿಯುತ್ತಿದೆ ಪರಿಮಳವು ಪ್ರಸರಿಸುತ್ತಿದೆ. ಅದೇ ವೇಳೆಯಲ್ಲಿ ತಿರುಪೆಯವನೊಬ್ಬನು 'ಕವಳಾ ಬುದ್ಧಿ" ಎನಲು ಮನೆಯ ಬಾಗಿಲಲ್ಲಿ "ಹೋಡಹೊಡಿಸು" ಎಂಬ ಶಬ್ದವು ಈ ಮಹನೀಯನಿಂದ ಬರಬೇಕಾದರೆ ಈತನಲ್ಲಿ ನಿಶ್ಚಲತೆಯು ಎಷ್ಟರ ಮಟ್ಟಿಗೆ ಇರಬೇಕು, ಉದಾರತೆಯು ಎಷ್ಟರ ಮಟ್ಟಿಗೆ ಅಳವಟ್ಟಿರಬೇಕು ಎಂಬುದು ಗೊತ್ತಾಗುತ್ತದೆ. ಅಂತಶ್ಶುದ್ಧಿಯ ಜೊತೆಗೆ ಬಹಿಶ್ಶು ದ್ಧಿಯು ಇದ್ದರೆ ತಾನೇ ಬಲು ಚನ್ನು. ಭಕ್ತಿಯ ಆವೇಶದಲ್ಲಿ ಮುಳು ಗಿದವನಿಗೆ ಹೊರಗಿನ ಜ್ಞಾನವಿರುತ್ತದೆಯೇ? ದೀನ ದಲಿತರಿಗೆ ಸಹಾಯ ಮಾಡುವುದರಲ್ಲಿ ಭಗವಂತನಿಗೆ ತೃಪ್ತಿಯಿಲ್ಲವೇ? ಭಕ್ತಿಯಿಂದ ಪರಮೇ ಶ್ವರನನ್ನು ಅರ್ಚಿಸುವುದೇ ಅಂತಶ್ಶುದ್ಧಿಯ ಕ್ರಿಯೆಯು ನಿಶ್ಶಕ್ತರಿಗೆ ತನ್ನ ಕೈಯ್ಯಲಾಗುವ ಸಹಾಯವೇ ಬಹಿಶ್ಶುದ್ಧಿಯ ಕ್ರಿಯೆಯು. ಆಗ ತಾನೇ ಜೀವನ ನಾಣ್ಯದ ಎರಡು ಮುಖವು ಚನ್ನಾಗಿ ಶೋಭಿಸುವುದು ಹುಟ್ಟದ ಬೀಜವಿದ್ದಡೇನಯ್ಯ ಧರೆಯೊಳಗೆ ಅಟ್ಟುಣ್ಣ ಬಾರದ ಮಡಿಕೆ ಯಿದ್ದರೇನಯ್ಯ ಮನೆಯೊಳಗೆ ಶಿವ ನಿಮ್ಮ ಮುಟ್ಟದ ಮನವಿದ್ದಡೇ ನಯ್ಯ ತನುವಿನೊಳಗೆ ಎಂಬುದನ್ನು ನೋಡಿದರೆ ಶಿವ ಮೆಚ್ಚುವಂತೆ ಮಾಡಬೇಕು ಎಲ್ಲವನ್ನು ಎಂಬುದು ತಿಳಿಯುತ್ತದೆ. ಪರಸ್ಪರ ಪೂರ ಕವಾದ ಭಕ್ತಿ ಮತ್ತು ಸೇವೆಯು ಅನುಭಾವಿಗೆ ನಿಲಕುವುದೇ!

ಅನುಭವವೆಂದರೆ ರೂಢಿಯಲ್ಲಿ ಒಂದು ವಸ್ತುವಿನ ಇಲ್ಲವೇ ಆಲೋಚನೆಯ ಸಂಸರ್ಗದಿಂದ ಲಭಿಸಿದ ಫಲವು. ಇಂದಿನ ಜಗತ್ತು ಅನುಭವವೆಂದರೆ ಪ್ರಾಪಂಚಿಕ ವಿಷಯಾನುಭವ ವೆಂದು ಅರಿತುಕೊಂಡಿದೆ. ಇದು ಕಾರಣದಿಂದಲೇ ಈ ಜಗತ್ತು ಇಲ್ಲದ ಸಲ್ಲದ ಅಶಾಂತಿಗೆ ಗುರಿಯಾಗಿ ನಶ್ವರ ಸುಖಕ್ಕೆ ಆಶಿಸಿ, ಜಗದ ಜಂಜಡಕ್ಕೆ ಜರ್ಜರಿತವಾಗಿ ಜೋಲಾಡುತ್ತಿದೆ. ಕೋಟಿ ಹೊನ್ನುಗಳಿದ್ದರೂ, ಪರಿವಾರವು ಅಸಂಖ್ಯಾತವಾಗಿದ್ದರೂ, ಅನುಕೂಲಸಾಧನಗಳು ಹಲವಾರಿದ್ದರೂ ಸುಖ ಶಾಂತಿಯಿಲ್ಲದೆ ತೊಂದರೆ ತೊಡಕಿನಿಂದ ಒದ್ದಾಡುವಂತಾಗಿದೆ. ಆತ್ಮಾನುಸಂಧಾನ ರೂಪವೇ ಅನುಭವವಾಗಬೇಕು. ರೂಢಿಯ ಅನುಭವಕ್ಕೆ ನಿಲುಕದಿರುವ ಅಧ್ಯಾತ್ಮಿಕ ತತ್ವಗಳು ಎಲ್ಲರಿಗೂ ತಿಳಿದು ರುಚಿಕರವಾಗಿರುವುದೆ ಶಿವಾನುಭವವು. "ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ. ಹೆಣ್ಣು ಮಾಯೆಯೆಂಬರು. ಹೆಣ್ಣು ಮಾಯೆಯಲ್ಲ; ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ ಗುಹೇಶ್ವರ" ಎಂದು ಪ್ರಭುದೇವರು ನುಡಿದಿರುವುದು ಎಲ್ಲರಿಗೂ ಮನದಟ್ಟಾಗಲಿ. ಜಡ ಚೇತನಾತ್ಮಕವಾದ ಜಗತ್ತು ಪರಶಿವನ ಲೀಲೆಯು. "ಲೀಲೆಯೆಂಬುದು ಪ್ರಪಂಚವನ್ನು ಕೆಲಸಕ್ಕೆ ಬಾರದ ವ್ಯರ್ಥ ವಸ್ತುವೆಂದು ಹಾರಿಸಿಬಿಡುವುದಿಲ್ಲ" ಎಂದಿರುವ ಅರವಿಂದರು ಶರಣರ ತತ್ವವನ್ನು ಒಪ್ಪುವುದಿಲ್ಲವೆ? ಶರಣರ ಅಭಿಪ್ರಾಯದಲ್ಲಿ ಜಗನ್ಮಿಥ್ಯಾತ್ವಾಭಿಮಾನವು ವ್ಯರ್ಥವಾದುದು. ಬೀಜದಲ್ಲಿ ಮರವಾಗುವ ಶಕ್ತಿಯಿರುವಂತೆ ಜೀವನಲ್ಲಿ ದೇವನಾಗುವ ಶಕ್ತಿಯಿದೆ. ಅದನ್ನು ಭಾವನೆ, ಜ್ಞಾನ, ಸತ್ಕ್ರಿಯೆಗಳ ಸಹಾಯದಿಂದ ಸಾಕ್ಷಾತ್ಕರಿಸಲು ಸಾಧ್ಯ ಮಾಡುತ್ತದೆ ಶಿವಾನುಭವವು. ಭಾವದಿಂದ ಜ್ಞಾನ, ಜ್ಞಾನದಿಂದ ಸತ್ಕ್ರಿಯೆಯು ಉಂಟಾಗುತ್ತದೆ. ಸಗುಣ ನಿರ್ಗುಣ ಪರಬ್ರಹ್ಮನ ಸರ್ವಾಂತರ್ಯಾಮಿತ್ವವನ್ನು ಸಾಕ್ಷಾತ್ಕರಿಸಿ ಕೊಳ್ಳುವುದೇ ಪೂರ್ಣ ಯೋಗವೆಂಬ ಅರವಿಂದರ ನುಡಿಯು ವೀರಶೈವರ ಲಿಂಗೋಪಾಸನೆಯನ್ನು ಸಮಗ್ರವಾಗಿ ಸಮರ್ಥಿಸುತ್ತದೆ. "ಲಿಂಗ ಸ್ಥೂಲವೆಂಬರು ಕೆಲವರು, ಲಿಂಗವು ಸ್ಥೂಲವಲ್ಲ. ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನ ರೂಪು. ಪರಾನಂದ ಪರಬ್ರಹ್ಮವೇ ಲಿಂಗವೆಂದರಿದ ಅರಿವ ಅಖಂಡ ರೂಪು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ತಾನೇ ಬೇರಿಲ್ಲ."

ಎಂಬುದರಿಂದ ಲಿಂಗಾಂಗ ಸಾಮರಸ್ಯದಲ್ಲಿನ ಲಿಂಗ ತತ್ವವು ಗೊತ್ತಾಗುತ್ತದೆ. ಸದ್ಗುರುವಿನ ವೇಧಾಮಂತ್ರ ಕ್ರಿಯಾ ದೀಕ್ಷೆಯಿಂದ ಮಲತ್ರಯಂಗಳನ್ನಳಿದ ಶುದ್ಧ ಜೀವನವೇ ಅಂಗವು. ಆ ಅಂಗ ಲಿಂಗಗಳು ಒಂದಾಗಿ ಬೆರೆಯುವುದೇ ಸಾಮರಸ್ಯವು. "ಸಂಸಾರವೆಂಬ ಶ್ವಾನನಟ್ಟಿ ಮೀಸಲ ಬೀಸರವ ಮಾಡದಿರಯ್ಯಾ! ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯ ನೀವಲ್ಲದೆ ಮತ್ತೆನನ್ನೂ ಅರಿಯೆನು ಕನ್ಯೆಯಲ್ಲಿ ಕೈವಿಡಿದೆನು. ನಿಮ್ಮಲ್ಲಿ ನೆರೆದೆನು. ಮನ್ನಿಸು ಕಂಡೆಯಾ ಮಹಾಲಿಂಗವೇ! ಸತಿಯಾನು, ಪತಿ ನೀನಯ್ಯ. ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ ನೀನೆನ್ನ ಮನವ ಕಾಯ್ದಿಪ್ಪ ಗಂಡನು ನಿನಗಾದ ಮನವನ್ಯಕ್ಕೆ ಹರಿಸಿದರೆ, ನಿನ್ನಭಿಮಾನ ಹಾನಿ ಕೂಡಲ ಸಂಗಮ ದೇವ." ಎಂಬುದು ಶರಣನ ಸತಿಪತಿ ಭಾವದಿಂದ ಲಿಂಗಾಂಗ ಸಾಮರಸ್ಯವು ಸಮಂಜಸವಾಗುವುದನ್ನು ಅಳವಡಿಸುತ್ತದೆ. ಶಿವಾನುಭವವು ಬರೀ ತತ್ವಮಯ ಶಾಸ್ತ್ರವೂ ಅಲ್ಲದೆ ಲೋಕವ್ಯವಹಾರ ಬೋಧಕವಾದ ನೀತಿ ಶಾಸ್ತ್ರವೂ ಆಗಿ ಪರಸ್ಪರಲ್ಲಿನ ಸತ್ಯ, ಧೈರ್ಯ, ಪ್ರಾಮಾಣಿಕತನಾದಿ ಸದ್ಗುಣ ಸಂಪತ್ತನ್ನು ಕೊಡುವ ಸಾರನಿಧಿಯೂ ಆಗಿದೆ.

ಉಪನಿಷತ್ಕಾಲದ ಋಷಿ ಕೂಟಗಳೂ, ಜೈನ ಸಂಘಗಳೂ, ಬೌದ್ಧ ಸಂಘಗಳೂ, ಅನುಭವ ಮಂಟಪವೂ, ದಾಸಕೂಟಗಳೂ, ಎಲ್ಲರಿಗೂ ತಿಳಿದರೆ ಗೋಷ್ಠಿ ಸಮ್ಮೇಳನಗಳು ಹಿಂದಿನಕಾಲದಲ್ಲಿಯೂ ನಡೆಯುತ್ತಿದ್ದವು ಎಂಬುದು ಗೋಚರವಾಗುವದಿಲ್ಲವೇ? ಒಬ್ಬರ ವಿಚಾರಕ್ಕಿಂತ ಇಬ್ಬರ ವಿಚಾರವು ಲೇಸಂತೆ! 'ವಾದೇ ವಾದೇ ಜಾಯತೇ ತತ್ವ ಬೋಧಃ' ತತ್ವವು ಸತ್ಯವಲ್ಲವೇ? ಕೆನೆವಾಲನ್ನು ಕಡೆದಾಗಲ್ಲವೇ ನವನೀತವು ಹೊರ ಬೀಳುವುದು. ಅಂತೆಯೇ ಸಂವಾದದಿಂದ ತತ್ವ ಬೋಧವು ಉಂಟಾಗುತ್ತದೆ. ಪರಸ್ಪರ ವಿನಿಮಯ ಜ್ಞಾನದಿಂದ ಇಡೀ ಸಮಾಜಕ್ಕೆ ಅನುಕೂಲವಲ್ಲವೇ? ವೀರಶೈವ ಸಂಸ್ಕೃತಿಯು ತನ್ನ ಬೆಳಕಿನಿಂದ ಮನುಜ ಸಂಸ್ಕೃತಿಯನ್ನು ಬೆಳಗಿಸಿ ಉಜ್ವಲ ಗೊಳಿಸಬೇಕಾದರೆ ಶಿವಾನುಭವಿಗಳು ಒಂದೆಡೆ ಸೇರಬೇಕು, ಸಮಸ್ಯೆಗಳನ್ನು ತಂದೊಡ್ಡಬೇಕು, ಬಿಡಿಸಲು ಹೋರಾಡಬೇಕು, ಶಾಂತಿ ಸಹನೆಯಿಂದ ಫಲವನ್ನು ಉಣ್ಣಲು ಸಿದ್ಧನಾಗಿರಬೇಕು. ಗೋಡೆಗಳು ಕೇಳುವ ಭಯವಿಲ್ಲವೆಂದು

ಮನೆಯಲ್ಲಿ ಕುಳಿತು 'ನಾನೇ ಹೆಚ್ಚು' ಎಂಬ ಜಂಭವನ್ನು ಕೊಚ್ಚಿಕೊಳ್ಳುವುದರಿಂದ ಯಾವ ಪುರುಷಾರ್ಥವನ್ನೂ ಸಾಧಿಸಿದಂತಾಗುವದಿಲ್ಲ. ಬಾವಿಯೊಳಗಿನ ಕಪ್ಪೆಯಂತಾದೀತು ನಮ್ಮಯ ಜೀವನವು ನಿಮ್ಮ ನಿಮ್ಮ ಜೀವನವನ್ನು ವಿಶಾಲಗೊಳಿಸಲು ಎಚ್ಚರಗೊಳ್ಳಿರಿ, ಬೆಳಕನ್ನು ಕಾಣಿರಿ. ನಮ್ಮ ನಮ್ಮಲ್ಲಿರುವ ಹಲಕೆಲವು ಅನುಕರಣೀಯ ಪದ್ಧತಿಗಳನ್ನು ಅಳಿಸಲು ತೊಡಗಬೇಕು. ಅವುಗಳು ಅಳಿದು ಅವುಗಳ ಜಾಗಗಳಿಗೆ ಹಿಂದಿನ ಮಾಪಾಲುಗಳು ಬರಬೇಕು. ಅವಶ್ಯಕ ಸುಧಾರಣೆಗಳು ಜಾರಿಗೆ ಬರಲಿ, ನೀವೆಲ್ಲರೂ ಎಚ್ಚರಗೊಳ್ಳಿರಿ. ಸ್ಮೃತಂ ಹರತಿ ಪಾಪಾನಿ ಎಂಬಂತೆ ಶ್ರೀ ಗುರು ಲಿಂಗ ಜಂಗಮ ಸೇವಾ ಕಾರ್ಯದಲ್ಲಿ ಭಾಗವಹಿಸಿ ಶ್ರವಣ ಮನನಾದಿಗಳ ಮೂಲಕ ಪುಣ್ಯಭಾಗಿಯಾಗಲು ಸಿಗುವ ಅಮೃತ ಸಮಯವನ್ನು ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡಂತೆ ಉಪಯೋಗಿಸಬೇಡಿ. "ಪುಷ್ಪನುಂಗಿದ ಪರಿಮಳದಂತೆ ಇಪ್ಪ ಮಹಾನುಭಾವಿಗಳಿಗೆನ್ನ ಒಡಲು ಗುರಿಮಾಡಿದೆಯಾಗಿ ಎನ್ನ ಒಡಲ ಪರಿಯಾಯ ಕೆಟ್ಟಿತಯ್ಯ ಕೂಡಲ ಸಂಗಮದೇವ" ಎಂಬುದನ್ನು ನೋಡಿದರೆ ಶಿವಶರಣರ ಹಿರಿಮೆಯು ಅರಿವಾಗದೇ? ಶಿವಶರಣರ ಸಹವಾಸದಿಂದ ಅಧ್ಯಾತ್ಮಿಕ ಮತ್ತು ನೈತಿಕ ಬಲವು ವಿಕಾಸವಾಗುವುದರಲ್ಲಿ ಯಾವ ಸಂಶಯವೂ ಇಲ್ಲವು. ಭಾರತವು ಇಂದು ಭೌತಿಕ ಬೆಳವಣಿಗೆಯಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಸರಿಸಮಾನವಾಗುವದಿಲ್ಲ. ಇಂದು ಆ ರಾಷ್ಟ್ರಗಳು ಭಾರತಕ್ಕೆ ಮರ್ಯಾದೆ ಕೊಡುತ್ತಿರುವುದು ಅದರ ಜನಶಕ್ತಿಗಾಗಲೀ ವಿಜ್ಞಾನ ಕಲಾ ಕೌಶಲ್ಯಗಳಲ್ಲಿನ ಮಹತ್ಕಾರ್ಯಕ್ಕಾಗಲೀ ಅಲ್ಲ; ಆದರೆ ಅದರ ನೈತಿಕ ಮತ್ತು ಅಧ್ಯಾತ್ಮಿಕ ಶಕ್ತಿಗಾಗಿ ಎಂದು ಕೇಂದ್ರ ಸರಕಾರದ ಆಹಾರ ಮಂತ್ರಿ ಜಯರಾಮ ದೌಲತ್ ದಾಸರು ನುಡಿದಿರುವುದೇ ಇದರ ಪ್ರಧಾನತೆಗೆ ಕುರುಹಾಗಿದೆ. ಭಾರತದ ದಿವ್ಯ ತತ್ವವು ಶರಣರ ಅನುಭಾವ ಪುಟಪಾಕದಲ್ಲಿ ಮತ್ತಿಷ್ಟು ಪ್ರಜ್ವಲಿಸಲು ಅವಕಾಶ ಕೊಡುವಂತೆ ಎಚ್ಚರಗೊಳ್ಳಿರಿ. ಸರ್ಪಭೂಷಣ ಶಿವಯೋಗಿಗಳು "ಶರೀರವೆಂತೆಂಬುವ ಹೊಲವ ಹಸನುಮಾಡಿ। ಪರತತ್ವ ಬೆಳೆಯನೆ ಬೆಳೆದುಣ್ಣಿರೋ ‖ ಶಮೆ ದಮೆ ಯೆಂತೆಂಬುವೆರಡು ಎತ್ತುಗಳ ಹೂಡಿ। ವಿಮಲ ಮಾನಸ ನೇಗಿಲಮಾಡಿ ಮಮಕಾರವೆಂತೆಂಬ ಕರಿಕೆಯ ಕಳೆದಿಟ್ಟು ಸಮತೆ ಗೊಬ್ಬರವನೆ ಚೆಲ್ಲಿ

ರುವುದು. ಎಲ್ಲರಿಗೂ ಅನುಕರಣೀಯವಾಗಿರಲಿ. “ ನಮ್ಮ ಆದ್ಯರ ವಚನ ಮದ ಮಾತ್ಸರಾದಿ ಅರಿಷಡ್ವರ್ಗ ಸಪ್ತ ವ್ಯಸನ ದಶವಾಯು ಗಳಿಗಿಚ್ಚಿಗೆ ಹರಿವ ಮನವ ಸ್ವಸ್ಥವಾಗ ನಿಲಿಸಿತ್ತು” ಕನ್ನಡದ ಉಪನಿ ಷತ್ತಾದ ವಚನ ಶಾಸ್ತ್ರವು. ಇಂತಹುದನ್ನು ಬಿಡದೆ ಒಂದೊಂದು ಅರೆ ಗಳಿಗೆ ಯಾದರೂ ಅಧ್ಯಯನ ಮಾಡಿರಿ. ಸಮಾಜದ ಮುಂದಾಳು ತುರಾಯಿಯಲ್ಲಿನ ಗುಲಾಬಿ ಹೂವು ಇದರ ಸೌಂದರ್ಯ ಸೌಂದ ರ್ಯವು ತಮ್ಮೆಲ್ಲರ ಮೇಲೆ ಅವಲಂಬಿತವಾಗಿದೆ. ಸೇವೆಯೆಂಬುದು ಸುರ ಭೋಗ ಕಲ್ಪವಲ್ಲ; ಕೂರಲಗಿನ ಶರಶಯ್ಯೆಯು- ಇದರ ಮೇಲೆ ಮಲ ಗಿರುವ ದಿಟ್ಟ ಧೀರನಿಗೆ ನೀವು ಬೇಕು ಬೇಕೆಂದೇ ಅಡಚಣೆಯನ್ನು ತಂದೊಡ್ಡುವುದು ಉಚಿತವೇ? ಜೀವನವು ತಮಾಷೆಯಲ್ಲ; ಪರೀಕ್ಷೆ ಯಿಂದ, ದೀರ್ಘಾಲೋಚನೆಯಿಂದ ಇದರ ಯೋಗ್ಯತೆಯನ್ನು ಕಂಡು ಹಿಡಿದು ಆತ್ಮ ಕಲ್ಯಾಣ ಪರರಾಗಲು ಇಂದಿನ ಸಂದಿಗ್ಧ ಸಮಯದಲ್ಲಿ ಎಚ್ಚರರಾಗಿರಿ. *Passion is a good servant but a bad master* ಎಂಬ ಇಂಗ್ಲೀಷ ಗಾದೆಯು ನೆನಪಿನಲ್ಲಿರಲಿ. ಇನ್ನಾದರೂ ಕಡಿಮೆ ಯಾಗಲಿ *passion* ಭೂತಕ್ಕೆ ಬಲಿಯಾಗುತ್ತಿರುವುದು. “ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದದೀ ಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿ ದರೆ ಲಿಂಗ ಮೆಚ್ಚಿ ಅಹುದೆನಬೇಕು. ನುಡಿದರೆ ಕೂಡಲ ಸಂಗಮ ದೇವ ಸೈ ಎಂದು ಅಪ್ಪಿಕೊಳ್ಳುವಂತಿರಬೇಕು.” ಎಂಬ ಬಸವ ಗೀತೆಯು *Speech is an art to the moderate life* ಎಂಬುವದರಲ್ಲಿ ಅಳವಡದೇ? ನಿಮ್ಮ ನಿಮ್ಮ ಗೃಹಸುಧಾರಣೆಯು ಮೂಲಕ ಸಮಾಜ ಸುಧಾರಣೆಯನ್ನು ಮಾಡಲು ಎಚ್ಚರಗೊಳ್ಳಿರಿ. ಪರಶಿವನು ರಸರೂಪಿ ಯೆಂದು ಶೃತಿ ಸಾರುತ್ತಿರಲು ಸೌಂದರ್ಯಾಭಿನಿವೇಶನವು ಮಾನವನ ಆ ಜನ್ಮ ಹಕ್ಕಲ್ಲವೇ? ಸ್ವಾನುಭವ ಸುಜ್ಞಾನ ವಿಲ್ಲದ ಮಾನವನು ಬದು ಕಿದೊಡೆದೇನು ಶ್ವಾನ ಸೂಕರನಂತೆ ಹೊಟ್ಟೆ ಹೊರೆದು ಕೊಂಡಿಹನು ಎಂಬುದನ್ನು ನೆನಪಿನಲ್ಲಿಟ್ಟು ಕೊಂಡು ಸ್ವಂತ ಅನುಭವವನ್ನೇ ಪ್ರತಿಯೊ ಬ್ಬನೂ ಆಸ್ತಿಯನ್ನಾಗಿ ಅರ್ಜಿಸಬೇಕು. ಕೇವಲಾನಂದಾನುಭವ ಶಿವಭಾ ವವೇ ತಾನಾಗಿ ಸರ್ವವ ಪಾವನ ಮಾಡುತ್ತ ಜೀವನ್ಮುಕ್ತನಾಗಿಹನು ಎಂದು ಮಹಲಿಂಗ ರಂಗನು ನುಡಿದಿರುವುದು ಶ್ರೀ ರಾನಡೆಯವರ

*Mystiscim implies a silent enjoyment of God*. ನುಡಿಗೆ ಸಮಂಜಸವಾಗದೇ? ಸಮಾಜದ ಮಠಾಧಿ ಪತಿಗಳೂ, ಪೀಠಾಧಿಕಾರಿಗಳೂ ಶಾಸ್ತ್ರ ಸಂಪನ್ನರಾಗಲೇ ಬೇಕು. ಸಮಾಜದ ಎಣ್ಣೆ ಬತ್ತಿಯು ಸಿದ್ಧಾಂತ ಜ್ಞಾನ, ಸದಾಚಾರವು. ಸಮಾಜದ ದೀಪವು ಮಠಾಧಿಪತಿಯು. ನಮ್ಮಲ್ಲಿ ಜನಬಲವಿದೆ, ವಿದ್ಯಾಬಲವಿದೆ, ಧನಬಲವಿದೆ; ಈ ತ್ರಿವೇಣಿ ಸಂಗಮದಲ್ಲಿ ಸಮಾಜಕ್ಕೆ ತೀರ್ಥ ಸ್ನಾನ ಮಾಡಿಸಲು ಮಠಾಧಿಪತಿಗಳ ಆಶೀರ್ವಾದವು ಬೇಕೇ ಬೇಕು. ಶಾಸ್ತ್ರಪಾರಂಗತವಾಗಿರುವ ಪಂಡಿತೋತ್ತಮರ ಸಹಾಯ ಸಲಹೆಯಿಂದ ಮತಸಿದ್ಧಾಂತ ಬೋಧಕ ವಿಶ್ವ ವಿದ್ಯಾಲಯವನ್ನು ಸ್ಥಾಪಿಸಬೇಕು ಕಾಯಕವೇ ಕೈಲಾಸವು ಆಗಲು ಸೋಮಾರಿತನಕ್ಕೆ ಅವಕಾಶವನ್ನು ಕೊಡಬೇಡಿರಿ ಸಂಸ್ಥಾನದಲ್ಲಿ ಲಿಂಗಾಯತರು ನ್ಯಾಯಸ್ಥಾನದ ವ್ಯಾಜ್ಯದಲ್ಲಿ ಎರಡನೆಯ ಸ್ಥಾನವನ್ನು ಪಡೆದಿದ್ದಾರೆ ಎಂಬ ಅಂಶವು ಮನಸ್ಸನ್ನು ಕೊರೆಯದೆ ಇರುವುದೇ? ಹೊನ್ನು ಹರಿದು ಹೋದರೂ ಕೂಡ ನ್ಯಾಯ ಸ್ಥಾನವನ್ನು ನೋಡದ ಸಮಾಜಕ್ಕೆ ಈ ದುರ್ಗತಿಯೇ ಮಾರಿ ಮಸಣಿ ಪೂಜೆ ತೀರ್ಥ ಯಾತ್ರೆ ಇತ್ಯಾದಿ ಭವಿಸಂಪ್ರದಾಯಗಳು ಅಳಿಯ ಬೇಕು. ಬೇರೆ ದೇವರುಗಳಿಗೆ ನಿವೇದಿಸಿದ ತಿಂಡಿ ತಿನಸನ್ನು ಲಿಂಗಕ್ಕೆ ನೈವೇದ್ಯ ಮಾಡಬಾರದು. ಸ್ತ್ರೀ ಪ್ರಗತಿಗಾಗಿ ಬೀದಿ ಬೀದಿಗೂ ಅಕ್ಕನ ಬಳಗಗಳು ಸ್ಥಾಪನೆಯಾಗಿ ಅವರವರೇ ತಮ್ಮ ತಮ್ಮ ಪ್ರಗತಿಯನ್ನು ನೋಡಿಕೊಳ್ಳುವಂತೆ ಆಗಬೇಕು. ಪ್ರಚಾರ ಕಾರ್ಯವು ಒಂದು ಬಗೆಯ ತಪಸ್ಸು ತತ್ವದ ಪರಿಪಾಲನೆ, ಭರವಸೆಯ ಜ್ಞಾನ, ಹೋರಾಟದ ಕೌಶಲ್ಯದಲ್ಲಿ ಇದರ ತಿರುಳು ಹುದುಗಿದೆ. ಈ ಬಗೆಯ ಕೆಚ್ಚೆದೆಯಿಂದ ಬರುವ ಪ್ರಚಾರಕರಿಗೆ ನಿಮ್ಮ ಸೌಹಾರ್ದತೆಯ ನೆರವು ಅತ್ಯಗತ್ಯವು. ಜ್ಞಾನ ಪ್ರಸಾರಣೆಯು ಒಂದು ದಾನವಂತೆ! ನಿಮ್ಮ ನಿಮ್ಮ ಮಕ್ಕಳನ್ನು ಸರಿಯಾದ ಹಾದಿಯಲ್ಲಿ ಬೆಳೆಯಿಸಲು ಸರ್ವತೋಮುಖವಾಗಿ ನಿಲ್ಲಿರಿ. ಇಂದಿನ ಜಗತ್ತಿಗೆ ಬೆಳಕನ್ನು ಚೆಲ್ಲುವ ಕೆಚ್ಚು ನಮಗಿದೆ ಎಂದು ಎಚ್ಚರಗೊಳ್ಳಿರಿ. ಓಂ ಶಿವಂ ಭೂಯಾತ್. ಓಂ ಶಾಂತಿ: ಶಾಂತಿಃ.

ಅಲ್ಲಿ ಇಲ್ಲಿ ಬೆದಕಿ ಅನುಭವನರಿಯದ ।
ಕೆಲಬರಯ್ಯನವರು ಬಕನ ತೆರದಿ ॥
ಮೂರ್ಖ ತಪವ ಮಾಡಿ ಕೊಳೆವರು ನೋಡಿರಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೫೬ ॥

ಐದಕ್ಷರಂಗಳ ಅಂಗವಂ ತಿಳಿದೊಡೆ ।
ಐದರಲ್ಲಿಯ ಮುಕ್ತಿಯಡಗಿಯಿಹುದು ॥
ಐದರಲ್ಲಿರುವ ಮಹಾತ್ಮನ ತಿಳಿವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೫೭ ॥

ಇಷ್ಟಲಿಂಗವಾವುದಿಳೆ ಸಿಲೆ ಲಿಂಗವ ।
ನಿಷ್ಠೆ ಮೀರಿ ಬಿಗಿದು ಕೊರಳಿನಲ್ಲಿ ॥
ಕಷ್ಟಪಡುವುದೊಂದೆ ಮೋಕ್ಷವು ಲಭಿಸದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೫೮ ॥

ಕರದೊಳುರದೊಳ್ಳಿದೆ ಗಂಗಾಧರನ ಕಟ್ಟಿ ।
ತೀರ್ಥಯಾತ್ರೆಗೆಂದು ತಿರುಗುವವರು ॥
ಕೈಲಿ ಬೆಣ್ಣೆಯಿದ್ದು ತುಪ್ಪವೆಂದತ್ತಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೫೯ ॥

ಮುಸುಕಲೀಯಂತೆ ಬಿಗಿಯಾಗಿ ಲಿಂಗವ ।
ಕಟ್ಟಿ ಹಾಕಲೇನು ತಪ್ಪಗೈದ ॥
ಭಾವದಲ್ಲಿ ಶಿವನ ಭಾವಿಸಿ ಕಾಣರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೬೦ ॥

ಶೈವ ಧಾರ ತಂದು ಬಂಧಿಸಿ ಕಟ್ಟಲು ।
ಲಿಂಗವೇನು ಕಳ್ಳತನವ ಮಾಡ್ದ ॥
ಆತ್ಮಲಿಂಗವನ್ನು ಅರ್ಚಿಸಲಾರರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೬೧ ॥

## ಬ್ರಹ್ಮ ವಿಷ್ಣು ರುದ್ರರು

ಮೂವರಲ್ಲಿ ಹೆಚ್ಚು ಮುಂದರಿಯಲಾರದೆ ।
ನರಕದಲ್ಲಿ ಬೀಳ್ವ ನರರುಯಿಹರು ॥
ಮೂವರಿಗುಂ ಸಿಗದ ಮೂಲಮೂರ್ತಿಯದೊರ್ವ।
ವಿಶ್ವತೋಭಿರಾಮು ಕೇಳೊ ವೇಮಾ ॥ ೪೬೩ ॥

ಶೈವ ವೈಷ್ಣವಾದಿ ಷಣ್ಮತಗಳಿಗೆಲ್ಲ ।
ದೇವನೊಬ್ಬನೆಂದು ತಿಳಿಯದಿಹರು ।
ತಮಗೆ ಭೇದವಾಗೆ ತತ್ವವು ಭೇದವೇ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೪೬೪ ॥

ವಿಶ್ವೋತ್ಪತ್ತಿಗೆ ಕಮಲಜ ।
ವಿಶ್ವವ ರಕ್ಷಿಸಲು ಬೆಳೆಸಲಾ ಹರಿ ಮತ್ತಂ ॥
ವಿಶ್ವವಿನಾಶಕೆ ಹರ ತಾಂ -
ವಿಶ್ವೇಶರ್ಗಿಂತು ಪೆಸರುಗಳ್ನಿಜ ವೇಮಾ ॥ ೪೬೫ ॥

ಆದಿ ಬ್ರಹ್ಮದಿಂದೆ ಮುವ್ವರು ಮೂರ್ತಿಗಳ್ ।
ಹುಟ್ಟಿ ಕೊನೆಗೆ ಸತ್ತು ಸತ್ತು ಹುಟ್ಟಿ ॥
ಮಾಯೆಯೊಳಗೆ ತೊಳಲಿ ಬಳಲುತಲಿರ್ಪರು।
ವಿಶ್ವತೋಭಿರಾಮು ಕೇಳೊ ವೇಮಾ ॥ ೪೬೬ ॥

ತಂದೆಗಿಂತ ಸುತನು ತಾಂ ಗುಣಿಯಾದನೇ ।
ಚಿಕ್ಕ ದೊಡ್ಡತನಗಳೆಣಿಸರಾರುಂ ॥
ನುತಿಸಿ ಕೃಷ್ಣನನ್ನು ವಸುದೇವನನ್ನೇಕೆ ।
ನುತಿಸರವನಿಜನರು ಪೇಳೊ ವೇಮಾ ॥ ೪೬೭ ॥

ಶಿವನ ಭಕ್ತರೆಲ್ಲ ಬೂದಿಯಾದರು ಸುಟ್ಟು ।
ವಾದವೇಕೆ ದೈವಭೇದವೇಕೆ ॥
ವಿಷ್ಣುಭಕ್ತರೆಲ್ಲ ಮಣ್ಣು ಪಾಲಾದರೈ ।
ವಿಶ್ವತೋಭಿರಾಮು ಕೇಳೊ ವೇಮಾ ॥ ೪೬೮ ॥

ಬ್ರಹ್ಮ ಯಾರ ಸುತನು ಪರಿಕಿಸಿ ನೋಡಲು
ವಿಷ್ಣುವಾರ ಮಗನು ಅರಿತು ನೋಡೆ ||
ಶಿವನದಾರ ಪುತ್ರ ತಿಳಿಯರು ಜನಗಳು |
ವಿಶ್ವತೋಭಿರಾಮ ಕೇಳೊ ವೇಮಾ || ೪೬೯ ||

## ತಾಮಸಯೋಗಿಗಳು

ಆಸೆಯಳಿಯದಿರಲು ಪಾಶಮುಕ್ತನು ಸುಳ್ಳು |
ಮುಕ್ತನಾಗದಿರಲು ಮುನಿಯು ಸುಳ್ಳು ||
ಮುನಿಗೆ ಹೊರತು ಸರ್ವ ಮೋಹಗಳ್ತೊಲಗವು |
ವಿಶ್ವತೋಭಿರಾಮ ಕೇಳೊ ವೇಮಾ || ೪೭೦ ||

ಗುರುಬೋಧೆ ತಿಳಿಸದ ಕುಟಿಲ ಶಾಸ್ತ್ರಂಗಳು |
ಪರಿಕಿಸಲದರಿಂದ ಫಲವದೇನು ||
ಆತ್ಮೈಕ್ಯವರಿಯದೆ ಅಖಿಳ ಯೋಗಂಗಳ ಸಾಧಿ |
ಸೆ ಫಲವೇನು ಸತ್ಯವಹುದು || || ೪೭೧ ||

ಮೋಸವ ಮಾಡುತೆ ಭುವಿಯೊಳ್ |
ದಾಸರು ನಾವೆಂದು ಬೂದಿ ಬಳಿದು ತಿರುಗಲಾ ||
ಮೋಸದ ಶಿವವಂಚಕರನು |
ದೂಷಿಸುವರ್ಜನರು ದೋಷ ತಪ್ಪದು ವೇಮಾ || ೪೭೨ ||

ಮಾತು ನಿಲಿಸದಿರ್ಪ ಮನುಜರು ಚಂಡಾಲ |
ಆಜ್ಞೆ ನಡೆಸದಿರ್ಪ ರಾಜ ಮುಂಡೆ ||
ಮಹಿಮೆಯಿಲ್ಲದ ಯತಿ ಮಣ್ಣಿನ ಹುಲಿ ಸಮ |
ವಿಶ್ವತೋಭಿರಾಮ ಕೇಳೊ ವೇಮಾ || ೪೭೩ ||

## ಮೋಕ್ಷಸಂಪಾದನೆ

ಕೈಲಾಸವು ವೈಕುಂಠವು ।
ಬಯಲಾಗಿರುವಲ್ಲಿ ಪ್ರಕೃತಿಭಾವದಿ ನೀವ್ಗಳ್ ।
ಎಲ್ಲೆಲ್ಲಿಯು ಬೆದಕಿದರುಂ ।
ಕೈಲಾಸವ ನೋಡಲಾರಿರಿದು ದಿಟ ವೇಮಾ || ೪೭೪ ||

ಬಾಲ ಪ್ರಾಯದಿ ಮುಕ್ತಿಯ ಪಡೆಯಲಿಲ್ಲ ।
ಯೌವ್ವನದಿ ಕಾಮವನ್ನುಪಶಮಿಸಲಿಲ್ಲ ॥
ಮುಪ್ಪು ಬಂದಾಗ ಚಿಂತೆಯಿಂ ಮುಕ್ತಿಯುಹುದೆ ।
ವಿಶ್ವತೋಭಿರಾಮ ಕೇಳೊ ವೇಮಾ || ೪೭೫ ||

ಜಾತಿನೀತಿ ಬೇರೆ ಜನ್ಮಂಗಳೊಂದೆಯೇ ।
ಅರಿಯೆ ತಿಂಡಿ ಬೇರೆ ಹಸಿವು ಒಂದೇ ॥
ಹಸುಗಳ್ಬಣ್ಣ ಬೇರೆ ಹಾಲೆಲ್ಲ ಒಂದೆಯೇ ।
ವಿಶ್ವತೋಭಿರಾಮ ಕೇಳೊ ವೇಮಾ || ೪೭೬ ||

ಕಾಮಿಯಾದ ಹರನು ಘನನೆನಿಸಲಿಲ್ಲವೇ ।
ಕಾಮಿಯಾದ ವಿಷ್ಣು ಶ್ರೇಷ್ಠನಾದ ।
ಕಾಮಿ ಹೊರತು ಮೋಕ್ಷಕಾಮಿಯಾಗನು ಧರೆಯೊಳ್ ।
ವಿಶ್ವತೋಭಿರಾಮ ಕೇಳೊ ವೇಮಾ || ೪೭೭ ||

ಹಾಲು ಸಮುದ್ರದಿ ಮಲಗಿರುವಾತನು ।
ಗೊಲ್ಲಹಳ್ಳಿ ಹಾಲು ಕೋರಲೇಕೆ ।
ನೆರೆಯ ಮನೆಯ ವಸ್ತು ತಾನೆಷ್ಟು ಸಿಹಿಯೊ ಕಾಣೆ ।
ವಿಶ್ವತೋಭಿರಾಮ ಕೇಳೊ ವೇಮಾ || ೪೭೮ ||

ಸರ್ವವು ತಾನೆಂದರಿತಿಹ ।
ನಿರ್ವೈರಿಗೆ ಹೊರತು ಮುಕ್ತಿದೊರೆವುದೆ ಪರದೊಳ್ ॥
ಉರ್ವಿಯೊಳೆಲ್ಲೆಡೆ ಚರಿಸಲ್ ।
ಪರ್ವತಗುಹೆ ಜಲಧಿಗಳೊಳು ನೆಲಿಸಲ್ ವೇಮಾ || ೪೭೯ ||

ಎಲೆಯ ಮರೆಯೊಳಗಿರ್ಪವಖಿಳ ಲೋಕಂಗಳುಂ ।
ಶಾಖೆ ಕಾಣದಾ ವಿಧಾತಗರಿದು ॥
ಶಾಖೆ ಕಾಣಿಸಿದೊಡೆ ಹೊಗಳಲು ಬಪ್ಪುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೮೦ ॥

ವಸ್ತುದೊರೆವ ವರೆಗು ದೀಪವವಶ್ಯಕ ।
ವಸ್ತು ದೊರೆತ ಮೇಲೆ ದೀಪವೇಕೆ ?।
ದೇವನಾದ ಮೇಲೆ ದೇಹವಿನ್ನೇತಕ್ಕೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೮೧ ॥

ಹಗೆಯುಳಿವುದಾಗ್ರಹವ ಬಿಡೆ ।
ಹಗೆಯುಂ ಕಾಮಂಗಳಳಿದು ಪರಜನ್ಮಂಗಳ್ ॥
ಮಿಗೆಯುಳಿವುದಭೇದಂ ಬರೆ ।
ತ್ರಿಗುಣಗಳಡಗಲ್ಕೆ ಮುಕ್ತಿಸ್ಥಿರವದು ವೇಮಾ ॥ ೪೮೨ ॥

ಮೌನದಿಳುವ ವರೆಗು ಮಂತ್ರವು ದೊರೆಯದು ।
ಮಂತ್ರವಡಗದಿರಲು ಮನವು ನಿಲದು ॥
ಮನವು ನಿಲ್ಲದಿರಲು ವರಮುಕ್ತಿ ದೊರೆಯದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೮೩ ॥

ಬ್ರಹ್ಮವೆಂಬ ವಸ್ತು ಪರದೇಶದೊಳಗಿಲ್ಲ ।
ಬ್ರಹ್ಮವೆನಲು ತಾನೆ ಬಟ್ಟಬಯಲು ॥
ತನ್ನ ತಾ ತಿಳಿದೊಡೆ ತಾನೆ ಸೈ ಬ್ರಹ್ಮವು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೮೪ ॥

ಭುವನಾಕಾರನ ಮನದೊಳ್ ।
ಸುವಿಮಲ ಶುಭಮೂರ್ತಿಯಾಗಿ ಪರಿಕಿಸೆ ಜಗದೊಳ್ ॥
ಭವನಾಶವು ನಿಸ್ಸೇಷದಿ ।
ಶಿವದೇವನೆ ಚಿನ್ಮಯಾತ್ಮಸಿದ್ಧನು ವೇಮಾ ॥ ೪೮೫ ॥

ಕಾಮಿಯಲ್ಲದವನು ಕವಿಯಲ್ಲ ರವಿಯಲ್ಲ ।
ಕಾಮಿ ಹೊರತು ಮೋಕ್ಷಕಾಮಿಯಾಗ ।

ಕಾಮಿಯಾದ ನರನು ಕವಿಯು ರವಿಯಾಗುವನು ।
ವಿಶ್ವತೋಭಿರಾಮ ಕೇಳೊ ವೇಮಾ || ೪೮೬ ||

ಸಕಲಾಕಾರನನಂತನು ।
ಸಕಲಾತ್ಮಂಗಳಲಿ ಸರ್ವಸಾಕ್ಷಿಯೆನಿಸುತಂ ॥
ಸಕಲದೊಳು ನಿರ್ವಿಕಾರಂ ।
ಅಕಲಂಕ ಸ್ಥಿತಿಲಿ ಬೊಮ್ಮನಾಗುವ ವೇಮಾ || ೪೮೭ ||

---

## ವೇಮಣ್ಣ ಯೋಗಿಯ ರೀತಿ.

ಸಲ್ಲದಿದೆಂದಾರೊ ಒಳ್ ತವೆ ।
ನಿಲ್ಲದೆ ವಾದವನು ಗೈಯ್ಯದಿರ್ಪಂ ಜಡನೋಲ್ ||
ನಿಲ್ಲಿಸೆ ಭೇದಾಭೇದವ ।
ನಲ್ಲಿಯೆ ವೇದಾಂತಸಾರವರಿದನು ವೇಮಾ || ೪೮೮ ||

ಒಬ್ಬನು ರೋಗಿಯಾದ ಮತ್ತೊಬ್ಬನು ದಿಕ್ಕಿನೋಳ್ತ್ಯಾಗಿ
ಯಾದ ಬೇ ।
ರೊಬ್ಬನು ಭೋಗಿಯಾದ ಪಿರಿದೊಬ್ಬನು ಉತ್ತಮ ಯೋಗಿ
ಯಾದ ತಾ ।
ನೊಬ್ಬನುರಾಗಿಯಾದನಿನಪೋಲ್ವ ಮಹಾತ್ಮನ ಕಾಣೆ
ನೆಲ್ಲಿಯುಂ ।
ನಿರ್ಭಯುವೆಲ್ಲ ರೂಪಗಳು ನಿನ್ನಗೆ ಸಲ್ವುವು
ವೇಮಯೋಗಿಯೆ || ೪೮೯ ||

ಮಾಸಕೊಂದು ವೇಳೆ ರಕ್ತವು ಸುರಿಯುವುದು ।
ಉಷ್ಣವಧಿಕವಾಗೆ ಕೀವು ಸುರಿಗುಂ ।
ಮಿಕ್ಕ ವೇಳೆಯಲ್ಲಿ ಮೂತ್ರವು ಸುರಿವುದು ।
ಹೇಯವೆಂದು ತಿಳಿಯರಿದನು ವೇಮಾ || ೪೯೦ ||

ವಿಷಯಾಸಕ್ತಿಯೊಳಿರ್ದರು ।
ವಿಷಯಗಳು ಸ್ಮರಿಸದಿರ್ಪನನಿಶಂ ಮನದೊಳ್ ||

ವಿಷಸಂಸಾರವಿದೆನ್ನುತ |
ವಿಷಯಗಳೆಲ್ಲವನು ಗೆಲ್ವ ವೇಮಣ್ಣನು ತಾಂ ॥ ೪೯೧ ॥

ವೇಮಣ್ಣ ನುಡಿದ ವೇದವ |
ತಾಮಸದಿಂದಲ್ಲವೆಂಬ ಬಾಯಿಗೆ ಗಾಣಂ ।
ಪ್ರೇಮದಿ ಭೇದವ ತೊಲಗಿಸಿ |
ಸೌಮನದೀಕ್ಷಿಸಗೆ ಮುಕ್ತಿ ತಪ್ಪದು ವೇಮಾ ॥ ೪೯೨ ॥

ವೇಮಣ್ಣ ಯೋಗಿಯಿಂ ಪೆರತು ಯೋಗಿಯುಮಿಲ್ಲ ।
ರಾಮಚಂದ್ರನಿಗಿಂತ ರಾಜನಿಲ್ಲ ॥
ಆಂಜನೇಯನಿಗಿಂತಲಮಿತ ಭಕ್ತನುಮಿಲ್ಲ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೯೩ ॥

ಹುಚ್ಚು ನರಿಗಳಂತೆ ವೇದಗಳೋದುವ |
ರಾಶಯವನು ತಿಳಿಯರಯ್ಯನವರು ।
ವೇದಸಾರವೆಲ್ಲ ವೇಮಣ್ಣನರಿವನು।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೯೪ ॥

ಜಗದಿ ಒಕ್ಕಲಿಗರ ವಂಶದಿ ವೇಮಣ್ಣ |
ಜನಿಸಿ ಕೀರ್ತಿಲತೆಯ ಹಬ್ಬಿಸಿದನು ॥
ಸತ್ಯಮತವನೈದೆ ಜನರಿಗೆ ಬೀರಿದ |
ವಿಶ್ವತೋಭಿರಾಮ ಕೇಳೊ ವೇಮಾ ॥ ೪೯೫ ॥

ಮಳೆಯಿಂದ ನೆನೆಯದವರುಂ |
ಸಲೆ ವೇಮಣ್ಣನೊಳು ಬೈಸಿಕೊಳದಿರ್ಪವರುಂ |
ಪಲವುಂ ಒಗೆಯೊಳ್ಬಿದಕಲ್ ।
ತಿಳಿಯಲ್ಕಸದಳವೆನಿರ್ಪುದೈ ವರ ವೇಮಾ ॥ ೪೯೬ ॥

ನಾಯಿ ಕಚ್ಚಿದೊಡನೆ ಕೂಗದೆ ಬಿಗಿಹಿಡಿದು ।
ಪಕ್ಕೆ ಮುರಿಯುವದ್ದು ಮಲಗಿಸುತ್ತೆ ॥

ನಿಂಬೆಹಣ್ಣು ತಂದು ತಲೆಗೆ ತಿಕ್ಕಿದೊಡಾಗ ।
ನಾಯಿವಿಷವು ಪೋಪುದಯ್ಯ ವೇಮಾ ॥ ೪೯೭ ॥

ತಾ ಮರದೊಳಗಿನ ನೀರೋಲ್ ।
ವೇಮಣ್ಣನು ಜರಿಪ ಶಿವನ ಬೆದಕುತಲನುವಿಂ ॥
ದೀ ಮಾಯೆ ನಂಬಲಾಗದು ।
ಈ ಮನದೊಳು ತಿಳಿಯಲಾಗದೀಶನೆ ವೇಮಾ ॥ ೪೯೮ ॥

ದಾನಗಳೊಳಗನ್ನದಾನಕ್ಕೆ ಸಮವಿಲ್ಲ ।
ಹೆತ್ತ ತಾಯಿಗಿಂತ ಘನತೆಯಿಲ್ಲ ।
ಬೋಧನಾಚಾರ್ಯನಿಂ ಪೆರತು ಗುರುವಿಲ್ಲವೈ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೯೯ ॥

---

## ಒಡಪಿನ ವಚನಗಳು

ಅನ್ನವಧಿಕವಾಗಲದು ತಾನು ಕೊಲ್ವುದು ।
ಅನ್ನವಂಟದಿರ್ದೊಡಾತ್ಮನೋವ ।
ಕೊಲ್ವ ನೋವ ಬುದ್ಧಿ ಸಾಲದೇ ನೂರೇಕೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೦೦ ॥

ಬೀಜವಿಲ್ಲದಿರುವ ವೃಕ್ಷವು ಹುಟ್ಟಿತು ।
ಫಲವು ಪುಷ್ಪವೈದೆ ಪತ್ರೆಯಿಲ್ಲ ॥
ನೋಡೆ ರುಚಿಯುಮಿಲ್ಲ ಸಂಕಟವೀವುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೦೧ ॥

ಕಾಯಿ ಮೇಲೆ ವೃಕ್ಷ ಘನವಾಗಿ ಯಿರ್ಪುದು ।
ಮರದ ಮೇಲೆ ಲತೆಯು ಸುತ್ತಿಂಬಿಹುದು ॥
ಬಳ್ಳಿ ಮೇಲೆ ಬೆರಳು ತ್ರಿಪುರತಾಂಡವವಾಡು।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೦೨ ॥

ಮಾಂಸಾಹಾರಿಗಳಾದವರೂ ಮಾಂಸಹಾರ ಮಾಡುವಂಥ ಬೇಡ, ಕುರುಬ ಅಸ್ಪೃಶ್ಯ ಮೊದಲಾದ ಸಮಾಜದವರೂ ವೀರಶೈವ ಧರ್ಮವನ್ನು ಪಾಲಿಸುವವರಾದರು. ಆದರೆ ಇವರಲ್ಲಿ ಬಹು ಜನರು ಉಚ್ಚ ಭಕ್ತಿಯುಳ್ಳವರಾದ್ದರಿಂದ ಶಿವಶರಣರು ಅಂಥವರನ್ನು ತ್ಯಜಿಸದೆ ಅವರಿಗೆ ಮನ್ನಣೆಯನ್ನು ಕೊಡುತ್ತ ಬಂದಿದ್ದಾರೆ. ಇಂಥ ಕೆಲವು ಉದಾಹರಣೆಗಳನ್ನು ನಾವು ಕೆಳಗೆ ಕೊಡುತ್ತೇವೆ.

ತೆಲಗು ಜೊಮ್ಮಯ್ಯನು ಬೇಟೆಯಾಡಿ ಉಪಜೀವಿಸುವವನಾಗಿದ್ದನು. ಆದರೂ ಅವನು ಶಿವಶರಣರಮಾಲಿಕೆಯಲ್ಲಿ ಸೇರ್ಪಡೆಹೊಂದಿದ್ದಾನೆ. ಅವನು ವಚನಕಾರನೂ ಇದ್ದಾನೆ. ಗಾಣದ ಕನ್ನಪ್ಪನು ಮೀನುಬಲೆಗಾರನು. ಅವನು ಬಸವೇಶ್ವರನ ಸಮಕಾಲೀನನು. ಆದರೂ ಕೂಡ ಅವನು ಶಿವಶರಣರಲ್ಲಿ ಎಣಿಸಲ್ಪಟ್ಟಿದ್ದಾನೆ. ಅವನು ವಚನಕಾರನೂ ಇದ್ದಾನೆ. ಶ್ವಪಚಯ್ಯನು ಉಚ್ಚ ತರಗತಿಯ ಶಿವಶರಣನೆಂದು ಬಸವೇಶ್ವರನು ಅವನನ್ನು ತನ್ನ ವಚನಗಳಲ್ಲಿ ಯಾವಾಗಲೂ ಹೊಗಳುತ್ತಾನೆ. ಆದರೆ ಅವನು ನಾಯಿಯ ಮಾಂಸವನ್ನು ತಿನ್ನುವವನಾಗಿದ್ದನು. ಇಂಥ ಅನೇಕರ ಚರಿತ್ರೆಗಳು " ಶಿವಶರಣರ ಚರಿತ್ರೆಗಳು " ಈ ಗ್ರಂಥಗಳಲ್ಲಿ ಬಂದಿದ್ದು ಅವುಗಳನ್ನು ವಾಚಕರು ನೋಡಬಹುದು. ಇವರು ಪೂರ್ವಾಶ್ರಯದಲ್ಲಿ ಹಿಂಸಾಚಾರಿಗಳಾಗಿದ್ದರೂ ಅವರು ವೀರಶೈವರಾದ ಬಳಿಕ ಮಾಂಸಾಹಾರವನ್ನು ತ್ಯಜಿಸಿರಬಹುದೆಂದು ಊಹಿಸಲು ನಮಗೆ ಅವಕಾಶವಿದೆ. ಆದರೆ ಬೇಡರ ಕಣ್ಣಪ್ಪನು, ಶಿರಿಯಾಳನು, ಅಲ್ಲದೆ ತಮಿಳದೇಶದಲ್ಲಿಯ ಪುರಾತನರಲ್ಲಿ ಬಹು ಜನರು ಕಡೆವರೆಗೂ ಪೂರ್ಣ ಮಾಂಸಾಹಾರಿಗಳಾಗಿದ್ದರು. ಆದರೂ ಅವರು ಶಿವಭಕ್ತರೆಂದು ಅವರಿಗೆ ಮನ್ನಣೆಯನ್ನು ವೀರಶೈವ ಗ್ರಂಥಕಾರರು ಕೊಟ್ಟಿದ್ದು ಕಂಡುಬರುತ್ತದೆ.

ಪುರಾತನ ಕಾಲದಲ್ಲಿ ಈ ಸ್ಥಿತಿಯು ಹೇಗಿದ್ದರೂ ಕರ್ನಾಟಕದ ಶಿವಶರಣರು ಮಾತ್ರ ಮಾಂಸಾಹಾರವು ನಿಷಿದ್ಧವಾದುದೆಂದು ತಮ್ಮ ಉಕ್ತಿಗಳಲ್ಲಿ ಸ್ಪಷ್ಟವಾಗಿ ಸಾರಿದ್ದಾರೆ. ದೇವರ ದಾಸಿಮಯ್ಯನು ತನ್ನ ಉಕ್ತಿಯಲ್ಲಿ " ನಾನೊಂದು ಸುರಿಗೆಯನೇನೆಂದು ಹಿಡಿವೆನು ? ಏನ ಕಿತ್ತೇನನಿರಿವೆನು ? ಜಗವೆಲ್ಲ ನೀನಾಗಿಪ್ಪೆ ಕಾಣಾ ರಾಮನಾಥಾ " ಎಂದು ಹೇಳಿದ್ದಾನೆ. ಅವನು ಶ್ರೀಶೈಲದಿಂದ ಹೊರಟು ಒಂದು ನಿಬಿಡವಾದ

ಅರಣ್ಯದಲ್ಲಿ ಬರುತ್ತಿರುವಾಗ್ಗೆ ಹಿಂಸಾಚಾರಿಗಳಾದ ಕಾಡುಜನರು ಅವನಿಗೆ ಭೆಟ್ಟಿಯಾದರು. ಆಗ ಅವರಿಗೆ ಅಹಿಂಸಾಚಾರದಲ್ಲಿರಲು ಬೋಧಿಸಿ ಅವರಿಗೆ ಲಿಂಗಧಾರಣೆಯನ್ನು ಮಾಡಿ ಅವರಿಗೆ ಗಾಣವನ್ನಾಡಿಸಿ ತೈಲವನ್ನು ತೆಗೆದು ಶ್ರೀಮಲ್ಲಿಕಾರ್ಜುನ ಲಿಂಗಕ್ಕೆ ಅರ್ಪಿಸುವ ಕಾಯಕವನ್ನು ನಿಯಮಿಸಿಕೊಟ್ಟನು ಬಸವೇಶ್ವರನ ಕಾಲದಲ್ಲಿ ಬ್ರಾಹ್ಮಣರು ಯಜ್ಞಯಾಗಾದಿಗಳನ್ನು ಬಹು ಹೆಚ್ಚಾಗಿ ಮಾಡುತ್ತಿದ್ದರೆಂದು ತೋರುತ್ತದೆ. ಬಸವೇಶ್ವರನು ಬ್ರಾಹ್ಮಣರು ಹೀಗೆ ಆಚರಿಸದೆ ಅಹಿಂಸಾಚಾರಿಗಳಾಗಿರಬೇಕೆಂದು ಬಹು ಮಾರ್ಮಿಕ ಶಬ್ದಗಳಿಂದ ತನ್ನ ವಚನಗಳಲ್ಲಿ ಹೇಳಿದ್ದಾನೆ. ಅವನು ಕ್ಷುದ್ರದೇವತೆಗಳನ್ನು ನಂಬಿ ಅವುಗಳಿಗೆ ಬಲಿ ಕೊಡುವದನ್ನು ತನ್ನ ವಚನಗಳಲ್ಲಿ ಟೀಕಿಸಿದ್ದಾನೆ. "ದಯವೇ ಧರ್ಮದ ಮೂಲವಯ್ಯ" ಎಂದು ಹೇಳುತ್ತ "ದಯವಿಲ್ಲದ ಧರ್ಮವದಾವುದಯ್ಯ" ಎಂದು ನುಡಿದಿದ್ದಾನೆ. ಹೀಗೆಯೇ ಕರ್ನಾಟಕದ ಶಿವಶರಣರು ಯಾವಾಗಲೂ ಆಚರಿಸುತ್ತ ಬಂದಿರುವರು. ದಶರಯ್ಯನೆಂಬ ಶಿವಶರಣನು ಗಿಡಗಳು ನೊಂದಾವೆಂದು ಅವುಗಳನ್ನು ಬಿರುಸಾಗಿ ಬಾಗಿಸಿ ಅವುಗಳಲ್ಲಿದ್ದ ಪುಷ್ಪಗಳನ್ನು ಹರಿಯುತ್ತಿದ್ದಿಲ್ಲ. ಗಿಡಗಳ ಕೆಳಕ್ಕೆ ಬಿದ್ದ ಪುಷ್ಪಗಳಿಂದಲೇ ಅವನು ತನ್ನ ಲಿಂಗಾರ್ಚನೆಯನ್ನು ನೆರವೇರಿಸಿಕೊಳ್ಳುವನು. ಈ ರೀತಿಯಾಗಿ ಶಿವಶರಣರು ಮಾಂಸಾಹಾರದ ನಡೆಯನ್ನು ತೀರ ನಿಲ್ಲಿಸಿದ್ದಾರೆ. ಇದು ಅವರು ಮಾಡಿದ ಮಹತ್ವದ ಸಮಾಜ ಸುಧಾರಣೆಯ ಕಾರ್ಯವೆಂದು ನಾವು ಹೇಳಬಹುದು.

ಇಂಥ ಅನೇಕ ದೋಷಗಳು ಉಂಟಾದುದನ್ನು ನಾವು ವೀರಶೈವ ಸಮಾಜದಲ್ಲಿ ಕಾಣಬಹುದು. ಬಹು ದೊಡ್ಡ ಪ್ರಮಾಣದಿಂದ ಜನರನ್ನು ವೀರಶೈವ ಮತಾನುಯಾಯಿಗಳನ್ನಾಗಿ ಮಾಡಿದ್ದರ ಪರಿಣಾಮವು ಇದಾಗಿದೆಂದು ಹೇಳಬಹುದು. ಆದರೆ ವಚನಕಾರರು ತಮ್ಮ ತತ್ವಗಳನ್ನು ಸಾರುವಲ್ಲಿ ಮಾತ್ರ ಹೀಗೆ ತಪ್ಪು ದಾರಿಯನ್ನು ಹಿಡಿದ ಇಂಥ ಭಕ್ತರನ್ನೂ ಜಂಗಮರನ್ನೂ ಅತ್ಯಂತ ಕಟು ಶಬ್ದಗಳಿಂದ ತಮ್ಮ ವಚನಗಳಲ್ಲಿ ಟೀಕಿಸಿದ್ದಾರೆ. ಅವರ ಇಂಥ ಅಸಂಖ್ಯ ವಚನಗಳನ್ನು ನಾವು ಅವರ ವಚನಗಳಲ್ಲಿ ಕಾಣಬಹುದು. ನಾವು ಪ್ರಕಟಪಡಿಸಿದ ಪ್ರತಿಯೊಂದು ವಚನ ಗ್ರಂಥದಲ್ಲಿ ಇವು ಇರುತ್ತವೆ. ಹಾಗೆಯೇ

ಬಸವೇಶ್ವರನ ಕಾಲದಲ್ಲಿದ್ದ ಶಿವಶರಣರು ಸಹ ಜಂಗಮರ ಸ್ವೈರ ವೃತ್ತಿ ಯನ್ನು ಬಹು ಸ್ಪಷ್ಟ ಶಬ್ದಗಳಿಂದ ಹಳಿದಿರುವರು. ಈ ವಿಷಯವಾಗಿ ವಾಚಕರು ಗಟ್ಟಿವಾಳಯ್ಯನ ಚರಿತ್ರೆ (ಶಿವಶರಣರ ಚರಿತ್ರೆಗಳು ಭಾಗ ೨ ಪುಟ ೧೬೭ ) ಇದನ್ನು ನೋಡಬೇಕು.

## ವಚನಗಳನ್ನು ಗೌಪ್ಯವಾಗಿಟ್ಟಿದ್ದು.

ನಾವು ಮೇಲೆ ಉಲ್ಲೇಖಿಸಿದ ದೋಷಗಳನ್ನು ನಿರೀಕ್ಷಿಸಿದಲ್ಲಿ ಅವು ಗಳುಂಟಾಗಲಿಕ್ಕೆ ಜನರಲ್ಲಿದ್ದ ಮತ ತತ್ವಗಳ ಜ್ಞಾನದ ಅಭಾವವೇ ಮುಖ್ಯಕಾರಣವೆಂದು ಹೇಳಬಹುದು. ವಚನ ಗ್ರಂಥಗಳಲ್ಲಿರುವ ತತ ಗಳ ಪ್ರಸಾರವು ಉಳಿವಿಯ ಕದನವಾದ ಬಳಿಕ ಕೆಲವು ಕಾಲ ಅಂದರೆ ೬೦-೭೦ ವರ್ಷಗಳ ವರೆಗೆ ಮಾತ್ರ ಬಹಿರಂಗವಾಗಿ ನಡೆಯಿತೆಂದು ತೋರು ತ್ತದೆ. ಆದರೆ ಮುಂದೆ ಅವುಗಳ ಜ್ಞಾನವು ಸಮಾಜದಲ್ಲಿ ಕಡಿಮೆ ಯಾಗುತ್ತ ನಡೆಯಿತು. ಜಂಗಮರು ಮುಖ್ಯವಾಗಿ ಮಠಾಧಿಕಾರಿಗಳು ವಚ ನಗಳನ್ನು ಗುಪ್ತವಾಗಿ ಇಡಲಿಕ್ಕೆ ಹತ್ತಿದರು. ಜಂಗಮರಿಂದ ಉಪದೇಶ ಹೊಂದಿದವರು ಮಾತ್ರ ವಚನಗಳನ್ನು ಅರಿಯಲು ಪಾತ್ರರೆಂದು ಅವರು ಪ್ರಚಾರ ಮಾಡಹತ್ತಿದರು. ಆದ್ದರಿಂದ ವಚನಗಳನ್ನು ಓದುವದು ಕಡಿ ಮೆಯಾಗಹತ್ತಿತು. ವಚನಗಳನ್ನು ತಿಳಿಯಲಪೇಕ್ಷಿಸುವವನು ಮೊದಲು ಕೆಲವೊಬ್ಬ ಗುರುವಿನಿಂದ ಉಪದೇಶವನ್ನು ಹೊಂದಬೇಕು, ಆ ಮೇಲೆ ಲಿಂಗದ ನೆಲೆ ಕಲೆಗಳನ್ನು ಅರಿಯಲು ಅವನು ಅರ್ಹನು ಎಂಬ ಕಟ್ಟು ಗಳನ್ನು ಇಡಹತ್ತಿದರು ಇದರಿಂದ ವಚನಗಳ ಅಭ್ಯಾಸವು ಕೆಲವು ಕಾಲದ ವರೆಗೆ ಕುಂಠಿತವಾಗುತ್ತ ನಡೆಯಿತು. ಅವುಗಳ ಪರಿಚಯುವು ಹೀಗೆ ಕಡಿಮೆಯಾಗಹತ್ತಿದ ಕೂಡಲೆ ಬಸವಾದಿ ಪ್ರಮಥರ ವಿಶಾಲ ಮಾರ್ಗವನ್ನು ಜನರು ಅರಿಯದೆ ಹೋದರು. ಮಠಾಧಿಕಾರಿಗಳು ಅಜ್ಞಾನಿಗಳಾದ ಜನರಲ್ಲಿ ಅಂಧ ಶ್ರದ್ಧೆಯನ್ನು ಹೆಚ್ಚಿಸಲು ಪ್ರಯತ್ನಮಾಡ ಹತ್ತಿದರು. ಇದರಿಂದ ಷಟ್ ಸ್ಥಲ ಶಾಸ್ತ್ರದ ತತ್ವಗಳು ಯಾವವು, ಶಿವಾನುಭವ, ಪಂಚಾಚಾರಗಳ ರೀತಿ ಏನು, ಅಷ್ಟಾವರಣಗಳ ರೀತಿ ನಡೆಗಳ ಸ್ವರೂಪ ಯಾವುದು, ಇವುಗಳು ತೀರ ಮರೆತು ಹೋಗಲಿಕ್ಕೆ ಹತ್ತಿದವು. ೧೪-೧೫ ನೇ ಶತಮಾನಗಳಲ್ಲಿ ಬರೆದ ಷಟ್ ಸ್ಥಲ ಗ್ರಂಥ ಗಳಲ್ಲಿ ಸಹ, ಷಟ್ ಸ್ಥಲ ಶಾಸ್ತ್ರದಲ್ಲಿ ಬರುವ ಶಬ್ದಗಳ ಉಲ್ಲೇಖಗಳು

ಮಾತ್ರ ದೊರೆಯುತ್ತವೆಯೇ ಹೊರತು ಅವುಗಳ ಅರ್ಥ ಮತ್ತು ಸಂಬಂಧ ಇವುಗಳ ಪೂರ್ಣ ವಿವೇಚನೆ ಇರುವದಿಲ್ಲ. ಹೀಗೆ ಬಸವೇಶ್ವರನ ತರು ವಾಯ ೧೦೦-೧೫೦ ವರ್ಷಗಳಲ್ಲಿ ಶಿವಶರಣರ ತತ್ವಗಳ ಪರಿಚಯವೇ ಜನರಲ್ಲಿ ಉಳಿಯಲಿಲ್ಲ.

ಹರಿಹರನ ರಗಳೆಗಳಲ್ಲಿ ಅಲ್ಲಲ್ಲಿ ವಚನಗಳು ಉದಹರಿಸಲ್ಪಟ್ಟರೂ ಕೂಡ ವಚನಕಾರರ ತತ್ವಗಳ ಪೂರ್ಣ ನಿರೂಪಣೆ ಅವುಗಳಲ್ಲಿ ಕಂಡು ಬರುವದಿಲ್ಲ. ಭೀಮ ಕವಿಯ ಬಸವ ಪುರಾಣ, ಚನ್ನಬಸವ ಪುರಾಣ ಗುಬ್ಬಿ ಮಲುಹಣನ ವೀರಶೈವಾಮೃತ ಮಹಾ ಪುರಾಣ, ಗಣಭಾಷ್ಯರತ್ನ ಮಾಲೆಇವುಗಳಲ್ಲಿ ಷಟ್ ಸ್ಥಲಗಳ ವಿಚಾರಗಳು ಕಂಡುಬಂದರೂ ಅವುಗ ಳಲ್ಲಿ ಸಾದ್ಯಂತ ವಿವೇಚನೆಯು ಇರುವದಿಲ್ಲ. ಮಠಾಧಿಪತಿಗಳು ಶಿವಾನು ಭವಶಾಸ್ತ್ರದ ತತ್ವಗಳನ್ನು ಗುಪ್ತವಾಗಿಟ್ಟು ಕೊಂಡಿದ್ದರ ಪರಿಣಾಮವು ಇದಾಗಿದೆ.

## ಜಂಗಮರು ಬೋಧಮಾಡುವ ರೀತಿಗಳು

ಬಹುಜನರು ಬಸವೇಶ್ವರನೂ ಶಿವಶರಣರೂ ಜನರಿಗೆ ಅನೇಕ ಆಶೆ ಆಮಿಷಗಳನ್ನು ತೋರಿಸಿ ಅಥವಾ ಅವರ ಮೇಲೆ ಬಲಾತ್ಕಾರಮಾಡಿ ಅವ ರನ್ನು ವೀರಶೈವ ಧರ್ಮದಲ್ಲಿ ಸೇರಿಸಿಕೊಳ್ಳುತ್ತಿದ್ದರೆಂದು ಹೇಳುವದುಂಟು. ಆದರೆ ಇಂಥ ಪ್ರಯತ್ನಗಳು ಹಿಂದುಸ್ತಾನದಲ್ಲಿ ಯಾವ ಸಮಾಜದಲ್ಲಿಯೂ ನಡೆದಿರುವದಿಲ್ಲ. ಇಂಥವುಗಳು ಫಲಕಾರಿಯಾಗಲಾರವು. ಒಂದು ಕಾಲ ದಲ್ಲಿ ಬೌದ್ಧ, ಜೈನ, ಶೈವ ಧರ್ಮಗಳು ದೇಶದಲ್ಲಿ ಬಹು ವಿಸ್ತಾರ ಹೊಂದಿದ್ದವು. ಆದರೆ ಅವುಗಳ ತತ್ವಗಳಿಗೆ ಜನರು ಒಲಿದು ಆ ಧರ್ಮ ಗಳನ್ನು ಸ್ವೀಕರಿಸಿದರೇ ಹೊರತು ಬಲಾತ್ಕಾರ ಅಥವಾ ಆಶೆ ಆಮಿಷ ಗಳ ಮೂಲಕವಲ್ಲ. ಶಿವಶರಣರಾದರೂ ಇದಕ್ಕೆ ಅಪವಾದವಾಗಿ ರುವದಿಲ್ಲ.

ಜಂಗಮರು ಹೇಗೆ ಬೋಧ ಮಾಡುತ್ತಿದ್ದರೆಂಬುದನ್ನು ನಾವು ನನ್ನಯ್ಯ ಸುಜ್ಞಾನಿದೇವ ಇವರ ಚರಿತ್ರೆಯಿಂದ ಚನ್ನಾಗಿ ತಿಳಿಯಬಹು ದಾಗಿದೆ. ಗುರುವಾದ ಸುಜ್ಞಾನಿ ದೇವನು ಬೇಡರವನಾದ ನನ್ನಯ್ಯನನ್ನು

ಹೇಗೆ ಬೋಧಿಸಿ ಅವನನ್ನು ಸನ್ಮಾರ್ಗಕ್ಕೆ ಹಚ್ಚಿದನೆಂಬುದನ್ನು ನೋಡಿ ದಲ್ಲಿ ಈಗಿನ ಸುಧಾರಣೆಯ ಕಾಲದಲ್ಲಿ ಸಹ ಪುರಾತನ ಜಂಗಮರ ರೀತಿಗಳನ್ನು ಅನುಸರಿಸಲು ಯೋಗ್ಯವಾದವುಗಳೆಂದು ಯಾರಾದರೂ ಕೂಡ ಒಪ್ಪಿಕೊಳ್ಳುವಂತೆ ಇದೆ. ವೀರಶೈವ ಧರ್ಮವು ಕೇವಲ ಶಿವಶರಣರ ಪವಾಡಗಳ ಮೂಲಕ ಬೆಳೆದುಬಂದಿಲ್ಲ. ಅದರಲ್ಲಿರುವ ಉಚ್ಚ ತತ್ವಗಳು ಜನತೆಗೆ ಪ್ರಿಯವಾದ್ದರಿಂದ ಅದು ಬೆಳೆದುಬಂದಿದೆ. ಅದರಲ್ಲಿ ಪ್ರಸಿದ್ಧಿಗೆ ಬಂದ ಮಹಾಪುರುಷರು ಪರಧರ್ಮಿಗಳಿಂದ ಹಿಂಸೆಯನ್ನು ಹೊಂದಿದ್ದಾರೆ. ಇದರಿಂದ ಅವರು ಮಾಡಿದ ಕಾರ್ಯಗಳು ಜನರ ಮನಸ್ಸಿನ ಮೇಲೆ ಬಹು ಬಲವಾದ ಪರಿಣಾಮಗಳನ್ನು ಮಾಡಿದವು. ಹೀಗೆ ವೀರಶೈವ ಧರ್ಮವು ಬೆಳೆದಿರುತ್ತದೆ.

ಶಿವಶರಣರು ತಮ್ಮ ಸುತ್ತಲಿನವರು ದುರ್ಮಾರ್ಗಿಗಳೆಂದು ಅವರನ್ನು ಅವರು ಉಪೇಕ್ಷಿಸಿರುವದಿಲ್ಲ. ಅಂಥವರಿಗೂ ಅವರು ಬೋಧೆ ಮಾಡಿ, ಸನ್ಮಾರ್ಗಕ್ಕೆ ಎಳೆದಿದ್ದಾರೆ. ಅವರು ಭವಿಗಳೆಂದು ಅವರನ್ನು ನಿರಾಕರಿಸಿಲ್ಲ. ಇದು ಹೆಂಡದ ಮಾರಯ್ಯನ ಚರಿತ್ರೆಯಿಂದ ಚೆನ್ನಾಗಿ ತಿಳಿದುಬರುತ್ತದೆ. ಮಾರಯ್ಯನು ತನ್ನ ಅರವಟಿಗೆಯಲ್ಲಿ ಹೆಂಡವನ್ನು ಇಟ್ಟು ಭವಿಗಳನ್ನು ತನ್ನಲ್ಲಿ ಬರಮಾಡಿಕೊಳ್ಳುವನು. ಅವರು ತನ್ನಲ್ಲಿ ಬಂದಕಾಲಕ್ಕೆ ಅವರಿಗೆ ತತ್ವೋಪದೇಶವನ್ನು ಮಾಡುವನು ಈ ಪ್ರಕಾರ ಅವನು ಆಚರಿಸುತ್ತ ಸದಾಚಾರ ನೀತಿಗಳು ಸಮಾಜದಲ್ಲಿ ನೆಲೆಗೊಳ್ಳಲು ಪ್ರಯತ್ನಿಸಿದ್ದಾನೆ.

ಶಿವಶರಣರು ಜನರಲ್ಲಿ ಹಾಸ್ಯ ಮಾಡುತ್ತಲೂ, ಕುಣಿದು ಬಾರಿಸುತ್ತಲೂ, ಪುರಾತನರ ಚರಿತ್ರೆಗಳನ್ನು ಪದ ಪದ್ಯಗಳಿಂದ ಹಾಡುತ್ತಲೂ ಬಹುರೂಪಿಗಳಾಗಿ ಶರಣರ ನಡೆಯನ್ನು ವರ್ಣಿಸುತ್ತಲೂ ಇಂಡಿಯ ಶಾಂತಯ್ಯನಂತೆ ಜನತೆಗೆ ಪಾಠ ಹೇಳುತ್ತಲೂ ನಿಂಬಾಣದ ಗಣೇಶ್ವರನಂತೆ ಕೀರ್ತನೆಗಳನ್ನು ಮಾಡುತ್ತಲೂ ದೇಶದಲ್ಲಿ ಬೋಧ ಮಾಡಿದ್ದಾರೆ. ಈ ಕಾಲದಲ್ಲಿ ಜಂಗಮರೂ ಭಕ್ತರೂ ಭಿಕ್ಷುಕರು ಎಲ್ಲರೂ ಕೂಡಿಕೊಂಡು ಧರ್ಮಾಭಿವೃದ್ಧಿಯ ಕಾರ್ಯಗಳನ್ನು ಮಾಡಿದ್ದಾರೆ. ಇದರಿಂದ ವೀರಶೈವ ಧರ್ಮವು ದೇಶದಲ್ಲಿ ಪ್ರಸಾರ ಹೊಂದಿರುತ್ತದೆ.

ಈ ಕಾಲದಲ್ಲಿ ಭಕ್ತವರ್ಗ, ಜಂಗಮವರ್ಗ ಎಂಬ ಸ್ವತಂತ್ರ ವರ್ಗಗಳಿರಲಿಲ್ಲ. ಗುರು, ಲಿಂಗ, ಜಂಗಮವೂ, ಪಾದೋದಕ, ಪ್ರಸಾದ, ಮಂತ್ರಗಳೂ ವಿಭೂತಿ ರುದ್ರಾಕ್ಷಿಗಳೂ ತಮ್ಮಲ್ಲಿಯೇ ಇದ್ದು ಅವುಗಳನ್ನು ಅಲ್ಲಿಯೇ ಜಾಗ್ರತಪಡಿಸುವದೇ ಶಿವಶರಣರ ಮಾರ್ಗವಾಗಿದೆ. ಈ ಆವರಣಗಳಿದ್ದ ಭಕ್ತರಲ್ಲಿ ಭೇದಾಭೇದವನ್ನು ಎಣಿಸಕೂಡದು. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಭಕ್ತ ಜಂಗಮರೆಂಬ ಭಿನ್ನ ಭಾವನೆ ಇರದೆ ಅವರಲ್ಲಿ ಸಮರಸಾಚರಣೆಯು ಇದ್ದಿತು. ವೀರಶೈವರು ಗ್ರಹಿಸುವ ಪಾದೋದಕ ಪ್ರಸಾದಗಳಲ್ಲಿ ಇದೇ ಭಾವವು ಇರುತ್ತದೆ. ಇದರಿಂದ ನಾಡಿನ ಜನತೆಯಲ್ಲಿ ಒಂದು ಬಲವಾದ ಐಕ್ಯವು ಪ್ರಾಪ್ತವಾಯಿತು. ಹಿಂದಿನ ಕಾಲದಲ್ಲಿ ಲಿಂಗಧಾರಣೆ ಹೊಂದಿದ ಹೊಲೆಯ, ಬ್ರಾಹ್ಮಣ, ಮೊದಲಾದವರಲ್ಲಿ ಭಿನ್ನಭಾವವಿರಲಿಲ್ಲ. ಹೊಲೆಯರಾದ ಉರಿಲಿಂಗಪೆದ್ದಿ, ಚನ್ನಯ್ಯ, ಕಕ್ಕಯ್ಯಗಳು ಉಚ್ಚ ಸ್ಥಾನವನ್ನು ಹೊಂದಿದರು. ಅಸ್ಪೃಶ್ಯನಾದ ಮಡಿವಳಸಿದ್ಧನು ಜಗದ್ಗುರುವಾದನು. ಇಂಥ ಮಹತ್ತರವಾದ ಸಮಾಜ ಕ್ರಾಂತಿಯು ಬಸವೇಶ್ವರನ ಕಾಲದಲ್ಲಿ ಉಂಟಾದ್ದರಿಂದ ದೇಶದಲ್ಲಿ ವೀರಶೈವ ಧರ್ಮವು ಎಲ್ಲ ಸಮಾಜಗಳಲ್ಲಿ ಬೆಳೆದಿರುತ್ತದೆ.

ಆದರೆ ಕೆಲವು ಕಾಲ ಹೋದಬಳಿಕ ದೇಶದಲ್ಲಿ ಮಠಗಳ ಸಂಖ್ಯೆಯು ಅಪರಿಮಿತವಾಗಿ ಬೆಳೆಯಿತು. ಆಗ ಮಠಾಧಿಕಾರಿಗಳ ವರ್ಗವು ಉಂಟಾಯಿತು. ಈ ಮಠಗಳಿಗೆ ಭೂದಾನಗಳೂ ಕಾಣಿಕೆಗಳೂ ಹೇರಳವಾಗಿ ಬರಹತ್ತಿದವು. ಆಗ ಮಠಾಧೀಶ್ವರರು ಸ್ವಾಭಾವಿಕವಾಗಿ ಮಠಗಳು ತಮ್ಮಲ್ಲಿ ವಂಶಪರಂಪರೆಯಾಗಿ ಇರಬೇಕೆಂದು ಅಪೇಕ್ಷಿಸಹತ್ತಿದರು. ಇದರಿಂದ ಹಿಂದಿನ ಕಾಲದಲ್ಲಿದ್ದ ಉಚ್ಚ ನೀತಿಮತ್ತೆಯು ಜಂಗಮರಲ್ಲಿಯೂ ಕಡಿಮೆಯಾಗಲು ಕಾರಣವಾಯಿತು. ಆದರೆ ಹಾಗೆ ತಪ್ಪು ದಾರಿಯಿಂದ ಆಚರಿಸುವ ಜಂಗಮರನ್ನು ವಚನಕಾರರು ಅತ್ಯಂತ ಸ್ಪಷ್ಟ ಶಬ್ದಗಳಿಂದ ಹಳಿದಿದ್ದಾರೆ. ನಾವು ಪ್ರಕಟಪಡಿಸಿದ ವಚನ ಗ್ರಂಥಗಳಲ್ಲಿ ಶರಣಸ್ಥಲದಲ್ಲಿ 'ತಾಮಸ ಜಂಗಮ' ಎಂಬ ಶಿರೋಲೇಖನದಲ್ಲಿ ದುಃಶೀಲರಾದ ಇಂಥ ಜಂಗಮರ ನಡೆಗಳನ್ನು ಹೇಗೆ ಟೀಕಿಸಿದ್ದಾರೆಂಬುದನ್ನು ವಾಚಕರು ನೋಡಬಹುದು.

## ಶೈವರು ವೀರಶೈವರು

ಜಂಗಮರು, ಶಿವಭಕ್ತಿಯುಳ್ಳವರು, ಶಿವಜ್ಞಾನಿಗಳು, ಶಿವಮತವನ್ನು ಪ್ರಸಾರ ಮಾಡುವವರು ಎಂದು ಯಾವಾಗಲೂ ಹೇಳಲ್ಪಡುವದುಂಟು. ಆದರೆ 'ಶಿವ' ಈ ಶಬ್ದದ ಅರ್ಥದಲ್ಲಿ ಕಾಲಕಾಲಕ್ಕೆ ಬದಲಾವಣೆಗಳಾಗುತ್ತ ಬಂದಿವೆ. ಪುರಾತನ ಕಾಲದಲ್ಲಿ 'ಶಿವ' ಎಂಬವನು ಒಬ್ಬನೇ ಇದ್ದು ಅವನು ಸರ್ವವ್ಯಾಪಿಯು, ಅವನೇ ಜಗತ್ತನ್ನು ಸಾಗಿಸಿಕೊಂಡು ಹೋಗುವವನು, ಅವನ ನಿಯಂತ್ರಣದಲ್ಲಿಯೇ ಗಣಾಧೀಶ್ವರರು ಕಾರ್ಯ ಮಾಡುವರು ಎಂಬ ವಿಚಾರಗಳಿದ್ದವು. ಇವನಿಗೆ ತತ್ಪುರುಷ ವಾಮದೇವಾದಿ ಪಂಚ ಮುಖಗಳು ಇದ್ದು ಈ ಪಂಚ ಮುಖಗಳಿಂದ ಪಂಚಾಕ್ಷರಗಳ ಉತ್ಪತ್ತಿಯು ಈ ಮೊದಲಾದ ವಿಚಾರಗಳಿದ್ದವು. ಈ ವಿಚಾರಗಳನ್ನು ಹೇಳುವಂಥದೇ ಶಿವಧರ್ಮವು. ವಚನಕಾರರು ಶಿವನ ವಿಷಯವಾಗಿ ತಮ್ಮ ಉಕ್ತಿಗಳಲ್ಲಿ ನಿರೂಪಿಸುವದುಂಟು. ಈ 'ಶಿವ' ಶಬ್ದವು 'ಪರಬ್ರಹ್ಮ' ಈ ಶಬ್ದಕ್ಕೆ ಪ್ರತಿಯಾಗಿ ಇರುತ್ತದೆಂದು ನಾವು ಹೇಳಬಹುದು.

ಆದರೆ ಮುಂದೆ ವೇದಾಂತಿಗಳ ಮತ್ತು ಪುರಾಣಿಕರ ಕಾಲದಲ್ಲಿ ತ್ರಿಮೂರ್ತಿಗಳ ವಿಚಾರಗಳು ಪ್ರಾಬಲ್ಯವನ್ನು ಹೊಂದಹತ್ತಿದವು. ಆಗ 'ಶಿವ' ಎಂದರೆ ತ್ರಿಮೂರ್ತಿಗಳಲ್ಲಿ ಒಬ್ಬನು ಎಂಬ ಅಭಿಪ್ರಾಯವು ಸಮಾಜದಲ್ಲಿ ರೂಢವಾಯಿತು. ತ್ರಿಮೂರ್ತಿಗಳಲ್ಲಿ ಬ್ರಹ್ಮನು ಹುಟ್ಟಿಸುವವನು, ವಿಷ್ಣುವು ಕಾಯುವವನು, ಶಿವನು ಸಂಹಾರ ಮಾಡುವವನು, ಎಂಬ ವಿಚಾರಗಳು ಇರುತ್ತವೆ. ಆದರೆ ಶೈವ ಧರ್ಮದಲ್ಲಿ ಈ ತಿಳಿವಳಿಕೆಯು ಇರುವದಿಲ್ಲ. ಈ ಮೂರೂ ಕಾರ್ಯಗಳನ್ನು ಮಾಡುವವನು ಶಿವನೊಬ್ಬನೇ ಹೊರತು ಬೇರಾವ ದೇವತೆಯು ಮಾಡುವದಿಲ್ಲ ಎಂಬ ವಿಚಾರವು ಇರುತ್ತದೆ. ಆದರೆ ತ್ರಿಮೂರ್ತಿಗಳ ಕಲ್ಪನೆಯು ಪ್ರಬಲವಾಗಹತ್ತಲು ವೀರಶೈವರು ತಾವು ಈ ತ್ರಿಮೂರ್ತಿಗಳಲ್ಲೊಬ್ಬನಾದ ಶಿವನ ಅನುಯಾಯಿಗಳು ಎಂದು ಹೇಳಿಕೊಳ್ಳಹತ್ತಿದರು. ಉಳಿದ ಇಬ್ಬರಾದ ಬ್ರಹ್ಮ ವಿಷ್ಣು ಇವರ ಅನುಯಾಯಿಗಳು ತಾವಲ್ಲವೆಂದು ತಿಳಿಯಹತ್ತಿದರು. ಆದ್ದರಿಂದ ತಾವು ವೀರಶೈವರೆಂದು ಕರೆದುಕೊಳ್ಳಹತ್ತಿದರು. ಆದರೆ ಒಬ್ಬನೇ ಆದ ಶಿವನನ್ನು ಶೈವರು ಲಿಂಗರೂಪದಿಂದ ಪೂಜಿಸುತ್ತಾರೆ.

ಈ ಲಿಂಗದಲ್ಲಿ ಉಚ್ಚ ತಾತ್ವಿಕ ವಿಚಾರಗಳಿರುತ್ತವೆ. ಆದರೆ ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನನ್ನು ಶಿವಭಕ್ತರು ವಿಗ್ರಹ ರೂಪದಲ್ಲಿ ಪೂಜಿಸುವದುಂಟು. ಅಂದರೆ ಅವನು ರುಂಡಮಾಲಾಧರನು, ಜಡೆಯಲ್ಲಿ ಗಂಗೆ, ಖಟ್ವಾಂಗಧರನು, ನಂದಿವಾಹನನು ಎಂದು ಪುರಾಣಗಳಲ್ಲಿ ಕಥೆಗಳಿದ್ದು ಅವುಗಳಿಗನುಸರಿಸಿ ಶಿವನ ವಿಗ್ರಹಗಳನ್ನು ಇವರು ಮಾಡಿ ಪೂಜಿಸುವವರಾದರು. ಆದರೆ ಇದು ಲಿಂಗಾಂಗಿಗಳ ಧರ್ಮಕ್ಕೆ ಹೊರತಾದುದು. ಇವರು ತಾವು ಶಿವಭಕ್ತರು, ಶೈವರು ಎಂದು ಮಾತ್ರ ಹೇಳಿಕೊಳ್ಳುವರು

ಪುರಾತನ ವಚನ ಗ್ರಂಥಗಳಲ್ಲಿ ವೀರಶೈವ ಈ ಶಬ್ದವು ಬರುವದಿಲ್ಲ. ಬಸವೇಶ್ವರನ ವಚನಗಳಲ್ಲಿ "ವೀರಶೈವ" ಈ ಶಬ್ದವು ಎಲ್ಲಿಯೂ ಬಂದಿಲ್ಲ ಆದರೆ ಈ ಶಬ್ದವು ೧೪ ನೆಯ ಶತಮಾನದ ತರುವಾಯ ವೀರಶೈವ ಗ್ರಂಥಗಳಲ್ಲಿ ಬರಹತ್ತುತ್ತದೆ. ಅಷ್ಟರಲ್ಲಿ ವಚನ ಶಾಸ್ತ್ರದ ವಿಚಾರಗಳು ಸಮಾಜದಲ್ಲಿ ಲುಪ್ತವಾಗುತ್ತ ನಡೆದಿದ್ದವು. ಈ ಕಾಲದಲ್ಲಿ ಶಿವ ಹೆಚ್ಚೋ ವಿಷ್ಣು ಹೆಚ್ಚೋ ಎಂಬ ವಾಗ್ವಾದಗಳು ದೇಶದಲ್ಲಿ ನಡೆಯುತ್ತಾ ಇದ್ದವು. ಅವುಗಳಲ್ಲಿ ವೀರಶೈವರು ಶಿವನು ಶ್ರೇಷ್ಠನೆಂದು ತಿಳಿಯುವ ಪಂಗಡಕ್ಕೆ ಹೊಂದಿದವರಾಗಿದ್ದರು. ಆದ್ದರಿಂದ ವೀರಶೈವ ಶಬ್ದವು ಆಗ ಅವರ ಗ್ರಂಥಗಳಲ್ಲಿ ಪ್ರಚಾರದಲ್ಲಿ ಬರಹತ್ತಿತು. ಆದರೆ ಶಿವಶರಣರ ತತ್ವಗಳನ್ನು ಮನ್ನಿಸುವವರು ತಾವು ಲಿಂಗವಂತರು, ಲಿಂಗಾಯತರ, ಲಿಂಗಾಂಗಿಗಳು ಲಿಂಗಿಗಳು ಎಂದು ಹೇಳಿಕೊಳ್ಳುವದೇ ಸರಿಯಾದ ಮಾರ್ಗವೆಂಬ ಅಭಿಪ್ರಾಯಗಳು ಪುರಾತನ ವಚನ ಗ್ರಂಥಗಳಲ್ಲಿರುತ್ತವೆ.

'ಜಂಗಮರು' ಎಂಬ ಶಿರೋಲೇಖದ ಕೆಳಗೆ ನಾವು ವಿವರಿಸಿದ ಮೇಲಿನ ಸಂಗತಿಗಳ ಮೇಲಿಂದ ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಅನೇಕ ಮಾರ್ಪಾಡುಗಳಾಗುತ್ತ ಬಂದವೆಂಬುದು ವಾಚಕರ ನಿದರ್ಶನಕ್ಕೆ ಬಂದಿರಬಹುದು. ಮೊದಲು ಜಂಗಮರು ಹಿಂದುಸ್ತಾನದಲ್ಲೆಲ್ಲ ಶಿವ ಮತವನ್ನು ಸಾರುತ್ತ ಸಂಚರಿಸುವವರಾಗಿದ್ದರು. ಅವರು ವೀರಶೈವರಿದ್ದ ಸ್ಥಾನಗಳಿಗೆ ಆಗಿಂದಾಗ್ಗೆ ಹೋಗಿ ಅವರಿಗೆ ಉತ್ತೇಜನ ಕೊಡುವರು. ಮತ್ತು ಅವರ ಬಿಕ್ಕಟ್ಟುಗಳಲ್ಲಿ ಸಹಾಯಕರಾಗಿ ನಿಲ್ಲುವರು.

# ಶಿವಾನುಭವ

ಸಂಪುಟ ೨೫ ]　　( ಮಾಸಪತ್ರಿಕೆ )　　[ ಸಂಚಿಕೆ ೭



ಜುಲೈ ೧೯೫೧ ]　　ವಿಜಾಪೂರ

# ವಿಷಯಾನುಕ್ರಮಣಿಕೆ




**ಶಿವಾನುಭವ ಪತ್ರಿಕೆ, ವಿಜಾಪುರ.**

ಮಾಸಿಕ ೬೪ ಪುಟಗಳು.

**ವಾರ್ಷಿಕ ಚಂದಾ ೫-೧೨-೦**

# ಶಿವಾನುಭವ

| ವರ್ಷ ೨೫ | ಜುಲೈ ೧೯೫೧ | ಸಂಚಿಕೆ ೭ |
|---|---|---|

## ಲಿಂಗದ ಹಸ್ತಗಳೂ ಕಲೆಗಳೂ

( ಲೇಖಕರು :— ಶ್ರೀ ಬಸವಪ್ಪಾ ಚನ್ನಪ್ಪಾ ಪಟ್ಟೇದ ಹುಕ್ಕೇರಿ )

ಲಿಂಗಧಾರಿಗಳೆಲ್ಲರೂ ಲಿಂಗವನ್ನು ಪೂಜಿಸಬೇಕಾಗುವದಲ್ಲವೇ? ಆ ಲಿಂಗವು ಷಡ್ವಿಧವಾಗಿರುವದು. ಅದನ್ನು ಪೂಜಿಸುವ ಅಂಗರಾದರೂ ಆರು ತೆರನಾಗಿರುವರು. ಈ ಷಡಂಗರು ಆ ಷಡ್ವಿಧ ಲಿಂಗಗಳನ್ನು ಪರಿಣಾಮಕಾರಿಯಾಗುವಂತೆ ಅದಾವ ರೀತಿಯಿಂದ ಪೂಜಿಸಬೇಕೆಂಬುದರ ವಿಸ್ತಾರವೇ ಷಟ್ ಸ್ಥಲ ಜ್ಞಾನವೆಂದು ಹೇಳಲ್ಪಟ್ಟಿರುವದು. ಮತ್ತು ಸೂಕ್ಷ್ಮವಾಗಿ ಪರಿಶೀಲಿಸಿ ಅದನ್ನೇ ನೂರೊಂದು ಸ್ಥಲವಾಗಿ ಶ್ರೀ ಚನ್ನಬಸವ ದೇವರು ನಿರೂಪಿಸಿರುವರು. ಅದನ್ನು ಅತಿ ಸಂಕ್ಷೇಪ ರೂಪದಿಂದ, ಈ ಪೂರ್ವದಲ್ಲಿಯೇ ಸಾದರ ಪಡಿಸಿರುತ್ತದೆ. ಈಗ ಹಸ್ತ ಕಲೆಗಳನ್ನೊಳಗೊಂಡು, ಮತ್ತೆ ಷಟ್ ಸ್ಥಲಗಳನ್ನೇ ಶಿವಾನುಭವದ ಸುಜ್ಞ ವಾಚಕ ಬಂಧುಗಳ ಮುಂದೆ ಇಡುವದನ್ನು ಯೋಚಿಸಿರುತ್ತದೆ. ಮೊದಲಿಗೆ ಆ ಪಟವನ್ನು ಕೊಟ್ಟು ತರುವಾಯ ಕ್ರಮವಾಗಿ ವಿವೇಚಿಸುವದದೆ.

# ಕಲೆ ( ಗುಣ ) ಗಳ ಪಟವು.

| ಕ್ರಮಾಂಕ | ಅಂಗನು ( ಭಕ್ತನು ) | ಹಸ್ತದಲ್ಲಿ | ಲಿಂಗವನ್ನು ಪೂಜಿಸಿ | ಶಕ್ತಿಯನ್ನು | ಭಕ್ತಿಯ ಯೋಗದಿಂದ | ಕಲೆಯಲ್ಲಿ ರೂಪಾಂತರ ಗೊಳಿಸಿ | ವಿಶೇಷ |
|---|---|---|---|---|---|---|---|
| ೧ | ಈಶ್ವರ | ಸುಚಿತ್ತ | ಆಚಾರ ಲಿಂಗವನ್ನು | ( ಆದರ ) ಕ್ರಿಯಾ | ( ತನ್ನ ) ಶ್ರದ್ಧಾ | ನಿವೃತ್ತಿ | ಆ ಕಲೆಯನ್ನು ತನ್ನ ಮುಖದಮೇಲೆ ಬೆಳಗುವಂತೆ ಅಳವಡಿಸಿಕೊಂಡಿದೆ. ಆಗ ಆತನು ತನ್ನ ಲಿಂಗದಲ್ಲಿ ಬೆರೆತಂತಾಗುವದು. |
| ೨ | ಮಹೇಶ್ವರ | ಸುಬುದ್ಧಿ | ಗುರು ಲಿಂಗವನ್ನು | ಜ್ಞಾನ | ನಿಷ್ಠಾ | ಪ್ರತಿಷ್ಠಾ | |
| ೩ | ಪ್ರಸಾದಿ | ನಿರಹಂಕಾರ | ಶಿವ ಲಿಂಗವನ್ನು | ಇಚ್ಛಾ | ಸಾವಧಾನ | ವಿದ್ಯೆ ( ಆತ್ಮ ವಿದ್ಯಾ ) | |
| ೪ | ಪ್ರಾಣಲಿಂಗಿ | ಸುಮನ | ಜಂಗಮ ಲಿಂಗವನ್ನು | ಆದಿ | ಅನುಭವ | ಶಾಂತಿ | |
| ೫ | ಶರಣ | ಸುಜ್ಞಾನ | ಪ್ರಸಾದ ಲಿಂಗವನ್ನು | ಪರಶಕ್ತಿ | ಆನಂದ | ಶಾಂತ್ಯತೀತ | ,, |
| ೬ | ಐಕ್ಯ | ಸದ್ಭಾವ | ಮಹಾ ಲಿಂಗವನ್ನು | ಚಿತ್‌ಶಕ್ತಿ | ಸಮರಸ | ಶಾಂತ್ಯತೀತೋತ್ತರ | ,, |

ಲಿಂಗವೂ ಆದರ ಶಕ್ತಿಯೂ ಸಹ ಬೇರೆ ಕಡೆಗಿರದೆ ಭಕ್ತನ ( ಅಂಗನ ) ದೇಹದಲ್ಲಿಯೇ ಇರುವವು ಎಂಬುದನ್ನು ಮರೆಯಲಾಗದು

( ೧ ) ಈಶ್ವರಾಂಗ :— ಆರಂಭದ ಅಂಗನು ಈಶ್ವರನು ಅವನು ಸುಚಿತ್ತ ಹಸ್ತದಲ್ಲಿ ತನ್ನ ಆಚಾರ ಲಿಂಗವನ್ನು ಪೂಜಿಸ ಬೇಕಾಗುತ್ತದೆ. ಆಚಾರಲಿಂಗದ ಶಕ್ತಿಯು ಕ್ರಿಯಾ ಶಕ್ತಿಯು. ಈಶ್ವರನು ತನ್ನ ಶ್ರದ್ಧಾ ( ವಿಶ್ವಾಸ ) ಭಕ್ತಿಯಿಂದ, ಆಕ್ರಿಯಾ ಶಕ್ತಿಯನ್ನು ರೂಪಾಂತರಗೊಳಿಸಿ, ನಿವೃತ್ತಿ ಕಲೆಯಲ್ಲಿ ತಂದು ಕೊಂಡರೆ ಮಾತ್ರ ಅವನು ಆಚಾರ ಲಿಂಗದಲ್ಲಿ ಬೆರೆಯುವನು. ಇಷ್ಟೇ ಹೇಳಿ ಬಿಟ್ಟರೆ ಅದರಿಂದ ಅರಿಯದವರಿಗೆ ಏನೂ ಬೋಧೆಯಾಗುವದಿಲ್ಲ. ಆದುದರಿಂದ ಕೆಳಗೆ ವಿಶದೀಕರಿಸುತ್ತದೆ.

ಹಸ್ತವೆಂದರೆ ಬಹಿರಂಗದ ಕರಪೀಠವಲ್ಲ. ಅದು ಅಂತರಂಗದಲ್ಲಿ ರುವ ಪೀಠವು. ಅಲ್ಲಿಟ್ಟು ಪೂಜಿಸುವ ಲಿಂಗವಾದರೂ ದೃಷ್ಟವಾದುದಲ್ಲ. ಅದು ಅದೃಶ್ಯವೇ ! ಇಷ್ಟ ಕ್ರಿಯಗಳನ್ನೇ ( ಸದಾಚಾರಗಳನ್ನೇ ) ಆಚಾರ ಲಿಂಗವೆಂದು ಗ್ರಹಿಸಬೇಕಾಗುವದು. ಚಿತ್ತವೆಂದರೆ ಒಲವು ಇಲ್ಲವೆ, ಲಕ್ಷ್ಯವು. ಅದು ಸರ್ವದಾ ಒಳ್ಳೆಯದರತ್ತ ಇರಬೇಕಲ್ಲದೆ, ಕೆಡಕಿನ ಕಡೆಗೆ ಸಹಸಾ ಇರಕೂಡದು. ಹಾಗಾದರೆ ಅದು ಕುಚಿತ ವಾಗುವದು. ಆಚಾರ ಲಿಂಗಕ್ಕೆ ಹಸ್ತವಾಗಲು ಅದು ನಿಷಿದ್ಧವು. ತನ್ನ ದೇಹ ರಕ್ಷಣಕ್ಕಷ್ಟೇ ಒಳ್ಳಿದು. ನೀಚ ಸ್ವಾರ್ಥದ ಬೆನ್ನು ಹತ್ತಿ ಅನ್ಯರನ್ನು ಸುಲಿಯುವದೂ, ಪೀಡಿಸುವದೂ ಕುಚಿತ್ತ ಹಸ್ತದಲ್ಲಿ ಬರುವವು. ನಿರಂತರ ತನಗೂ ಇತರರಿಗೂ ಕೂಡಿಯೇ ವಿಹಿತವಾಗುವವನ್ನು ಕಂಡು ಹಿಡಿದೇ, ಆ ಪ್ರಕಾರ ವರ್ತಿಸಿದರೆ, ಅದೇ ಸುಚಿತ್ತ ಹಸ್ತವಾಗುವದು. ಇದನ್ನರಿತುಕೊಂಡು, ಈಶ್ವರನು ತಾನೆಸಗುವ ಕಾರ್ಯಗಳನ್ನು ಗೊತ್ತು ಪಡಿಸಿಕೊಂಡು, ಯಾವಾಗಲೂ ಸದಾಚಾರಿಯಾಗಿಯೇ ವರ್ತಿಸಬೇಕು. ಇದನ್ನೇ ಹಿಂದೆ ಇಷ್ಟ ಕ್ರಿಯಗಳನ್ನು ಹಿಡಿದು ಅನಿಷ್ಟ ಕ್ರಿಯಗಳನ್ನು ಬಿಟ್ಟು ನಡಿಯಬೇಕು ಎಂದು ಹೇಳಿರುತ್ತದೆ. ಅದನ್ನೇ ಈಗ ಭಿನ್ನ ಶಬ್ದಗಳಿಂದ ಬಿಚ್ಚಿ ಹೇಳಿದ್ದಾಯಿತು ಇಷ್ಟೇ ! ಆಚಾರಲಿಂಗಕ್ಕೆ ಕ್ರಿಯಾ ಶಕ್ತಿಯಿಂದ, ಅಂದರೆ ಪ್ರತ್ಯಕ್ಷ ನಡೆಯಿಂದಲೇ ಆ ಲಿಂಗವನ್ನು ಆರಾಧಿಸತಕ್ಕದ್ದು. ಬರಿಯ ಮಾತಿನಿಂದ ಹೇಳಿದರೆ ತೀರದು. ಇದು ಇಷ್ಟ ಲಿಂಗದ ಪೂರ್ವಾರ್ಧವು. ನೀತಿಯನ್ನು ಬಿಡದೆ ಅನಾಚಾರಿಯಾಗದೆ, ಸದಾಚಾರವನ್ನು ಅಳವಡಿಸಿಕೊಂಡರೇನೇ ಆಚಾರಲಿಂಗದ ಪೂಜೆಯು

ಊಡೇರುವದು. ಇಷ್ಟ ಲಿಂಗವನ್ನು ಹೆಸರಿಗೆ ಪಡೆದುಕೊಂಡು, ಜನತೆ ಯೊಡನೆ ಮನಬಂದಂತೆ, ನಡೆದುಕೊಂಡದೆ, ಅವನು ಲಿಂಗಾಯತನೇ ಅಲ್ಲ. ಯೋಗ್ಯಕ್ರಿಯೆ (ಆಚಾರ)ಗಳನ್ನು ವರ್ತನೆಯಲ್ಲಿ ತೋರಲೇಬೇಕು. ಈಶ್ವರನು ಇಷ್ಟಲಿಂಗದಲ್ಲಿ( ಇಷ್ಟಕ್ರಿಯೆಗಳನ್ನು ಮಾಡಿ ಅನಿಷ್ಟವಾದವನ್ನು ತ್ಯಜಿಸುವದರಲ್ಲಿ ) ಶ್ರದ್ಧಾವಂತನು. ಮನಸಾ ಶ್ರದ್ಧೆ ( ವಿಶ್ವಾಸ )ಯನ್ನು ವಹಿಸಿಯೇ ಅವನು ಸದಾಚಾರದಿಂದ ನಡೆಸುಬೇಕು. ಕೈಕೊಂಡ ದೃಷ್ಟ ಲಿಂಗವನ್ನು ಬೇಕಾದಷ್ಟು ಹೂಪತ್ರ್ಯಾದಿಗಳಿಂದ ಪೂಜಿಸಿದರೂ ಸ್ನಾನಾದಿ ಮಡಿ ಮೈಲಿಗೆ ಪಾಲಿಸಿದರೂ ಅದೆಲ್ಲ ಬರಿಯದೇ ಆಗಿ ಬಿಡುವದು. ನಿರ್ಜೀವ ದೇಹಕ್ಕೆ ( ಹೆಣಕ್ಕೆ ) ಮಾಡಿದ ಶೃಂಗಾರದಂತಾ ಗುವದು. ಈ ಹೊರ ಪೂಜೆಯೊಂದಿಗೆ, ವ್ಯವಹಾರದಲ್ಲಿ ಆಚಾರವಂ ತನಾದರೆ ಮಾತ್ರ ಅದು ಶೋಭಿಸುವದು. ಆ ವರ್ತನೆಯು ಒತ್ತಾ ಯದಿಂದ ಪಿಡಿಸುದಿರ ಕೂಡದು. ಸ್ವಂತ ಇಚ್ಛೆಯಿಂದಲೇ ಸ್ವಾಭಾವಿ ಕವಾಗಿಯೇ ಶ್ರದ್ಧೆಯಿಂದಲೇ ಅನುಸರಿಸಿದುದು ಇರಬೇಕು. ಹೀಗೆ ಆತನು ಮಾಡುವ ಪ್ರತಿಯೊಂದು ಕಾರ್ಯವು ( ಕ್ರಿಯಾಚಾರವು ) ಕೇವಲ ಉದ್ಧಾರಾರ್ಥವಾಗಿ ನಿಃಸ್ವಾರ್ಥ ದೃಷ್ಟಿಯಿಂದಲೇ ಸಾಗಬೇಕು. ಸಾಧಾರಣವಾಗಿ ಪ್ರತಿಯೊಬ್ಬನು ತನ್ನ ದೇಹ ಸುಖದಸಲುವಾಗಿಯೇ ವಿಷಯುಗಳನ್ನು ದೊರಕಿಸುವ ಸಲುವಾಗಿಯೇ ಪರರಿಗೆ ಆಗುವ ಕಷ್ಟ ನಷ್ಟಗಳನ್ನು ಬಗೆಯದೇ ವರ್ತಿಸುವ ಪರಿಪಾಠವಿರುತ್ತದೆ. ಈ ವೃತ್ತಿಯು ಭವಿಜನರ ರೀತಿಯು. ಇದನ್ನು ಈಶ್ವರನು ಎಂದೆಂದೂ ಅನುಸರಿಸ ಕೂಡದು. ಬೇರು ಸಹಿತ ಅದನ್ನು ಕಿತ್ತು ಬಿಸಾಡುವ ಚಟವನ್ನೇ ಕೆಡವಿಕೊಳ್ಳಬೇಕು. ಇದೇ ಆತನ ಆಚಾರ ಲಿಂಗದ ಕ್ರಿಯಾಶಕ್ತಿಯನ್ನು ತನ್ನ ಶ್ರದ್ಧಾ ಭಕ್ತಿಯಿಂದ ನಿವೃತ್ತಿ ಕಲೆಯಲ್ಲಿ ರೂಪಾಂತರಿಸಿ ಕೊಳ್ಳುವದು ಈ ಕಲೆಯನ್ನು ಅವನು ಪಡೆದಾಗಲೇ ತನ್ನ ಆಚಾರ ಲಿಂಗದಲ್ಲಿ ಬೆರೆಯುವನು.

ನಿವೃತ್ತಿಯು ಪ್ರವೃತ್ತಿ ಗುಣದ ವಿರುದ್ಧವು. ವಿಷಯುಗಳನ್ನು ಬೆಂಬಳಿಸಿ ಅವನ್ನು ಪಡೆದು ಉಪಭೋಗಿಸಬೇಕೆಂಬ ಬಯಕೆಯೇ ಪ್ರವೃತ್ತಿಯು. ಇದು ಜನ್ಮಾರಭ್ಯದಿಂದ ಮನುಷ್ಯನಲ್ಲಿ ಸಹಜವಾಗಿ ಬೆಳೆಯುತ್ತಲೇ ಬಂದು ಅದು ಕೊನೆಗೆ ಹೆಚ್ಚು ಹೆಚ್ಚು ಪ್ರಾಬಲ್ಯ ಪಡೆ

ದಿರುತ್ತದೆ. ಈಶ್ವರನು ಅದನ್ನು ಈಗ ಹಿಡಿತದಲ್ಲಿಟ್ಟುಕೊಳ್ಳಬೇಕಾಗುವದು. ಅವಶ್ಯವಿದ್ದಷ್ಟೇ ವಿಷಯಗಳನ್ನು ಉಪಭೋಗಿಸಬೇಕು. ಮೋಹ ವಶನಾಗಿ ಅಲ್ಲದ ರೀತಿಯಿಂದ ಅವನ್ನು ಸಂಗ್ರಹಿಸಲಿಕ್ಕೆ ಎಂದೂ ಹೋಗಬಾರದು. ಹಿಂದಿರುಗಿಸಿದ ತನ್ನ ವೃತ್ತಿಯನ್ನು ದೇವರೆಡೆಗೆ ( ಲಿಂಗದೆಡೆಗೆ ) ಸಮ್ಮುಖಗೊಳಿಸಬೇಕು. ಸದಾಚಾರ ಗಳಿಸುವದೇ ತನ್ನ ಪವಿತ್ರವಾದ ಧ್ಯೇಯವೆಂದು ದೃಢವಾಗಿ ನಂಬಬೇಕು. ಶ್ರದ್ಧಾ ಭಕ್ತಿಯಿಂದ ಕ್ರಿಯಾ ಶಕ್ತಿಯನ್ನು ನಿವೃತ್ತಿ ಕಲೆಗೆ ಒಯ್ಯುವ ಪದ್ಧತಿಯು ಇದೇ.

( ೨ ) ಮಹೇಶ್ವರಾಂಗ:— ಈಶ್ವರತ್ವವನ್ನು ದಾಟಿ ಮಹೇಶ್ವರತ್ವಕ್ಕೆ ಹೋದವನು ಎರಡನೆಯ ಅಂಗನು. ಈತನಿಗೆ ಆಚಾರ ಲಿಂಗವು ಅಳವಟ್ಟಿರುತ್ತದೆ. ಅದರ ತೆಗ್ಗು ತೆವರುಗಳನ್ನೆಲ್ಲ ಅರಿತು ಸದಾಚಾರದಲ್ಲಿ ನಡೆಯುಲು ಪ್ರವೀಣತೆ ಪಡೆದಿರುತ್ತಾನೆ. ಅವನಿಂದ ಸಹಸಾ ಆಚಾರದಲ್ಲಿ ತಪ್ಪುಗಳಾಗುವದಿಲ್ಲ. ಅನಾಚಾರ ದತ್ತ ಅವನ ದೃಷ್ಟಿಯು ಹರಿಯುವದೇ ಇಲ್ಲ. ಇಂತು ಆಚಾರದಲ್ಲಿ ಯಶಸ್ವಿಯಾಗಿರುವದರಿಂದಲೇ ಅವನು ಆಚಾರವರಿಯದವರ ಗುರುವಾಗುತ್ತಾನೆ. ಅವರಿಗೆ ಆಚಾರವನ್ನು ಬೋಧಿಸುತ್ತಾನೆ. ಈತನ ಲಿಂಗವು ಗುರು ಲಿಂಗವು. ಗುರುವೆಂದರೆ ಆಚಾರವು. ಈ ಮಹೇಶ್ವರನು ತಾನು ಎಳ್ಳಷ್ಟು ಸಹ ಆಚಾರದಲ್ಲಿ ತಪ್ಪದೆ ಈಶ್ವರರೆನಿಸುವವರಿಗೆ ಮಾತ್ರ ಸದಾಚಾರವನ್ನು ತನ್ನ ವರ್ತನದ ಮರ್ಸ್ಸಿನಿಂದಲೇ ಉಪದೇಶಿಸುತ್ತಿರಬೇಕು. ಗುರುಲಿಂಗಕ್ಕೆ ಸುಬುದ್ಧಿ ಹಸ್ತವು. ಈ ಗುರುವಾದವನು ಅಚ್ಚ ಸುಬುದ್ಧಿಯಿಂದಲೇ ಯಾವಾಗಲೂ ವರ್ತಿಸಬೇಕು. ಈತನ ಬುದ್ಧಿಯು ಎಂದೂ ಅಲ್ಲದ ದಾರಿಯಲ್ಲಿ ನಡೆಯಕೂಡದು. ಹಾಗಾದರೆ ಅದು ಕುಬುದ್ಧಿಯಲ್ಲಿ ಬರುವದು. ಪರಧನ ಪರಸ್ತ್ರೀ ಇತ್ಯಾದಿಗಳಲ್ಲಂತೂ ಅವನು ಅತ್ಯಂತ ಪರಿಶುದ್ಧನಾಗಿರಬೇಕು. ಪಾಣಿ–ವಾಣಿ–ಮಾಣಿಗಳು ಇಲ್ಲವೆ ಕೈ–ಬಾಯಿ–ಕಚ್ಚೆಗಳು ಅಥವಾ ಅಸ್ತೇಯ ಸತ್ಯ ಬ್ರಹ್ಮಚರ್ಯಗಳು ಅವನಲ್ಲಿ ಬೇರು ಬಿಟ್ಟಿರಬೇಕು. ಶ್ರದ್ಧಾ ಭಕ್ತಿಯನ್ನು ದಾಟಿ ಮಹೇಶ್ವರನು ನಿಷ್ಠಾಭಕ್ತಿಯಿಂದ ಬಂಧಿತನಾಗಬೇಕು. ನಿಷ್ಠಾಭಕ್ತಿ ಎಂದರೆ ದೃಢವಾಗಿ ನೆಲಿಸದ ಭಕ್ತಿಯು. ಮೇಲೆ ಹೇಳಿದಂತೆ ಅವನು ಬಲವಾದ ಸದಾಚಾರಿಯಾಗಲು, ಈ ನಿಷ್ಠೆಯೇ ಕಾರಣವಾಗುವದು.

ಗುರುಲಿಂಗದ ಶಕ್ತಿಯು ಜ್ಞಾನವು. ಅವನಲ್ಲಿ ಆಚಾರ ಒಂದೇ ಏಕೆ? ಜ್ಞಾನವೂ ಸಹ ಅವಶ್ಯವಾಗಿ ಬೇಕೇಬೇಕು. ಈ ಆಚಾರ ಜ್ಞಾನಗಳೇ ಅವನಿಗೆ ಗುರುತ್ವವನ್ನು ತಂದು ಕೊಡುವವು. ಇವಿಲ್ಲದವನು ಗುರು ವಲ್ಲ ಬರಿಯ ನರನು. ಧರ್ಮಗ್ರಂಥಗಳನ್ನು ಓದಿ ಮನನಿಸಿಕೊಂಡು, ಅದರಂತೆ ತಾನು ನಡೆದೂ ತನ್ನನ್ನವಲಂಬಿಸಿರುವ ಈಶ್ವರನನ್ನು (ಶಿಷ್ಯರನ್ನು) ಆ ಮಾರ್ಗದಲ್ಲಿ ನಡೆಯ ಹಚ್ಚಬೇಕು. ತಾನು ನಡೆಯದೆ ಬರಿಯ ಬಾಯಿಂದ ಪುರಾಣ ಕೀರ್ತನಾದಿಗಳ ದ್ವಾರವಾಗಿ, ಅದೆಷ್ಟು ಮಾತಿನ ಮಾಲೆಯನ್ನುಸುರಿಸಿದರೂ ಅದೆಲ್ಲ ಡಬ್ಬ ಕೊಡದ ಮೇಲೆ ನೀರು ಹೊಯ್ದಂತೆ ವ್ಯರ್ಥವಾಗುವದು. ಈ ಮಹೇಶ್ವರನು ತನ್ನ ಸದಾ ಚಾರ ಜ್ಞಾನಗಳಿಂದ ಸಮಾಜದಲ್ಲಿ ಬಹು ಮೇಲ್ಮೆಯನ್ನು ಹೊಂದಿ. ಪೂಜ್ಯನಾದರೆ ಅವನು ಪ್ರತಿಷ್ಠಾ ಕಲೆಯನ್ನು ಹೊಂದಿದಂತಾಗು ವದು. (ಪ್ರತಿ+ಸ್ಥಾ =ಪ್ರತಿಷ್ಠಾ) ಮೊದಲು ಈಶ್ವರನಿದ್ದಾಗ ಮಹೇ ಶ್ವರನು ದೇಹ ಸ್ವಾರ್ಥಕ್ಕೆ ಬಲಿಬಿದ್ದು, ತನ್ನ ಜ್ಞಾನವನ್ನು ಸ್ವಂತದ ಸಂರಕ್ಷಣೆಗಾಗಿ ಉಪಯೋಗಿಸುತ್ತಿದ್ದನು. ಹೀಗೆ ವರ್ತಿಸುವವಂಗೆ ಸಮಾ ಜದಲ್ಲಿ ಹೆಚ್ಚಿಗೆ ಪುರಸ್ಕಾರವು ದೊರೆಯಲು. ಅವನು ಕೇವಲ ಭಕ್ತೋ ದ್ಧಾರದ ಕಡೆಗೇನೇ ದೃಷ್ಟಿ ಇಟ್ಟು, ತನಗೆ ಅದರಲ್ಲೇನು ದ್ರವ್ಯ ಸಂಪಾ ದನೆಯಾಗುವದೆಂಬುದನ್ನು ನೋಡದೆ, ತನ್ನ ಜ್ಞಾನದ ಪ್ರಯೋಜನ ವನ್ನು ಸಮಾಜದ ಉದ್ಧಾರಕ್ಕಾಗಿಯೇ ಉಪಯೋಗಿಸುವ ಚಟ ಕಲಿ ಯಬೇಕು. ಇದೇ ಪ್ರತಿಷ್ಠೆಯು. ಹಾಗೆ ಮಾಡುವಾಗ ದೊರಕುವದರ ಲ್ಲಿಯೇ ಸಂತೃಪ್ತನಾಗಬೇಕು. ಹೆಚ್ಚಿನ ಆಶೆಗೆ ಬೀಳಬಾರದು. ಭಕ್ತೋ ದ್ಧಾರವೇ ತನ್ನ ಮುಖ್ಯ ಗುರಿ ಎಂಬದನ್ನು, ಅವನು ಮರೆಯದಿರಲಿ ಇಂಥ ಆಕುಂಚಿತ ಸ್ವಾರ್ಥದಿಂದ ಹೊರಬಿದ್ದು, ಅದಕ್ಕೆ ವಿರುದ್ಧವಾಗಿ ನಿಲ್ಲುವದೇ ಪ್ರತಿಷ್ಠೆಯು. ಈ ಕಲೆಯನ್ನು ಗಳಿಸದಿದ್ದರೆ, ಅವನ ಜ್ಞಾನ ಶಕ್ತಿಯು ವ್ಯರ್ಥವಾಗುವದು. ಅದ್ದರಿಂದ ಅವರ ಉದ್ಧಾರವೂ ಇಲ್ಲ, ಶಿಷ್ಯರದೂ ಇಲ್ಲೇ ಇಲ್ಲ.

ಮಹೇಶ್ವರನು ಶಿಷ್ಯನಿಗೆ ಅವೆಂತು ಗುರುವಾಗಬೇಕು, ಎಂಬು ದನ್ನು ಮೇಲೆ ಹೇಳಿದ್ದಾಯಿತು. ಇಲ್ಲಿ ಇನ್ನೊಂದು ಮಹತ್ವದ ಸಂಗತಿ ಎಂದರೆ, ಅವನು ತಾನೇ ತನಗೆ ಸಹ ಗುರುವಾಗಬೇಕು ಎಂಬುದು

ಮನವು ತನ್ನನು ಸಹಸಾ ಪರೀಕ್ಷಿಸುವದಿಲ್ಲ. ತಾನು ಹೇಗಿದ್ದರೂ ಅದು ಅದಕ್ಕೆ ಸರಿಯಾಗಿಯೇ ಕಾಣುತ್ತದೆ- ತನ್ನ ದೋಷ ಎಷ್ಟೇ ದೊಡ್ಡದಿದ್ದರೂ ಅದನ್ನು ನೋಡುವದೇ ಇಲ್ಲ. ಅನ್ಯರದು ಎಷ್ಟೇ ಸಣ್ಣ ದೋಷವಿದ್ದರೂ ಆ ಕಡ್ಡಿಯನ್ನೇ ಅದು ಗುಡ್ಡವಾಗಿ ಕಾಣುವದು ಅದರ ರೀತಿಯಾಗಿದೆ. "ತನ್ನ ಕಣ್ಣಲ್ಲಿರುವ ಮಣವನ್ನು ನೋಡದೆ ಮಂದಿಯ ಕಣ್ಣಲ್ಲಿರುವ ಅಣುವನ್ನು ಕಾಣುವದೀ ಮನವು" ಎಂದು ನಾಣ್ಣುಡಿಯಾಗಿದೆ. ಇದನ್ನು ಗುರುವಾದವನು ಕಳೆದುಕೊಳ್ಳಬೇಕು. ತನ್ನಲ್ಲಿರುವ ದೋಷಗಳನ್ನು ಸಹ ಕಂಡು ಹಿಡಿದು ಅವನ್ನು ಕೂಡ ತಿದ್ದಿಕೊಳ್ಳುವದು ಅವನ ಪ್ರಥಮ ಕರ್ತವ್ಯವಾಗಿದೆ. ತನ್ನ ಡೊಂಕು ತಾನೇ ತಿದ್ದಿಕೊಳ್ಳದೆ ಅನ್ಯರ ಡೊಂಕು ತಿದ್ದಲಿಕ್ಕೆ ಹವಣಿಸುವವರನ್ನು ಶ್ರೀ ಬಸವಣ್ಣನವರು ತಮ್ಮ ವಚನದಲ್ಲಿ ನಿರಾಕರಿಸಿದ್ದಾರೆ ಹಾಗೂ ತನ್ನ ತಾನರಿದರೆ ತನಗೆ ತಾನೇ ಗುರು ಎಂತಲೂ ಹೇಳಿದ್ದಾರೆ. ಮತ್ತು ತಾವು ಆ ಜನ್ಮವೂ ಆ ರೀತಿ ವರ್ತಿಸಿದ್ದಾರೆ, ಎಂಬುದು ಅವರ ವಚನಗಳಿಂದ ಸ್ಪಷ್ಟವಾಗಿ ತಿಳಿಯುವದು. ಗುರುಲಿಂಗ ಪೂಜಕರು ಈ ಮಾತನ್ನು ಒಳಿತಾಗಿ ಲಕ್ಷಿಸಬೇಕು.

( ೩ ) **ಪ್ರಸಾದಿ** :— ಪ್ರಸಾದವನ್ನು ತನ್ನಲ್ಲಿ ಪಡೆಯಬೇಕು. ಎಂದು ಹವಣಿಸುವವನು ಪ್ರಸಾದಿಯು. ಈತನು ಮೂರನೆಯ ಅಂಗನು. ಪ್ರಸಾದವೆಂದರೆ ಶಿವತ್ವ. ತಾನು ನರತ್ವವನ್ನು ಹೋಗಲಾಡಿಸಿಕೊಂಡು, ಹರತ್ವವನ್ನು ಒಡಮೂಡಿಸಿಕೊಳ್ಳಲಿಕ್ಕೆ ಇವನು ಹೊಂಚು ಹಾಕಿರುವನು. ಇದೇ ಉದ್ದೇಶದಿಂದಲೇ ಅವನು ಲಿಂಗಧಾರಣೆಯನ್ನು ಹೊಂದಿರುವನು- ಲಿಂಗಸಂಗಿಯಾದೊಡನೆ ಆತನು ನರ ಜನ್ಮವನ್ನು ಚಲ್ಲಿ ಕೊಟ್ಟು, ಹರ ಜನ್ಮವನ್ನು ಪಡೆದನೆಂದೂ; ಮಾಂಸ ಪಿಂಡದ ಬದಲು, ಮಂತ್ರ ಪಿಂಡ ಉಳ್ಳವನಾದನೆಂದೂ ನಂಬುವದುಂಟು. ಅಂತೇ ಅವನಿಗೆ ಈಶ್ವರನೆಂದು ಹೆಸರು ಪ್ರಾಪ್ತವಾಯಿತು.

ಹಿಂದಿನವೆರಡು ಸ್ಥಳಗಳಲ್ಲಿ ( ಈಶ್ವರ, ಮಹೇಶ್ವರ ಸ್ಥಳಗಳಲ್ಲಿ ) ಅವನು ದೇಹ ಧಾರಿಯಾಗಿ ಅದನ್ನು ಹೊರವುಗ್ಗಲು ಶಿವರೂಪಗೊಳಿಸಬೇಕೆಂದು ಪ್ರಯತ್ನ ಪಟ್ಟನು. ಇದೇ ಇಷ್ಟಲಿಂಗದ ಪೂಜೆಯು.

ಅದರ ಪೂರ್ವಾರ್ಧವಾದ ಆಚಾರ ಲಿಂಗವನ್ನು ಈಶ್ವರನ್ನು ಪೂಜಿಸಿ ಸದಾಚಾರ ಸಂಪನ್ನನೆನಿಸಿದನು. ಮಹೇಶ್ವರನು ತಾನು ಮೊದಲೇ ಅದನ್ನು ಪಡೆದವನಾದುದರಿಂದ ಮುಂದೆ ಈಶ್ವರರಾದವರ ( ಲಿಂಗಧಾರಿಯಾದವರ ) ಗುರುವಾಗಿ ( ಸದಾಚಾರ ಬೋಧಕನಾಗಿ ) ಗುರುಲಿಂಗವನ್ನು ಪೂಜಿಸಹತ್ತಿದನು. ಈಶ್ವರರ ಗುರುವಾದುದರಿಂದಲೇ ಅವನಿಗೆ ಮಹೇಶ್ವರನೆಂಬ ಹೆಸರು ಒಪ್ಪಹತ್ತಿತು. ಹೊರಗೆ ದೇಹಕ್ಕೆ ಲಿಂಗ ಸಂಬಂಧಿಸುವದೆಂದರೆ ಅದಕ್ಕೆ ಸದಾಚಾರವನಂಟಿಸುವದರ ವಿನಾ ಬೇರಾವುದಿರುವದು ? ಇದನ್ನು ಸಂಪಾದಿಸಿದ ಮಹೇಶ್ವರನು ಈಗ ತನ್ನೊಳಗೆ ಆ ಸುಜ್ಞಾನವನ್ನು ಪಡೆಯಲಣಿಯಾಗಿರುವನು. ಈಗ ಅವನು ಬಹಿರಂಗವನ್ನಲ್ಲದೆ ಅಂತರ್ಲಿಂಗ ( ಪ್ರಾಣ ಲಿಂಗ )ವನ್ನು ಸಹ ಪೂಜಿಸುವ ನಿಶ್ಚಯ ಮಾಡಿರುವನು.

ಈ ವಿಧದ ಶಿವನನ್ನು ತನ್ನಲ್ಲಿ ಪ್ರಸ್ಥಾಪಿಸಿಕೊಳ್ಳಲಿಕ್ಕೆ ಆ ಶಿವಲಿಂಗವನ್ನು ನಿರಹಂಕಾರ ( ಅಹಂಕಾರ ರಹಿತ ) ಹಸ್ತದಲ್ಲಿ ಪೂಜಿಸಬೇಕಾಗುವದು. ಅಹಂ ಎಂದರೆ ನಾನು ಎಂಬುದನ್ನು ಸಂಪೂರ್ಣವಾಗಿ ಕಳೆದುಕೊಳ್ಳದಿದ್ದರೆ, ಅವನು ನಿರಂಹಕಾರಿಯಾಗಲಾರನು. ಹಾಗಾದರೆ ಅವನು ಏನೇನು ಮಾಡಬೇಕು ? ಎಲ್ಲಕ್ಕೂ ಮೊದಲು ಶರೀರವು ತನ್ನದೆಂಬ ಕಲ್ಪನೆಯನ್ನು ತೊಡೆದು ಹಾಕಬೇಕು. ಅದೇ ಪ್ರಕಾರ ಜ್ಞಾನೇಂದ್ರಿಯುಗಳೂ ಉಳಿದ ಅಂತಃಕರಣಗಳೂ ತನ್ನವೆಂಬ ಕಲ್ಪನೆಯನ್ನು ಹೊಂದೂಡಬೇಕು. ತರುವಾಯ ಮನ ಹಾಗೂ ಬುದ್ಧಿಗಳು ತನ್ನವೆಂಬ ಕಲ್ಪನೆಯನ್ನು ತೊಡೆದು ಹಾಕಬೇಕು. ಅದಕ್ಕಾಗಿ ಅವನ್ನೆಲ್ಲ ತನ್ನಲ್ಲಿರುವ ಶಿವಲಿಂಗ ( ಪ್ರಾಣ ಲಿಂಗ ) ದವೇ ಹೊರತು ತನ್ನವೆಷ್ಟು ಮಾತ್ರವೂ ಅಲ್ಲ ಎಂಬ ದೃಢವಾದ ನಂಬುಗೆಯನ್ನು ಹಿಡಿದುನಡೆಯುಬೇಕು. ಇದೇ ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತವೆಂದು ಹೇಳಲ್ಪಟ್ಟಿದೆ. ಹೀಗೆ ಇವನ್ನೆಲ್ಲ ಶಿವಾರ್ಪಿತ ಮಾಡಿದಮೇಲೆ ಅವು ತನ್ನವೆಂಬುವದನ್ನು ಸಹಸಾ ನೆನೆಯು ಕೂಡದು. ಅವು ಯಾವಾಗಲೂ ಶಿವನವೇ, ಪ್ರಸಾದವೇ ಸುಜ್ಞಾನದವೇ ! ಅವೆಲ್ಲ ಶಿವನ ಇಚ್ಛೆಗೊಳಗಾಗಿ ನಡೆಯುಬೇಕು. ಹೀಗಾದರೆ ಮಾತ್ರ ಅವನು ನಿರಹಂಕಾರ ಹಸ್ತದಲ್ಲಿ ಶಿವಲಿಂಗವನ್ನು ಪೂಜಿಸಲು ಅರ್ಹನಾಗುವನು. ಶಿವಲಿಂಗದ ಶಕ್ತಿಯು ಇಚ್ಛಾ ಶಕ್ತಿಯು.

ಅವನು ಸ್ವೇಚ್ಛೆಯಿಂದಲೇ ಎಲ್ಲವನ್ನು ನಡೆಸುವನು. ಪ್ರಸಾದ್ಯಂಗನು ಸ್ವತಂತ್ರವಾಗಿ ಏನನ್ನೂ ಮಾಡಲೂ ಅಧಿಕಾರ ಉಳ್ಳವನಲ್ಲ. ಈ ಪ್ರಪಂಚದಲ್ಲಿ ನಡೆದುದೆಲ್ಲ ( ಇಷ್ಟವಾಗಿರಲಿ ನಷ್ಟವಾಗಿರಲಿ ) ಶಿವೇಚ್ಛೆಯಿಂದ ಸಂಭವಿಸಿತೆಂದೂ, ಅದನ್ನು ಶಾಂತರೀತಿಯಿಂದ ಅನುಸರಿಸಲೇಬೇಕೆಂದೂ, ದೃಢವಾಗಿ ನಂಬಬೇಕಾಗುವದು. ಈ ವಿಧದ ಭಕ್ತಿಯೇ ಸಾವಧಾನ ಭಕ್ತಿಎನಿಸುವದು. ಈ ಭಕ್ತಿಯ ಪ್ರಗತಿಯಿಂದಲೇ ಪ್ರಸಾದಿಯು ಶಿವಲಿಂಗದ ಇಚ್ಛಾ ಶಕ್ತಿಯನ್ನು ವಿದ್ಯಾಕಲೆಯಲ್ಲಿ ರೂಪಾಂತರಿಸಿಕೊಳ್ಳಬೇಕು.

ವಿದ್ಯಾಕಲೆ ಎಂದರೆ, ಬರಿಯ ಸಾಲಿಗೆ ಹೋಗಿ, ಓದು ಬರಹ ಮೊದಲಾದವನ್ನು ಕಲಿಯುವದಲ್ಲ! ಅದು ಹೊಟ್ಟೆ ತುಂಬಿಕೊಳ್ಳುವ ವಿದ್ಯೆ. ಇಲ್ಲಿ ಹೇಳಿದುದು, ಆತ್ಮವಿದ್ಯೆ; ಜ್ಞಾನದ ಕೊನೆಯ ವಿದ್ಯೆ! ಉಪನಿಷದ್ ವಿದ್ಯೆ. ಆಗಮಿಕ ವಿದ್ಯೆ. ವಚನಶಾಸ್ತ್ರದಲ್ಲಿ ಪ್ರಮಥರಿಂದ ನಿರೂಪಿತವಾದ ವಿದ್ಯೆ. ಇದನ್ನು ಅರಿದು ಒಳಿತಾಗಿ ಮನನ ಮಾಡಿಕೊಳ್ಳುವದರ ಕಡೆಗೇನೇ ಪ್ರಸಾದಿಯ ಇಚ್ಛೆ ಎಲ್ಲವೂ ಕೇಂದ್ರೀಕೃತವಾಗಬೇಕು. ಶಿವಜ್ಞಾನವನ್ನು ಪಡೆಯಬೇಕು. ದೇಹ ರಕ್ಷಣೆಗಾಗಿ ಹಿಡಿದ ಕಾಯಕವು ತಕ್ಕ ಮಟ್ಟಿಗೆ ಪ್ರಾಮಾಣಿಕತನದಿಂದ ಸಾಗಿ ಅದರಲ್ಲಿ ಶಿವಾನುಗ್ರಹದಿಂದ ಸಿಕ್ಕುದರಲ್ಲಿಯೇ ತೃಪ್ತನಾಗಬೇಕು. ಮಿತಾಹಾರಿಯೂ ಸಾತ್ವಿಕಾಹಾರಿಯೂ ಆಗಬೇಕು. ಇಂತಾದಾಗ ಮಾತ್ರ ಶಿವಲಿಂಗದ ಇಚ್ಛಾಶಕ್ತಿಯು ವಿದ್ಯಾ ಕಲೆಯಲ್ಲಿ ರೂಪಾಂತರಗೊಳ್ಳುವದು. ಇಂತಹನು ನಿಜವಾದ ಪ್ರಸಾದಿಯಾಗುವನು, ಶಿವಲಿಂಗದಲ್ಲಿ ಬೆರೆದು ಐಕ್ಯನಾದನು.

( ೪ ) ಪ್ರಾಣಲಿಂಗಿ :— ಪ್ರಾಣವೇ ಲಿಂಗವು ಎಂದರಿತವನೇ ಪ್ರಾಣಲಿಂಗಿಯು. ಈತನು ಸಾಲ್ಕನೆಯ ಅಂಗನು. ತನ್ನ ಪ್ರಾಣವು ಲಿಂಗವಾಗಿರುವಂತೆ ಉಳಿದೆಲ್ಲರ ಪ್ರಾಣಗಳು ಸಹ ಲಿಂಗರೂಪವೇ ಎಂದು ಈತನು ಭಾವಿಸುವದು ಸಾಹಜಿಕವದೆ. ಈತನು ಅರ್ಚಿಸುವ ಲಿಂಗಕ್ಕೆ ಜಂಗಮ ಲಿಂಗವೆನ್ನುವರು. ಜಂಗಮಕ್ಕೆ ಚೈತನ್ಯವೆಂಬ ಬೇರೆ ಹೆಸರೂ ಇರುವದು. ಚೈತನ್ಯದ ಮೂಲಕವಾಗಿಯೇ ಹೊರಗೆ ದೇಹದ ಆಲೆದಾಟವೂ ಒಳಗೆ ಆತ್ಮದ ವಿಚಾರಾಲೋಚನೆಗಳೂ ಸಾಗುವವು. ಭಕ್ತನು ( ಪ್ರಾಣಲಿಂಗಿಯು ) ತನ್ನ ಜಂಗಮ ಲಿಂಗವನ್ನು ಸುಮನ ಹಸ್ತದ

ಲ್ಲಿಟ್ಟು ಪೂಜಿಸತಕ್ಕದ್ದು. ಸುಮನರಾಗಿರುವವರನ್ನೇ ದೇವತೆಗಳು ( ಸುಮನರು ) ಎಂದು ಹೇಳಿದ್ದಾರೆ. ಈ ಸುಮನವನ್ನು ಪಾಲಿಸುವದು ಸಾಮಾನ್ಯವಾದದ್ದಲ್ಲ. ಮನವು ಯಾವಾಗಲೂ ಚಂಚಲ ಸ್ವಭಾವವುಳ್ಳದ್ದು. ಅದು ಎಂದೂ ಸ್ವಸ್ಥವಾಗಿರುವದಿಲ್ಲ. ಸರ್ವಕಾಲದಲ್ಲಿಯೂ ವಿಷಯ ಚಿಂತನೆಯಲ್ಲಿಯೇ ತೊಡಗಿರುತ್ತದೆ. ಯಾವ ಪರಿಯಿಂದಲಾದರೂ ವಿಷಯ ಪ್ರಾಪ್ತಿಯಾಗುವದತ್ತಲೇ ಅದು ಹೋಗುವದು ಆಗ ಅದು ನ್ಯಾಯಾನ್ಯಾಯಗಳನ್ನು ಅದು ನೋಡುವದಿಲ್ಲ. ಹೊನ್ನು ಹೆಣ್ಣು ಮಣ್ಣು ಈ ವಿಷಯಗಳು ಎಷ್ಟು ಸಿಕ್ಕರೂ ಅದಕ್ಕೆ ಸಾಕಿಲ್ಲ. ಎಲುವು ಕಡಿಯುವ ( ಸ್ವಾರಸ್ಯವಿಲ್ಲದ ವಿಷಯಗಳ ಭೋಗದಾಸೆಯುಳ್ಳ ) ಅದರ ನಾಯಿತನವು ಹೋಗುವದೇ ಇಲ್ಲ. ಕು ಕೃತ್ಯಗಳೇ ಅದಕ್ಕೆ ಬಹು ಪ್ರಿಯ. ಇಂತಹ ಮನವನ್ನು ಸುವೃತ್ತಿಯಲ್ಲಿ ತಂದುಕೊಂಡು, ಆ ಸುಮನ ಹಸ್ತದಲ್ಲಿ ಜಂಗಮಲಿಂಗವನ್ನು ಪೂಜಿಸುವದು ಅಸಂಭವನೀಯವಾಗಿಯೇ ಇರುವದು. ಹಾಗಿದ್ದರೆ ಆ ಹಸ್ತವನ್ನು ಪಡೆಯುವ ಬಗೆ ಯಾವದು ? ಎಂಬ ಆಕಾಂಕ್ಷೆ ತನ್ನಿಂದತಾನೆ ಉದ್ಭವಿಸುವದು. ಸಾಮಾನ್ಯರಿಗೆ ಇದು ಅಸಂಭವನೀಯ ತೋರಿದಂತೆ ವೀರರಾಗಿ ( ಆತ್ಮ ವಿದ್ಯೆಯನ್ನು ಸಂಪಾದಿಸಿ ) ಜಗತ್ತಿನ ಅನುಭವವನ್ನು ಸರಿಯಾಗಿ ಪಡೆದ ಪ್ರಾಣಲಿಂಗಿಗೆ ಅದು ದುಸ್ತರವಲ್ಲ ಅವನ ಭಕ್ತಿಯೇ ಅನುಭವ ಭಕ್ತಿ. ಒಬ್ಬರ ಬಾಯಿಂದ ಕೇಳದುದು ಇಲ್ಲವೆ ಗ್ರಂಥದ್ವಾರವಾಗಿ ಕಲಿತು ಸ್ಮರಣದಲ್ಲಿಟ್ಟುಕೊಂಡುದು ಶ್ರವಣದಲ್ಲಿಯೇ ಬರುವದು. ಈ ರೀತಿ ಅದೆಷ್ಟು ಜ್ಞಾನ ಗಿಳಿ ಪಾಠ ಪಡೆದರೂ ಅದೆಲ್ಲ ವ್ಯರ್ಥವೇ ಸರಿ. ಸ್ವತಃ ತನಗೆ ಅನುಭವ ಬಂದೆ ( ಅಹುದೆಂದು ಮನವರಿಕೆಯಾಗದೆ ) ಹೋದರೆ, ಅದರಿಂದೇನು ಪ್ರಯೋಜನವಿಲ್ಲ. ಇಂತು ಮನವರಿಕೆ ಮಾಡಿಕೊಳ್ಳುವದೇ ಮನನವು. ಇಂತು ಮನನ ಮಾಡಿಕೊಂಡು ಜಗತ್ತಿನ ( ಜನತೆಯ ) ವಿಷಯವಾಗಿ, ಉಚ್ಚತರ ಅನುಭವ ಸಂಪಾದಿಸುವದೇ ಮನನೀಯವೆನಿಸುವದು. ನಿಜವಾದ ವೀರಶೈವರಿಗೆ ಇದೇನೂ ಅಸಾಧ್ಯವಾದುದಲ್ಲ. ಹೆಸರಿಗೆ ಮಾತ್ರ ಲಿಂಗಧಾರಿಯಾದವರಿಗೆ ಇದು ಶಕ್ಯವಾಗಲಾರದು. ಈ ವಿಧದ ಅನುಭವ ಭಕ್ತಿಯು ಪ್ರಾಣಲಿಂಗಿಯದು. ಆದುದರಿಂದ ಅವನು ಸುಲಭವಾಗಿಯೇ ಎಲ್ಲ ಜನರನ್ನು ಇಲ್ಲವೆ ಸಮಾಜವನ್ನು ತನ್ನದಾಗಿ ಮಾಡಿಕೊಳ್ಳುವನು. ಎಲ್ಲರನ್ನೂ

ತನ್ನಂತೆಯೇ ( ಆತ್ಮವತ್ ) ಕಾಣುವನು. ಸಮಾಜದೊಡನೆ ಸಮಾನ ತೆಯೇ ಅವನ ಗುರಿಯು. ಕರುಣೆ ವಿನಯಗಳು ಅದಕ್ಕೆ ಸಹಾಯ ಕಾರಿಯಾಗುವವು. ಅವನು ದಯಾಳುವೂ ದಾನಿಯೂ ಆಗಿರುವನು. ಎಲ್ಲರನ್ನೂ ಶಿವ ಸ್ವರೂಪದಲ್ಲಿ ಕಾಣುವನು. ತಾನು ಸಮಾಜದ ಸೇವ ಕನಾಗುವನು. "ಎನಗಿಂತ ಕಿರಿಯರಿಲ್ಲ, ಶಿವಭಕ್ತರಗಿಂತ ಹಿರಿಯರಿಲ್ಲ" ಎಂದು ಬಸವಣ್ಣನವರು ನಡಿದುದರ ತಾತ್ಪರ್ಯವು ಇದೇ! ಇದನ್ನು ನಾವೆಲ್ಲರೂ ಲಕ್ಷ್ಯದಲ್ಲಿಟ್ಟು ಅನುಸರಿಸಲು ಹವಣಿಸಬೇಕು. ಇದೊಂದಿದ್ದರೆ ಸಾಕು. ಸಮಾಜವು ತಾನೇ ಒಲಿಯುವದು. ಇದನ್ನೇನೂ ಗಮನಿಸದೆ ಅಹಂಕಾರ ದುರಭಿಮಾನಗಳಿಂದ ವ್ಯಾಪ್ತರಾಗಿ ಮನಬಂದಂತೆ ವರ್ತಿಸುವದೇ ಈಗಿನ ಲಿಂಗಧಾರಿಗಳ ಲಕ್ಷಣವಾಗಿದೆ. ಅದನ್ನು ಬಿಡಿಸುವ ಗುರುಗಳಾರೂ ಇಲ್ಲ. ಹಿಂದೆ ಹೇಳಿದಂತೆ ತನಗೆ ತಾನೇ ಗುರುವಾಗಬೇಕು. ಜಗದಣ್ಣನವರು ಇದೇ ಕಾಯಕದಲ್ಲಿ ಸರ್ವಕಾಲವೂ ನಿರತರಾಗಿದ್ದರೆಂಬುದನ್ನು ಅವರ ವಚನ ಗ್ರಂಥದಿಂದ ಸುಲಭವಾಗಿ ಅರಿಯ ಬಹುದು. ನಾವು ಬಸವನ ಭಕ್ತಿಯ ಸಾಂಪ್ರದಾಯಕರು. ಆದರೂ ಆತನ ಭಕ್ತಿಯ ಗುಣಗಳನ್ನು ಮಾತ್ರ ಇಣಿಕಿಕ್ಕಿ ಸಹ ನೋಡುವದಿಲ್ಲ ಇದರ ವಿಚಾರವನ್ನು ಪ್ರತಿಯೊಬ್ಬ ಲಿಂಗಾಗಿಯು ಮಾಡತಕ್ಕದ್ದು,

ಜಂಗಮು ಲಿಂಗದ ಶಕ್ತಿಯು ಆದಿ ಶಕ್ತಿಯು. ಕ್ರಿಯಾ-ಜ್ಞಾನ ಇಚ್ಛಾ ಶಕ್ತಿಗಳಿಗೆಲ್ಲ ಪ್ರಾಣವೇ ( ಚೈತನ್ಯವೇ ) ಆಧಾರವಾಗುದು. ಆ ಕಾರಣ ಪ್ರಾಣದ ಶಕ್ತಿಯು ಆದಿಶಕ್ತಿ ಎನಿಸುವದು. ಮೇಲೆ ವಿವರಿಸಿದ ಅನುಭವ ಭಕ್ತಿಯ ಯೋಗದಿಂದ ಪ್ರಾಣಲಿಂಗಿಯು ಆದಿಶಕ್ತಿಯನ್ನು ಶಾಂತಿ ಕಲೆಯಲ್ಲಿ ರೂಪಾಂತರಿಸಿಕೊಳ್ಳಬೇಕು. ಮನವೇ ಪ್ರಾಣದ ( ಆದಿಶಕ್ತಿಯು ) ಪ್ರಧಾನಿಯು. ಅದನ್ನೇ ಮೊದಲು ತಿದ್ದಿಕೊಂಡು ಅದರ ಹಸ್ತದಲ್ಲಿಯೇ ಜಂಗಮು ಲಿಂಗವನ್ನು ಪೂಜಿಸಲು ಸಿದ್ಧರಾದವರಿಗೆ ಆತಂಕಗಳು ಉದ್ಭವಿಸಲಾರವು. ಅನುಭವ ಭಕ್ತಿಯಾದರೂ ಒಡಮೂಡಿದ್ದುದರೆ ಮತ್ತಿಷ್ಟು ಶಕ್ತಿಯನ್ನು ಕಲೆಯಲ್ಲಿ ರೂಪಾಂತರಿಸಲಿಕ್ಕೆ ಸೌಕರ್ಯ ಒದಗುವದು. ಆದಿಶಕ್ತಿಯನ್ನು ಶಾಂತಿಕಲೆಯಲ್ಲಿ ಒಯ್ಯಬೇಕಾಗಿದೆ.

ಶಾಂತಿ ಎಂದರೆ ಮನಸ್ಸಿನ ಸ್ಥೈರ್ಯವನ್ನು ಢಳಮಳಿಸಗೊಡದೆ ಇದ್ದಕ್ಕಿದ್ದಂತೆಯೇ ನಿರಾತಂಕವಾಗಿ ಕಾಯ್ದುಕೊಂಡು ಹೋಗುವದು. ಈ ಶಾಂತಿಯಿಂದಲೇ ಸುಖ ಸಮಾಧಾನಗಳು ನಮಗೆ ಲಭಿಸುತ್ತವೆ. ನಾವು ಪ್ರಪಂಚದಲ್ಲಿ ಹಿಡಿದ ವಸ್ತುಗಳೆಲ್ಲ ( ಹೊನ್ನು ಹೆಣ್ಣು ಮಣ್ಣು ಮಕ್ಕಳಾದಿಗಳೆಲ್ಲ ) ಅಶಾಶ್ವತ. ಅವು ನಾಶವಾಗಿ ಹೋಗತಕ್ಕವುಗಳೇ. ಅವು ಕೈಬಿಡುವದರಿಂದ ನಮಗೆ ಅಕಸ್ಮಾತ್ ದುಃಖಪ್ರಾಪ್ತಿಯಾಗುವದು ಆಗ ಶಾಂತಿ ಎಂಬುದು ಕನಸಿನ ಗಂಟಾಗುವದು. ಅಂತಹಕಾಲದಲ್ಲಿ ಅನುಭವದ ಹೊರತು ಅದಾವುದು ಸಂರಕ್ಷಿಸಬಲ್ಲದು ? ಈ ಅನುಭವ ವನ್ನೂ ಜಗತ್ತಿನ ಪರಂಪರೆಯನ್ನೂ ನೆನೆದು ಬಲ್ಲವನು ಶಾಂತಿಯನ್ನು ಧಾರಣಮಾಡುವನು. ಜೀವವನ್ನು ಸಮಾಧಾನಗೊಳಿಸಲಿಕ್ಕೆ ಇದೊಂದೇ ಸಾಧನವು. ಸ್ವತಃ ತಾನೇ ದೇಹ ಬಿಡುವ ಕಾಲ ಒದಗಿದರೂ ಜ್ಞಾನಿ ನಾದವನು ಎಂದೂ ಹೆದರನು. ಶಾಂತಿಯನ್ನು ಎಂದೂ ಕಳೆದುಕೊಳ್ಳ ಲಾರನು. ಮರಣವೆಂದರೆ ಮಹಾನವಮಿಯ ಹಬ್ಬ ಎಂದರಿವೆನೆಂದು ಶ್ರೀ ಬಸವಣ್ಣನವರು ನುಡಿದುದರ ರಹಸ್ಯವು ಇದೇ ! ಇಂತಹ ಶಾಂತಿ ಕಳೆಯನ್ನು ಪಡೆದ ಪ್ರಾಣಲಿಂಗಿಯೇ ತನ್ನ ಜಂಗಮ ಲಿಂಗದಲ್ಲಿ ಬೆರೆಯುವನು.

( ೫ ) ಶರಣಾಂಗ :— ಶರಣನು ಲಿಂಗಕ್ಕೆ ( ಶಿವನಿಗೆ ) ಪರಿ ಪೂರ್ಣವಾಗಿ ಶರಣು ಹೋದವನು. ಎಲ್ಲೆಲ್ಲಿಯೂ ಲಿಂಗವನ್ನೇ ಕಾಣು ವವನು. ಇವನು ಐದನೆಯ ಅಂಗನು. ಲಿಂಗಮಾರ್ಗದಲ್ಲಿ ಹೆಚ್ಚಾಗಿ ಪ್ರಗತಿ ಪಡೆದವನು. ಈತನ ಯೋಗ್ಯತೆ ದೊಡ್ಡದು. ನಿಜವಾದ ಶಿವಯೋಗಿಯು. ಮಹಿಮನು. ಮನುಜ ರೂಪದಿಂದ ಸಂಚರಿಸುವ ಪ್ರತ್ಯಕ್ಷ ಶಿವನು. ಇರಲಿ. ತಾನು ಪೂಜಿಸುವ ಲಿಂಗವು ಪ್ರಸಾದಲಿಂಗವು. ಇದು ಭಾವಲಿಂಗದ ಆದಿಸ್ವರೂಪ. ನಾವು ವಾಸಿಸುವ ಈಜಗತ್ತೆ ( ಕರ್ಮ ಭೂಮಿಯೇ ) ಪ್ರಸಾದವು. ನಾವು ರಕ್ಷಣೆಯನ್ನಾಗಲೀ ಉದ್ಧಾರವಾಗಲೀ ಪಡೆಯಲಿಕ್ಕೆ ಇದೇ ಸಾಧನವು. ದೇವರು ದಯಾಲುತ್ವದಿಂದ, ಪ್ರಾಣಿ ಗಳಿಗೆ ಕರುಣಿಸಿದ ಪ್ರಸಾದವೇ ಇದು. ಇದು ಅಜ್ಞಾನಿಗಳಿಗೆ ಘನವಾದ ಮಾಯಾ ಪ್ರಪಂಚವಾಗಿದೆ. ಅವರು ಅದರ ವಿಷಯಗಳಿಗೆ ಒಳಗಾಗಿ ಹಾರೈಸಿ, ಹಾರೈಸಿ, ಸತ್ತುಹೋಗುವರು. ಇಂತಹ ದುರ್ಜಯವಾದ

ಜಗತ್ತನ್ನು ಶರಣನು ಪ್ರಸಾದಲಿಂಗಸ್ವರೂಪಕ್ಕೆ ತಂದು, ಅದರೊಡನೆ ಬೆರೆದು ಸದಾ ಆನಂದಸ್ವರೂಪನಾಗಿರುವನು.

ಇಂತಹ ಪ್ರಸಾದಲಿಂಗವು ತನಗೆ ಅಳವಡಬೇಕಾದರೆ. ಶರಣಾಂಗನು, ( ಭಕ್ತನಾದ ಶರಣನು ) ಅದನ್ನು ಸುಜ್ಞಾನ ಹಸ್ತದಲ್ಲಿ ಧರಿಸಿ ಪೂಜಿಸುವನು. ನಾನಾವಿಧದ ನಾಮರೂಪ ಗುಣಗಳುಳ್ಳ ಅಸಂಖ್ಯಾತ ವಸ್ತುಗಳಿಂದ ತುಂಬಿದ ಈಜಗತ್ತನ್ನು ಪ್ರಸಾದ ( ಲಿಂಗ ) ಸ್ವರೂಪಕ್ಕೆ ತರುವದೇನು ಸಾಮಾನ್ಯವಾದುದಲ್ಲ. ಅದಕ್ಕೆ ಮಿಗಿಲಾದ ಜ್ಞಾನದೃಷ್ಟಿಯನ್ನು ಹೊಂದಬೇಕಾಗುವದು. ಈ ಜ್ಞಾನದೃಷ್ಟಿಯುಳ್ಳವನೇ ವಿರೂಪಾಕ್ಷನು- ವಿರೂಪವೆಂದರೆ ನಿರಾಕಾರವಾದುದು. ಅದು ಹಣೆಯಲ್ಲಿರುವ ಕಣ್ಣು. ಸಾಕಾರವಾದ ಹೊರಗೆ ತೋರುವ ನಮ್ಮೆರಡು ಕಣ್ಣುಗಳಿಂದ ನಾವು ಪ್ರಸಾದ ಲಿಂಗವನ್ನು ಪೂಜಿಸಲಾರೆವು. ಅದಕ್ಕೆ ವಿರೂಪಾಕ್ಷಿಯೇ ಬೇಕು. ಅದೇ ತೃತೀಯ ನೇತ್ರವು. ಅದೇ ಸುಜ್ಞಾನ ಹಸ್ತವು. ಈ ಸುಜ್ಞಾನ ಹಸ್ತದಲ್ಲಿಯೇ ಶರಣನು ಪ್ರಸಾದಲಿಂಗವನ್ನು ಅರ್ಚಿಸಿ ಜಗತ್ತನ್ನು ಏಕ ಸ್ವರೂಪಕ್ಕೆ ತರುವನು. ಒಣಗಿಸಿದ ವಿಶುದ್ಧ ಗೋಮಯುವನ್ನು ಮಂತ್ರ ಪೂರ್ವಕ ಅಗ್ನಿಸಂಸ್ಕಾರಗೊಳಿಸಿ, ವಿಭೂತಿಯನ್ನು ನಿರ್ಮಿಸುವದು, ಎಲ್ಲರಿಗೂ ಗೊತ್ತುಂಟು. ಈ ವಿಭೂತಿಯನ್ನೇ ಭಸ್ಮಾಸುರನೆಂದು ವರ್ಣಿಸಿದ್ದಾರೆ. ಭಸ್ಮಾಸುರನ ಹಸ್ತವು ಯಾರ ತಲೆಯಮೇಲೆ ಬೀಳುವದೋ ಅವರೆಲ್ಲರೂ ಉರಿದು ಹೋಗಿ ಚಿತಾಭಸ್ಮ (ಚಿದ್ಭಸ್ಮ) ವಾಗುವರೆಂದು ಹೇಳುವರು. ಭಸ್ಮವು ಯಾವುದನ್ನು ಸೋಂಕಿದರೂ ಅದರ ನಾಮರೂಪ ಗುಣಗಳೆಲ್ಲ ನಷ್ಟವಾಗಿ ಅದು ಮೂರು ರೂಪವನ್ನು ( ಚಿತ್‌ಸ್ವರೂಪವನ್ನು ) ಹೊಂದುವದೆಂದು ನಂಬಲಾಗಿದೆ. ಆಗ ಆ ಭಸ್ಮ ಸ್ಪರ್ಶದೊಡನೆ ಜ್ಞಾನ ದೃಷ್ಟಿ ಅಥವಾ ಮಂತ್ರವನ್ನು ಅಂದರೆ ವಸ್ತುವಿನ ಸತ್ ಸ್ವರೂಪವನ್ನು ಅರಿವನ್ನು ನೆನೆಯಬೇಕು. ಅದರಿಂದ ಆ ವಸ್ತುವಿನ ಸತ್ ಚಿತ್ ಆನಂದ ಸ್ವರೂಪಗಳು ತಲೆದೋರಿ ನಿಜವಾದ ಪರಮಾತ್ಮತತ್ವವು ಮುಂದೆ ನಿಲ್ಲುವದು. ಇದಕ್ಕೆ ಆತ್ಮಜ್ಞಾನದ ( ಶಿವಾನುಭವದ ) ಅನುಭವವು ಅವಶ್ಯವಾಗಿ ಬೇಕು. ಇಂತಹ ಜ್ಞಾನ ಹಸ್ತದ ನೆರವಿನಿಂದಲೇ ಜಗದ್ರೂಪ ಸ್ಥೂಲ ವಸ್ತುವನ್ನು ಪ್ರಸಾದಲಿಂಗ ಸ್ವರೂಪಕ್ಕೆ ತಂದುಕೊಳ್ಳಬೇಕು.

ಪ್ರಸಾದಲಿಂಗದ ಶಕ್ತಿಯು ಪರಾಶಕ್ತಿಯು. ಇದು ಬಹು ನಿರ್ಮಲಾದುದು. ಭವಪಾಶ, ( ಜನನ ) ಮರಣಪಾಶ, ಮಾಯಾಪಾಶ, ಕರ್ಮಪಾಶ ಮಲ ( ಅಜ್ಞಾನ ) ಪಾಶಗಳೆಂಬ ಪಂಚಪಾಶಗಳನ್ನು ಧಾರಣ ಮಾಡಿರುವದು. ಈ ಪಾಶಗಳಿಂದ ತಪ್ಪಿಸಿಕೊಳ್ಳಲಿಕ್ಕೆ ಮನುಷ್ಯನು ಒಳ್ಳೆ ಜಾಣತನದಿಂದ ( ಜ್ಞಾನಿತ್ವದಿಂದ ) ಜಗದೊಡನೆ ವ್ಯವಹರಿಸಿ, ಅದರ ನಿಜಸ್ವರೂಪವನ್ನು ಅರಿತುಕೊಂಡು, " ಪಿಂಡಾಂಡ, ಬ್ರಹ್ಮಾಂಡಯೋರೈಕ್ಯಂ " ಎಂಬದನ್ನು ಸಾಧಿಸಬೇಕು. ಇದೇ ಏಕಮೇವಾದ್ವಿತಿಯತ್ವವನ್ನು ಹೊಂದುವ ರಾಜಮಾರ್ಗವು. ಇದನ್ನು ಅನುಸರಿಸುವಾಗ ಬಹು ವಿಘ್ನಗಳುಂಟಾಗುವವು. ಆದರೂ ಅವನ್ನೆಲ್ಲ ತನ್ನ ಜ್ಞಾನದ ಸಹಾಯದಿಂದ ಸಹಿಸಬೇಕು. ಪರಮ ಶಾಂತಿಯಲ್ಲೇ ಇರಬೇಕು. ಶರಣನ ಭಕ್ತಿಯು ಆನಂದ ಭಕ್ತಿಯು. ಅವನು ಯಾವಾಗಲೂ ಆನಂದದಲ್ಲಿಯೇ ( ಲಿಂಗಾನಂದದಲ್ಲಿಯೇ ) ಇರಬೇಕು. ನಿಜವಾಗಿ ನಮ್ಮ ಹುಟ್ಟು, ಇರವು, ಅಳಿವು, ಐಕ್ಯಗಳು, ಲಿಂಗದಲ್ಲಿಯೇ ಉಂಟು. ಅಜ್ಞಾನದ ( ಆಣವಾದಿ ಮಲಗಳ ) ಮೂಲಕವಾಗಿಯೇ ನಾವು ಸಂಸಾರದಲ್ಲಿ ನುಗ್ಗುನುಚಿಯಾಗುತ್ತೇವೆ, ಲಿಂಗದಲ್ಲಿ ದೃಢವಾದ ಭಕ್ತಿಯುಳ್ಳವರಾದರೆ, ಅದನ್ನು ಸುಲಭವಾಗಿಯೇ ಜಯಿಸಬಹುದು. ಆದರೆ ಅನೇಕ ವಿಧದ ಮಾಯೆಗೆ ಅಜ್ಞಾನವಶಾತ್ ಹೊಂದಿಕೊಂಡು ತಿರುಗಣಿಗೊಳಗಾಗುವೆವು. ಮಾಯೆಯು ನಿಜವಾಗಿ ಮೋಹಿಸುವಂತಿರುವದಿಲ್ಲ. ತಿಳಿದು ಸಮಾಧಾನದಿಂದ ಪರೀಕ್ಷಿಸಿದರೆ, ಅದರಲ್ಲಾವ ಹುರಳೂ ಇರುವದಿಲ್ಲ. ನಾವು ಅದರ ಸ್ವರೂಪಕ್ಕೆ ಒಮ್ಮೆಲೇ ಭ್ರಾಂತರಾಗಿ, ದಿಙ್ಮೂಢರಾಗುತ್ತೇವೆ. ಆದೇಕಾಲಕ್ಕೆ ಸದಸದ್ವಿವೇಕವನ್ನು ಎದುರಿಟ್ಟುಕೊಂಡು ಶಾಂತರೀತಿಯಿಂದ ಅದರ ಸತ್ಯಸ್ವರೂಪವನ್ನು ಕಣ್ಮುಂದೆ ತರಲೇಬೇಕು. ಇದೇ ಧೈರ್ಯದಿಂದಿರುವದು ( ಧೀಯಲ್ಲಿ ಇರುವವನೇ ಧೀರ; ಧೀರ+ಯ= ಧೈರ್ಯ ಆದುದರಿಂದ ವಿವೇಕ ಬುದ್ಧಿಯಿಂದ ನಡೆಯುವದೇ ಧೈರ್ಯವೆನಿಸುಸದು ).

ಇಂತಹ ಸುಜ್ಞಾನ ಹಸ್ತದಲ್ಲಿ ಲಿಂಗವನ್ನು ಪೂಜಿಸುವವನು, ಯಾವಾಗಲೂ ಆನಂದದಲ್ಲಿಯೇ ಇರುವನು. ಅವನ ಶಾಂತಿಗೆ ಚ್ಯುತಿ ಎಂಬುದು ಇಲ್ಲೇ ಇಲ್ಲ. ಇದರ ಬಗ್ಗೆ ಶ್ರೀ ಸಿದ್ಧರಾಮೇಶ್ವರ ವಚನದ

ಭಾವವು ಇಂತಿದೆ — ತನ್ನ ಕಣ್ಣೆದರು, ಶತ್ರುಗಳು ಸತಿ ಸುತರನ್ನು ಕೋಲಾಹಲಂಗೆಯ್ಯಲಿ, ಆಕೆಯ ಮಾನಭಂಗ ಮಾಡಲಿ, ಮಕ್ಕಳನ್ನು ಕಡಿದು ತುಂಡು ತುಂಡು ಮಾಡಲಿ, ಸ್ವತಃ ತನ್ನಮೇಲೆ ಶಸ್ತ್ರ ಪ್ರಹಾರ ನಡೆಸಿ, ಜೀವವನ್ನು ಹೀರಲಿ, ಆದರೂ ಭಕ್ತನ ಶಾಂತತೆಯಲ್ಲಿ ಅಲ್ಪವಾದರೂ ಓಸರತೆಯು ಕಂಡುಬಾರದಿದ್ದಲ್ಲಿ ಅದೇ ನಿಜವಾದ ಶಾಂತಿ ಕಾಣಾ.

ಹೀಗೆ ಎಂತಹ ಸಂಕಟ ( ಲೌಕಿಕ ತಾಪತ್ರಯ ) ಬಂದರೂ ಶರಣನು ತನ್ನ ಆನಂದದಲ್ಲಿ ಕೊರತೆ ತಾರನು. ಈ ಆನಂದ ಭಕ್ತಿಯ ಯೋಗದಿಂದಲೇ ಅವನು ಪರಾಶಕ್ತಿಯನ್ನು ರೂಪಾಂತರಿಸಿಕೊಂಡು, ಶಾಂತ್ಯಾತೀತ ಕಲೆಯ ರೂಪಕ್ಕೊಯ್ಯುವನು. ಅವನ ಮೊಗದ ಮೇಲೆ ಸರ್ವದಾ ಈ ಕಳೆಯು ನೃತ್ಯಮಾಡುತ್ತಲಿರುವದು. ಈ ರೀತಿ ಜಗತ್ತಿನಲ್ಲಿ ವರ್ತಿಸುವದೇ ಪ್ರಸಾದಲಿಂಗದಲ್ಲಿ ಶರಣನು ಬೆರೆದು ಹೋಗುವದೆಂದರಿಯಬೇಕು.

( ೬ ) ಐಕ್ಯಾಂಗ :— ಐಕ್ಯನು ಷಟ್‌ಸ್ಥಲದ ಕೊನೆಯ ಮೆಟ್ಟಲನ್ನು ಏರಿದ ವರಿಷ್ಠಾಂಗನು. ಶರಣತ್ವದಲ್ಲಿ ಪೂರ್ಣತೆ ಪಡೆದವನೇ ಐಕ್ಯನಾಗಲು ಅರ್ಹನು, ಎಲ್ಲವನ್ನು ಏಕಮೇವಾದ್ವಿತೀಯವಾಗಿ ಕಾಣುವನೇ ಐಕ್ಯನು. ಈತನ ಲಿಂಗವು ಮಹಾಲಿಂಗವು, "लीयते गम्यते यत्र। जगदेतच्चराचरम् ।" ಎಂಬುದೇ ಮಹಾಲಿಂಗವು. ಇಂತಹ ಪರತರ ಲಿಂಗವನ್ನು, ಐಕ್ಯನು ಸದ್ಭಾವ ಹಸ್ತದಲ್ಲಿ ಪೂಜಿಸುವನು. ಇಲ್ಲಿ ಸದ್ಭಾವ ಹಸ್ತವನ್ನು ಸರಿಯಾಗಿ ಅರಿತುಕೊಳ್ಳುವದು ಅವಶ್ಯವಿದೆ ( ಸತ್+ಭಾವ= ಸದ್ಭಾವ ಎಂಬುದು ಅದರ ಸಂಧಿಯು ) ತನ್ನಭಾವವನ್ನು ಸತ್‌ಮಯವಾಗಿ ಸಿದ್ಧಗೊಳಿಸಿ ಕೊಳ್ಳಬೇಕೆಂಬುದೇ ಇದರ ಅರ್ಥವು. ತತ್ ಎಂಬ ವಸ್ತುವೇ ಸತ್ ಆಗಿರುತ್ತದೆ. ಆದುದರಿಂದ ತನ್ಮಯತೆ ಗಳಿಸುವದೆಂದರೆ ತನ್ಮಯತೆ ಪಡೆಯುವದೇ ಸರಿ ! ಸದ್ಭಾವ ಹಸ್ತಪಡೆದವರಿಗೆ ಎಲ್ಲೆಲ್ಲಿಯೂ ಸದ್ವಸ್ತುವೇ (ಚಿತ್‌ಸ್ವರೂಪವೇ) ತೋರುವದು.

ಐಕ್ಯನ ಭಕ್ತಿಯು ಪರಮ ಭಕ್ತಿಯು. ತಾನು ದೃಷ್ಟಿಸುವದೆಲ್ಲ ಸಮ ಅಂದರೆ ಒಂದೇ ವಿಧದ ರಸದಲ್ಲಿ ಕಾಣುವದು; ಇಲ್ಲವೇ

ಒಂದೇ ಬಗೆಯ ರಸಕ್ಕೆ ತಂದು ಭಜಿಸುವದೇ ಐಕ್ಯನ ಭಕ್ತಿಯು. ಈ ಭಕ್ತಿಯಿಂದ ಮಹಾಲಿಂಗದ ಚಿತ್ ಶಕ್ತಿಯನ್ನು ಶಾಂತ್ಯಾತೀತೋತ್ತರ ಕಲೆಯಲ್ಲಿ ರೂಪಾಂತರಿಸಿಕೊಳ್ಳುವದು ಐಕ್ಯನ ಉದ್ದಿಷ್ಟವಾಗಿರುವದು. ಚಿತ್‌ಶಕ್ತಿಯೇ ಜಗ ನಿರ್ಮಾಣಕ್ಕೆಂದು ಪರಶಿವನಿಂದ ( ಸ್ಥಳದಿಂದ ) ಅವತರಿಸಿದಳು. ಆಕೆಯ ಲೀಲೆಯ ಫಲವೇ ಈ ವಿಶ್ವವಾಗಿರುವದು. ಸಮರಸತೆಯಿಂದ ಆಕೆಯನ್ನು ಶಾಂತ್ಯಾತೀತೋತ್ತರದಲ್ಲಿ ಒಯ್ಯುವದು ಐಕ್ಯನಿಗೆ ಸಹಜ ಸಿದ್ಧಿಸುವದೆನ್ನಲು, ಅದಾವ ತೊಂದರೆಯೂ ಇಲ್ಲ. ಸಂಪೂರ್ಣ ವಿಶ್ವವೂ ಅದರ ಪ್ರತಿಯೊಂದು ಪದಾರ್ಥವೂ ಒಂದೇ ಒಂದು ರಸವಾದರೆ ಅದೇ ಏಕಮೇವಾದ್ವಿತೀಯತ್ವವು. ಈ ಬಗೆಯಿಂದ ಚಿಚ್ಛಕ್ತಿಮಯವಾದ ವಿಶ್ವವೆಲ್ಲ ವಿಶ್ವೇಶ್ವರನಲ್ಲಿ ಐಕ್ಯತ್ವವನ್ನು ಹೊಂದುವದು. ಆಗ ಐಕ್ಯನು ಮುಗ್ಧನೂ, ಸ್ವತಂತ್ರನೂ ಸ್ವಸ್ಥನೂ ಶಾಂತ್ಯಾತೀತೋತ್ತರನೂ ಆಗುವನು. ಇದೇ ಮಹಾಲಿಂಗದಲ್ಲಿ ಕರ್ಪುರವು ಉರಿಯುಂಡಂತೆ ಕರಗಿಹೋಗುವದು.

## ಸಂವರ್ಧಿನಿ ಷಟ್ಪದಿ

( ೩ + ೫ . ಮಾತ್ರೆಯುಗಳು )

ಲಿಂಗಧಾರಿಗಳು ಹಸ್ತಕಲೆಗಳಂ । ಸಾಂಗದಿಂ ಪಡೆದು
ಜನ್ಮತಾಳ್ವುದಂ ।
ಭಂಗಿಸದೆ ಸ್ವಸ್ಥಮೆಂತು ಜೀವಿಪರೊ ತಿಳಿಯದೈ ಶಿವಶಿವಾ ॥
ತುಂಗ ಸಂಸಾರ ಕಂಡು ಬೆರಗಾಗಿ । ಸ್ವಾಂಗ ಮೊರೆವುದಕೆ
ವಿಷಯ ಭೋಗಿಸುತೆ ।
ಕಂಗಳಂಮುಚ್ಚಿ ನಡೆದು ಮಾನ ಪತೆ ವ್ಯರ್ಥದಿಂ ಕಳೆವರು ॥೧॥

( ಇದರಲ್ಲಿ ಮೂರು ಹಾಗೂ ಐದು ಮಾತ್ರೆಯ ಗಣಗಳಿವೆ. ಮೂರಕ್ಕೆ ಒಂದು ಮತ್ತು ಐದಕ್ಕೆ ಎರಡು ಕೂಡಿ ಮೂರು ಪೆಟ್ಟು ಹಾಕಿ ಭಾಮಿನಿಯಂತೆ ಅನ್ನಬೇಕು.)

( ೧ ) **ತಿದ್ದುಪಡೆ**:- ಶಿವಾನುಭವದ ಫೆಬ್ರುವಾರಿ ೧೯೫೧ರ ಸಂಚಿಕೆಯಲ್ಲಿ ಪ್ರಸಿದ್ಧವಾದ" ಷಟ್-ತ್ರಿಂಶತ್ ಲಿಂಗಾರ್ಪಿತ "ಪಟದಲ್ಲಿ ಬಲಗಡೆಯಿರುವ ಮಹಾಲಿಂಗದ ಮನೆಯ ಕೆಳಗಿರುವ "**ಸರ್ವದರ ನಾದ**" ಎಂದು ಬಿದ್ದಿರುವದನ್ನು "**ಸರ್ವದರ ತೃಪ್ತಿ**" ಎಂದು ತಿದ್ದಿಕೊಂಡು ಓದಬೇಕು.

( ೨ ) ಅದೇ ಮೇರೆಗೆ ಪಟದ ಕೆಳಗಡೆಯ ಮಹಾಲಿಂಗದ ಮುಂದಿನ ಐದು ಮನೆಗಳಲ್ಲಿ ಗಂಧಾದಿ ನಾದ ಪರ್ಯಂತ ಶಬ್ದಗಳ ಮುಂದೆಯೂ ತೃಪ್ತಿ ಎಂಬ ಹೊಸ ಶಬ್ದವನ್ನು ಜೋಡಿಸುವದು ವಿಹಿತವದೆ.

( ೨ ) **ತಿದ್ದುಪಡೆ**:-"ಶಿವಾನುಭವ" ಜೂನ೫೧ ಸಂಚಿಕೆಯಲ್ಲಿ ಪುಟ೨೧೮ ಅಷ್ಟಾದಶ ಲಿಂಗಾರ್ಪಿತ ಪಟದಲ್ಲಿ ೬ ನೆಯ ಜಂಗವು ಲಿಂಗದ ಮನೆಯ ಕೆಳಗೆ "**ಭೋಗ್ಯದ**" ಬದಲು "**ಚೋಹ್ಯ**" ಎಂದು ಇರತಕ್ಕದ್ದು.

---

## ಶಿವಾನುಭವ ಪತ್ರಿಕೆಗೆ ಕಾಣಿಕೆ.

( ೧ ) ಶ್ರೀ ಗುರುಸಿದ್ದಪ್ಪ ದುಂಡಪ್ಪ ಸುಣಧೋಳಿ ಮು-ಐನಾಪುರ ತಾ || ಅಥಣಿ ಜಿ || ಬೆಳಗಾವ ಇವರು ತಮ್ಮ ಚಿರಂಜೀವರ ಲಗ್ನವು ವಿಜಾಪುರದಲ್ಲಿ ಆದಕಾಲಕ್ಕೆ ಶಿವಾನುಭವ ಪತ್ರಿಕೆಗೆ ಕಾಣಿಕೆಯಾಗಿ ೫ ರೂಪಾಯಿಗಳನ್ನು ಕೊಟ್ಟಿರುವರು.

( ೨ ) ಧಾರವಾಡ ಜಿಲ್ಲಾ ಬೆಲವಂತರ ಹಿರೇಮಠದ ಲಿಂಗೈಕ್ಯ ಶ್ರೀ ಚನ್ನಬಸವೇಶ್ವರ ಶಿವಯೋಗಿಗಳವರ ೧೬ನೇ ಪುಣ್ಯತಿಥಿಯ ಮಹೋತ್ಸವವನ್ನು ಶ್ರೀ ಸಿದ್ಧರಾಮೇಶ್ವರ ಸ್ವಾಮಿಗಳು ಜರುಗಿಸಿದ ಕಾಲದಲ್ಲಿ ಶಿವಾನುಭವ ಪತ್ರಿಕೆಗೆ ಶ್ರೀ ಸ್ವಾಮಿಗಳವರು ೨ ರೂಪಾಯಿಗಳನ್ನು ಕಾಣಿಕೆಯಾಗಿ ಕಳಿಸಿರುವರು.

**ಮೇಲ್ಕಂಡ ಮಹಾನುಭಾವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.**

**ಸಂಪಾದಕ-ಶಿವಾನುಭವ**

# ರಾಗಾಧ್ಯಾಯ

(ಲೇಖಕ :— ಶ್ರೀ ಜಿ. ಎಸ್. ಜುಕ್ತಿಮಠ. ಗಾಯನ ಕಲಾ ಕೋವಿದ

ಬಿಜಾಪೂರ.)

## ಕಲ್ಯಾಣಿ ಮೇಲ ಜನ್ಯ ರಾಗಗಳು

ಕಲ್ಯಾಣಿ ರಾಗದಲ್ಲಿ ೧೩ ರಾಗಗಳು ಹುಟ್ಟಿವೆಯೆಂದು ತಿಳಿಯುತ್ತದೆ. ಇವುಗಳಲ್ಲಿ ಭಾಗಗಳು ಮಾಡಲ್ಪಟ್ಟಿವೆ. (೧) ಮಧ್ಯಮ ವರ್ಜಿತ ರಾಗಗಳು (೨)ಒಂದು ಮಧ್ಯಮ ಹತ್ತುವ ರಾಗಗಳು(೩)ಎರಡು ಮಧ್ಯಮ ಹತ್ತುವ ರಾಗಗಳು. ಭೂಪಾಲಿ (ಭೂಪ) ಶುದ್ಧ ಕಲ್ಯಾಣ, ಚಂದ್ರ ಕಾಂತ, ಜಯಂತ, ಮಧ್ಯಮ ವರ್ಜಿತರಾಗಗಳೆಂದು ಹೇಳಲ್ಪಟ್ಟಿವೆ. ಮಾಲಶ್ರೀ, ಇಮನ (ಯಮನ) ಹಿಂಡೋಲ ಒಂದು ಮಧ್ಯಮ ಹಚ್ಚಲ್ಪಡುವರಾಗಗಳೆಂದು ಹೇಳಿದೆ. ಛಾಯಾ ನಟ, ಹಮೀರ, ಶ್ಯಾಮ, ಕಾಮೋದ, ಕೇದಾರ, ಗೌಡಸಾರಂಗ, ಎರಡೂ ಮಧ್ಯಮಗಳಿಂದ ಶೋಭಿಸುವ ರಾಗಗಳಿರುತ್ತವೆ.

ಭೂಪಾಲಿ ರಾಗದಲ್ಲಿ ಮಧ್ಯಮ ಮತ್ತು ನಿಷಾಧ ಹತ್ತುವದಿಲ್ಲ. ಶುದ್ಧಕಲ್ಯಾಣವು ಆರೋಹದಲ್ಲಿ ಭೂಪಾಲಿಯಂತೆ ಹೋಗುತ್ತದೆ. ಈ ರಾಗವು ಪಂಚಮ ಪ್ರಧಾನ ರಾಗವಿರುವದರಿಂದ ಭೂಪಾಲಿಗಿಂತ ಬೇರೆಯಾಗುತ್ತದೆ. ಚಂದ್ರಕಾಂತಕ್ಕೆ ಆರೋಹದಲ್ಲಿ ಮಧ್ಯಮ ಹತ್ತುವದಿಲ್ಲ ರಾತ್ರಿಯಲ್ಲಿ ಗಾಯನ ಮಾಡುವದರಿಂದ ಆನಂದದಾಯಕ ರಾಗವಿದೆ. ಯಮನರಾಗವು ಸಂಪೂರ್ಣವಿರುತ್ತದೆ. ಎರಡು ಮಧ್ಯಮ ರಾಗದಲ್ಲಿ ಹೀಗೆ ಸಮ್ಮತವಿದೆ. ಆರೋಹದಲ್ಲಿ ನಿಷಾದ ವಕ್ರವಿರುತ್ತದೆ. ಅವರೋಹದಲ್ಲಿ ಮಧ್ಯಮ ವಕ್ರವಿರುತ್ತದೆ. ಸ ನಿ ಧ ಪ ಮ ಪ ನ ಪ ಗ ಮ ರಿ ಸ

ಈರೀತಿ ಅವರೋಹದಲ್ಲಿ ಬರುತ್ತವೆ. ಅನುಲೋಮ (ಆರೋಹ) ದಲ್ಲಿ ರಾಗದ ಮುಖ್ಯ ಪ್ರಧಾನ ಅಂಗಗಳನ್ನು ಕಳಗೆ ಕೊಡಲಾಗಿದೆ. ಮೊದಲನೇ ಪ್ರಹರದಲ್ಲಿ ಅನ್ನಲು ಯೋಗ್ಯವಾದವುಗಳು.

## (೧) ಕಲ್ಯಾಣಿಮೇಲ ಜನ್ಯ ರಾಗಗಳು.

(೧) ಇಮನ (ಯಮನ) (೨) ಭೂಪಾಲಿ (೩) ಶುದ್ಧ ಕಲ್ಯಾಣ (೪) ಚಂದ್ರಕಾಂತ (೫) ಜಯತ ಕಲ್ಯಾಣ (೬) ಮಾಲಶ್ರೀ (೭) ಹಿಂಡೋಲ (೮) ಹಮೀರ (೯) ಕೇದಾರ (೧೦) ಕಾಮೋದ (೧೧) ಶ್ಯಾಮ (೧೨) ಛಾಯಾನಟ್ (೧೩) ಗೌಡಸಾರಂಗ.

## (೨) ವೇಲಾವಲೀ (ಬಿಲಾವಲ) ಬೇಲಾವಲಿ ಜನ್ಯ ರಾಗಗಳು.

(೧) ಶುದ್ಧಬಿಲಾವಲ (೨) ಶುಕ್ಲಬಿಲಾವಲ (೩) ಅಲ್ಹೈಯಾ ಬಿಲಾವಲ (೪) ದೇವಗಿರಿ (೫) ಯಮುನೀ (೬) ಕಕುಭ (೭) ನಟಬಿಲಾವಿಲ (೮) ಲಚ್ಛಾಶಾಖ (೯) ಸರಪರದಾ (೧೦) ಬಿಹಂಗ (೧೧) ದೇಶಿಕಾರ (೧೨) ಹೇಮ ಕಲ್ಯಾಣ (೧೩) ನಟರಾಗ (೧೪) ಮಾಂಡ (೧೫) ದುರ್ಗಾ (೧೬) ಪಹಾಡಿ (೧೭) ಮಲುಹಾ ಕೇದಾರ (೧೮) ಶಂಕರಾ. ಇವುಗಳ ಬಗ್ಗೆ ಹಿಂದಿನಿಂದ ಬರೆಯುವೆನು.

## (೩) ಖಮಾಜ ಮೇಲ ಜನ್ಯ ರಾಗಗಳು.

(೧) ಖಮಾಜ (೨) ಝಿಂಝೂಟಿ (೩) ಸೋರಠಿ (೪) ದೇಸ (೫) ಖಂಬಾವತಿ (೬) ದುರ್ಗಾ (೭) ರಾಗೇಶ್ವರಿ (೮) ತೈಲಂಗಿ (೯) ಜಯಾವಂತಿ (೧೦) ಗಾರಾ (೧೧) ತಿಲಕ ಕಾಮೋದ.

ಇವುಗಳಲ್ಲಿ ಸಂಗೀತ ತಜ್ಞರು ಎರಡು ಭಾಗ ವಿಂಗಡಿಸಿದ್ದಾರೆ. ಜೀವ ಸ್ವರ ಸದ ಭೇದದಿಂದಲೇ ಪ್ರಸಿದ್ಧವಿರುತ್ತವೆ. ಖಮಾಚ, ಝಿಂಝೋಟಿ, ದುರ್ಗಾ, ಖಂಬಾವತಿ, ತಿಲಂಗ, ರಾಗೇಶ್ವರೀ, ಗಾರಾ, ಇವೆಲ್ಲ ರಾಗ ಗಳಲ್ಲಿ ಗಾಂಧಾರವಾದಿ ಸ್ವರವನ್ನಿಟ್ಟಿದ್ದಾರೆ. ಸೋರಠಿ, ದೇಸ, ಜಯಾ ವಂತಿ, ( ಜಯುಜಯುವಂತಿ ) ತಿಲಕಾಮೋದ, ಇವುಗಳಲ್ಲಿ ಋಷಭ ವಾದಿಸ್ವರವಿದೆ.

ಅನುಲೋಮ ( ಆರೋಹ ) ವಿಲೋಮ ( ಅವರೋಹ ) ದಲ್ಲಿ ಝಿಂಝೋಟಿ, ಸಂಪೂರ್ಣ ರಾಗವಿದೆ. ಲೋಕಪ್ರಸಿದ್ಧ ಖಮಾಚ ರಾಗ ಆರೋಹದಲ್ಲಿ ಋಷಭ ಹತ್ತುವದಿಲ್ಲ. ದುರ್ಗಾರಾಗದಲ್ಲಿ ಋಷಭ, ಪಂಚಮ ಸ್ವರಗಳು ಶಕ್ತಿ ಇಲ್ಲದ ಸ್ವರಗಳೆಂದು ಗಣಿಸಲ್ಪಟ್ಟಿದೆ. ತಿಲಂಗರಾಗದಲ್ಲಿ ಋಷಭ, ದೈವತ ಹತ್ತುವದಿಲ್ಲ. ರಾಗೇಶ್ವರಿ ರಾಗದ ಅವರೋಹದಲ್ಲಿ ಋಷಭ ಹತ್ತುವದಿಲ್ಲ. ಖಮಾಚ ನಿಯಮದಿಂದ ಖಂಬಾವತಿರಾಗವು ಭ್ರಷ್ಟ ರಾಗವೆಂದು ಹೇಳಿದೆ.

ಝಿಂಝೋಟಿ ರಾಗದ ಅಂಗಸ್ವರಗಳಿಂದಲೇ ಮಾನಿಸಲ್ಪಡುವ ಗಾರಾ ರಾಗವು ಮಂದ್ರಮಧ್ಯಮಕ್ಕೆ ಹೆಚ್ಚುಸ್ಥಾನವಿದೆ. ಸೋರಠಿ ಆರೋಹ ದಲ್ಲಿ ದೈವತ, ಗಂಧಾರ, ಹತ್ತುವದಿಲ್ಲ. ದೇಸ್ ಸಂಪೂರ್ಣವಿದೆ. ಪಂಚಮ, ಋಷಭ ಸ್ವರಗಳ ಅಂಗದಿಂದ ಮತ್ತು ಎರಡೂ ಗಂಧಾರ ಸ್ವರಗಳಿಂದ ಶೋಭಿಸುತ್ತವೆ. ಬಿಹಂಗ ಮತ್ತು ದೇಸ ರಾಗಗಳ ಅಂಗಸ್ವರಗಳಿಂದ ತಿಲಕಕಾಮೋದ ರಾಗವು ಮಾನಿಸಲ್ಪಟ್ಟಿದೆ.

## ( ೪ ) ಭೈರವ ಮೇಲ ಜನ್ಯ ರಾಗಗಳು.

ಭೈರವ ರಾಗದಲ್ಲಿ ೧೩ ರಾಗಗಳು ಹೊರಟಿವೆ. ಉತ್ತರಾಂಗ ಪ್ರಧಾನವಿದ್ದ ರಾಗಗಳು ಪ್ರಾತಃಕಾಲಕ್ಕೆ ಗಾಯನ ಮಾಡಲು ಯೋಗ್ಯ ವಾದವುಗಳು.

( ೧ ) ಭೈರವ, ರಾಮಕಲಿ, ಕಾಲಿಂಗದಾ, ( ಕಲಿಂಗ ) ( ೪ ) ಜೋಗಿಯಾ ( ೫ ) ಬಂಗಾಲ ( ೬ ) ವಿಭಾಸ ( ೭ ) ಮೇಘ

ರಂಜನಿ (೮) ಪ್ರಭಾತ (೯) ಸೌರಾಷ್ಟ್ರ (೧೦) ಶಿವಭೈರವ (೧೧) ಆನಂದ ಭೈರವ (೧೨) ಗುಣಕರೀ (ಗುಣಕಲಿ) (೧೩) ಅಹೀರ ಭೈರವ.

## (೫) ಪೂರ್ವಿಮೇಲ ಜನ್ಯ ರಾಗಗಳು.

ಪೂರ್ವಿರಾಗದಲ್ಲಿ ೧೦ ರಾಗಗಳು ಹೊರಟಿವೆ. (೧) ಶ್ರೀ (೨) ಗೌರೀ (೩) ಮಾಲವಿ (೪) ಟಂಕಿ (೫) ಪೂರ್ವಿ (೬) ಜೇತಾಶ್ರೀ (೭) ತ್ರಿವೇಣಿ (೮) ಪೂರಿಯಾಧನಶ್ರೀ ಈ ಎಂಟು ರಾಗಗಳು ಸಾಯಂಕಾಲ ಗಾಯನ ಮಾಡಲು ಯೋಗ್ಯವಾದವು ಗಳು. ಬಸಂತಿ (ಬಸಂತ) ಪರಜ ಇವು ಎರಡುರಾಗಗಳು ರಾತ್ರಿಯ ಪ್ರಹರದಲ್ಲಿ ಅನ್ನಲು ಯೋಗ್ಯವಾಗಿವೆ.

ಪೂರ್ವಿರಾಗದಲ್ಲಿ ಎರಡೂ ಮಧ್ಯಮ ಹತ್ತುತ್ತವೆ. ಇದು ಸಂಪೂರ್ಣ ವರ್ಗದ ರಾಗವಿದೆ. ಟಂಕಿರಾಗದಲ್ಲಿ ಮಧ್ಯಮಸ್ವರವು ಅಲ್ಪವಿದೆ. ಶ್ರೀ ರಾಗದ ಆರೋಹದಲ್ಲಿ ದೈವತ, ಗಂಧಾರ ಹತ್ತುವದಿಲ್ಲ. ತ್ರಿವೇಣಿ ರಾಗ ದಲ್ಲಿ ಮಧ್ಯಮ ಹತ್ತುವದಿಲ್ಲ. ಗೌರಾಗವು ಕಾಲಿಂಗಡಾ ರಾಗದ ಅಂಗ ಸ್ವರಗಳಿಂದ ಕೂಡಿದೆ. ಜೇತಾಶ್ರೀ ರಾಗದಲ್ಲಿ ದೈವತ, ಗಂಧಾರ ಹತ್ತು ವದಿಲ್ಲ. ಮಾಲವಿ ರಾಗದ ಆರೋಹದಲ್ಲಿ ನಿಷಾಧ ಹತ್ತುವದಿಲ್ಲ ಅವರೋಹ ದಲ್ಲಿ ದೈವತ ದುರ್ಬಲವಿದೆ. ಬಸಂತರಾಗದಲ್ಲಿ ಎರಡೂ ಮಧ್ಯಮ ಹತ್ತು ತ್ತವೆ. ಪರಜರಾಗದ ಆರೋಹದಲ್ಲಿ ಪಂಚಮ ಸ್ವರ ಹತ್ತುವದಿಲ್ಲ. ಮತ್ತು ಮಧ್ಯಮ, ಗಂಧಾರ ಇವುಗಳ ಬರುವಿಕೆಯಿಂದ ಮಧುರತೆಯು ಹೆಚ್ಚಿದೆ. ಎರಡೂ ಮಧ್ಯಮ ಮಾನಿಸಲ್ಪಟ್ಟಿವೆ.

## (೬) ಮಾರವಾಮೇಲ ಜನ್ಯರಾಗಗಳು.

ಮಾರವಾ ರಾಗದಲ್ಲಿ ೧೨ ರಾಗಗಳು ಉದಯವಾಗಿವೆ. ಆರು ರಾಗಗಳು ಸಾಯಂಕಾಲ ಗಾಯನ ಮಾಡಲು ಯೋಗ್ಯವಾದವುಗಳು. ಆರು ರಾಗಗಳು ಪ್ರಾತಃಕಾಲ ಗಾಯನ ಮಾಡಲು ಯೋಗ್ಯವಾದವುಗ ಳುಂಟು. (೧) ಪೂರಿಯಾ (೨) ಮಾರವಾ (೩) ಜೇತಾ (೪) ಗೌರಾ (೫) ಸಾಜಗಿರಿ (೬) ವರಾಟಿ ಇವುಆರು ಸಾಯಂ

ಕಾಲದ ರಾಗಗಳು. (೧) ಲಲಿತ (೨) ಪಂಚಮ (೩) ಭಟ್ಟಿಯಾರ (೪) ವಿಭಾಸ (೫) ಭಂಖಾರ (೬) ಸೋಹನಿ ಇವು ಆರು ರಾಗಗಳು ಪ್ರಾತಃಕಾಲಕ್ಕೆ ಯೋಗ್ಯವಾಗಿವೆ. ಸಂಗೀತ ತಜ್ಞರ ಅಭಿಪ್ರಾಯದಲ್ಲಿ ಪೂರಿಯಾ ಮತ್ತು ಮಾರವಾ ರಾಗದಲ್ಲಿ ಪಂಚಮ ಸ್ವರ ಹತ್ತುವದಿಲ್ಲ. ಪೂರಿಯಾ ರಾಗವು ಪೂರ್ವಾಂಗ ಪ್ರಧಾನ ರಾಗವಿದೆ. ಸಾಯಂಕಾಲಕ್ಕೆ ಯೋಗ್ಯವಿದೆ. ಸೋಹನಿ ರಾಗವು ಉತ್ತರಾಂಗ ಪ್ರಧಾನ ರಾಗವಿದೆ. ಮಾರವಾ ರಾಗವು ಹಿಂಡೋಲ ರಾಗದ ಅಂಗಸ್ವರಗಳಿಂದ ಕೂಡಿದೆ. ಈ ರಾಗದಲ್ಲಿ ಋಷಭ, ದೈವತವಾದಿ, ಸಂವಾದಿ ಸ್ವರಗಳಿವೆ. ಪೂರಿಯಾ ರಾಗದಲ್ಲಿ ಮಧ್ಯಮ, ಗಂಧಾರ ವಾದಿ ನಿಷಾಧ ಸಂವಾದಿ ಸ್ವರವಿದೆ. ಸೌಜಗಿರಿಯಲ್ಲಿ ಎರಡೂ ದೈವತ ಎರಡೂ ಮಧ್ಯಮ ಹತ್ತುತ್ತವೆ- ವಿಭಾಸ ರಾಗದ ಪ್ರತಿಮೂರ್ತಿಯೋ ಮರಾಟಿ ರಾಗವಿದೆ. ಈರಾಗವನ್ನು ಸಾಯಂಕಾಲಕ್ಕೆ ಅನ್ನಲು ಯೋಗ್ಯವಿದೆ. ಜೈತ್ರರಾಗದಲ್ಲಿ ಎರಡೂ ದೈವತ ಎರಡೂ ಋಷಭ ಹತ್ತುತ್ತವೆ ಕಲ್ಯಾಣಿಮೇಲದಿಂದ ಹುಟ್ಟಿದ ಜಯುತಕಲ್ಯಾಣ ರಾಗವು ಇದಕ್ಕೆ ಬಹಳ ಸಮೀಪವಿದೆ ಅಂದರೆ ಈರಾಗದಂತೆಯೋ ಹೋಲಿಕೆಯಿದ್ದ ಕಾರಣ ರಾಗ ಬೆಳಿಸುವ ಮುಂದೆ ಲಕ್ಷದಲ್ಲಿರಬೇಕು. ಲಲಿತ ಮತ್ತು ಪಂಚಮ ರಾಗದಲ್ಲಿ ಪಂಚಮ ಸ್ವರವು ಹತ್ತುವದಿಲ್ಲ. ಲಲಿತ, ಪಂಚಮ ಈರಾಗಗಳು ಎರಡೂ ಮಧ್ಯದಿಂದ ಕೂಡಿವೆ. ಈ ರಾಗಗಳು ಅರ್ಧರಾತ್ರಿಯಲ್ಲಿ ಗಾಯನ ಮಾಡಲು ಯೋಗ್ಯವಾಗಿವೆ. ಬಹಳ ಮಂಜುಳವಾದ ರಾಗಗಳಿವೆ. ಲಲಿತ ರಾಗದ ಅಂಗಸ್ವರಗಳು ಸ್ವತಂತ್ರವಿದೆ ಈ ರಾಗವು ಅವಶ್ಯಭೇದ ದರ್ಶಕವಾಗಿದೆ. ಪಂಚಮ ರಾಗವು ಎರಡೂ ಮಧ್ಯಮದಿಂದ ಕೂಡಿದೆ ಹಿಂಡೋಲ ರಾಗದ ಅಂಗಸ್ವರಗಳಿಂದಲೇ ಕೂಡಿಕೊಂಡು ಸೌಮ್ಯರೀತಿಯಲ್ಲಿ ಬೇರೆ ಎಂದು ತೋರ್ಪಡಿಸಲು ಪ್ರಯತ್ನ ಪಡುತ್ತದೆ. ಸೋಹನಿ ರಾಗದಲ್ಲಿ ಪಂಚಮಸ್ವರದ ಅಭಾವವಿದೆ. ದೈವತ ಗಂಧಾರ ಸಂಗತಿ ಸುಂದರವಿದೆ. ದ್ವಿತೀಯ ಪಂಚಮರಾಗವು ಮತ್ತು ಭಂಕಾರ ಭಟ್ಟಿಯಾರ, ವಿಭಾಸ, ಈ ರಾಗಗಳು ಪಂಚಮರಾಗದಿಂದ ಕೂಡಿವೆ. ಪಂಚಮರಾಗದಲ್ಲಿ ಲಲಿತ ರಾಗದ ಅಂಗವಿದೆ. ಭಂಖಾರ ರಾಗದಲ್ಲಿ ಮಾತ್ರ ಇರುವದಿಲ್ಲ. ಭಟ್ಟಿಯಾರ ಸಂಪೂರ್ಣ ರಾಗವಿದೆ. ಮಧ್ಯಮ ವಾದಿಸ್ವರವಿದೆ ವಿಭಾಸ ರಾಗವು ಕೂಡಾ ಸಂಪೂರ್ಣವಿದೆ. ಮತ್ತು ಗಂಧಾರ, ಪಂಚಮ

ಸ್ವರಗಳ ಸಂಗತಿಯಿಂದ ಕೂಡಿದೆ. ಮಧ್ಯಮ, ನಿಷಾಧ ಸ್ವರಗಳು ದುರ್ಬಲವಾಗಿವೆ. ಪ್ರಾತಃಕಾಲದಲ್ಲಿ ಗಾಯನಕ್ಕೆ ಅತ್ಯಾನಂದದಾಯಕವಿದೆ.

### ಸೂಚನೆ

ಎಲ್ಲ ಮೇಲ ರಾಗಗಳಲ್ಲಿ ಪೂರ್ವರಾಗ ಉತ್ತರರಾಗ ಹೀಗೆ ಭಾಗಗಳಿವೆ. ಇದು ಸಂಗೀತ ತಜ್ಞರಮತವಾಗಿದೆ. ಪೂರ್ವರಾಗ ಉತ್ತರರಾಗ ಈರಾಗಗಳು ತಮ್ಮ ಜನಕ ( ಮೇಲ ) ರಾಗಗಳ ಪಡಿನೆಳಲೇ ಆಗಿವೆ. ಹೀಗೆ ಬಲ್ಲವರ ಅಭಿಪ್ರಾಯವಾಗಿದೆ. ಮಧ್ಯಮ ಸ್ವರದಿಂದ ಶೋಭಿಸುವ ರಾಗಗಳು ರಾತ್ರಿಯಲ್ಲಿ ಹಾಗು ಹಗಲಿನಲ್ಲಿ ಗಾಯನ ಮಾಡಲುಯೋಗ್ಯವಾಗಿವೆ. ಪಂಡಿತರ ಮುಖಾಂತರ ವೇಳೆಗನುಸರಿಸಿ ಗಾಯನ ಮಾಡಲು ರಾಗಗಳನ್ನು ವ್ಯವಸ್ಥಿತಗೊಳಿಸಿದೆ ಕಾರಣ ರಾಗಗಳಲ್ಲಿ ಮೂರು ಭಾಗಮಾಡಲಾಗಿದೆ. ಪ್ರಥಮ ವರ್ಗದಲ್ಲಿ ಋಷಭ, ಗಂಧಾರ, ದೈವತ ಈ ಮೂರು ಸ್ವರಗಳು ತೀವ್ರವಿರತಕ್ಕವುಗಳು. ದ್ವಿತಿಯ ವರ್ಗದಲ್ಲಿ ಸಂಧಿಪ್ರಕಾಶನದ ರಾಗಗಳು. ತೃತೀಯ ವರ್ಗದಲ್ಲಿ ಗಂಧಾರ, ನಿಷಾಧ ಕೋಮಲಸ್ವರಗಳಿಂದ ಕೂಡಿದವುಗಳು. ಈ ರೀತಿ ಗಾಯನವೇಳೆಯನ್ನು ನಿರ್ಣಯಿಸಲಾಗಿದೆ. ಮುಂಜಾನೆಯ ರಾಗಗಳು, ಸಾಯಂಕಾಲದ ರಾಗಗಳು, ಸಂಧಿಪ್ರಕಾಶ ವರ್ಗದ ರಾಗಗಳಲ್ಲಿವೆ. ಇದು ಸಮ್ಮತಿಸಲಾಗಿದೆ. ಇವುಗಳಾದ ಮೇಲೆ ಋಷಭ, ಗಂಧಾರ ದೈವತ ತೀವ್ರಸ್ವರಗಳಿರುವ ರಾಗಗಳನ್ನು ಹೇಳಬೇಕು. ಗಂಧಾರ ನಿಷಾಧ ಕೋಮಲ ಸ್ವರಗಳಿಂದ ರಾಗಗಳನ್ನು ವಿಶೇಷತಃ ಮಧ್ಯಾನ್ಹದಲ್ಲಿ ಮತ್ತು ಅರ್ಧರಾತ್ರಿಯಲ್ಲಿ ಅನ್ನುವದು ಯೋಗ್ಯವಾಗಿದೆ.

### ( ೭ ) ಕಾಪಿಮೇಲ ಜನ್ಯ ರಾಗಗಳು.

( ೧ ) ಧನಾಶ್ರೀ ( ೨ ) ಸೈಂಧವಿ ( ಸಿಂಧೂರಾ ) ( ೩ ) ಕಾಫಿ ( ೪ ) ದಾನಿ ( ೫ ) ಭೀಮಪಲಾಸಿ ( ೬ ) ಪಟಮಂಜರಿ ( ೭ ) ಪಟದೀಪ ( ೮ ) ಹಂಸಕಂಕಣಿ ( ೯ ) ವಾಗೀಶ್ವರೀ ( ೧೦ ) ಸಹಾನಾ ( ೧೧ ) ಸೂಹಾ ( ೧೨ ) ಸುಘರಾಯಿ ( ೧೩ ) ನಾಯಕಿ ಕಾನ್ಹರಾ ( ೧೪ ) ದೇವಸಾಗ ( ೧೫ ) ಪೀಲು ( ೧೬ ) ಬಹಾರ ( ೧೭ ) ವೃಂದಾವನಿ ಸಾರಂಗ ( ೧೮ ) ಮಧ್ಯಮಾದಿ ( ೧೯ ) ಸಾಮಂತ ( ೨೦ ) ಶುದ್ಧಸಾರಂಗ ( ೨೧ ) ಮಿಯಾಸಾರಂಗ

( ೨೨ ) ಬಡಹಂಸ ( ೨೩ ) ಶುದ್ಧಮಲ್ಹಾರ ( ೨೪ ) ಮೀಯಾ ಮಲ್ಹಾರ ( ೨೫ ) ಗೌಡಮಲ್ಹಾರ ( ೨೬ ) ಮೇಘ ( ೨೭ ) ಸೂರ ಮಲ್ಹಾರ ಮಿಶ್ರಿತ ಸೈಂಧವಿ ( ಸಿಂಧೂರ ) ದ್ವಿತೀಯಮಂಜರಿ ಇದು ಶುದ್ಧಮೇಲದಲ್ಲಿ ಹುಟ್ಟಿದೆ. ಅಪರಾ ಸೂಹಾ ಈ ರಾಗವು ಮೇಘ ಮತ್ತು ದರ್ಬಾರಿರಾಗಗಳು ಕೂಡಿ ಈ ರಾಗವಾಗಿದೆ. ಅಪರಾಪೀಲು ಧೇನುಮೇಲದಲ್ಲಿ ಹುಟ್ಟಿದೆ. ಅನ್ಯಗೌಡಮಲ್ಹಾರ ಈ ರಾಗದಲ್ಲಿ ಮಧ್ಯ ಮವಾದಿ ಇರುವದರಿಂದ ಗೌಡಮಲ್ಹಾರದಿಂದ ತುಸು ಬೇರೆಯಿದೆ.

## ( ೮ ) ಆಸಾವರೀ ಮೇಲ ಜನ್ಯರಾಗಗಳು.

( ೧ ) ಆಸಾವರೀ ( ೨ ) ಜೌನಪುರಿ ( ಜೀವನಪ್ಪುರಿ ) ( ೩ ) ದೇವಗಂಧಾರ ( ೪ ) ಸಿಂಧುಭೈರವಿ ( ೫ ) ದರಬಾರಿ ಕಾನಡಾ ( ೬ ) ದೇಶಿ ( ೭ ) ಷಡ್‌ರಾಗ ( ೮ ) ಕೌಶಿಕ ಕಾನಡಾ ( ೯ ) ಅಡಾಣ ( ೧೦ ) ನಾಯಕೀ ಕರ್ನಾಟ ದ್ವಿತೀಯ ಗಂಧಾರ ದೈವತ ವಾದಿ ಇದೆ.

## ( ೯ ) ಭೈರವಿಮೇಲ ಜನ್ಯ ರಾಗಗಳು

( ೧ ) ಭೈರವಿ ( ೨ ) ಮೂಲಕೋಶ ( ೩ ) ಆಸಾವರೀ ( ೪ ) ಧನಾಶ್ರೀ ( ೫ ) ವಿಲಾಸ ಖಾನಿತೋಡಿ

## ( ೧೦ ) ತೋಡಿಮೇಲ ಜನ್ಯರಾಗಗಳು.

( ೧ ) ತೋಡಿ ( ೨ ) ಗುರ್ಜರೀ ( ೩ ) ಮುಲತಾನಿ.

ವಾಚಕ ಮಹಾಶಯರೆ ಇವುಗಳನ್ನು ಸಂಗ್ರಹಿಸಬೇಕಾದರೆ ಇವು ಗಳನ್ನೆಲ್ಲಾ ಸಂಶೋಧಿಸಬೇಕಾದರೆ ಕೆಲವು ವರ್ಷಗಳು ಗತಿಸಿವೆ ಇನ್ನು ಮುಂದೆ ಈ ರಾಗಗಳ ಆರೋಹ ಅವರೋಹ ರಾಗಗಳ ಮುಖ್ಯ ಅಂಗಗಳನ್ನು ಕೊಡುತ್ತೇನೆ ಆಮೇಲೆ ಸಂಗೀತ ಶಾಸ್ತ್ರದಲ್ಲಿ ದೊರೆತ ೧೨೧ ತಾಳಗಳ ಮಾತ್ರೆ ಸಹಿತ ನಿಮಗೆ ಪರಿಚಯ ಮಾಡಿಕೊಡುತ್ತೇನೆ. ಮತ್ತು ಅವುಗಳ ತಬಲಾ ಟೀಕೆಯನ್ನು ಕೂಡಾ ಪರಿಚಯಮಾಡಿ ಕೊಡುವೆನು. ಇನ್ನು ಎಲ್ಲ ರಾಗಗಳಲ್ಲಿಯೂ ಚೀಜುಗಳನ್ನು ತಾನುಗ ಳನ್ನು ಕುರಿತು ಬೇರೆ ಪುಸ್ತಕವನ್ನೇ ಹೊರಡಿಸುವೆ.

—o—

# ಪ್ರಾಣಲಿಂಗ ಜ್ಞಾನದರ್ಪಣ ಚಾರಿತ್ರ.

ಶ್ರೀಗುರು ಬಸವಲಿಂಗಾಯ ನಮಃ. ಪ್ರಾಣಲಿಂಗ ಜ್ಞಾನದರ್ಪಣ ಚಾರಿತ್ರ ಬರೆಯುವದಕ್ಕೆ ಶುಭಮಸ್ತು. ಶ್ರೀರಸ್ತು.

**ಟೀಕು :—** ಐಶ್ವರ್ಯೋಪೇಕ್ಷಿತವಾದಾಚಾರಲಿಂಗ ಗುರು ಮಂತ್ರ ಮೂರ್ತಿ ಸ್ವರೂಪವಾದ ಗುರುಲಿಂಗ 'ಬ', ಈಶನ ಸ್ವರೂಪ ವಾದ ಶಿವಲಿಂಗ 'ಸ', ನಿರೀಕ್ಷಣ ಸ್ವರೂಪವಾದ ಜಂಗಮಲಿಂಗ 'ವ', ಯಜನ ಸ್ವರೂಪವಾದ ಪ್ರಸಾದಲಿಂಗ 'ಲಿಂಗ', ವೇಧಾಸ್ವರೂಪವಾದ ಮಹಾಲಿಂಗ 'ಆಯ', ಈ ಷಡುಲಿಂಗಗಳಿಗೋಸ್ಕರ 'ನಮಃ' ನಮ ಸ್ಕರಿಸುತ್ತಿದ್ದೇನೆ.

ಪ್ರಾಣಲಿಂಗ, ಆಚಾರಾದಿ ನಿರ್ವಯಲ ಲಿಂಗಾಂತ್ಯವಾದ ದಶ ಲಿಂಗಗಳೇ ಪ್ರಾಣಲಿಂಗವೆಂಬ ಶಬ್ದಕ್ಕರ್ಥ. ಜ್ಞಾನ, ಇಂತಪ್ಪ ಪ್ರಾಣ ಲಿಂಗವನ್ನು ಅರಿವುದಕ್ಕೆ ದರ್ಪಣ ಕನ್ನಡಿಯಾಗುಳ್ಳಂಥ ಚಾರಿತ್ರ್ಯ, ಇಂತಪ್ಪ ಪ್ರಾಣಲಿಂಗಂಗಳ ಲಕ್ಷಣವನ್ನು ಈ ಕನ್ನಡಿಯೆನಿಸುವ ಇಪ್ಪ ತ್ತೇಳು ಪದಂಗಳಲ್ಲಿ ಕಾಣಬರುತ್ತಿಹುದು ಎಂಬುದೀಗ ಪ್ರಾಣಲಿಂಗಜ್ಞಾನ ದರ್ಪಣ ಚಾರಿತ್ರ್ಯವೆಂಬ ಶಬ್ದಕ್ಕರ್ಥ.

ಬರೆಯುವದಕ್ಕೆ ಶರಣಗಣಂಗಳು ಓದಿ ಅರ್ಥವಿಟ್ಟು ಆನಂದಿಸ ಲೆಂದು ಲಿಖಿಸುವದಕ್ಕೆ ಶುಭಮಸ್ತು.

ಈ ಇಪ್ಪತ್ತೇಳು ಪದಚಾರಿತ್ರ್ಯವನ್ನು ವಿರಚಿಸಿ ಲಿಖಿಸಿದಾತಂಗೆ ಪರ ಶಿವನಲ್ಲಿ ಮಾಂಗಲ್ಯವಾಗಲೆಂದು ಭಕ್ತ ಮಹಾಗಣಂಗಳು ಪ್ರಸಾದ ಆಶೀರ್ವಾದ ವಚನವ ಪಾಲಿಸುವುದು ಎಂಬುದೀಗ ಶುಭಮಸ್ತು ಎಂಬ ಶಬ್ದಕ್ಕರ್ಥ.

---

**ಪದ**:— ಗರ್ಭಂತು ಪಲ್ಲವಿ, ಮುಂದೆ ಹೇಳುವ ಇಪ್ಪತ್ತೇಳು ಪದದೊಳಗಣ ಅರ್ಥವನ್ನು ಸಂಜ್ಞಾ ಮಾತ್ರವಾಗಿ ಈ ಪಲ್ಲವಿಯ ಲ್ಲಿ ಹೇಳುತ್ತಿಹುದೆಂಬುದೀಗ ಪದಗರ್ಭಂತು ಪಲ್ಲವಿ ಎಂಬ ಶಬ್ದಾರ್ಥ.

**ವಾರ್ಧಿಕ**|| ಶ್ರೀ ಸದಾಶಿವನ ಭಕ್ತರುಗಳಾರಾದೊಡಂ | ಓಸರಿ ಸದಂತರಂಗದೊಳು ದಶ ಚಕ್ರದ ನಿ| ವಾಸದೊಳ್ ಪದ್ಮಪ್ರಣಮದಿ ಲಿಂಗವರ್ಚಿಸಲು ಆ ಸದಾಶಿವರಪ್ಪರು. || ಪಲ್ಲ ||

|| **ಟೀಕು** || ಶ್ರೀ ಷಡ್ಗುಣೈಶ್ವರ್ಯ ಸಂಪತ್ಕರವನುಳ್ಳಂಥ ಸದಾ **ಚಿರಕಾಲವು** ಎಂಬುದೀಗ ಸದಾಶಿವನ ಮಾಂಗಲ್ಯ ಸ್ವರೂಪವನುಳ್ಳಂಥ ಪರಶಿವನ ಭಕ್ತರುಗಳು ಆರಾದೊಡಂ ದ್ವಿಜಾದಿ| ಶ್ವಪಚಾಂತ್ಯವಾದ ಅಷ್ಟಾದಶ ಜಾತಿಯೊಳಗಾರಾದೊಡಾಗಲಿ ಓಸರಿಸದೆ ವಿಷ್ಣ್ವಾದಿ ದೇವತೆಗಳನ್ನು ಪೂಜಿಸದೆ ಲೌಕಿಕ ಮಾರ್ಗದತ್ತ ಚಿತ್ತ ಸಂಚಲಿಸದೆ ಅಂತರಂಗದೊಳು ಅಂತಪ್ಪ ಪರಶಿವನ ಪೂಜಿಸುವ ಶರಣನ ಸೂಕ್ಷ್ಮಾಂಗ ಕಾರಣಾಂಗದೊಳಗೆ ದಶಚಕ್ರ ಆಧಾರಾದಿ ಅಣು ಚಕ್ರಾಂತ್ಯಮಾದ ೧೦ ಚಕ್ರಂಗಳ ನಿವಾಸದೊಳು ಆ ದಶ ಚಕ್ರಂಗಳ ಮಧ್ಯದಲ್ಲಿರ್ಪ ಕಮಲಂಗಳ ಕುಹರ ಮಧ್ಯದೊಳು ಚತುಃಕೋಣೆ ಧನುರ್ಗತಿ, ತ್ರಿಕೋಣೆ ಷಟ್ಕೋಣೆ ವೃತ್ತಾಕಾರ ತಮಂಧಾಕಾರ ಶೂನ್ಯಾಕಾರವೆಂಬ ಮಂಡಲತ್ರಯಂ ಮಹಾಶೂನ್ಯಾಕಾರ ನಿಃಶ್ಶೂನ್ಯಾಕಾರ ನಿರ್ವಯಲಾಕಾರವೆಂಬ ಲಿಂಗ ನಿವಾಸಸ್ಥಾನಂಗಳ ಗರ್ಭ ಗೃಹಂಗಳೊಳಗೆ ಎಂಬುದೀಗ ನಿವಾಸದೊಳ್ ಪದ್ಮ, ಆ ದಶ ಚಕ್ರಂಗಳೊಳಗಿರುವ ದಶ ಕಮಲಂಗಳ ಪ್ರಣಮದಿ ಆ ದಶದಳಾಕ್ಷರ ಕಮಲಂಗಳ ದಳಾಕ್ಷರ ಕರ್ಣಿಕಾಕ್ಷರ ಸ್ಮರಣೆಯಿಂದಲಿ ಲಿಂಗ ಆ ದಶಗರ್ಭ ಗೃಹಂಗಳೊಳಗಿರುವ ಆಚಾರಾದಿ ನಿರ್ವಯಲಾಂತ್ಯವಾದ ದಶ ಬ್ರಹ್ಮವನು ಅರ್ಚಿಸಲು ಆಯಾಯ ದಳ ಪ್ರಣಮ ಕರ್ಣಿಕಾ ಪ್ರಣಮ ಸ್ಮರಣೆಯಿಂದ ಆಯಾಯ ಕಮಲಂಗಳಲ್ಲಾಯಾಯ ಲಿಂಗಂಗಳ ನಂತರಂಗದಲ್ಲಿ ಮೌನದಿಂ ಪೂಜೆಯಂ ಮಾಡಲು ಆ ಸದಾಶಿವರಪ್ಪರು. ಅಂತಪ್ಪ ಶರಣನು ತನ್ನಂತರಂಗದಲ್ಲಿ ಇಂತಪ್ಪ ಪ್ರಾಣಲಿಂಗದರ್ಚನೆಯ ಮಾಡುತ್ತಿರಲಾ ಶರಣನೇ ಆ ಲಿಂಗದಲ್ಲಿ ಲಯವನೈದಿ ಆ ಲಿಂಗವೆಯಾದನೆಂಬುದೀಗ ಆ ಸದಾಶಿವರಪ್ಪರು ಎಂಬ ಶಬ್ದಾರ್ಥ.

**ಪದಃ**— ಹಲವು ವ್ರತ ಶೀಲದೊಳು ಕುಲವು ನೂರೊಂದರೊಳು । ಛಲ ನೇಮಗಳ ಹಿಡಿದು ಹೊಲಬುಗೆಡುವರಿಗೆ ಇದು । ಅಳವಡದು ಗುರುಲಿಂಗ ಜಂಗಮದಿ ತಲ್ಲೀಯವೊಳ ಹೊರಗೆವೊಂದೆಂಬಗೆ॥ ಸಲುವ ದಿದು ಅಂತರಂಗದೊಳು ದಶಚಕ್ರದೊಳು । ಕಳೆದರನ ಅನುಭಾವವರಿದು ಅರ್ಚಿಸುತಲಿದ ಫಲಪದವನೊದೆದು ಮಲರಹಿತನೊಳಗೊಡೆವೆರೆವ ಸುಲಭ ರಿದನಾಲಿಸುವುದೂ ॥ ೧ ॥

**ಟೀಕುಃ**— ಹಲವು ಕೆಲವು ವ್ರತ ಐವತ್ತಾರು ವ್ರತಂಗಳು ಶೀಲ ಅರುವತ್ತುನಾಲ್ಕು ಶೀಲಂಗಳು ನಿಯಮ ಮೂವತ್ತಾರು ನಿಯಮಂಗಳು ಕುಲವು ನೂರೊಂದರೊಳು ಏಕೋತ್ತರ ಶತಜಾತಿಗಳೊಳಗೆ ಛಲ. ಈ ಲೌಕಿಕ ಮಾರ್ಗವಾದ ಶೀಲ ವ್ರತ ನಿಯಮಂಗಳ ಹಿಡಿದು ನೂರೊಂದು ಕುಲದವರು ವರ್ತಿಸುತ್ತಿರುವಲ್ಲಿ ಆ ಶೀಲವ್ರತ ನಿಯಮಂಗಳು ಪ್ರಮಾದ ವಶದಿಂ ತಪ್ಪಿವಲ್ಲಿ ಪ್ರಾಣವ ಬಿಟ್ಟಹೆನೆಂಬ ಭಾಷೆಗಳೆಂಬುದೇ ಛಲ ಹಿಡಿದು ಇಂತಪ್ಪ ಛಲ ನಿಯಮಂಗಳ ಪಿಡಿದು ಹೊಲಬುಗೆಡುವರಿಗೆ ಇಂತಪ್ಪ ದುಃಶೀಲ ದುರ್ವ್ರತ ದುರ್ನಿಯಮಂಗಳಲ್ಲಿ ನಡೆವಂಗೆ ಮೋಕ್ಷ ಮಾರ್ಗವು ತಪ್ಪಿ ಭವದತ್ತ ಭವಾರಣ್ಯ ಪ್ರವೇಶಿಗಳಾಗಿ ಜನನ ಮರಣ ಬಾಧೆಗಳಿಂ ತೊಳಲುವವಂಗೆ ಇದು ಇಂತಪ್ಪ ಲಿಂಗಾಂಗ ಸಾಮರಸ್ಯ ಮಾರ್ಗವು ಅಳವಡದು, ಆ ಪ್ರಪಂಚಿಗಳಿಗಸಾಧ್ಯವಾಗಿರ್ಪುದು. ಗುರು ಲಿಂಗ ಜಂಗಮದಿ ಅಂತರಂಗ ಬಹಿರಂಗದ ಭವಿತ್ವವನ್ನು ಕಳೆದು ಇಷ್ಟ ಪ್ರಾಣ ಭಾವಲಿಂಗಗಳನು ತೋರಿ ಉಪದೇಶವ ಮಾಡಿದಂಥ ಆಚಾ ರ್ಯನು ಲಿಂಗ ಸ್ಥೂಲಾಂಗದಲ್ಲಿ ಇಷ್ಟಲಿಂಗವೆಂದು ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗವೆಂದು ಕಾರಣಾಂಗದಲ್ಲಿ ಭಾವಲಿಂಗವೆಂದು ಸಂಬಂಧಿಸಿ ಒಳ ಹೊರಗೆ ಬೆಳಗುವದೇ ಚಿದ್‌ಬ್ರಹ್ಮವು, ಜಂಗಮವು. ಇಂತಪ್ಪ ಲಿಂಗಾಂಗ ಗಳನು ಗರ್ಭೀಕರಿಸಿಕೊಂಡಿರ್ಪ ನಿರಂಜನ ಜಂಗಮದಲ್ಲಿ ತಲ್ಲೀಯ್ಯ. ಆ ಗುರುಲಿಂಗಜಂಗಮಕ್ಕೆ ಭಕ್ತಿಯ ಮಾಡಿ ಆ ಗುರುಲಿಂಗ ಜಂಗಮದಲ್ಲಿಯೇ ಬೆರೆವಕ್ರಮವೆಂತೆಂಡೊಡೆ ಗುರುವಿಂಗೆತನುವನಿತ್ತು, ಲಿಂಗಕ್ಕೆ ಮನವನಿತ್ತು, ಜಂಗಮಕ್ಕೆ ಧನವನಿತ್ತು, ಮತ್ತಾ ಗುರುಲಿಂಗ ಜಂಗಮ ಸೇವೆಯಲ್ಲಿ ಲೀಯವಾಗಿ ಒಳಹೊರಗೆ ಅಂತರಂಗ ಬಹಿರಂಗದಲ್ಲಿ ಒಂದೆಂಬುವಗೆ ಉಪದೇಶಿಸಲೋಸುಗ ಗುರುವಾಗಿ ಬಂದಾತನು ಪೂಜೆಗೋಸ್ಕರ ಲಿಂಗ

ವಾಗಿ ಬಂದಾತನು ಭಕ್ತಿಯ ಕೈಕೊಳ್ಳುವದಕ್ಕೋಸ್ಕರ ಜಂಗಮವಾಗಿ ಬಂದಾತನು ಈ ತ್ರಿವಿಧ ಭಕ್ತಿಯ ಮಾಡಲೋಸುಗ ಭಕ್ತ ಪದಾರ್ಥ ವಾಗಿ ಬಂದದ್ದೂ ಒಂದೇ ವಸ್ತುವೆಂದಾರಾಧಿಸುವ ಶರಣಂಗೆ ಸಲ್ಲುವ ದಿದು, ಇಂತಪ್ಪ ಶರಣಂಗೆ ಈ ಲಿಂಗಾಂಗ ಸಂಬಂಧವಾದ ಪ್ರಾಣ ಲಿಂಗೋಪದೇಶವು ಸಲ್ಲುವದಲ್ಲದೆ ಮಿಕ್ಕ ಜಡಜೀವರಿಗೆ ಸಲ್ಲದೆಂಬುದರ್ಥ. ಅಂತರಂಗದೊಳು ಸೂಕ್ಷ್ಮಾಂಗವೆಂಬ ಕಾರಣಾಂಗವೆಂಬ ಜ್ಞಾನಾಂಗದಲ್ಲಿ ದಶಚಕ್ರದೊಳು ಆಧಾರಾದ್ಯಣುವಂತ್ಯವಾದ ಹತ್ತು ಚಕ್ರಂಗಳೊಳಗೆ ಕಳೆಧರನ ಚಂದ್ರ ಚೂಡನಾದಂಥ ಪರಶಿವನ ಅನುಭಾವ ಆಧಾರಾದಿ ಅಣುವಾಂತ್ಯವಾದ ಚಕ್ರಂಗಳಲ್ಲಿ ಆಚಾರಾದಿ ನಿರವಯಾಂತ್ಯವಾದ ದಶ ಲಿಂಗಗಳ ನಾಮಾಂಗಳಿಂದಲಾ ಪರಶಿವನಿರುತಿರ್ಪನೆಂಬ ಭೇದವನ್ನು ಅರಿದು ಗುರುಮುಖದಿಂದೆ ತಿಳಿದು ಅರ್ಚಿಸುತ್ತಲಿಹ ಆಯಾಯ ಲಿಂಗಂಗಳ ಸ್ಥಾನ, ಅಂಗ, ಹಸ್ತ ಲಿಂಗ, ಮುಖ, ಕಮಲಕರ್ಣಿಕ, ಕಮಲದಳ, ಪ್ರಣಮ ಮಂತ್ರ ಭೇದ, ಪದಾರ್ಥ ಮುಂತಾಗಿ, ಮನೋಹಸ್ತದಿಂ ಪೂಜಿಸು ತ್ತಿರುವಂಥ ಫಲ. ಇಹದಲ್ಲಿ ದಾನಧರ್ಮ ಪರೋಪಕಾರ ಭಾವಿ ತಟಾಕ ಅರವಟಿಗೆ ಅನ್ನಛತ್ರ ಮುಂತಾದ ಧರ್ಮ ಕಾರ್ಯಂಗಳ ಮಾಡಿದಾತನು ಇಹದಲ್ಲಿ ಮರಳಿ ಹುಟ್ಟಿ ಒಂದಕ್ಕೆ ನೂರ್ಮಡಿ ಸಹಸ್ರ ಮಡಿಯಾಗಿ ಆ ಪುಣ್ಯ ಫಲವನನುಭವಿಸುವಂಥಾದ್ದೇ ಫಲ, ಪದ ಅಂತರಂಗದಲ್ಲಿ ಪ್ರಾಣ ಲಿಂಗವನು ತಿಳಿದು ಮಾನಸದಿಂದೆ ಪೂಜೆಯಂ ಮಾಡಲರಿಯದೆ ಬಹಿ ರಂಗದಿಷ್ಟ ಲಿಂಗಾರ್ಚನೆಯಂ ನಿಷ್ಠೆಯಿಂ ಮಾಡಿದವರು ಜಪ ತಪ ಅಶ್ವಮೇಧಾದಿ ಯಜ್ಞ ಕರ್ಮಂಗಳಂ ಮಾಡಿದವರು ಗುರುಲಿಂಗ ಜಂಗಮವನು ಭಿನ್ನ ವಿಟ್ಟಾರಾಧಿಸಿದವರು ತಮ್ಮ ಇಷ್ಟವಾದ ದೇವ ಲೋಕದಲ್ಲಿ ಇದೇ ಸಾಲೋಕ್ಯ ಸಾಮಿಾಪ್ಯ ಸಾರೂಪ್ಯ ಸಾಯುಜ್ಯವೆಂಬ ಚತುರ್ವಿಧ ಪದಂಗಳ ಅನುಭವಿಸಿ ಮರಳಿ ಭವದತ್ತ ಇಹಲೋಕಕ್ಕೆ ಬಂದು ಹುಟ್ಟುವರು ಎಂಬುದೀಗ ಫಲಪದತ್ವ ಲಕ್ಷಣ, ಇಂತಪ್ಪ ಫಲ ಪದಂಗಳು ಭವಕ್ಕೆ ಬೀಜವೆಂದರಿದು ಇವುಗಳನ್ನು ಒದೆದು ಇಂತಪ್ಪ ಫಲಪದಂಗಳನು ಜ್ಞಾನ ಚರಣದಿಂ ಕೊಡಹಿ, ಮಲರಹಿತನೊಳಗೊಡ ವೆರೆವ ಆಣವ ಮಲ ಮಾಯಾಮಲ ಕಾರ್ಮಿಕ ಮಲವೆಂಬ ಮಲತ್ರ ಯವ ವಿರಹಿತನಾದ ನಿರ್ಮಲ ಪರಶಿವನಲ್ಲಿ ಲಯವಾಗುವಂಥ ಸುಲ ಭರು ಗುರುಲಿಂಗ ಜಂಗಮವು ಬೇರೆ, ತಾನು ಬೇರಾಗಿ, ತನ್ನ ಪದಾರ್ಥ

ವೆಂದಿದಿರಿಟ್ಟುಕೊಂಡು ಆಯಾಸದಿಂದ ಭಕ್ತಿಯ ಮಾಡುವರೇ ಅಸುಲ ಭರು. ಇದನುಳಿದು ಗುರುಲಿಂಗ ಜಂಗಮವಾದುದು, ಭಕ್ತಿ ಪದಾರ್ಥ ವಾದುದು, ಶರಣನಾದುದು ಒಂದೇ ವಸ್ತುವೆಂದರಿದು ತಾನು ತಾನಾಗಿ ಭಕ್ತಿಯ ಮಾಡುವವರೇ ನಿರಾಯಾಸವುಳ್ಳಂಥ ಸದ್ಭಕ್ತರೇ ಸುಲಭರು. ಇದನಾಲಿಸುವುದು ಇಂತಪ್ಪ ಪ್ರಾಣಲಿಂಗದ ಸಕೀಲ ಮಾದಂಥ ಇಪ ತ್ತೇಳು ಪದಂಗಳಲ್ಲಿ ಹೇಳುವಂಥ ಪ್ರಾಣಲಿಂಗ ಜ್ಞಾನದರ್ಪಣ ಚಾರಿತ್ರ್ಯ ವನ್ನು ಪೇಳುವುದೆಂಬಲ್ಲಿ ಉಳಿದ ಲೌಕಿಕರ್ಗೆ ಪೇಳಲಾಗದೆಂಬುದೀಗ ಈ ಪದದ ತಾತ್ಪರ್ಯಾರ್ಥ ॥ ೨ ॥

**ಪದಃ—** ಬಸವ ಮೊದಲಾದ ಪರಮಜ್ಞಾನ ಪರಿಪೂರ್ಣ।ಮಸ ಮಅಜಗಣ್ಣ ಗೊಗ್ಗಯ್ಯ ಮುಕ್ತಾಯಕ್ಕ । ಪೆಸರ್ವಡೆದ ಮಡಿವಳಯ್ಯ ಕಿನ್ನರಿಯ ಬ್ರಹ್ಮಯ್ಯ ಹಸುಳೆ ಉಡುತಡಿ ದೇವಿಗೆ॥ಬಿಸಿಗಣ್ಣ ಸಿದ್ಧರಾಮಗೆ ಮರುಳ ಶಂಕರಗೆ । ಸಸಿನೆ ಶ್ರೋತ್ರದೊಳೊಗೆದ ಚನ್ನಬಸವೇಶ್ವರಗೆ । ಒಸೆದು ಪ್ರಭುವಿತ್ತ ಷಟ್‌ಸ್ಥಲ ಜ್ಞಾನದುಪದೇಶ ಪಸರಿಸುವ ದರ್ಪಣ ವಿದು. ॥

**ಟೀಕು:—** ಬಸವ ಮೊದಲಾದ ಸತ್ತು ಚಿತ್ತಾನಂದ ನಿತ್ಯ ಪರಿ ಪೂರ್ಣವೆಂಬ ಪಂಚಲಕ್ಷಣ ಸ್ವರೂಪವಹ ಮಹಾಘನ ಪರಿಪೂರ್ಣವಾದ ಪರಶಿವನೇ ಸರ್ವಾಚಾರ ಸಂಪತ್ತಿನಾಚರಣೆಯ ಮುಂದುಗೊಂಡು ಬಂದು ಶರಣಸ್ವರೂಪವಾಗಿ ಬಸವೇಶ್ವರನೆಂಬ ನಾಮದಿ ಪ್ರಮಥ ಗಣನಾಯಕ ನಾದ ಬಸವೇಶ್ವರ ದೇವರು ಮುಖ್ಯವಾಗಿ ಎಂಬುದೀಗ ಬಸವ ಮೊದ ನಾದ ಪರಮಜ್ಞಾನ ಪರಿಪೂರ್ಣ ಉತ್ಕೃಷ್ಟವಾದಂಥ ಮಹಲಿಂಗವನು ಮರಹಿಲ್ಲದೆ ಅರುಹುಳ್ಳವರಾಗಿ ಆ ಅರುಹೇ ಲಿಂಗಸ್ವರೂಪವಾಗಿ ಅಂಗ ದಲ್ಲಿ ಭರಿತವಾದಂಥ ಆಸಮ ಅಜಗಣ್ಣ ಅಜಗಣ್ಣನೆಂಬ ನಾಮವನುಳ್ಳ ವರು ೭೭೦ ಗಣಸಂಕುಳದೊಳಗಾಗಿ ನ ದ್ವಿತೀಯವೆಂಬುದೀಗ ಅಂತಪ್ಪ ಅಜಗಣ್ಣನೆಂಬ ಶರಣಂಗೆ ಗೊಗ್ಗಯ್ಯ ಗೊಗ್ಗಯ್ಯನೆಂಬ ಶರಣಂಗೆ ಮುಕ್ತಾಯಕ್ಕಗೆ ಮುಕ್ತಾಯಕ್ಕನೆಂಬ ಶರಣೆಗೆ ಪೆಸರ್ವಡೆದ ಮಡಿವಳಯ್ಯ ಬಸವೇಶ್ವರ ದೇವರಿಗೆ ಭಕ್ತಿಜ್ಞಾನವನರುಹಿಸಿ ಕೊಟ್ಟು ಕೀರ್ತಿವೆತ್ತಂಥ ಮಡಿವಳಯ್ಯನೆಂಬ ಶರಣಂಗೆ ಕಿನ್ನರಿಯ ಬ್ರಹ್ಮಯ್ಯ ತ್ರಿಪುರಾಂತಕ ಲಿಂಗವನು ಮಾತನಾಡಿಸಿದಂಥ ಕಿನ್ನರಿಯ ಬ್ರಹ್ಮಯ್ಯನೆಂಬ ಶರಣಂಗೆ

ಹಸುಳೆ ಉಡುತಡಿದೇವಿಗೆ ಬಾಲ್ಯದಲ್ಲಿ ಭಕ್ತಿ ಜ್ಞಾನ ವೈರಾಗ್ಯ ಪುಟ್ಟಿ ಶಿವನಲ್ಲಿ ಬೆರಸಿದಂಥ ಉಡುತಡಿಯ ಮಹಾದೇವಿಯೆಂಬ ಶರಣೆಗೆ ಬಿಸಿ ಗಣ್ಣ ಸಿದ್ಧರಾಮಯ್ಯಂಗೆ ಹಣೆಯಲ್ಲಿ ಉರಿಗಣ್ಣುಳ್ಳಂಥ ಸಿದ್ಧರಾಮಯ್ಯ ನೆಂಬ ಶರಣಂಗೆ ಮರುಳು ಶಂಕರಗೆ ಲಿಂಗ ಪ್ರಸಾದವೇ ತನಗೊಡಲಾ ಗುಳ್ಳಂಥ ಮರುಳು ಶಂಕರನೆಂಬ ಶಿವಯೋಗೀಶ್ವರಂಗೆ ಸಸಿನೆ ಶ್ರೋತ್ರ ದೊಳೊಗೆದ ಆಯಾಸವಿಲ್ಲದೆ ಅಕ್ಕನಾಗಮ್ಮನೆಂಬ ಶರಣೆಯ ಕರ್ಣದಲ್ಲು ದಿಸಿದ ಚನ್ನಬಸವೇಶ್ವರಂಗೆ ಷಟ್ ಸ್ಥಲ ಜ್ಞಾನ ಚಕ್ರವರ್ತಿಯಾದಂಥ ಚನ್ನಬಸವೇಶ್ವರ ದೇವರಿಗೆ ಇಂತಪ್ಪ ಬಸವೇಶ್ವರ ದೇವರು ಮುಖ್ಯವಾಗಿ ಚನ್ನ ಬಸವೇಶ್ವರ ದೇವರು ಅಂತ್ಯವಾದ ದಶಗಣಂಗಳಿಗೆ ಒಸೆದು ಈ ಗಣಂಗಳ ಮೇಲಣ ಪ್ರೀತಿಯಿಂದೆ ಪ್ರಭುವಿತ್ತ ನಿರವಯ ಬ್ರಹ್ಮನೇ ಪ್ರಭು ಸ್ವಾಮಿ ಎಂಬ ನಾಮ ವಿಡಿದು ಬಂದು ಕೊಟ್ಟಂಥಾ ಷಟ್ ಸ್ಥಲಜ್ಞಾನದ ಷಡಾಧಾರ ಚಕ್ರಂಗಳಲ್ಲಿಯು ಷಡ್ವಿಧ ಲಿಂಗದನುಭಾವವನರುಹಿಸಿ ತೋರಿ, ಉಪದೇಶ ಮೇಲಣ ಬ್ರಹ್ಮಚಕ್ರ ಶಿಖಾಚಕ್ರ ಪಶ್ಚಿಮಚಕ್ರ ಅಣು ಚಕ್ರದಲ್ಲಿರುವಂಥ ಲಿಂಗಂಗಳ ಸಕೀಲಂಗಳನನುಗ್ರಹವ ಮಾಡಿದಂಥ ಪಸರಿಸುವ ದರ್ಪಣವಿದು, ನಿರ್ಮಳ ತರವನುಳ್ಳಂಥ ವಿಶಾಲೋನ್ನತ ಮಾಗಿ ಪ್ರಕಾಶಿಸುವಂಥ ಕನ್ನಡಿಯ ಪಿಡಿದುಕೊಂಡು ತನ್ನ ತಾನೇ ನೋಡಲಾಗಿ ತನ್ನವಯವಂಗಳೆಲ್ಲವು ಕಾಣಬರುವಹಾಗೆ ಈ ಇಪ್ಪತ್ತೇಳು ಪದದಿಂ ಕೂಡಿದ ಚಾರಿತ್ರ್ಯವೆಂಬ ಕೈಪಿಡಿಯಲ್ಲಿ ಅನುಭವ ಜ್ಞಾನ ದೃಕ್ಕಿ ನಿಂದೆ ನೋಡಲಾಗಿ ತನ್ನಂತರಂಗದೊಳಗಣ ಪ್ರಾಣಲಿಂಗಂಗಳನರ್ಚಿಸುವ ಸಕೀಲಂಗಳು ಕಾಣಬರುತ್ತಿಹುದೆಂಬುದೀಗ ಈ ಪದದ ತಾತ್ಪರ್ಯಾರ್ಥ||೩||

**ಪದ:**— ಆಧಾರ ಚಕ್ರದೊಳು ಮೇದಿನೀ ಶರೀರದಿಂ। ದಾದ ಭಕ್ತಾಚಾರ ಲಿಂಗಕ್ಕೆ ಗುದಸ್ಥಾನ।ವಾದ ಚತುಷ್ಕೋಣೆ ಚೌದಳದ ಚತು: ಪ್ರಣಮದಿಂ ಪೀತ ವರ್ಣದ ಕಮಲದಿ ॥ ಆಧರಿಸಿ ಸುಚಿತ್ತ ಹಸ್ತದಿ ಘ್ರಾಣ ಮುಖದಿಂದೆ। ವೋದ ಗಂಧವನಿತ್ತು ಆ ಪ್ರಸಾದವ ಕೊಂಬ। ಸಾಧಕನೆ ಮುಕ್ತನೆಂದೋದಿ ಸಾರುತ್ತಿಹುದು ನಾದಬ್ರಹ್ಮದ ವಾಕ್ಯವೂ॥

**ಟೀಕು:** – ಆಧಾರ ಚಕ್ರದೊಳು ಮೂಲಾಧಾರ ಚಕ್ರದಲ್ಲಿ ಮೇದಿನಿ ಶರೀರದಿಂದಾದ ಭಕ್ತ ಪೃಥ್ವಿಯುಳಿದು ಚಿತ್ಪೃಥ್ವಿಯೇ ಅಂಗ

ವಾದ ಸದ್ಭಕ್ತನು ಆಚಾರಲಿಂಗಕ್ಕೆ ಒಂದು ಕೋಟಿ ಬಾಲಸೂರ್ಯ ಪ್ರಕಾಶವನುಳ್ಳಂಥ ನಕಾರ ಮಂತ್ರ ಮೂರ್ತಿ ಆಚಾರಲಿಂಗಕ್ಕೆ ಗುದ ಸ್ಥಾನ ಆ ಹೇಳಿದಾಧಾರ ಚಕ್ರವು ಹಿಂದೆ ಹೇಳಿದ ಆಧಾರ ಚಕ್ರವು ಗುದಸ್ಥಾನದಲ್ಲಿರ್ಪುದುವಾದ ಚೌಕೋಣೆ ಆಚಾರ ಲಿಂಗಕ್ಕೆ ಆಧಾರ ಚಕ್ರದಲ್ಲಿ ಗರ್ಭ ಗೃಹವಾದ ನಾಲ್ಕು ಕೋಣೆಯು ಚೌದಳ ಎಸಳು ಗಳು ಚತುಃ ಪ್ರಣವು ಆ ನಾಲ್ಕು ಎಸಳುಗಳಲ್ಲಿ ವ. ಶ. ಷ. ಸ. ಎಂಬ ನಾಲ್ಕು ಅಕ್ಷರಂಗಳಿಂದೆ ಪೀತವರ್ಣದ ಹಳದೀ ಬಣ್ಣದ ಕಮಲದಿಂ ಆ ನಾಲ್ಕು ದಳ ಕಮಲದ ಕರ್ನಿಕೆಯ ಮಧ್ಯದಲ್ಲಿ ಆಧರಿಸಿ ಆ ಕರ್ನಿಕಾ ಮಧ್ಯದಲ್ಲಿರುವಾಚಾರ ಲಿಂಗಕ್ಕೆ ನಕಾರವೇ ಬೀಜ ಪ್ರಣವವೆಂಬುದನು ಆ ನಾಲ್ಕು ದಳದಲ್ಲಿರುವ ನಾಲ್ಕಕ್ಷರಂಗಳೇ ಅಧಿದೇವತೆ ಅವರ ಶಕ್ತಿಯ ರನು ಚನ್ನಾಗಿ ವಿವರಿಸಿ ಸುಚಿತ್ತ ಹಸ್ತದಿ ಆ ಲಿಂಗದ ಮೇಗಣ ಚಿತ್ತ ವೆಂಬ ಸುಚಿತ್ತ ಹಸ್ತದಿಂದ ಘ್ರಾಣ ಮುಖದಿಂದ ಜ್ಞಾನೇಂದ್ರಿಯುವೆಂಬ ನಾಸಿಕವೇ ಆಚಾರ ಲಿಂಗಕ್ಕೆ ವದನವಾದ ಕಾರಣ ಆ ನಾಸಿಕದ ಮುಖ ದಿಂದವೇ ಮೋದ ಗಂಧವ ತನಗೆ ಇಂಪಾದ ಸುಗಂಧ ಪದಾರ್ಥವನು ಇತ್ತು ಓಂ ನಮಃಶಿವಾಯ: ಓಂ ಹ್ರಾಂ ನಕಾರ ಮೂರ್ತಯೇ ಎಂಬ ಮಂತ್ರ ಸ್ಮರಣೆಯಿಂದ ಆ ಆಚಾರ ಲಿಂಗಕ್ಕೆ ಆ ಸುಗಂಧ ಪದಾರ್ಥವ ಕೊಟ್ಟು ಆ ಪ್ರಸಾದವ ಕೊಂಬ ಆ ಲಿಂಗಕ್ಕೆ ಕೊಟ್ಟ ಗಂಧವನ್ನು ತನಗೆ ಪರಿಣಾಮವಾಗುವ ಪರಿಯಂತರ ಆ ಲಿಂಗಮಂತ್ರದಿಂ ಧ್ಯಾನಿಸಲದುವೇ ಲಿಂಗಪ್ರಸಾದವೆನಿಸುವದು. ಅಂಥಾ ಆಚಾರಲಿಂಗ ಪ್ರಸಾದವನು ಸ್ವೀಕ ರಿಸುವಂಥ ಸಾಧಕನೇ ಆ ಲಿಂಗಕ್ಕೆ ಇಂತಪ್ಪಾರಾಧನೆಯ ಮಾಡುವಂಥ ಸದ್ಭಕ್ತ ಪುಂಗವನೇ ಮುಕ್ತನೆಂದು ಆ ಆಚಾರಲಿಂಗದಲ್ಲಿಯೇ ಆ ಭಕ್ತನು ಐಕ್ಯನಾಗುವನೆಂದು ಓದಿ ಸಾರುತ್ತಿಹುದು ಉಚ್ಚರಿಸಿ ಉಸುರುತ್ತಿಹುದು ನೋಡು ಅನಾದಿ ಬ್ರಹ್ಮದ ವಾಕ್ಯವು. ಶಿವರಹಸ್ಯದಲ್ಲಿ ಪರಶಿವನು ಪಾರ್ವತೀ ದೇವಿಗೆ ಹೇಳಿದಂಥಾ ಶಿವರಹಸ್ಯದಲ್ಲಿಯ ಮಹಾವಾಕ್ಯವೆಂಬುದೀಗ ಪದದ ತಾತ್ಪರ್ಯಾರ್ಥ ॥ ೪ ॥

ಇದಕ್ಕೆ ಸಾಕ್ಷಿಃ — ಶ್ಲೋಕ ॥ ಸುಚಿತ್ತ ಹಸ್ತ ಭೂಮ್ಯಾಂಗಂ ಭಕ್ತ ಸ್ಯಾಚಾರ ಲಿಂಗಿನಃ ಘ್ರಾಣೇಚ ತನ್ಮುಖೇ ಗಂಧಮರ್ಪಿತಂ ತೃಪ್ತಿ ಭೋಕ್ತವಾನ್ ಭೋಗಿನಃ ॥ ೧ ॥

**ತಾತ್ಪರ್ಯ:—** ಚಿದ್ಭೂಮಿಯೇ ಅಂಗವಾದ ಭಕ್ತನು ಸುಚಿತ್ತ ವೆಂಬ ಹಸ್ತದಿಂದ ಆಚಾರ ಲಿಂಗಕ್ಕೆ ನಾಸಿಕೇಂದ್ರಿಯ ಮುಖದಲ್ಲಿ ಗಂಧವನು ಸಮರ್ಪಣೆ ಮಾಡಿ ಆ ಪ್ರಸಾದವನೇ ಭೋಗಿಸಿ ತೃಪ್ತನಹ ನೆಂಬರ್ಥ ॥ ೩ ॥

**ಪದ:—** ಮತ್ತೆ ಗುಹ್ಯಸ್ಥಾನ ಧನುರ್ಗತಿಯ ಸ್ವಾಧಿಷ್ಠಾನ। ಕರ್ತ ಮಹೇಶ್ವರಗೆ ಅಪ್ಪು ತತ್ವದ ದೇಹ। ಹಸ್ತಂ ಸುಬುದ್ಧಿಯಿಂದಿತ್ತು ಗುರು ಲಿಂಗಕ್ಕೆ ವಾರಿ ವರ್ಣದ ಕಂಜದಿಂ॥ ತಥ್ಯ ಷಟ್ ಪ್ರಣವು ಷಡ್ ದಳದ ಮಧ್ಯದೊಳಿಪ್ಪ। ಅತ್ಯಧಿಕ ಲಿಂಗಕ್ಕೆ ರಸನೆ ಮುಖದಿಂದೀವ। ಪಥ್ಯ ಷಡ್ರಸ ಪ್ರಸಾದವ ಕೊಂಬ ಮಹೇಶ ವರ್ತಿಸುವ ಪರಬ್ರಹ್ಮದಿ॥

**ಟೀಕು:—** ಮತ್ತೆ ಆಧಾರ ಚಕ್ರದ ಗುದಸ್ಥಾನದಿಂ ಮೇಲೆ ಗುಹ್ಯ ಸ್ಥಾನ, ನಾಲ್ಕಂಗುಲ ಪ್ರಮಾಣಿನಲ್ಲಿರುವಂಥ ಲಿಂಗನಾಡಿಯ ಸ್ಥಾನದಲ್ಲಿ ಧನುರ್ಗತಿಯ ಹೆದೆ ಮೇಲಾಗಿಟ್ಟು ಚಾಪಾಕಾರದಲ್ಲಿರುವಂಥ ಸ್ವಾಧಿಷ್ಠಾನ ಸ್ವಾಧಿಷ್ಠಾನ ವೆನಿಸುವ ಚಕ್ರದ ಕರ್ತ ಆ ಚಕ್ರದಧಿಪತಿಯಾದ ಮಹೇ ಶ್ವರಗೆ ಲಿಂಗ ಭಕ್ತಿಯೊಂದಲ್ಲದೆ ಲೌಕಿಕದ ಮಾಯಾವೃತ್ತಿಯನಳಿದು ವೀರ ಮಹೇಶ್ವರಂಗೆ ಅಪ್ಪು ತತ್ವದ ದೇಹ ವಾಮದೇವ ತತ್ವವಾದ ಚಿಜ್ಜಲವೇ ದೇಹ, ಆ ಚಿಜ್ಜಲವೇ ಅಂಗವಾದ ಹಸ್ತ ಸುಬುದ್ಧಿಯಿಂದೆ ಕುಬುದ್ಧಿಯನಳಿದು ಸುಬುದ್ಧಿಯೆಂಬ ಹಸ್ತದಿಂದ ಇತ್ತು, ನಾನೆಂಬ ಕುಬು ದ್ಧಿಯಳಿದು ನೀನೆಂಬ ಮನವ ಲಿಂಗದಲ್ಲಿ ಇತ್ತು, ಗುರುಲಿಂಗಕ್ಕೆ ಸ್ವಾಧಿ ಷ್ಠಾನ ಚಕ್ರದ ಧನುರ್ಗತಿಯ ಗರ್ಭಗೃಹದೊಳಗಿಹ ಎರಡು ಕೋಟಿ ಬಾಲಸೂರ್ಯ ಕಾಂತಿಯುಳ್ಳಂಥ ಮಕಾರ ಮಂತ್ರ ಮೂರ್ತಿಯಾದ ಗುರುಲಿಂಗಕ್ಕೆ ವಾರಿವರ್ಣದ ಅಪ್ಪುವಿನ ಶ್ವೇತ ಪ್ರಕಾಶದ ಕುಜದಿಂ ಕಮಲದಿಂದೆ ತಥ್ಯ ಯಥಾರ್ಥವಾದ ಷಟ್ ಪ್ರಣವು ಬ, ಭ, ಮ, ಯ ರ ಲ ಎಂಬುವ ಆರಕ್ಷರಂಗಳು ಷಡ್ದಳದ ಆ ಶ್ವೇತ ವರ್ಣದ ಕಮಲಕ್ಕೆ ಆರೆಸಳುಗಳಿರ್ಪವು. ಆ ಎಸಳುಗಳ ಮಧ್ಯದೊಳಿಪ್ಪ ಆ ಷಡ್ ದಳ ಪ್ರಣವಂಗಳ ಮಧ್ಯ ಕರ್ಣಿಕೆಯಲ್ಲಿರುವಂಥ ಅತ್ಯಧಿಕ ಲಿಂಗಕ್ಕೆ ಚಕ್ರಕ್ಕಧಿಪತಿಯಾದ ಅತ್ಯುನ್ನತವಾದ ಮಕಾರ ಮಂತ್ರ ಮೂರ್ತಿಯಾದ ಗುರುಲಿಂಗಕ್ಕೆ ರಸನೆಮುಖದಿಂದೀವ ಆ ಗುರುಲಿಂಗಕ್ಕೆ ಜ್ಞಾನೇಂದ್ರಿಯೊ ಳಗಣ ಜಿಹ್ವೆಯೇ ವಕ್ತ್ರವಾದ ಕಾರಣ ಆ ಜಿಹ್ವೆ ಮುಖದಿಂದ ಕೊಡು

ಅನ್ನ ತಿನ್ನದಿರಲು ಕುಕ್ಷಿಯು ಜಠರಾಗ್ನಿ ।
ಭಕ್ಷಿಸುವದು ಕುಕ್ಷಿ ಮಲವ ಬಿಡದೆ ॥
ಕೂಳು ಬಿಟ್ಟು ಮಲವ ತಿನ್ನುವನುಶವಾಸಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೦೩ ॥

ಮೃಗಗಳು ಮೃಗಗಳ ಕೇಳವು ।
ಖಗಜಾತಿಗಳ್ಬಿದೆ ಖಗಗಳಂ ಕೇಳವು ಯೊ ॥
ಜಗದೊಳು ಪುರುಷಂ ಪುರುಷನ ।
ಮಿಗೆ ಕೇಳಲ್ ಕೊಡದೊಡವನು ಸುದತಿಯು ವೇಮಾ ॥೫೦೪

ಘನತರ ವೃಕ್ಷದೋಳ್ ಕಾಯೊಂದು ಪುಟ್ಟಿತು ।
ಮೂರು ಕಂಗಳುಂಟು ಶಿವನು ಮಲ್ಲ ।
ಮೇಲೆ ಚರ್ಮವಿಹುದು ಯೋಗಿಯು ತಾನಲ್ಲ ।
ಸಿಹಿಯು ನೀರಿನಿಂದಲೆಸಗು ವೇಮಾ ॥ ೫೦೫ ॥

ಆಧಿ ಕಾಲದಲ್ಲಿ ಅಲ್ಪನೇನರಿವನು ।
ಹೇಳಲರಿಯ ತಪ್ಪು ಹಿಡಿಸುಬಲ್ಲ ॥
ತಳ್ಳಲರಿತ ನಾಯಿ ಸಾಲೇರಿಸುವುದೇನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೦೬ ॥

ತನುವುಯೆಂಬ ಗೃಹದಿ ದಾವಾಗ್ನಿ ಸುಡುತಿರಲ್ ।
ಮೇಲೆ ಸುಡುವುದೇಕೆ ಮಿಥ್ಯವಲ್ಲೆ ।
ದಾಸನ ತಪ್ಪಿಗೆ ದಂಡವಿದಲ್ಲುತ್ತರೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೫೦೭ ॥

ಸಮಾಪ್ತ

ಶಿವಾನುಭವ ಗ್ರಂಥಮಾಲಾ ನಂ. ೭೨

# ವೇಮಣ್ಣಯೋಗಿಯ ವಚನಗಳು.

—o—

ಸಂಪಾದಕರು.

**ರಾ॥ ಬ॥ ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ. ವಿಜಾಪುರ

---

೧೯೪೧.

ಇದನ್ನು ವಿಜಾಪೂರದಲ್ಲಿ
ರಾ|| ಬ|| ಫ. ಗು. ಹಳಕಟ್ಟಿ ಇವರು ತಮ್ಮ
“ **ಹಿತಚಿಂತಕ ಪ್ರಿಂ. ಪ್ರೆಸ್ಸಿ** ” ನಲ್ಲಿ ಮುದ್ರಿಸಿದರು.
ಮತ್ತು ಅವರು ವಿಜಾಪೂರದಲ್ಲಿ
ವಾರ್ಡ ನಂ|| ೨, ಮನೆ ನಂ|| ೧೩೬೮ ನೇ ಮನೆಯಲ್ಲಿ
ಪ್ರಕಟಿಸಿದರು.

# ಪ್ರಸ್ತಾವನೆ

ವೇಮಣ್ಣನು ತನ್ನ ಪದ್ಯಗಳನ್ನು ಆಂಧ್ರ ಭಾಷೆಯಲ್ಲಿ ಬರೆದಿದ್ದು ಅವುಗಳ ಸಂಖ್ಯೆಯು ಅನೇಕ ಸಾವಿರದ ವರೆಗೆ ಇರುತ್ತದೆಂದು ತಿಳಿಯುತ್ತಿದೆ. ಕನ್ನಡ ಭಾಷೆಯಲ್ಲಿ ಸರ್ವಜ್ಞ ಕವಿಗೆ ಯಾವ ಸ್ಥಾನವಿದೆಯೋ ಅದೇ ಸ್ಥಾನವು ಆಂಧ್ರ ಭಾಷೆಯಲ್ಲಿ ವೇಮಣ್ಣನಿಗೆ ಇರುತ್ತದೆ. ವ್ಯವಹಾರದಲ್ಲಿ ಹೇಗೆ ನಡೆಯಬೇಕೆಂಬುದನ್ನು ಸರ್ವಜ್ಞನು ಹೇಗೆ ಬೋಧಿಸಿದ್ದಾನೋ ಹಾಗೆಯೇ ವೇಮಣ್ಣನೂ ಬೋಧಿಸಿದ್ದಾನೆ. ಅವನು ಸರ್ವಜ್ಞನಂತೆಯೇ ಲೋಕಪ್ರಿಯನಾಗಿದ್ದಾನೆ. ಅವನು ಮೊದಲು ವೀರಶೈವನಲ್ಲದಿದ್ದರೂ ಹಿಂದುಗಡೆ ವೀರಶೈವ ದೀಕ್ಷೆಯನ್ನು ಹೊಂದಿ ಶಿವಶರಣರ ತತ್ವಗಳಂತೆ ನಡೆಯುತ್ತ ಬಂದಂತೆ ಕಂಡುಬರುತ್ತದೆ.

ವೇಮಣ್ಣನು ರಾಜ ಮನೆತನಕ್ಕೆ ಸೇರಿದವನು. ಕೃಷ್ಣಾ ಜಿಲ್ಲೆಯಲ್ಲಿ ಕೊಂಡವೀಡಿನಲ್ಲಿ ರೆಡ್ಡಿ ಜನಾಂಗದ ಒಂದು ರಾಜವಂಶದವರು ಆಳುತ್ತಿದ್ದರು. ಇವರು ಬಹು ಬಲಾಢ್ಯರಾಗಿ ಕೃಷ್ಣಾ ಮತ್ತು ಗೋದಾವರೀ ಜಿಲ್ಲೆಗಳ ಬಹುಭಾಗವನ್ನು ಆಕ್ರಮಿಸಿದ್ದರು. ಪೋಲಯ್ಯ ವೇಮರೆಡ್ಡಿಯು ಈ ವಂಶದವರ ಮೂಲ ಪುರುಷನು. ಈ ವಂಶದಲ್ಲಿ ಕುಮಾರಗಿರಿ ವೇಮಾರೆಡ್ಡಿ ಎಂಬವನು ಉದಯನಾಗಿ ೧೪ ವರ್ಷ ರಾಜ್ಯಭಾರ ಮಾಡಿದನು. ಈತನು ೧೫ನೇ ಶತಮಾನದಲ್ಲಿದ್ದನು.

ಕುಮಾರಗಿರಿ ವೇಮಾರೆಡ್ಡಿಗೆ ವೆಂಕಾರೆಡ್ಡಿ ಮತ್ತು ರಾಜವೇಮಾರೆಡ್ಡಿ ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ ವೆಂಕಾರೆಡ್ಡಿಗೆ ಅನವೇಮಾರೆಡ್ಡಿ ಎಂತಲೂ ರಾಜವೇಮಾರೆಡ್ಡಿಗೆ ವೇಮಾರೆಡ್ಡಿ ಎಂತಲೂ ಬೇರೆ ಹೆಸರುಗಳು ಇದ್ದವು. ಇವರಲ್ಲಿ ವೇಮಾರೆಡ್ಡಿಯೇ ಈ ಗ್ರಂಥದಲ್ಲಿಯ ಪದ್ಯಗಳನ್ನು ರಚಿಸಿದವನಿದ್ದಾನೆ.

ಅನವೇಮಾರೆಡ್ಡಿಯು. ಹೆಂಡತಿ ನರಸಾಂಬೆಯು ಅವಳು ಪಟ್ಟದ ರಾಣಿಯಾದ ಕಾಲದಲ್ಲಿ ವೇಮಾರೆಡ್ಡಿಯು ನಾಲ್ಕೈದು ವರ್ಷದ ಬಾಲಕನಾಗಿದ್ದನು. ನರಸಾಂಬೆಯು ಅವನಲ್ಲಿ ಅನುರಾಗವನ್ನು ಹೊಂದಿ ಅವನನ್ನು ತನ್ನ ಸ್ವಂತ ಮಗನಂತೆ ಕಂಡು ಅವನನ್ನು ಪ್ರೀತಿಸುವವಳಾಗಿದ್ದಳು. ಅವನು ಪ್ರಾಯಕ್ಕೆ ಬರುವವರೆಗೂ ಅವಳು ಅವನ ಪೋಷಣೆಯನ್ನು ಮಾಡಿದಳು.

ಆದರೆ ವೇಮರೆಡ್ಡಿಯು ದೊಡ್ಡವನಾದ ಬಳಿಕ ಸುಗುಣಿಯಾಗಿ ವರ್ತಿಸಲಿಲ್ಲ. ಅವನು ಕೆಡುಕರ ಸಹವಾಸವನ್ನು ಹೊಂದಿ ವ್ಯಸನಾಧೀನನಾದನು ಆವನು ಒಬ್ಬ ಗಣಿಕೆಯ ಸಹವಾಸದಲ್ಲಿ ಯಾವಾಗಲೂ ಇರಹತ್ತಿದನು. ಮತ್ತು ಅವಳು ಬೇಡಿದ್ದನ್ನು ಅವನು ಅವಳಿಗೆ ತಂದುಕೊಡುವನು. ನರಸಾಂಬೆಯು ಅವನಿಗೋಸ್ಕರ ಅತ್ಯಂತ ವಾತ್ಸಲ್ಯವನ್ನು ತಾಳಿದವಳಾದ್ದರಿಂದ ಅವನು ಬೇಡಿದ್ದನ್ನು ಕೊಡುವಳು. ಅವನ ಅಣ್ಣನೂ ತಾಯಿಯೂ ಅತ್ತಿಗೆಯೂ ಒಬ್ಬ ಅನುರೂಪಳಾದ ಸ್ತ್ರೀಯಳನ್ನು ವರಿಸು ಎಂದು ಎಷ್ಟು ಹೇಳಿದರೂ ಅವನು ಅವರ ಬೋಧೆಗೆ ಮನಗೊಡಲಿಲ್ಲ. ಇದಕ್ಕೆ ಅವರು ಎಷ್ಟು ಮನನೊಂದರೂ ಅವನು ಅದನ್ನು ಗಣಿಸಲಿಲ್ಲ.

ಗಣಿಕೆಯು ತಾನು ಬೇಡಿದ್ದನ್ನು ವೇಮಣ್ಣನು ತಂದುಕೊಡುವವನ್ನು ನೋಡಿ ಒಂದು ದಿವಸ ಅವಳು ಅವನಿಗೆ ನಿನ್ನ ಅತ್ತಿಗೆ ನರಸಾಂಬೆಯ ಮೂಗುತಿಯನ್ನು ತಂದುಕೊಡೆಂದು ಹೇಳಿದಳು. ಮೂಗುತಿಯು ಸುಶೀಲೆಯರು ಅತ್ಯಂತ ಪ್ರೇಮ ಮತ್ತು ಭಕ್ತಿಯಿಂದ ಧರಿಸುವ ಆಭರಣವಾಗಿದೆ.. ರೆಡ್ಡಿ ಜನಾಂಗದಲ್ಲಿ ಅದಕ್ಕೆ ಬಹಳ ಆದರವಿದೆ. ಗಣಿಕೆಯು ತಾನು ಬೇಡಿದ್ದನ್ನು ತಂದುಕೊಡುವನೆಂಬ ಅಭಿವಚನವನ್ನು ವೇಮಣ್ಣನಿಂದ ಮೊದಲು ಹೊಂದಿದ್ದಳು. ಇದರಿಂದ ವೇಮಣ್ಣನು ಗಣಿಕೆಯ ಈ ಬೇಡಿಕೆಯನ್ನು ಕೇಳಿ ಅತ್ಯಂತ ಮನಸ್ಸು ನೊಂದವನಾಗಿ ಮ್ಲಾನಮುಖನಾಗಿ ಅರಮನೆಯಲ್ಲಿ ಇರಹತ್ತಿದನು. ಸಾಧ್ವಿಯಾದ ನರಸಾಂಬೆಯು ಇದನ್ನು ಕಂಡು ನಿಜಸ್ಥಿತಿಯನ್ನು ವೇಮನನಿಂದ ತಿಳಿದುಕೊಂಡು ಅವಳು ಆ ಆಭರಣವನ್ನು ಅವನಿಗೆ ಕೊಡಲು ಒಪ್ಪಿದಳು. ಅದಕ್ಕೆ ಅವಳು ಒಂದು ಶರ್ತನ್ನು ಹಾಕಿದಳು. ಅದಕ್ಕೂ ವೇಮನನು ಒಪ್ಪಿಕೊಂಡನು. ಅದೇ

ನೆಂದರೆ— ನೀನು ಗಣಿಕೆಯನ್ನು ಪೂರ್ಣ ನಗ್ನಳನ್ನಾಗಿ ಮಾಡಿ ಅವಳ ಅವಯವಗಳನ್ನೆಲ್ಲ ದಿಟ್ಟಿಸಿ ನೋಡಿ ಆಮೇಲೆ ಅವಳಿಗೆ ಆ ಆಭರಣ ವನ್ನು ಕೊಡು ಎಂದು ತಿಳಿಸಿದಳು.

ಅದೇ ಮೇರೆಗೆ ವೇಮಣ್ಣನು ಆಚರಿಸಿದನು. ಆಗ ಅವನ ಮನಸ್ಸಿನಲ್ಲಿ ಒಂದು ಅತರ್ಕ್ಯವಾದ ಬದಲಾವಣೆಯು ಆಯಿತು ಸ್ತ್ರೀ ವಿಷಯದಲ್ಲಿ ತತ್ಕಾಲಕ್ಕೆ ಅವನಲ್ಲಿ ಜುಗುಪ್ಸೆಯುಂಟಾಯಿತು. ಅವನಲ್ಲಿ ವೈರಾಗ್ಯ ಹುಟ್ಟಿತು. ಇನ್ನುಮೇಲೆ ಈ ದುರ್ನೀತಿಯನ್ನು ಬಿಡಬೇಕೆಂಬ ಚಿತ್ತವು ಅವನಲ್ಲಿ ಬಲಿಯಿತು. ಅವನು ವೈರಾಗ್ಯಶೀಲನಾದನು. ಆಗ ಅವನಿಗೆ ಅರಮನೆಯ ಸುಖೋಪಭೋಗಗಳು ತ್ಯಾಜ್ಯವಾಗಹತ್ತಿದವು. ಮುಂದೆ ಅವನು ತನ್ನ ಅಣ್ಣನಿಂದ ಕೆಲವು ಭೂಮಿಯನ್ನು ಪಡೆದು ಕೊಂಡು ಅದನ್ನು ತಾನೇ ಉಳುತ್ತ ಶಿವಶರಣರಂತೆ ಕಾಯಕ ತತ್ಪರನಾಗಿ ಜೀವಿಸ ಹತ್ತಿದನು.

ಹೀಗಿರಲು ಅಭಿರಾಮಯ್ಯನೆಂಬ ಅಕ್ಕಸಾಲಿಗನು ಅರಸನಲ್ಲಿಗೆ ಯಾವಾಗಲೂ ಬಂದು ಅರಮನೆಯ ಸ್ತ್ರೀಯರಿಗೆ ಆಭರಣಗಳನ್ನು ಮಾಡುತ್ತಿದ್ದನು. ಅವನು ಅತ್ಯಂತ ದೇವಭಕ್ತನು. ಅವನು ವೇಮಯ್ಯನಲ್ಲಿ ಬದಲಾವಣೆಯಾದದ್ದನ್ನು ನೋಡಿ ಆ ಉಭಯತರಲ್ಲಿ ಪರಸ್ಪರ ಸ್ನೇಹವು ಹೆಚ್ಚಿತು. ಅಭಿರಾಮಯ್ಯನು ವೀರಭದ್ರ ವಿಜಯ ಮುಂತಾದ ಸ್ತೋತ್ರ ಪಾಠಗಳನ್ನು ಹೇಳುತ್ತ ಪಟ್ಟಣದ ಸಮೀಪದಲ್ಲಿ ಒಂದು ಗುಹೆಯಲ್ಲಿದ್ದ ಒಬ್ಬ ಶಿವಯೋಗಿಯನ್ನು ಸಂದರ್ಶಿಸುತ್ತ ಅವನಿಂದ ಅವನು ಉಪದೇಶ ವನ್ನು ಹೊಂದಿದವನಾಗಿದ್ದನು. ಇದನ್ನು ವೇಮಯ್ಯನು ತಿಳಿದುಕೊಂಡು ತಾನೂ ಶಿವಯೋಗಿಯಾಗಿ ಮಂತ್ರೋಪದೇಶವನ್ನು ಹೊಂದಬೇಕೆಂದು ಅಪೇಕ್ಷಿಸಹತ್ತಿದನು. ಮತ್ತು ಅವನು ಆಮೇರೆಗೆ ಉಪದೇಶವನ್ನೂ ಹೊಂದಿದನು. ಆದರೆ ವೇಮಯ್ಯನು ಬೇರೆ ಯೋಗಿಗಳಂತೆ ಯೋಗಾಭ್ಯಾಸ ನಿರತನಾಗಿ ಏಕಾಂತ ವಾಸವನ್ನು ಬಯಸಲಿಲ್ಲ. ಜನರಿಗೆ ನೀತಿ, ಧರ್ಮ, ಸಂಸಾರದ ನಡೆ ಇವುಗಳನ್ನು ಬೋಧಿಸುತ್ತ ಕಾಲಕಳೆಯುತ್ತ ಬಂದನು. ಅವನು ಈ ಹೊಸ ಹಾದಿಗೆ ಕಾರಣನಾದವನು ಅಭಿರಾಮಯ್ಯನೆಂದು ಅವನು ಭಾವಿಸಿ ತಾನು ರಚಿಸಿದ ಪ್ರತಿಯೊಂದು ಪದ್ಯದ ಅಂತ್ಯದಲ್ಲಿ 'ವಿಶ್ವತೋಭಿರಾಮ ಕೇಳೊ ವೇಮಾ' ಎಂಬ ಮುದ್ರಿಕೆ

ಯನ್ನಿಟ್ಟುಕೊಂಡು ಅವುಗಳನ್ನು ರಚಿಸಿದ್ದಾನೆ. ತಾನು ಬೋಧಿಸುವ ತತ್ವಗಳು ಹೆರವರಿಗೋಸ್ಕರ ಎಂದು ಜನರು ತಿಳಿಯಬಾರದು. ಇದು ಅಹಂಕಾರ ವಾಗಿದೆ, ಎಂಬ ಸಂಶಯವು ಜನರಿಗೆ ಬರಬಾರದೆಂತಲೂ ಅವನು ತನ್ನ ದುರ್ಗುಣಗಳನ್ನು ತಾನೇ ಮೊದಲು ದೂರ ಮಾಡಿಕೊಳ್ಳಲು ತನ್ನನ್ನು ತಾನೇ ಬೋಧಿಸಿಕೊಂಡಿದ್ದಂತೆಯೂ ಈ ಪದ್ಯಗಳ ರಚನೆ ಇದೆ.

ಈತನ ಸಮಾಧಿಯು ಕದಿರಿ ತಾಲೂಕು ( ಕಡಪಾ ಜಿಲ್ಲೆ ) ಕಠಾರಿ ಹಳ್ಳಿಯಲ್ಲಿ ಇರುತ್ತದೆಂದು ತಿಳಿಯುತ್ತಿದೆ.

ಇವನ ಉಕ್ತಿಗಳನ್ನು ಶ್ರೀಯುತ ಬಿ. ಭೀಮರಾಜು ಎಂಬವರು ಕನ್ನಡ ಭಾಷೆಯಲ್ಲಿ ಭಾಷಾಂತರಿಸಿದರೆಂದು ಹಿಂದುಗಡೆ ನಮಗೆ ತಿಳಿದು ಬಂದಿತು. ಬಳ್ಳಾರಿ ಜಿಲ್ಲಾ ದುಗ್ಗವತ್ತಿಯ ಕಾಯಕದ ಸಿದ್ಧವೀರಪ್ಪನವರು ಈ ಪದ್ಯಗಳನ್ನು ನಮ್ಮ ಕಡೆಗೆ ಮುದ್ರಿಸಲು ಮೊದಲು ಕಳಿಸಿದರು. ಇವರಲ್ಲಿ ಶಿವಶರಣರ ತತ್ವಗಳನ್ನು ಬಹು ಸುಲಭ ಭಾಷೆಯಲ್ಲಿ ಬರೆದದ್ದು ಕಂಡು ಬಂದಿತು. ಆದ್ದರಿಂದ ವಿಷಯಾನುಸಾರ ಈ ಪದ್ಯಗಳನ್ನು ವಿಂಗಡಿಸಲು ಪ್ರಯತ್ನಿಸಿದೆವು. ಇದು ಮೊದಲಿಗೆ ಸುಲಭ ಸಾಧ್ಯವೆಂದು ತೋರಲಿಲ್ಲ ಆದರೆ ಪರಿಶ್ರಮ ಪೂರ್ವಕವಾಗಿ ಹಾಗೆ ಜೊತೆಗೊಳಿಸಿ ಶಿವಾನುಭವ ಪತ್ರಿಕೆಯಲ್ಲಿ ಮೊದಲು ಪ್ರಸಿದ್ಧಿಸುತ್ತ ಬಂದೆವು. ಈಗ ಅವುಗಳನ್ನು ಪುಸ್ತಕ ರೂಪವಾಗಿ ಬೇರೆಯಾಗಿ ಪ್ರಕಟಿಸಿದ್ದೇವೆ.

ಈ ಗ್ರಂಥದಲ್ಲಿಯ ಪದ್ಯಗಳ ಮೇಲಿಂದ ವೇಮಣ್ಣನು ವೀರಶೈವ ಧರ್ಮವನ್ನು ಸ್ವೀಕರಿಸಿದ್ದು ಕಂಡುಬರುತ್ತದೆ. ಮುಖ್ಯವಾಗಿ ಕೆಳಗೆ ಕಾಣಿಸಿದ ಶೀರ್ಷಿಕೆಗಳ ಕೆಳಗೆ ಉದಹರಿಸಿದ ಪದ್ಯಗಳನ್ನು ನೋಡಿರಿ. ಅವು ಯಾವವೆಂದರೆ—

ಶಿವನು ತನ್ನಲ್ಲಿಯೇ ಇದ್ದಾನೆ, ದೇವರ ನಿಜ, ಬ್ರಹ್ಮಜ್ಞಾನದ ರೀತಿ, ಯೋಗದ ರೀತಿ, ಮಂತ್ರ ತಂತ್ರಗಳು, ಉಪವಾಸಾದಿಗಳು, ವ್ರತಗಳಲ್ಲ, ಜ್ಯೋತಿಷ್ಯ, ಶಕುನಗಳು ಮೂರ್ತಿಗಳನ್ನು ಪೂಜಿಸಬೇಡ, ತೀರ್ಥಯಾತ್ರೆ ಮಾಡರು, ಜಾತಿಭೇದವನ್ನು ನಿರಾಕರಿಸು, ಸದ್ಗುಣಿಯೋ

ಉಚ್ಚಕುಲದವನು, ಹೊಲೆಯನಾರು ?, ಈ ಶೀರ್ಷಿಕೆಗಳ ಕೆಳಗೆ ಬಂದ ಪದ್ಯಗಳನ್ನು ವಾಚಕರು ನೋಡಬೇಕು. ಹಾಗೆಯೇ ನಿಜವಾದ ಲಿಂಗವಂತರಾರು ? ಬ್ರಹ್ಮ ವಿಷ್ಣು ರುದ್ರರು, ಮೋಕ್ಷ ಸಂಪಾದನೆ, ವೇಮಣ್ಣ ಯೋಗಿಯ ರೀತಿ ಈ ಶೀರ್ಷಿಕೆಗಳ ಕೆಳಗಿನಲ್ಲಿಯ ಉಕ್ತಿಗಳನ್ನೂ ಸಹ ನೋಡಬೇಕು ಇವುಗಳಲ್ಲಿ ವೇಮಣ್ಣನು ಶಿವಶರಣರ ತತ್ವಗಳನ್ನು ತನ್ನದೇ ಆದ ಸ್ವತಂತ್ರ ರೀತಿಯಿಂದ ವಿವೇಚಿಸಿರುವದು ಕಂಡು ಬರುತ್ತದೆ. ವೇಮಣ್ಣನು ಮೊದಲು ರಾಜವಂಶದವನು. ಆದರೂ ಅವನು ತಾನು ಒಕ್ಕಲಿಗನೆಂದು ಹೇಳಿಕೊಂಡಿದ್ದಾನೆ. ಅವನು ತನ್ನ ಅಣ್ಣನಿಂದ ಭೂಮಿಯನ್ನು ಸಂಪಾದಿಸಿಕೊಂಡು ಒಕ್ಕಲುತನವನ್ನು ಮಾಡುವವನಾಗಿದ್ದನು. ಆದರೆ ಅವನು ಸಾಮಾನ್ಯ ಯೋಗಿಗಳಂತೆ ಸಂಸಾರವನ್ನು ತ್ಯಜಿಸಿ ಭಿಕ್ಷೆಯ ಮೇಲೆ ಅವಲಂಬಿಸಿದ್ದಿಲ್ಲ. ವೀರಶೈವ ಶಿವಯೋಗಿಯಂತೆ ಕಾಯಕದಿಂದ ಉಪಜೀವಿಸುವವನಾಗಿದ್ದನು.

ಮೂಲ ಗ್ರಂಥದ ಭಾಷಾಂತರವು ಶುದ್ಧ ಭಾಷೆಯಲ್ಲಿ ಇರಲಿಕ್ಕಿಲ್ಲ. ಆದರೂ ಓದುಗರು ಅವುಗಳ ಭಾವವನ್ನು ಲಕ್ಷಿಸಿ ಗ್ರಂಥದ ಉಪಯೋಗವನ್ನು ಮಾಡಿಕೊಳ್ಳುವದು ಶಕ್ಯವೆಂದು ನಮಗೆ ತೋರಿದ್ದರಿಂದ ಈ ಗ್ರಂಥವನ್ನು ನಾವು ಪ್ರಕಟಿಸಿರುತ್ತೇವೆ.

ವಿಜಾಪೂರ
ತಾ॥ ೨೮-೬-೫೧

ಫ. ಗು. ಹಳಕಟ್ಟಿ.
ಸಂಪಾದಕ
ಶಿವಾನುಭವ

# ವಿಷಯಾನುಕ್ರಮಣಿಕೆ.

ಬಸವೇಶ್ವರನು ಕಲ್ಯಾಣದಲ್ಲಿದ್ದಾಗ್ಗೆ ಅವರ ದೊಡ್ಡ ಸಮುದಾಯವು ಅವನಲ್ಲಿ ನೆರೆಯಿತು. ಮುಂದೆ ಅಲ್ಲಿ ಶಿವಾನುಭವ ಮಂಟಪವು ಸ್ಥಾಪಿತವಾಯಿತು. ಈ ಮಂಟಪದಲ್ಲಿದ್ದ ಶಿವಶರಣರ ನಿರೀಕ್ಷಣೆಯಲ್ಲಿ ಜಂಗಮರು ಕಾರ್ಯಮಾಡಹತ್ತಿದರು. ಮುಂದೆ ಬಿಜ್ಜಳನೊಡನೆ ಹಗೆತನವು ಉಂಟಾಗಲು ಅನೇಕ ಯುದ್ಧಗಳಾದವು ಅವುಗಳಲ್ಲಿ ಜಂಗಮರೂ ಭಕ್ತರೂ ಭಾಗವಹಿಸಿ ಕಾದಾಡಿದರು. ಅವುಗಳಲ್ಲಿ ಅವರು ಕಡೆಗೆ ಜಯಶೀಲರಾದರು. ಮುಂದೆ ಜಂಗಮರು ಶಿವಶರಣರ ತತ್ವಗಳನ್ನು ದೇಶದಲ್ಲೆಲ್ಲ ಸಾರುತ್ತ ಅದನ್ನು ಪ್ರಸಾರಮಾಡಿದರು. ಅವುಗಳನ್ನು ಪ್ರಸಾರ ಮಾಡಿದಹಾಗೆ ಎಲ್ಲ ಕಡೆಗೂ ಮಠಗಳು ಸ್ಥಾಪಿಸಲ್ಪಡಹತ್ತಿದವು. ಆಗ ಅವುಗಳಲ್ಲಿ ಜಂಗಮರು ಮಠಾಧೀಶರಾದರು. ಇದರಿಂದ ಅವರು ನಾಡಿನಲ್ಲಿ ಸ್ಥಾಯಿಕವಾದರು. ಆಗ ಅವರು ಗ್ರಾಮಗಳಲ್ಲಿದ್ದುಕೊಂಡು ಶಿವಶರಣರ ವಿಚಾರಗಳ ಬೋಧೆ ಮಾಡುವದರಲ್ಲಿ ತೊಡಗಿದರು. ಈ ಬಿಕ್ಕಟ್ಟಿನ ಕಾಲದಲ್ಲಿ ಸಮಾಜದ ಸ್ಥಿರತೆಗೋಸ್ಕರ ಕೆಲವು ಕಟ್ಟುಗಳು ಶಿವಶರಣರಿಂದ ಮಾಡಲ್ಪಟ್ಟವು. ಇವುಗಳ ಪ್ರಭಾವದಿಂದ ವೀರಶೈವ ಸಮಾಜವು ಸ್ಥಿರಗೊಂಡಿರುತ್ತದೆ.

ಒಂದು ಸಮಾಜವು ಸಾಮರ್ಥ್ಯವುಳ್ಳುದಾಗ ಬೇಕಾದರೆ, ಅದಕ್ಕೊಂದು ಸಿದ್ಧಾಂತ, ಉಚ್ಚಧಾರ್ಮಿಕ ಆಚಾರಗಳು ಮತ್ತು ಕೆಲವು ಸಾಮಾಜಿಕ ನಿಯಮಗಳು ಅವಶ್ಯವಾದವುಗಳು. ವೀರಶೈವ ಸಮಾಜಕ್ಕೆ ಇವೆಲ್ಲವುಗಳನ್ನು ಶಿವಶರಣರು ಗೊತ್ತುಪಡಿಸಿದ್ದಾರೆ.

ಅವರ ತತ್ವಗಳ ಪ್ರಕಾರ ವೀರಶೈವ ಸಮಾಜಕ್ಕೆ ಷಟ್ ಸ್ಥಲ ಶಾಸ್ತ್ರವೇ ಸಿದ್ಧಾಂತವಾಗಿರುತ್ತದೆ. ಅಷ್ಟಾವರಣಗಳೇ ಅದಕ್ಕೆ ಮಹತ್ವದ ಆಚರಣೆಗಳು. ಪಂಚಾಚಾರಗಳೇ ಸಾಮಾಜಿಕ ಕಟ್ಟುಗಳಾಗಿವೆ. ಈ ಪ್ರಕಾರ ವೀರಶೈವರೆಲ್ಲರೂ ಈ ಮೂರೂ ವಿಷಯಗಳನ್ನು ಪಾಲಿಸತಕ್ಕದ್ದಾಗಿದೆ.

ಹೇಗೆ ಚಾತುರ್ವರ್ಣಗಳು ಬ್ರಾಹ್ಮಣೀ ಸಮಾಜಕ್ಕೆ ಮಹತ್ವವಾದವುಗಳೋ ಹಾಗೆಯೇ ಪಂಚಾಚಾರಗಳು ವೀರಶೈವ ಸಮಾಜಕ್ಕೆ ಮಹತ್ವವಾದವುಗಳು. ಪಂಚಾಚಾರಗಳ ಕಟ್ಟಿಗೆ ಪ್ರತಿಯೊಬ್ಬ ವೀರಶೈವನು ಒಳಗಾಗಿ ನಡೆಯತಕ್ಕದ್ದು. ಮಠಗಳು ಈ ಆಚಾರಗಳು ಸಮಾಜದಲ್ಲಿ ನೆಲೆಗೊಳ್ಳುವಂತೆ ಯಾವಾಗಲೂ ಜಾಗ್ರತೆ ಪಡತಕ್ಕದ್ದು. ಅವು ಶಿಥಿಲ

ವಾದರೆ ಸಮಾಜದ ಕಟ್ಟು ಉಳಿಯಲಾರದು. ಬಸವೇಶ್ವರನ ಕಾ[illegible] ದಲ್ಲಿ ಮತ್ತು ಅವನ ತರುವಾಯ ಈ ಐದು ಕಟ್ಟುಗಳು ಪಾಲಿಸ[illegible] ಡುತ್ತ ಬಂದಿದ್ದರಿಂದ ವೀರಶೈವ ಸಮಾಜವು ಅನೇಕ ಬಿಕ್ಕಟ್ಟುಗಳೊ[illegible] ಗಿಂದ ಪಾರಾಗಿ ಬಂದಿತು. ಈ ಕಟ್ಟುಗಳು ಸಮಾಜಕ್ಕೆ ಯಾವಾಗಲೂ ಅನ್ವಯಿಸುವಂಥವು ಇವೆ. ಅವುಗಳನ್ನು ನಮ್ಮ ಪೂರ್ವಿಕರು ಬಹು ಜಾಗ್ರತನದಿಂದ ಕಂಡುಹಿಡಿದಿದ್ದಾರೆ. ಅವು ಯಾವವೆಂದರೆ :—

**ಸದಾಚಾರ**:— ಇದು ಇಲ್ಲದಿದ್ದರೆ ಸಮಾಜದ ಕಟ್ಟು ಉಳಿಯಲಾರದು. ಅದರಿಂದಲೇ ಅದಕ್ಕೆ ಬಲವು ಉತ್ಪನ್ನವಾಗುತ್ತದೆ. ಸದಾಚಾರವು ಸಂಘಟನೆಗೆ ತಳಹದಿಯಾಗಿದೆಂದು ಹೇಳಬಹುದು. **ಭೃತ್ಯಾಚಾರ** — ಪ್ರತಿಯೊಬ್ಬನು ತಾನು ಸೇವಕನೆಂಬ ಭಾವನೆಯಿಂದ ವರ್ತಿಸತಕ್ಕದ್ದು. ಸಮಾಜದಲ್ಲಿ ತಾನು ಒಬ್ಬ ನೇತಾರನೆಂದು ಭಾವಿಸಿದಲ್ಲಿ ಸಮಾಜದ ಕಟ್ಟು ಉಳಿಯಲಾರದು. ಅದು ಕೂಡಲೆ ಕಳಚಿಬೀಳುವದು. **ಶಿವಾಚಾರ** — ಜಾತಿಭೇದವನ್ನು ಎಣಿಸದಿರುವದೇ ಶಿವಾಚಾರವು. ಭಕ್ತರೆಲ್ಲರೂ ಶಿವಸ್ವರೂಪಿಗಳೆಂದು ಭಾವಿಸಿ ಅವರಲ್ಲಿ ಹೆಚ್ಚು ಕುಂದುಗಳನ್ನು ಎಣಿಸದೆ ವರ್ತಿಸಬೇಕು. ಈ ಭಾವವು ಇಲ್ಲದ್ದರಿಂದಲೇ ಹಿಂದುಸ್ತಾನವು ದುರ್ಬಲ ರಾಷ್ಟ್ರವಾಗಿದೆ. **ಲಿಂಗಾಚಾರ** — ಶಿವನನ್ನು ಲಿಂಗರೂಪದಲ್ಲಿ ಅರ್ಚಿಸುತ್ತ, ಅವನಲ್ಲಿ ವಿಶ್ವಾಸವನ್ನಿಟ್ಟು ಆಚರಿಸುವದೇ ಲಿಂಗಾಚಾರವು. ಅಂದರೆ ಧರ್ಮದಲ್ಲಿ ವಿಶ್ವಾಸವನ್ನಿಟ್ಟು ವೀರಶೈವನು ವರ್ತಿಸುವದು ಅವನ ಕರ್ತವ್ಯವು. **ಗಣಾಚಾರ** — ತನ್ನನ್ನು ನಿಂದಿಸುವ ಮತ್ತು ಹಿಂಸಿಸುವ ವಿರೋಧಿಗಳನ್ನು ಶಿಕ್ಷಿಸುವದೇ ಗಣಾಚಾರವು ಗಣಾಚಾರವಿರದಿದ್ದರೆ ಸಮಾಜದ ಅಸ್ತಿತ್ವವು ಉಳಿಯಲಾರದು. ಈ ಪ್ರಕಾರ ವೀರಶೈವ ಸಮಾಜಕ್ಕೋಸ್ಕರ ಶಿವಶರಣರು ಕೆಲವುಕಟ್ಟುಗಳನ್ನು ಮಾಡಿದ್ದಾರೆ. ಇದರಿಂದ ಇದಕ್ಕೆ ಅನೇಕ ಆಘಾತಗಳು ಕಾಲಕಾಲಕ್ಕೆ ಒದಗಿದರೂ ಅವುಗಳೊಳಗಿಂದ ಅದು ಪಾರಾಗಿಬಂದಿರುತ್ತದೆ.

ಈ ಪ್ರಕಾರ ಜಂಗಮರು ವೀರಶೈವ ಸಮಾಜಕ್ಕೋಸ್ಕರ ಮಾಡಿದ ಪ್ರಯತ್ನಗಳನ್ನು ಇಲ್ಲಿ ವಿವರಿಸಿದ್ದೇವೆ. ಈ ವಿವರಣೆಗಳಿಗೆ "ಶಿವಶರಣರ ಚರಿತ್ರೆ" ಗಳು ಭಾಗ ೧, ೨, ೩, ಇವುಗಳಲ್ಲಿ ನಾವು ವಿಶದಪಡಿಸಿದ ಚರಿತ್ರೆಗಳೇ ಆಧಾರಗಳಾಗಿವೆ.

---

# ವಿಷಯಾನುಕ್ರಮಣಿಕೆ

ಪುಟಗಳು




**ಶಿವಾನುಭವ ಪತ್ರಿಕೆ, ವಿಜಾಪುರ.**

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ ರೂ. ೧-೨

# ಶಿವಾನುಭವ

ವರ್ಷ ೨೫ | ಎಪ್ರೇಲ ೧೯೫೧ | ಸಂಚಿಕೆ ೪

## ಶಿವಶರಣರ ಚಳವಳಿಯು ಮುಂದಿನ ಪರಂಪರೆಯು

### ಇತಿಹಾಸ

( ಲೇಖಕ: — ಮಧುರಚನ್ನ ಹಲಸಂಗಿ )

ಶಿವಶರಣರು ಕಲ್ಯಾಣವನ್ನು ಬಿಟ್ಟು ಉಳಿವೆಗೆ ಹೋದಬಳಿಕ ಮುಂದೆ ಶರಣರ ಚಳವಳಿಯು ಯಾವ ಸ್ವರೂಪದಲ್ಲಿ ಹೇಗೆ ಉಳಿಯಿತು ? ಆಮೇಲೆ ಅದು ಮತ್ತೆ ಯಾವಾಗ ತಲೆಯೆತ್ತಿತು ? ಇದರ ಪರಿಣಾಮವೇನಾಯಿತು ? ಇವೇ ಮುಂತಾದ ಪ್ರಶ್ನೆಗಳನ್ನು ತಿಳಿದುಕೊಳ್ಳುವ ಇಚ್ಛೆ ನಮ್ಮೆಲ್ಲರಲ್ಲಿ ತಲೆದೋರುವುದು ಸಹಜ. ಆದರೆ ಈ ವಿಷಯವನ್ನು ತಿಳಿಸಿಕೊಡುವ ಪ್ರಾಮಾಣಿಕ ಗ್ರಂಥಗಳಾವವು ?

ಈಗ ನಮಗೆ ತಿಳಿದಮಟ್ಟಿಗೆ ವಿರೂಪಾಕ್ಷ ಪಂಡಿತನ " ಚೆನ್ನಬಸವ ಪುರಾಣ, " ಹೆಸರು ಹೇಳಿಕೊಳ್ಳದ ಗ್ರಂಥಕಾರರೊಬ್ಬರು ಹಿಂದಿನಕಾಲದಲ್ಲಿಯೇ ಬರೆದಿಟ್ಟ ವಿರಕ್ತಸ್ವಾಮಿಗಳ ಪಟ್ಟ ಪರಂಪರೆಯನ್ನು ಹೇಳುವ " ನಿರಂಜನ ವಂಶ ರತ್ನಾಕರ " ವೆಂಬ ಅಪೂರ್ಣ ಗ್ರಂಥ, ಹಾಗೂ ಆಧುನಿಕ ಪ್ರಖ್ಯಾತ ಗ್ರಂಥವಾದ " ಕರ್ನಾಟಕ ಕವಿಚರಿತೆ " ಈ ಮೂರು

ಗ್ರಂಥಗಳ ಸಹಾಯದಿಂದ ನಾವು ಮೇಲ್ಕಾಣಿಸಿದ ಪ್ರಶ್ನೆಗೆ ಸಮಾಧಾನ ವನ್ನು ತಕ್ಕಷ್ಟು ಮಾಡಿಕೊಳ್ಳಬಹುದು.

ವಿಜಯನಗರದಲ್ಲಿ ಪ್ರೌಢದೇವರಾಯನ ಕಾಲದಲ್ಲಿ (ಕ್ರಿಸ್ತಶಕ ೧೪೧೯ ರಿಂದ ೧೪೪೬) ಮಹಾಪ್ರಧಾನ ಲಕ್ಕಣ್ಣ ದಂಡೇಶನೂ, ದಂಡನಾಯಕನಾದ ಜಕ್ಕಣಾರ್ಯನೂ ಆ ಕಾಲದಲ್ಲಿ ಐಕ್ಯಸ್ಥಲದ ಮಹಾ ಅನುಭವವನ್ನು ಪಡೆದ ನೂರೊಂದು ವಿರಕ್ತ ಯತಿಗಳಿಗೆ ಶಿಷ್ಯರಾಗಿ ಪುರಾತನ ಶಿವಶರಣರ ತತ್ತ್ವವನ್ನು ಪುನಃ ಪ್ರಚಾರ ಮಾಡತೊಡಗಿದರೆಂಬುದನ್ನು ಸರ್ವರೂ ಬಲ್ಲರು.

ಆದರೆ ಶ್ರೀ ಬಸವೇಶ್ವರಾದಿ ಶಿವಶರಣರ ಕಾಲವಾದ ಕ್ರಿಸ್ತೀಯ ೧೨ನೆಯ ಶತಮಾನದಿಂದ ಈ ನೂರೊಂದು ವಿರಕ್ತರ ಕಾಲವಾದ ೧೫ನೆಯ ಶತಮಾನದ ವರೆಗಿನ ಸುಮಾರು ೩೦೦ ವರ್ಷಗಳ ಕಾಲ ಈ ಚಳವಳಿಯು ಯಾರಿಂದ ಹೇಗೆ ನಡೆದಿದ್ದಿತೆಂಬುದೊಂದು ವಿಚಾರಣೀಯವಾದ ಪ್ರಶ್ನವಷ್ಟೆ?

ಮಹಾ ತಪೋನಿಧಿಗಳೂ ಪವಾಡ ಕಾರಣಿಕರೂ ಆಗಿದ್ದ ಶ್ರೀ ರೇವಣಸಿದ್ಧೇಶ್ವರರ ಪುತ್ರರಾದ ರುದ್ರಮುನಿದೇವರು ಶ್ರೀ ಬಸವಾದಿ ಶಿವಶರಣರ ಅನಂತರ ಈ ಚಳವಳಿಯನ್ನು ತಮ್ಮ ಕೈಯ್ಯಲ್ಲಿ ತೆಗೆದುಕೊಂಡು ಶ್ರೀಶೈಲ ಪ್ರಾಂತದಲ್ಲಿ ನೆಲಿಸಿ ತಮ್ಮ ಶಿಷ್ಯರಾದ ಮುಕ್ತಮುನಿಗಳಿಂದ ಪ್ರಚಾರ ಕಾರ್ಯವನ್ನು ಮುಂದುವರಿಸಿದರೆಂದು "ಚನ್ನಬಸವ ಪುರಾಣ" ಹಾಗೂ "ನಿರಂಜನ ವಂಶ ರತ್ನಾಕರ" ಗಳಲ್ಲಿ ಹೇಳಿದೆ.

ರುದ್ರಮುನಿ, ಆತನ ಶಿಷ್ಯ ಮುಕ್ತಿಮುನಿ, ಆತನ ಶಿಷ್ಯ ದಿಗಂಬರ ಮುಕ್ತಿಮುನಿ, ಆತನ ಶಿಷ್ಯ ಕುಮಾರ ಚನ್ನಬಸವೇಶ್ವರ, ಇವರಲ್ಲದೆ ಮುಕ್ತಿಮುನಿಯ ಇನ್ನೊಬ್ಬ ಶಿಷ್ಯ ಅಜಾತ ಭಿಕ್ಷಾವರ್ತಿಸ್ವಾಮಿಗಳು ಇಷ್ಟು ಜನ ಸತ್ಪುರುಷರ ಹೆಸರುಗಳು ಮೇಲ್ಕಾಣಿಸಿದ ಎರಡೂ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆ.

ಇವರಲ್ಲಿ ಕುಮಾರ ಚೆನ್ನಬಸವೇಶ್ವರನು ಬರೆದ ಒಂದು ಗ್ರಂಥವು ಉಪಲಬ್ಧವಿದ್ದು ಅದರಲ್ಲಿ ಆತನು ತನ್ನಬಗೆಗೆ ಹೀಗೆ ಹೇಳಿಕೊಂಡಿದ್ದಾನೆ—

"ಇನು ಮುಕ್ತಿಮುನಿ ವಂಶಾಂಬರಾದಿತ್ಯ ।
ನಧಿಕ ಕೀರ್ತಿಪ್ರತಾಪಂ, ಶಿವಸಿಂಹಾಸನ-
ಮುದಯ ಸಮಿದಗ್ನಿ, ಶಿವಕಲ್ಪದ್ರುಮ
ಕುಮಾರ ಚೆನ್ನಬಸವೇಶ್ವರಂ ॥

ಶಶಿಧರಾರ್ಚಕ ಜನಕೆ ಬಸವೇಶನೆಂದೆನಿಸಿ, ಗಿ-
ರಿಶ ನಿಂದಕರ್ಗೆ ವೀರೇಶನೆಂದದಿಂ, ।
ವಸುಧೆಯೊಳಗಿರ್ಪ ಶಿವಭಕ್ತನಿಚಯ-
ಕ್ಕದ್ವಿತೀಯ ಶಂಕರನೆಂದದಿಂ ॥

ರಸವದ್ವಚೋಯುಕ್ತ ಕೋವಿದ ಸಮೂಹಕ್ಕೆ
ಜಸವೆತ್ತ ದಕ್ಷಿಣಾ ಮೂರ್ತಿಯೆಂದದೆ ವಿರಾ-
ಜಿಸುತಂ ಕುಮಾರ ಚೆನ್ನಬಸವೇಶ್ವರಂ
ದಿಗಂತದೊಳು ಕೀರ್ತಿವೆತ್ತಂ ॥"

ಮುಕ್ತಿ ಮುನಿವಂಶಕ್ಕೆ ಸೂರ್ಯನೆನಿಸಿದ್ದವನು, ಶಿವ ಭಕ್ತರಿಗೆ ಬಸವೇಶನೆನಿಸಿದ್ದವನು, ಅದ್ವಿತೀಯ ಶಂಭುವೆನಿಸಿದ್ದವನು ಮುಂತಾದ ಘನತರ ವಿಷಯಗಳನ್ನು ತನ್ನ ಬಗೆಗೆ ತಾನೇ ಹೇಳಿಕೊಳ್ಳುವಷ್ಟು ಆತ್ಮವಿಶ್ವಾಸವುಳ್ಳ ಈ ಮಹಾನುಭಾವನು ಸಾಮಾನ್ಯನಾಗಿರಲಾರನೆಂಬುದು ಸುಸ್ಪಷ್ಟವಾಗಿದೆ.

ಈತನ ಗ್ರಂಥ "ಬಸವಪುರಾಣದ ಪುರಾತನರ ಚರಿತೆ"ಯೆಂದೂ ಇದರಲ್ಲಿ ೯ ಸಂಧಿಗಳೂ ೩೫೦ ಪದ್ಯಗಳು ಇವೆಯೆಂದೂ, ಬಸವ ಪುರಾಣದಲ್ಲಿ ಸಂಗ್ರಹವಾಗಿ ಸೂಚಿಸಿರುವ ಪುರಾತನರ (ಶಿವಶರಣರ) ಚರಿತ್ರವು ಉಪಕಥೆಗಳೊಡನೆ ವಿಸ್ತರಿಸಿ ಹೇಳಿದೆಯೆಂದು "ಕರ್ಣಾಟಕ ಕವಿಚರಿತೆ"ಯ ದ್ವಿತೀಯ ಸಂಪುಟದ [illegible]ನೆಯ ಪುಟದಲ್ಲಿ ಹೇಳಲಾಗಿದೆ.

ಇನ್ನೊಂದು ವಿಷಯವೇನೆಂದರೆ "ಸಾಸಲ ಭೈರವೇಂದ್ರ"ನೆಂಬ ರಾಜನು ಆ ಕಾಲದಲ್ಲಿ ಶಿವಶರಣರ ಈ ಚಳವಳಿಗೆ ಬಹಳೇ ಸಹಾಯಕಾರಿಯಾಗಿದ್ದಂತೆ ತೋರುತ್ತದೆ. ಈತನ ವಿಷಯದಲ್ಲಿ "ಸಾಸಲ ಭೈರವೇಂದ್ರ ಚರಿತೆ," "ಭೈರವೇಶ್ವರ ಕಾವ್ಯ" "ಭೈರವೇಶ್ವರ ಪುರಾಣ"

"ಭೈರವೇಶ್ವರ ಕಾವ್ಯನ ಕಥಾಸಾಗರ," "ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ" ಮೊದಲಾದ ಅತಿ ಮಹತ್ವದ ಗ್ರಂಥಗಳು ಕಾಣಿಸಿವೆ. ಕೊನೆಯ ಗ್ರಂಥವಂತೂ ಅನೇಕ ಐತಿಹಾಸಿಕ ಚರಿತ್ರಗಳಿಂದ ಕೂಡಿವೆ ಯೆಂಬುದು ಸರ್ವರಿಗೆ ಗೊತ್ತಿದ್ದ ವಿಷಯ. ಆದರೆ ಮೊದಲನೆಯದಾದ "ಸಾಸಲ ಭೈರವೇಂದ್ರ ಚರಿತೆ" ಯೆಂಬ ಗ್ರಂಥವು ಇನ್ನೂ ಉಪಲಬ್ಧವಾಗಿಲ್ಲವಾದರೂ ಅದು ಮೇಲೆ ಹೇಳಿದ "ಮುಕ್ತಿ ಮುನಿವಂಶ ಸಂಭೂತರಾದ ಕುಮಾರ ಚನ್ನಬಸವೇಶ್ವರ" ರೇ ಬರೆದಿದ್ದಾರೆಂದು ಅವರ ಗ್ರಂಥದಲ್ಲಿಯೇ ಹೇಳಲ್ಪಟ್ಟಿರುವದರಿಂದ ಇದೂ ಕೂಡ ಅತ್ಯಂತ ಮಹತ್ವದ ಗ್ರಂಥವೆಂಬುದರಲ್ಲಿ ಸಂಶಯವಿಲ್ಲ.

ಈ ಕುಮಾರ ಚೆನ್ನಬಸವೇಶ್ವರರು ಇನ್ನೂ ಕೆಲವು ಗ್ರಂಥಗಳನ್ನು ಬರೆದಿರುವುದಾಗಿ ತಾವೇ ಹೀಗೆ ಹೇಳಿಕೊಂಡಿದ್ದಾರೆ:—

> "ಇಂತು ಬಸವೇಶ್ವರ ಪುರಾಣದೊಳು ಸೂಚಿಸಿದ |
> ಕಂತುಹರ ಶರಣ ಚರಿತೆಯ ಪದಂಗೊಳಿಸಿಯ-
> ತ್ಯಂತ ಕಾವ್ಯ ವಿಲಾಸದಿಂದೆ ಸಾಸಲ ಭೈರವೇಂದ್ರ
> ಚಾರಿತ್ರ ಮಸುರಿ ||
>
> ಸಂತತದಿ ವೀರಮಾಹೇಶ ಸಂಗ್ರಹದಲ್ಲಿ |
> ಗ್ರಂಥ ರೂಪಾಗಿರ್ದ ಶಂಭು ಪೂಜಾವಿಧಿಯ |
> ನಂತಲ್ಲಿ ಭೂತಿಯಧ್ಯಾಯಾದಿಯಂ ಕುಮಾರೇಶ್ವರಂ
> ಕನ್ನಡಿಸಿದಂ ||"

"ಬಸವ ಪುರಾಣದ ಪುರಾತನರ ಚರಿತೆ" ಯೊಂದಲ್ಲದೆ "ಸಾಸಲ ಭೈರವೇಂದ್ರ ಚರಿತ್ರ," "ಶಿವಪೂಜಾವಿಧಿ," "ವಿಭೂತಿ ಮಹಿಮೆ" ಮೊದಲಾದ ಗ್ರಂಥಗಳನ್ನೂ ಈತನು ಬರೆದು ಶಿವಾಚಾರಕ್ಕೆ ಸಹಾಯ ಮಾಡಿದ್ದಾನೆಂಬುದು ಸುಸ್ಪಷ್ಟವಾಗಿದೆ.

ಆದರೆ ಇಲ್ಲಿ ಮಹತ್ವದ ಇನ್ನೊಂದು ವಿಷಯವಾವುದೆಂದರೆ ಸಾಸಲ ಭೈರವ ರಾಜನ ವೃತ್ತಾಂತ. ಆದು ಹೀಗೆ ಇದೆ.

"ಬಸವಾದಿ ೭೭೭ ಪುರಾತನರಾಗಿ ಮರ್ತ್ಯಕ್ಕವತರಿಸಿ ವೀರಶೈವಾಚಾರದಿಂದ ಶಿವಾಚಾರವನುದ್ಧರಿಸಿ ನಿತ್ಯಾನಂದ ನಿಜಲಿಂಗೈಕ್ಯರಾಗಿರುತ್ತಂ ಮರ್ತ್ಯಲೋಕದ ಮಹಿಮೆಯಂ ಪೂರೈಸಿ ಕೈಲಾಸಕ್ಕೈದಿದರ್'' ಬಳಿಕ ಖಿಲವಾದ ವೀರಶೈವಾಚಾರವನುದ್ಧರಿಸಲು ಶಿವನು ಕಾಲಸಂಹಾರನೆಂಬ ಗಣೇಶ್ವರನನು ಆಂಧ್ರದೇಶದಲ್ಲಿ ಮೋಪೂರೆಂಬ ಪಟ್ಟಣದ ಅರಸು ಸಂಗಮರಾಜ, ಹೆಂಡತಿ ಹೈಮಾವತಿ ಇವರಿಗೆ ಭೈರವರಾಜನೆಂಬ ಮಗನಾಗಿ ಹುಟ್ಟುವಂತೆ ನೇಮಿಸಿದನು. ಭೈರವರಾಜನು [illegible]ನೆಂಬ ಪೌರಾಣಿಕನಲ್ಲಿ ಪೂರ್ವ ಕಥೆಗಳನ್ನು ಕೇಳುತ್ತ ಗಂಡಹೆಂಡಿರು ಭಕ್ತಿಯುಕ್ತರಾಗಲು ಶಿವನು ಸ್ವಪ್ನದಲ್ಲಿ ಬಂದು— ನೀನು [illegible] ಮಲ್ಲಿಪಟ್ಟಣಕ್ಕೆ ಹೋಗಿ ಅಲ್ಲಿ ಗುರುಕರುಣವಂ ಪಡೆದು, ಸಾಸಲಿಗೆ ಹೋಗಿ ಜಂಗಮಾರ್ಚನೆಯು ಮಾಡು. ನನ್ನ ಹೆಸರು ಸಾಸಲ ಸೋಮೇಶ್ವರ' ಎಂದನು. ಅದೇ ಮೇರೆಗೆ ಭೈರವರಾಜನು ಮಲ್ಲಿಪಟ್ಟಣಕ್ಕೆ ಹೋಗಿ ಅಲ್ಲಿಯ ದೊರೆಯಾದ ರಾಮರಾಜನಿಂ ಮನ್ನಣೆ ಪಡೆದು ಸಾಸಲ ಸೋಮೇಶ ಗುರುವಿನ ರೂಪದಿಂ ಬಂದ ಸಾಸಲ ಸೋಮೇಶನಿಂದ ದೀಕ್ಷೆಪಡೆದು ಅನೇಕ ಪವಾಡಗಳನ್ನು ಮಾಡಿ ಕೊನೆಗೆ ಶಿವನಿಂದ ಕೈಲಾಸಕ್ಕೆ ಒಯ್ಯಲ್ಪಟ್ಟನು."

—"ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ"
(ಕರ್ಣಾಟಕ ಕವಿಚರಿತೆ, ಸಂ. ೨ ಪುಟ ೨೬೫)

ಮೇಲ್ಕಾಣಿಸಿದ ಕುಮಾರ ಚೆನ್ನಬಸವೇಶ್ವರ ಹಾಗೂ ಸಾಸಲ ಭೈರವರಾಜ ಇವರ ಕಾಲನಿರ್ಣಯವು ಸಂದ್ಯ ಕವಿಚರಿತ್ರಕಾರರಿಂದಾಗಲಿ ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ ಕರ್ತೃವಾದ ಕವಿ ಶಾಂತಲಿಂಗ ದೇಶಿಕನಿಂದಾಗಲಿ ಸರಿಯಾಗಿ ಆಗಿಲ್ಲವೆಂದು ನನ್ನ ಮತ ಏಕೆಂದರೆ—

ಮೇಲ್ಕಾಣಿಸಿದ ಇಬ್ಬರೂ ಪವಾಡ ಪುರುಷರು ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಾದ (ಕ್ರಿ. ಶ ೧೪೧೯-೧೪೪೬) ನೂರೊಂದು ವಿರಕ್ತ ಯತಿಗಳ ಕಾಲಕ್ಕಿಂತ ಇತ್ತೀಚಿನವರೆಂದು ಕವಿಚರಿತ್ರಕಾರರೂ, ಪುರಾತನ ಕವಿಯಾದ ಶಾಂತಲಿಂಗ ದೇಶಿಕನೂ ಭಾವಿಸಿದಂತಿದೆ. ಕುಮಾರ ಚೆನ್ನಬಸವೇಶ್ವರನು "ಬಸವಪುರಾಣದ" ಶರಣರ ಕಥೆಗಳನ್ನು ವಿಸ್ತರಿಸಿ

ಬರೆದದ್ದರಿಂದ ಬಸವ ಪುರಾಣವನ್ನು ಬರೆದ ಭೀಮ ಕವಿಗಿಂತ ( ಕ್ರಿ. ಶ ೧೩೬೯ಕ್ಕಿಂತ ) ಈತನು ಈಚೆಯವನೆಂದು ಕವಿಚರಿತ್ರಕಾರರು ಬರೆದಿರುತ್ತಾರೆ. ಆದರೆ ಈ ಬಸವಪುರಾಣವು ತೆಲುಗಿನಲ್ಲಿ ಪಾಲ್ಕುರಿಕೆ ಸೋಮನಾಥನಿಂದ ( ಸುಮಾರು ಹರಿಹರ ಕವಿಯ ಕಾಲದ ಸುಮಾರಕ್ಕಿದ್ದ ) ಬರೆಯಲ್ಪಟ್ಟುದ್ದಾಗಿರುವ ಸಂಭವವು ಬಹಳಮಟ್ಟಿಗಿದೆ. ಏಕೆಂದರೆ ಈತನು ಪೂರ್ವ ಕವಿಗಳನ್ನು ಸ್ತುತಿಸುವಾಗ ಭೀಮ ಕವಿಯ ಹೆಸರನ್ನು ಹೇಳದೆ " ಬಾಣೋದ್ಭಟ, ಮಳಯರಾಜ, ಶೃಂಗಾರ ಕವಿ ಹರೀಶ್ವರ, ಪದ್ಮರಾಜ, ಸೋಮೇಶಾದಿಗಳಿಗಾನೆರಗುವೆಂ " ಎಂದು ಹರಿಹರ, ಕೆರೆಯ ಪದ್ಮರಸ, ಪಾಲ್ಕುರಿಕೆಯ ಸೋಮನಾಥರನ್ನು ಬಾಣ, ಉದ್ಭಟ, ಮಳಯರಾಜರೊಂದಿಗೆ ಸೇರಿಸಿ ಕೊಂಡಾಡಿದ್ದಾನೆ.

ಚೆನ್ನಬಸವ ಪುರಾಣದ ಕೊನೆಯ ಎರಡು ಸಂಧಿಗಳು ಕಾಲಜ್ಞಾನ ಸಂಧಿಗಳಾಗಿದ್ದು ಅವುಗಳಲ್ಲಿ ಮೊದಲನೆಯದರಲ್ಲಿ ಶ್ರೀ ಬಸವೇಶ್ವರರ ಕಾಲದಿಂದ ವಿಜಯನಗರದ ರಾಜ್ಯ ಸ್ಥಾಪನೆಗಿಂತ ಮುಂಚಿನ ಸಂಗತಿಗಳನ್ನೂ, ಎರಡನೆಯದರಲ್ಲಿ ವಿಜಯನಗರ ರಾಜ್ಯ ಸ್ಥಾಪನೆಯಿಂದ ಚೆನ್ನಬಸವ ಪುರಾಣದ ಕಾಲವರೆಗಿನ ಸಂಗತಿಗಳನ್ನೂ ಹೇಳಲಾಗಿದೆಯಷ್ಟೇ! ನಾಸಲ ಭೈರವರಾಜನ ವಿಷಯವನ್ನು ಈ ಪುರಾಣದ ಕಾಲಜ್ಞಾನ ಸಂಧಿಯ ಮೊದಲನೆಯ ಅಧ್ಯಾಯದಲ್ಲಿ ಅಂದರೆ, ವಿಜಯನಗರ ರಾಜ್ಯ ಸ್ಥಾಪನೆಗಿಂತ ಮುಂಚಿನ ವಿಷಯಗಳಲ್ಲಿ ಹೇಳಲಾಗಿದೆ. ಇದೇ ಸರಿಯೆಂದು ನನಗೆ ಅನಿಸುತ್ತದೆ. ಏಕೆಂದರೆ ವಿಜಯನಗರ ರಾಜ್ಯ ಸ್ಥಾಪನೆಗಿಂತ ಬಹಳ ಮುಂಚೆ ಇರಬಹುದಾದ ಮೇಲ್ಕಾಣಿಸಿದ ಕುಮಾರ ಚನ್ನಬಸವೇಶ್ವರನ, ಈ ಭೈರವರಾಯನ ಚರಿತ್ರೆಯನ್ನು ಬರೆದಿರುವ ವಿಷಯವು ಈ ಮೊದಲೇ ಆತನ ಸ್ವತಃದ ಪದ್ಯಗಳಿಂದಲೇ ತಿಳಿದ ವಿಷಯವಾಗಿದೆ. ಶ್ರೀ ಬಸವಾದಿ ಶಿವಶರಣರ ಕಾಲದಲ್ಲಿದ್ದ ರುದ್ರಮುನಿಯಿಂದ ನಾಲ್ಕನೆಯ ತಲೆಯವನಾಗಿ ಈ ಕುಮಾರ ಚೆನ್ನಬಸವನಿರುವದರಿಂದ ಆ ಕಾಲದಿಂದ ತೀರ ದೂರದಲ್ಲಿರುವ ವಿಜಯನಗರ ರಾಜ್ಯ ಸ್ಥಾಪನೆಯ ಕಾಲಕ್ಕಿಂತ ಈಚೆಗೆ ಅದರಲ್ಲಿಯೂ ಇನ್ನೂ ಹೆಚ್ಚು ದೂರದಲ್ಲಿರುವ ನೂರೊಂದು ವಿರಕ್ತ ಯತಿಗಳ ಹಾಗೂ ಪ್ರೌಢದೇವರಾಯನ ಕಾಲಕ್ಕಿಂತ ಈಚೆಗೆ ಈತನಾಗಲಿ, ಈತನಿಂದ ಪುರಾಣ ರೂಪದಲ್ಲಿ ಸ್ತುತಿಸಿಕೊಂಡ ಭೈರವರಾಜನಾಗಲಿ

ಇರುವ ಸಂಶಯವು ಇಲ್ಲವೇ ಇಲ್ಲ. ಚನ್ನಬಸವ ಪುರಾಣದ ಕಾಲಜ್ಞಾನಗ
ಪೃಥಸು ಸಂಧಿಯಲ್ಲಿ (ಅಂದರೆ ವಿಜಯನಗರ ರಾಜ್ಯಸ್ಥಾಪನೆಗಿಂತ ಮುಂಚೆ)
ಭೈರವರಾಜನ ವಿಷಯವನ್ನು ಸೇರಿಸಿದ್ದೇ ಸರಿಯೆಂದು ನನಗೆ ಅನಿಸು
ತ್ತದೆ. ಕುಮಾರ ಚೆನ್ನಬಸವನ ಕಾಲವಾದರೂ ಸುಮಾರು ಅದೇ ಎಂದು
ಮೇಲ್ಕಾಣಿಸಿದ ಕಾರಣಗಳಿಂದ ಊಹಿಸಲಿಕ್ಕೆ ಶಕ್ಯವಿದೆಯೆಂಬುದನ್ನು
ಮೊದಲೇ ತೋರಿಸಿಕೊಟ್ಟಿದ್ದೇನೆ.

ಈ ಮಾತಿಗೆ ಸಾಕ್ಷಿ ಕೊಡುವಂತೆ "ನಿರಂಜನ ವಂಶರತ್ನಾಕರ
ದಲ್ಲಿ ಹೀಗೆ ಹೇಳಿದೆ:—

"ಬಲ್ಲಾಳನಿಗೆ ಆ ದೇಶದ ರಾಜ ಪಟ್ಟವಾಗಲು ಆತನಾಳಿಕೆಯಲ್ಲಿ
ಹರಿಹರಾಚಾರ್ಯರು, ರಾಘವಾಂಕಯ್ಯ, ಕೆರೆಯ ಪದ್ಮರಸರು, ಹೊಸ
ಲೆಯ ಬೈರವರಾಜ ಒಕ್ಕಲೂರ ನುಲಿಯ ಕಲ್ಲಪ್ಪ ಮೊದಲಾದ ಸಕ
ಲೇವ ಭಕ್ತರುಗಳಾದ(ರು)"

— "ನಿರಂಜನ ವಂಶ ರತ್ನಾಕರ" ಪುಟ—೧೧

ನಿಜವಾಗಿಯೂ ಕಲ್ಯಾಣದ ಕಲಚುರಿಯರ ರಾಜ್ಯ ಹಾಳಾದ
ಮೇಲೆ ದಕ್ಷಿಣ ಕರ್ನಾಟಕದಲ್ಲಿ ಆಗ ಪ್ರಬಲರಾಗಿದ್ದ ಹೊಯ್ಸಳಬಲ್ಲಾ
ಳರ ರಾಜ್ಯದಲ್ಲಿ ಹಾಗೂ ಆಂಧ್ರದೇಶದಲ್ಲಿ ಶಿವಶರಣರ ಚಳವಳಿಗೆ
ಮೊದಲಾಯಿತೆಂಬುದು ಸುಸ್ಪಷ್ಟ. ಈ ರೀತಿಯಿಂದ ಆಗ ಹರಿಹರದೇವ
ಕೆರೆಯ ಪದ್ಮರಸ, ಪಾಲ್ಕುರಿಕೆಯ ಸೋಮನಾಥ, ಹೊಸಲೆಯ ಬೈರವ
ರಾಜ, ಕುಮಾರ ಚನ್ನಬಸವೇಶ್ವರ ಮೊದಲಾದ ಹರಗಣರೆಲ್ಲ ಸುಮಾ
ಸ್ಸಮಾರಾಗಿ ಒಂದೇ ಕಾಲದಲ್ಲಿ ಕಾರ್ಯ ಮಾಡುತ್ತಿದ್ದರೆಂದು ಊಹಿಸ
ಬಹುದಾಗಿದೆ.

ಚೆನ್ನಬಸವ ಪುರಾಣದಲ್ಲಿ ಸಹ ಹರಿಹರ, ರಾಘವಾಂಕ, ಕೆರೆಯ
ಪದ್ಮರಸರ ಜೊತೆಗೇ ಈ ಭೈರವರಾಜ ಹಾಗೂ ವಕ್ಕಲೂರ ಕಲ್ಲಪ್ಪನ
ವಿಷಯವು ಹೇಳಿದೆ.

ಇವರಲ್ಲದೆ ಆ ಕಾಲದಲ್ಲಿ ಹಾಗೂ ಅದರ ಮುಂದಿನ ಸ್ವಲ್ಪಕಾಲ
ದಲ್ಲಿ ಅಂದರೆ ವಿಜಯನಗರ ರಾಜ್ಯಸ್ಥಾಪನೆಯ ಕಾಲದವರೆಗೆ) ಕರಿಯಿಡೆ
ಯಲ್ಲಿ ಮುಮ್ಮಡಿ ಭಕ್ತ, ಪೆನುಗೊಗ್ಗೆಯಲ್ಲಿ ದೇವಮ್ಮ, ಕಂಚಿಯಲ್ಲಿ
ಬಯಲ ಲಿಂಗಣ್ಣ, ಗುಜ್ಜರಾತಿಯ ದೇಶರಾವುತ, ಪಟ್ಟೇಶ್ವರದಲ್ಲಿ ಬಸವಪ

ಉದಯಗಿರಿಯಲ್ಲಿ ರಾಮಯ್ಯ, ರಾಜಮಹೇಂದ್ರದಲ್ಲಿ ಸೋಮಣ್ಣ, ದಕ್ಷಿಣ ಪುರದಲ್ಲಿ ಬೇಳೆಯೊಡೆಯುವರು, ಕಾರುಣ್ಯದಲ್ಲಿ ಕೊಪ್ಪೆಯ ಬಸವಪ್ಪ, ಬದಿಕೆಯಲ್ಲಿ ಏಕೋಭಾಯಿ, ಮೇಲುಕೊಂಕಣದಲ್ಲಿ ಗೋಪೇಶ್ವರದ ಪೀರಪ್ಪ, ಉಪ್ಪಲಿಕೆರ ಅಣ್ಣಪ್ಪ, ಸುಗ್ಗಲೂರಲ್ಲಿ ಕಾಚನಾಯಕ, ಅಸುಗೋಡದಲ್ಲಿ ಮಲ್ಲಪಯ್ಯ, ಇಂತಿವರು ಮೊದಲಾದ ಶಿವಶರಣರು ಅಲ್ಲಲ್ಲಿ ನಾನಾ ಪವಾಡಗಳನ್ನು ಮೆರೆದು ನಿಜಪದವಿಯನ್ನು ಪಡೆದರು. ಮುಂದೆ ಹೊಸಮಲೆಯ ಕಂಪಲಭೂಪನ ಕುಮಾರನಾದ ರಾಮನಾಥನು ಕುಮ್ಮಟವೆಂಬ ದುರ್ಗವನ್ನು ಕಟ್ಟಿಸಿ ಸುತ್ತಣ ಭೂಪಾಲಕರನ್ನು ಗೆದ್ದು ಹೊಗಳಿಸಿ ಕೊಳ್ಳುವನು.

— "ಚೆನ್ನಬಸವ ಪುರಾಣ" ಸಂಧಿ ೬೨ ( ಕಾಲಜ್ಞಾನ ಸಂಧಿ ೧)

ಈ ಕೊನೆಯವನಾದ ಕುಮಾರ ರಾಮನಾಥನ ವಿಷಯವಾಗಿ ಹಿಂದೆ "ಕುಮಾರ ರಾಮನ ಕಥೆ" "ಕುಮ್ಮಟ ರಾಮನ ಕಥೆ" ಮೊದಲಾದ ಅನೇಕ ಗ್ರಂಥಗಳು ಹುಟ್ಟಿವೆ. ಸಾಕಲ ಭೈರವ ರಾಜನಂತೆ ಈತನೂ ಶಿವಶರಣರ ಚಳವಳಿಗೆ ಸಹಾಯಕನಾಗಿದ್ದನೋ ಹೇಗೆ? ಅಥವಾ ಎಷ್ಟರ ಮಟ್ಟಿಗೆ ಸಹಾಯಕನಾಗಿದ್ದನು? ಎಂಬ ವಿಷಯವು ಇನ್ನೂ ಸಂಪೂರ್ಣವಾಗಿ ತಿಳಿದಿಲ್ಲ. ಈತನ ಕಥೆ ಹೀಗಿದೆ:—

"ಚಂಡಾಟವಾಡುತ್ತಿದ್ದಾಗ ಚೆಂಡು ಅರಮನೆಗೆ ಹೋಗಿ ಬೀಳಲು ಕುಮಾರ ರಾಮನು ಅದನ್ನು ತೆಗೆದುಕೊಳ್ಳುವದಕ್ಕೆ ಹೋದಾಗ ಅವನ ಮಲತಾಯಿಯಾದ ರತ್ನಾಜಿ ಗಂಡನೊಡನೆ ಇಲ್ಲದ ಚಾಡಿಯನ್ನು ಹೇಳಿ ಅವನನ್ನು ಕೊಲ್ಲಿಸಬೇಕೆಂದಾಗ ದೊರೆ ಮಂತ್ರಿಗೆ ಆಜ್ಞಾಪಿಸಲು ಅವನು ರಾಜಕುಮಾರನನ್ನು ನೆಲಮಾಳಿಗೆಯಲ್ಲಿರಿಸಿ ಕೊಂದೆನೆಂದು ಹೇಳಿಬಿಟ್ಟನು. ಈ ಸುದ್ದಿಯನ್ನು ಕೇಳಿ ತುರುಕರು ರಾಜ್ಯವನ್ನು ಮುತ್ತಲು ಕುಮಾರ ರಾಮನು ಬಹಳ ಪರಾಕ್ರಮದಿಂದ ಅವರೊಡನೆ ಏಕಾಕಿಯಾಗಿ ಕಾದಿ ಮಡಿದನು."

—"ಕರ್ಣಾಟಕ ಕವಿಚರಿತೆ" ಸಂ ೨, ಪುಟ ೨೦೮

ಅಂತೂ ಇಲ್ಲಿಗೆ ವಿಜಯನಗರದ ರಾಜ್ಯಸ್ಥಾಪನೆಯ ಕಾಲವು ಆರಂಭವಾಯಿತು. ವಿಜಯನಗರಕ್ಕೂ ಕುಮಾರ ರಾಮನಿಗೂ ವಿಶೇಷ ಸಂಬಂಧ

ವಿದ್ದಹಾಗೆ ಅನೇಕ ಐತಿಹ್ಯಗಳಿವೆ. ವಿಜಯನಗರದಲ್ಲಿ ಇಂದಿಗೂ ಕುಮಾರ ರಾಮನ ಗರಡೀಮನೆ ಮೊದಲಾದ ಅವಶೇಷಗಳನ್ನು ತೋರಿಸುತ್ತಿರುವದೇ ಇದಕ್ಕೆ ಸಾಕ್ಷಿ.

ಇನ್ನು ಮುಂದಿನ ಘಟ್ಟದ ವಿಷಯವನ್ನು ವಿವರಿಸುವ ಮೊದಲು ದಕ್ಷಿಣ ಕರ್ನಾಟಕದಲ್ಲಿ (ಈಗಿನ ಮೈಸೂರು ಸೀಮೆಯಲ್ಲಿ) ಆಗ ಹರಗಣ ಗಳಿಂದ ಸ್ಥಾಪಿತವಾದ ಕೆಲವು ಊರುಗಳ ಇತಿಹಾಸವನ್ನು ಸ್ವಲ್ಪ ಮಟ್ಟಿಗೆ ನಿರೀಕ್ಷಿಸುವುದು ಅವಶ್ಯವೆಂದು ನನಗೆ ಅನಿಸುತ್ತದೆ. ಅವು ಯಾವ ವೆಂದರೆ....

**ಗುಮ್ಮಳಾಪುರ**:—"ಕಲ್ಯಾಣಪುರ (ವು) ತುರುಕಜನರಾಳಿ ಕೆಯಾಗಿ ಶಿವಾಚಾರದ ನಡತೆಗೆ ವಿರೋಧವಾಗಲು ಅಲ್ಲಿರ್ದ ಗುಮ್ಮಣ್ಣ ಯ್ಯ, ಪೆಮ್ಮಣ್ಣಯ್ಯಗಳೆಂಬ ಶಿವಶರಣರು ಕಲ್ಯಾಣವಂಬಿಟ್ಟು ದಕ್ಷಿಣಕಾಶಿ ಎನಿಸುವ ಶಿವಗಂಗೆ ಬೆಟ್ಟಕ್ಕೆ ಸಮೀಪವಾದ ಆದೇಶದಲ್ಲಿ ಆಗುಮ್ಮಳಾಪು ರವಂ ವಿರಚಿಸಿ .......... ಅಪುರದಿ ಲಿಂಗಾಂಗಿಗಳಾದ ವೀರಶೈವ ಮತಸ್ಥ ರಲ್ಲದೆ ಭವಿಗಳು ಇದ್ದಲ್ಲಿ ಅವರು ನಾಶವಾಗಲಿ ಎಂದು ಕುರುಹು ಇಟ್ಟು ಆ ಶರಣರು ಮುಕ್ತರಾದ ಮಹಿಮಾಸ್ಥಳ ಈ ಗುಮ್ಮಳಾಪುರ." ಎಂದು ನಿರಂಜನವಂಶ ರತ್ನಾಕರದಲ್ಲಿ (ಪುಟ - ೫೬) ಹೇಳಿದ.

**ಹರದನಹಳ್ಳಿ**..."ಅಯ್ಯಾವಳ್ಳಿಪುರದ (ಐಹೊಳ್ಳಿ)......೧ ಕೋರಿಸೆ ಟ್ಟಿ, ೨ ಮಹಾನಾಡಸೆಟ್ಟಿ, ೩ ವಾಲಿಸೆಟ್ಟಿ, ೪ ಪಟ್ಟಣಸೆಟ್ಟಿ, ೫ ಮೆಂಡಗಾ ದ್ದಲಿಸೆಟ್ಟಿ, ಇವರಲ್ಲದೆ (೬) ಗುಜ್ಜಾರಸೆಟ್ಟಿ, (೭) ಬಣಕಾರಸೆಟ್ಟಿ, (೮) ಗು ಣಹಾರಿಸೆಟ್ಟಿ, ...... ಈ ಅಷ್ಟವಣಿಜರು ಅವರವರ ಕಸಬುಗಳನ್ನು ಮಾ ಡುತ್ತ ಇದ್ದಾರೆ. ........ ಈ ಹೇದರಾದ ವಾಣಿಜರ ವಂಶಸ್ಥರಾದ ಬಣಜಿಗ ಸೆಟ್ಟರು ಬಣಕ್ಕೆ ಸಾವಿರ ಎತ್ತುಗಳ ಬೀಡಿಕೆಗಳನ್ನು ಮಾಡಿ ಗ ಟ್ಟ ಬೆಟ್ಟದ ವ್ಯಾಪಾರವಂ ಮಾಡಿಸುತ್ತಿರುವಲ್ಲಿ ದಕ್ಷಿಣದೇಶದಲ್ಲಿರುವ ಇವರ ದಲ್ಲಾಲನಾದ ಸೆಟ್ಟಿಯು ಆ ಸಾವುಕಾರರಾದ ಸೆಟ್ಟರಿಗೆ ಅಡಿಕೆ, ಯಾಲಕ್ಕಿ, ಮೆಣಸು ಮುಂತಾದ ಸರಕುಗಳನ್ನು ಮಾಲೆದಾಡಿ ಕಳಿಸಿ ದರೆ ಬಹಳ ಲಾಭವಾದೀತು ಎಂದು ಪತ್ರವಂ ಬರೆದ ಕಾರಣ ...... ಹೆರದರಾದ ಬಣಜಿಗ ಸೆಟ್ಟರು ದಕ್ಷಿಣ ದೇಶವಾದ ಗಟ್ಟಗಳಿಗೆ ಹೊರಟರು. ...... ಕರ್ನಾಟಕ ದೇಶದ ಮೈಸೂರು ಸೀಮೆಯಲ್ಲಿರುವ ಕಾವೇರಿ ನದಿಗೆ ಸಮೀಪಸ್ಥವಾದ .... ಒಂದು ಸ್ಥಳದ ಬೈಲಿನಲ್ಲಿ .... ಬೀಡಿಕೆಯ ಎತ್ತು

ಗಳ ಒಜ್ಜೆಯನಿಳುಹಿ ಗುಡಾರಂಗಳನಿಳುಹಿ ಒಲೆಗಳಂ ಮಾಡಿ ಅಕ್ಕಿಗಳೀ ಪಾತ್ರೆಗಳಲ್ಲಿಹಾಕಿ.... ಹೋಗಲು ಇತ್ತ ಒಲೆಗುಂಡುಗಳಲ್ಲಿ ಒಂದು ...ಲಿಂಗ ವಿದ್ದ ದೇವಾಲಯವು ಹಾಳಾಗಿ ಈ ಲಿಂಗಕ್ಕೆ ಪೀಠವಿಲ್ಲದೆ ಗೋಳಕವಾದ ಈ ಗುಂಡು ಕಾಡುಗಲ್ಲೊಳಗೆ ಇದು ಒಂದು ಕಲ್ಲಾಗಿ ಇದ್ದಕಾರಣ ಇದು ತಿಳಿಯದೆ ಈ ಗುಂಡನು ಒಲೆಗಿಟ್ಟು ಉರಿಯಂ ( ಮಾಡಿದವು )... ಇದು ಅಮೃತೇಶ್ವರಲಿಂಗವೆಂದು ಹೆಸರನ್ನಿಟ್ಟು ಆ ಹರದರು . ಆ ಲಿಂಗವಂ ಒಂದು ವೃಕ್ಷದ ಕೆಳಗೆ ಇಟ್ಟು ಪೂಜಿಸಿ ಜಂಗಮಾರ್ಚನೆಯಂ ಮಾಡಿ ( ದರು. )..... .... ... ಆ ಸೀಮೆಗಳಲ್ಲಿ ಸಂಚರಲು ಒಂದಕ್ಕೆ ಮೂರು ಇಮ್ಮಡಿಯಾಗಿ ಲಾಭವು ಬಂದಕಾರಣ ಆ ದೇಶದ ರಾಜನಿಂ ಪಟ್ಟಣವಂ ಕಟ್ಟಲಿಕ್ಕೆ ಆ ಲಿಂಗವಿರುವ ಬೈಲು ಸ್ಥಳವಂ ಕೌಲು ಹಿಡಿದು ತಮ್ಮಯ ಬಂಧು ಬಾಂಧವರ ಕರೆಯಿಸಿ ಅನೇಕ ದ್ರವ್ಯಗಳ ತರಿಸಿ ಆ ಸ್ಥಳದಿ.... ಪಟ್ಟಣವಂ ಕಟ್ಟಿ ಆ ಪುರಕ್ಕೆ ವಾಣಿಜ್ಯ ಪುರವೆಂಬ ( ಹರದನಹಳ್ಳಿ ) ನಾಮವನ್ನಿಟ್ಟು ... ... ಆ ದೇಶ ಮಧ್ಯದಲ್ಲಿರುವ ಗೋಸಲಿಯ ಯತೀಶ್ವರರಾದ ಸಿದ್ಧೇಶ್ವರ ಸ್ವಾಮಿಗಳಿಗೆ ೭೨ ಬೀಡುಗಳೊಡನೆ ಉತ್ಸಹಂಗೊಳಿಸಿ, ತಾವು ಕಟ್ಟಿಸಿದ ಮಠವಂ ಒಪ್ಪಿಸಿ ಆ ಮಠಕ್ಕೆ ಭೂಮಿದಾನಕೆಯಂ ಮಾಡಿಕೊಟ್ಟು ಸ್ವಾಮಿಗಳ ಮಠ ಪೂಜೋತ್ಸಾಹಂಗಳಂ ಮಾಡುತ್ತ ತಮ್ಮ ಭಕ್ತಿಯಂ) ಯಿಂಬಿಟ್ಟು ಕೊಂಡರು " ಎಂದು ನಿರಂಜನ ವಂಶ ರತ್ನಾಕರದಲ್ಲಿ ( ಪುಟ ೨೬ ರಿಂದ ೩೦ ) ಹೇಳಿದೆ.

**ಸಿದ್ಧಗಂಗೆ:**— "ಅನಂತರ ಗೋಸಲಿಯ ಸಿದ್ಧೇಶ್ವರ ಸ್ವಾಮಿಗಳವರು ತಮ್ಮ ಕರಸಂಜಾತರಾದ ನೂರು ಒಂದು ಷಟ್‌ಸ್ಥಲ ಬ್ರಹ್ಮಿಗಳಾದ ವಿರಕ್ತ ಮೂರ್ತಿಗಳೊಡನೆ ಅಲ್ಲಿಂದ ( ಹರದನಹಳ್ಳಿ ) ದೇಶಾಟನವಂ ಮಾಡುತ್ತ ...... ತುಮಕೂರು ಬೆಂಗಳೂರು ಸೀಮೆಯ ಪ್ರಾಂತದಲ್ಲಿರುವ ಒಂದು ಬೆಟ್ಟಕ್ಕೆ ತಮ್ಮ ಗಣಂಗಳ ಸಮೇತವಾಗಿ ಅಲ್ಲಿಗೆ ದಯಮಾಡಿಸಿ .... ... ಆ ಬೆಟ್ಟದಿ ತಮಗೆ ಒಂದು ಮಠವಂ ಕಟ್ಟಿಸಿಕೊಂಡು, ತಮ್ಮ ನೂರೊಂದು ಗಣಂಗಳಿಗು ನೂರೊಂದು ಗವಿಗಳಂ ತೆಗೆಯಿಸಿ ಆ ಗವಿಗಳಲ್ಲಿ ಒಬ್ಬೊಬ್ಬ ಗಣವರರು ತಮ್ಮ ಇಷ್ಟಲಿಂಗಪೂಜಾನೈಷ್ಠೆ ಎಂಬ ಶಿವಯೋಗದಲ್ಲಿ ... ಶಿವಾರ್ಚನೆಯಂ ... ಮಾಡಿಕೊಂಡಿರ್ಪುದೆಂದು ಅಪ್ಪಣೆಯಂ ಕೊಟ್ಟು ಕಳುಹಿಸಿ (ದರು. ) ( ಅಲ್ಲಿ ) ಉದಕವಿಲ್ಲದೆ ( ಇರಲು ) ಪರಮೇಶ್ವರನ ಜಟಾ ಗಂಗೆಯಂ ನೆನೆದು

ತಮ್ಮಯ ಮಣಪಾದವಿ ಗುಡ್ಡದಿ ಇರುವ ಗವಿ ಒಳಗಿನ ಪಡೆಗೆ ಹೊಡೆಯಲು ಆ ಪಡೆಯಲ್ಲಿ ಒಂದು ಚಿಂಬು ಹಿಡಿಯಷ್ಟು ಪಕುವು ಬಿದ್ದು ಭಾಗೀರಥಿಗೆ ಸಮವಾದ ಉದಕವು ಹೊರ(ಟಿತು.) ಆ ಬೆಟ್ಟಕ್ಕೆ ಸಿದ್ಧೇಶ್ವರ ಸ್ವಾಮಿಗಳಿಂದ ಗಂಗೆಯು ಉದ್ಭವಿಸಿದ ಕಾರಣದಿಂದ ಸಿದ್ಧಗಂಗೆ ಬೆಟ್ಟವೆನ್ನುತ್ತಾರೆ" ಎಂದು ನಿರಂಜನ ವಂಶರತ್ನಾಕರದಲ್ಲಿ (ಪುಟ ೩೧-೩೨) ಹೇಳಿದೆ.

**ಗೋಸಲಿ:** — ಘಟ್ಟದಲ್ಲಿ ಉಳಿವೆಯ ಅನಂತರ ಬಹಳ ಜಾಗ್ರತಿ ಉಳಿದಿತ್ತೆಂದು ತೋರುತ್ತದೆ. ನಿರಂಜನ ವಂಶರತ್ನಾಕರದಲ್ಲಿ ಗೋಸಲಿಯ ಸ್ವಾಮಿಗಳ ವಿಷಯವು ಬಹಳ ಕಡೆಗೆ ಕಂಡು ಬರುತ್ತದೆ.

ಒಟ್ಟಾರೆ ಕಲ್ಯಾಣದ ಕದನದ ಆಚಾರಶೀಲರೂ ಶರಣ ಮಾರ್ಗಿಗಳೂ ಒಂದು ಸುರಕ್ಷಿತ ಸ್ಥಳವನ್ನು ದಕ್ಷಿಣ ಕರ್ನಾಟಕದಲ್ಲಿ ಹುಡುಕಿಕೊಂಡಂತೆ, ಐಹೊಳೆಯಲ್ಲಿ ಬಹು ಶತಮಾನಗಳಿಂದಲೂ ಸುಪ್ರಸಿದ್ಧರಾಗಿದ್ದ "ವೀರ ಬಣಂಜುಗರೂ" ಬಿಜಾಪುರದ ಅರಸರ ಕಾಲದಲ್ಲಾಗಲಿ ಅಥವಾ ಈ ಮೊದಲೇ ಕಲಬುರ್ಗಿಯ ಬಾಮನೀ ಅರಸರ ಕಾಲದಲ್ಲಾಗಲಿ ದಕ್ಷಿಣ ಕರ್ನಾಟಕ ಸೇರಿದರೆಂದು ತೋರುತ್ತದೆ. ಹಿಂದಿನ ಶರಣರ ಸಂತತಿಯವರೆಂದು ಹೇಳಿ ಕೊಳ್ಳುವ ಸತ್ಪುರುಷರೂ ಅನೇಕರು ಅಲ್ಲಲ್ಲಿ ಹರಡಿ ಕೊಂಡಿದ್ದರು.

ಉದಾಹರಣಾರ್ಥವಾಗಿ, ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿದ್ದ ವಾದಿರಾಜೇಂದ್ರನೆಂಬ ಬಿರುದುಳ್ಳ ಮಹಾಲಿಂಗದೇವನೆಂಬ ಮಹಾತ್ಮನು ತಾನು ಶ್ರೀ ಬಸವೇಶ್ವರರ ಕಾಲದಲ್ಲಿ ಶಿವಶರಣರಾಗಿದ್ದ ಶಿವಲೆಂಕ ಮಂಚಣ್ಣನಿಂದ ೧೫ ನೆಯ ತಲೆಯವನೆಂದು ತನ್ನ "ಅನಾದಿಗುರುಕುಲದನ್ವಯ" ವನ್ನು (ವಂಶಾವಳಿ) ಹೇಳಿಕೊಂಡಿದ್ದಾನೆ. (ಕವಿಚರಿತ್ರ ಸಂ—೨ ಪುಟ ೫೦) ಸೌಂದರ ಪುರಾಣವನ್ನು ಬರೆದ ಬೊಮ್ಮರಸನೆಂಬ ಕವಿಯು ಶಿವಲೆಂಕ ಮಂಚಣ್ಣನಿಂದ ೧೨ನೆಯ ತಲೆಯವನಾದ ವಿಶ್ವನಾಥಾಚಾರ್ಯನ ಶಿಷ್ಯನೆಂದು ವಂಶಾವಳಿ ಸಹಿತವಾಗಿ ಹೇಳಿಕೊಂಡಿದ್ದಾನೆ. (ಕವಿಚರಿತೆ, ಸಂ— ೨ ಪುಟ — ೮೮). ಆರಾಧ್ಯಚಾರಿತ್ರವನ್ನು ಬರೆದ ಕವಿ ನೀಲಕಂಠಾಚಾರ್ಯನು ಅದೇ ಶಿವಲೆಂಕ ಮಂಚಣ್ಣನಿಂದ ೧೪ ನೆಯ ತಲೆಯವನೆಂದು ವಂಶಾವಳಿ ಸಹಿತವಾಗಿ

ಹೇಳಿಕೊಂಡಿದ್ದಾನೆ. ( ಕವಿಚರಿತೆ, ಸಂ — ೨ ಪುಟ – ೧೩೩ ). ರೇವಣಸಿದ್ಧೇಶ್ವರ ಪುರಾಣವನ್ನು ಬರೆದ ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರನ ವಂಶೋದ್ಭವನಾದ ಬಾಲಸಿದ್ಧೇಶ್ವರನನ್ನು ವಿಶೇಷವಾಗಿ ಸ್ತುತಿಸಿದ್ದಾನೆ. "ಈತನು ಕವಿಯ ಗುರುವಾಗಿದ್ದಂತೆ ತೋರುತ್ತದೆ." ಎಂದು ವಂದ್ಯ ಕವಿಚರಿತ್ರಕಾರರು ಬರೆದಿದ್ದಾರೆ. ( ಕವಿಚರಿತೆ, ಸಂ – ೨ ಪುಟ — ೧೩೮ ). ಸಂಸ್ಕೃತದಲ್ಲಿರುವ ಸುಪ್ರಸಿದ್ಧವಾದ ವೀರಶೈವ ಸಿದ್ಧಾಂತ ಶಿಖಾಮಣಿಗೆ ಕನ್ನಡ ವ್ಯಾಖ್ಯಾನವನ್ನು ಪ್ರತ್ಯಕ್ಷ ಶ್ರೀ ರೇವಣಸಿದ್ಧೇಶ್ವರ ಶಿವಾಧಿಕ್ಯ ಶಿಖಾಮಣಿಗೆ ಕನ್ನಡ ಟೀಕೆಯನ್ನು ಬರೆದ ಹಾಗೂ ಇನ್ನೂ ಅನೇಕ ಗ್ರಂಥಗಳನ್ನು ರಚಿಸಿದ ಸೋಸಲೆ ರೇವಣಾಚಾರ್ಯನು ರೇಣುಕಾಚಾರ್ಯ ವಂಶೋದ್ಭವನಾದ ವಿಶ್ವನಾಥನಿಂದ ೬ ನೆಯ ತಲೆಯವನೆಂದು ವಂಶಾವಳಿ ಸಹಿತವಾಗಿ ಹೇಳಿ ಕೊಂಡಿದ್ದಾನೆ. (ಕವಿಚರಿತೆ, ಸಂ — ೨ ಪು. ೪೩೩) ಕೊನೆಗೆ ಪ್ರಖ್ಯಾತ ಕವಿಯಾದ ಷಡಕ್ಷರಿ ದೇವನು ತನ್ನ ಕಾವ್ಯದ ಪೀಠಿಕಾಸಂಧಿಯಲ್ಲಿ ಶ್ರೀ ಬಸವಾದಿ ಪ್ರಮಥರೊಂದಿಗೆ ಶ್ರೀ ರೇಣುಕಾದಿ ಚತುರಾಚಾರ್ಯರನ್ನು ಸ್ತುತಿಸಿ ರೇಣುಕ ಹಾಗೂ ರುದ್ರಮುನಿಗಳಿಂದ ಮೊದಲು ಮಾಡಿ ತನ್ನ ಗುರು ಪರಂಪರೆಯ ಹೆಸರುಗಳನ್ನು ಹೇಳಿದ್ದಾನೆ. (ಕವಿಚರಿತೆ, ಸಂ. ೨ ಪುಟ — ೪೨೪ )

ಇಂಥ ಸಂದರ್ಭದಲ್ಲಿ ವಿಜಯನಗರದ ಪ್ರೌಢದೇವರಾಜನ ಕಾಲದಲ್ಲಿ ( ಕ್ರಿ. ಶ. ೧೪೨೯ ರಿಂದ ೧೪೪೬ ) ಆತನ ಸುಪ್ರಖ್ಯಾತ ಮಂತ್ರಿಯಾದ ಲಕ್ಕಣ್ಣ ದಂಡೇಶನೂ, ದಂಡನಾಯಕನಾದ ವಿಖ್ಯಾತ ಜಕ್ಕಣಾರ್ಯನೂ ಶಿವಶರಣರ ತತ್ವ ಪ್ರಚಾರಕರಾದದ್ದರಿಂದ ಅನೇಕ ಕಡೆಯಿಂದ ಮಹಾ ಅನುಭಾವಿಗಳೂ ವಿದ್ವಾಂಸರೂ ಆದ ಹರಗಣಗಳು ಆಗ ವಿಜಯನಗರದಲ್ಲಿ ಕೂಡಿ ರಾಜನನ್ನು ಸಹ ತಮ್ಮ ಕಡೆಗೆ ಒಲಿಸಿಕೊಂಡು ಹಿಂದಿನ ಶಿವಶರಣರ ವಚನಗಳನ್ನೆಲ್ಲ ಸಂಗ್ರಹಿಸುವ, ಸಂಪಾದಿಸುವ, ಸಂಕಲಿಸುವ ಹಾಗೂ ಹಿಂದಿನ ಶಿವಶರಣರ ಪುರಾಣಗಳನ್ನು ಸವಿಸ್ತಾರವಾಗಿ ರಚಿಸುವ ಮಹಾ ಕಾರ್ಯವನ್ನು ಮಾಡಲಿಕ್ಕೆ ಪರ್ವಕಾಲವೇ ಬಂದಂತಾಯಿತು.

ವಿಜಯನಗರದ ಈ ಮಂತ್ರಿ ಲಕ್ಕಣ್ಣ ಹಾಗೂ ಆತನ ತಮ್ಮ ಮಾದಣ್ಣ ಇವರ ವಿಷಯವು ಶಿಲಾಶಾಸನಗಳಿಂದಲೂ ಸಹ ಸಿದ್ಧವಾಗಿದೆ. (ಕವಿಚರಿತ್ರೆ ಸಂ- ೨, ಪುಟ — ೫೪) ಅದು ಹೇಗೆಂದರೆ:—

"ಮುಳುಬಾಗಿಲ ೨ನೆಯ ಮತ್ತು ೯೭ನೆಯ ಶಾಸನಗಳಲ್ಲಿ (೧೪೩೧) ಈತನು (ಲಕ್ಕಣ್ಣ ದಂಡೇಶನು) ವಿಷ್ಣು ವರ್ಧನಗೋತ್ರದವನೆಂದೂ, ಹೆಗ್ಗಡೆದೇವ ಒಮ್ಮಾಯಮ್ಮ ಇವರುಗಳ ಮಗನೆಂದೂ, ಈತನಿಗೆ ಮಾದಣ್ಣ ದಣ್ಣಾಯಕನೆಂಬ ಒಬ್ಬ ಸಹೋದರನಿದ್ದನೆಂದೂ, (ಪ್ರೌಢ) ದೇವರಾಯನ ಧರ್ಮದಿಂದ ವಿರೂಪಾಕ್ಷಪುರದ ವಿರೂಪಾಕ್ಷ ದೇವರಿಗೆ ಸೇವೆ ಮಾಡಿದವನೆಂದೂ ಹೇಳಿದೆ... ಮಾಲೂರು ೧ನೆಯ ಶಾಸನದಿಂದ (೧೪೩೪) ಈತನೂ ಈತನ ಸೋದರನಾದ ಮಾದಣ್ಣ ಒಡೆಯನೂ ದೇವರಾಯನ ನಿರೂಪದಿಂದ ಸಾಳುವ ಗೋಪರಾಜನಿಗೆ ತೇಕಲನ್ನು ಬಿಟ್ಟು ಕೊಟ್ಟಂತೆಯೂ ತಿಳಿಯುತ್ತದೆ."

—"ಕರ್ನಾಟಕ ಕವಿಚರಿತೆ," ಸಂ—೨, ಪುಟ ೫೪

ಅಲ್ಲದೆ ಲಕ್ಕಣ್ಣದಂಡೇಶನು, "ದೇವರಾಯನಲ್ಲಿ ತಾನು ಮಹಾ ಪ್ರಧಾನನಾಗಿಯೂ, ಅವನಿಗೆ ಆಪ್ತಮಿತ್ರನಾಗಿಯೂ, ಅವನ ರಾಜ್ಯಾಭ್ಯುದಯಕ್ಕೆ ಕಾರಣ ಭೂತನಾಗಿಯೂ, ಇದ್ದಂತೆ" ಈ ಪದ್ಯ ಭಾಗಗಳಲ್ಲಿ ತಾನೇ ಹೇಳಿಕೊಂಡಿದ್ದಾನೆ:—

"ಧರೆಗಧಿಕ ಮೂರು ರಾಯರ ಗಂಡನಪ್ರತಿಮ।
ಬಿರುದಾಂಕ ಗಜವೇಂಟೆಕಾರ ದೇವೇಂದ್ರ ಭೂ।
ವರನ ಮಹದೈಶ್ವರ್ಯ ಶರಧಿ ಚಂದ್ರೋದಯ-
ನುದಾರ ಕರುಣಾಧಾರನು॥

ನಿರುಪಮಿತ ಸಪ್ತಾಂಗ ರಾಜ್ಯ ವರ್ಧನ ಕಳಾ।
ಧರನಮಲ ಕೀರ್ತಿಯುತ ಲಕ್ಕಣ್ಣದಂಡೇಶ।
ಈ ಕಲಿಯುಗ ದೊಳತಿ ಪ್ರೌಢಮತಿ
ದೇವರಾಜೇಂದ್ರನ ಮಹಾ ಪ್ರಧಾನಂ
ಇಭವೇಂಟೆಕಾರ ದೇವೇಂದ್ರನುನ್ನತ ಕೆಳೆಯನು॥"

ರಾಜನಿಗೆ ಗೆಳೆಯನೂ, ಆತನ ರಾಜ್ಯಾಭ್ಯುದಯಕ್ಕೆ ಕಾರಣೀಭೂತನೂ, ಮಹಾಪಂಡಿತನೂ ಆದ ಮಹಾ ಮಂತ್ರಿಗೇ ಧರ್ಮಕಾರ್ಯಕ್ಕೆ ನಿಂತಮೇಲೆ ಕೇಳುವದೇನು ? ಬಿಜ್ಜಳರಾಜನಲ್ಲಿ ಶ್ರೀ ಬಸವೇಶ್ವರರು ಮಂತ್ರಿಗಳಾಗಿ ನಿಂತು ಶಿವಶರಣರ ಕಾರ್ಯಕ್ಕೆ ಆಧಾರ ಸ್ತಂಭರಾಗಿದ್ದದ್ದರ ಪುನರಾವರ್ತಿಯೇ ಇದು ಎಂದೆನಿಸುವದರಲ್ಲಿ ಸಂಶಯವೇ ಇಲ್ಲ.

ಈ ಲಕ್ಕಣ್ಣ ದಂಡೇಶನು ಬರೆದ " ಶಿವತತ್ವ ಚಿಂತಾಮಣಿ " ಎಂಬ ಮಹಾಗ್ರಂಥವು ಕೇವಲ ವಿರುಪಾಕ್ಷಪಂಡಿತನ ಪ್ರಖ್ಯಾತ " ಚನ್ನಬಸವ ಪುರಾಣ " ವನ್ನು ಹೋಲುತ್ತದೆ. ಎರಡರಲ್ಲಿಯು ವಿಷಯುಗಳ ಕ್ರಮಾದರಿಯು ಒಂದೇಪ್ರಕಾರವಾಗಿದೆ. " ನಿತ್ಯಾನಿತ್ಯ ವಸ್ತುವಿವರಣ, ಸಕಲ ನಿಷ್ಕಲ ವಿಚಾರ, ಶಿವನ ೨೫ ಲೀಲೆಗಳು, ಭುವನಕೋಶ, ಶಿವಲೋಕ ವರ್ಣನ, ಶಿವನಂದಿ ಸಂವಾದ, ಬಸವಚರಿತ, ಗಣಪ್ರಶಂಸೆ, ಧರ್ಮಾಧರ್ಮ ವಿವರಣ. ಪಂಚಾಕ್ಷರೀ ಭಸಿತರುದ್ರಾಕ್ಷಗಳ ಮಾಹಾತ್ಮ್ಯ, ಲಿಂಗ ಧಾರಣ, ಶಿವಪೂಜಾ ವಿಧಿ, ಪಾದೋದಕ ಪ್ರಸಾದ ಮಹಿಮೆ, ಶಿವಾಧಿಕ್ಯ, ಮಾಹೇಶ್ವರಾಚರಣೆ, ಷಟ್‌ಸ್ಥಳ " ಮೊದಲಾದ ವಿಷಯುಗಳಿಂದ ಕೂಡಿದ ಈ " ಶಿವತತ್ವಚಿಂತಾಮಣಿ " ಯಲ್ಲಿ ೫೪ ಸಂಧಿಗಳೂ, ೨೨೨೧ ವಾರ್ಧಿಕಷಟ್ಪದಿಗಳೂ ಇವೆ.

ಶ್ರೀ ಬಸವಸ್ವಾಮಿಗಳವರಿಗೆ ಶ್ರೀ ಚೆನ್ನಬಸವ ಸ್ವಾಮಿಗಳವರ ಜೊತೆಯಿದ್ದಂತೆ ಈ ಲಕ್ಕಣ್ಣದಂಡೇಶನಿಗೆ ಮಹಾಜ್ಞಾನನಿಧಿ ಜಕ್ಕಣ್ಣದಂಡನಾಯಕನ ಜೊತೆಯಿದ್ದಿತು. ಲಕ್ಕಣ್ಣದಂಡೇಶನು ಪುರಾಣಕಾರನಾದರೆ ಜಕ್ಕಣ್ಣ ದಂಡನಾಯಕನು ಪ್ರಖ್ಯಾತ ಶಾಸ್ತ್ರಕಾರನು " ಕಾಮಿಕಾಗಮದಲ್ಲಿ ನಿರೂಪಿತನಾಗಿ, ರೇವಣಸಿದ್ಧೇಶ್ವರಿಂ ಬೋಧಿಸಲ್ಪಟ್ಟು, ವೀರಶೈವರಿಗೆ ಸ್ಥಲ ಭೇದದಿಂ ಆರು ಪ್ರಕಾರವನುಳ್ಳ " ನೂರೊಂದು ಸ್ಥಲದ ಮಹಾಗ್ರಂಥವನ್ನು ಈತನು ಪುರಾತನರ ಮಹಾವಚನಗಳನ್ನು ಸರಗೊಳಿಸಿ ( ಸೂತ್ರವಿಟ್ಟು ) ಸಂಗ್ರಹಿಸಿರುವನು. " ಈತನಿಗೆ ಭಕ್ತಿಭಂಡಾರಿ ಎಂಬ ಬಿರುದಿದ್ದಂತೆ ತಿಳಿಯುತ್ತದೆ." ಎಂದು ವಂದ್ಯಕವಿಚರಿತ್ರಕಾರರು ಬರೆದಿದ್ದಾರೆ.

( ಕವಿಚರಿತೆ, ಸಂ-೨ ಪುಟ-೫೭ )

ಈ ಜಕ್ಕಣಾಚಾರ್ಯನಿಗೆ, ಶಿವಲೆಂಕಮಂಚಣ್ಣನ ಅಜ್ಜನಿಂದ ಮೊದಲುಮಾಡಿ ಮಹಾಲಿಂಗದೇವನವರೆಗೆ "೨೧ ಗುರುಸಂಪ್ರದಾಯಕ್ಕೆ ಶ್ರೇಷ್ಠರಾದ" ಕುಮಾರಬಂಕನಾಥದೇವರು ಗುರುವಾಗಿದ್ದರು. ಈ ಕುಮಾರ ಬಂಕನಾಥದೇವರು "ಷಟ್‍ಸ್ಥಲೋಪದೇಶ" ಪ್ರಭುದೇವರ ಟೀಕಿನ ವಚನ" ಎಂಬ ಗ್ರಂಥಗಳನ್ನು ಬರೆದಿದ್ದಾರೆ.

ಈ ಕುಮಾರ ಬಂಕನಾಥರ ಗುರುಗಳೂ, ಶಿವಲೆಂಕಮಂಚಣ್ಣನ ಅಜ್ಜನಿಂದ ೨೦ ನೆಯ ತಲೆಯವರೂ (ಶಿವಲೆಂಕಮಂಚಣ್ಣನಿಂದ ೧೮ ನೆಯ ತಲೆಯವರೂ) ಆದ "ಮಹಾಲಿಂಗದೇವರೆಂಬ" ಬಹುಘನಜ್ಞಾನಿಗಳು "ಏಕೋತ್ತರ ಶತಸ್ಥಳ" "ಪ್ರಭುದೇವರ ಷಟ್‍ಸ್ಥಲಜ್ಞಾನ ಚಾರಿತ್ರ ವಚನದ ಟೀಕೆ" ಎಂಬ ಗ್ರಂಥಗಳನ್ನು "ಜಕ್ಕಣಾರ್ಯಂಗೆ ಸತ್ತ್ರೀಮ ಮಹಾನುಭಾವಸಂಬೋಧೆಯ ಸಂಬಂಧ ನಿರೂಪಣಕಾರಣಾರ್ಥಂ ನಿರೂಪಿಸಿದರು" ಎಂದು ಆಗ್ರಂಥಗಳ ಆರಂಭದಲ್ಲಿ ಇಲ್ಲವೆ ಅಂತ್ಯದಲ್ಲಿ ಹೇಳಲಾಗಿದೆ. ಇವನಿಗೆ "ಪುಲಿಗೆರೆಯ (ಲಕ್ಷ್ಮೇಶ್ವರ) ಪುರವರಾಧೀಶ್ವರ ಅಪೂರ್ವಸ್ವಯಂಭು ಪ್ರಸನ್ನ, ಚೆನ್ನದಕ್ಷಿಣ ಶ್ರೀ ಸೋಮನಾಥದೇವರ ದಿವ್ಯ ಶ್ರೀಪಾದ ಪದ್ಮಾರಾಧಕ, ತ್ರಿಕಾಂಡನಿಷ್ಠ, ಪರಮವೀರ ಶೈವಾಗಮಾಚಾರ್ಯ" ಎಂಬ ವಿಶೇಷಣಗಳು ಹೇಳಿವೆ. ಇವನ ಗ್ರಂಥಗಳು ಶ್ರೀಬಸವ, ಚೆನ್ನಬಸವ, ಪ್ರಭುದೇವ ಮುಖ್ಯರಾದ ಅಸಂಖ್ಯಾತ ಮಹಾಗಣಂಗಳ ವಚನವಾಕ್ಯಾಮೃತದ ಖಣಿಯಾಗಿದೆ. ಈತನ ಶಿಷ್ಯನಾದ ಕುಮಾರ ಬಂಕನಾಥನ ಗ್ರಂಥಗಳೂ ಸಹ ಈ "ಮಹಾಲಿಂಗದೇವನ ಗ್ರಂಥಗಳನ್ನೇ ಬಹಳ ಮಟ್ಟಿಗೆ ಹೋಲುತ್ತವೆ" ಎಂದು ವಂದ್ಯಕವಿಚರಿತ್ರಕಾರರು ಬರೆದಿದ್ದಾರೆ (ಕವಿಚರಿತೆ ಸಂ-೨, ಪುಟ ೫೬)

ಹಿಂದಿನಕಾಲದಲ್ಲಿಯೇ ತೆಲುಗು, ತಮಿಳು, ಸಂಸ್ಕೃತಭಾಷೆಗಳಲ್ಲೆಲ್ಲ ಅನುವಾದಿಸಲ್ಪಟ್ಟು ಆಯಾ ಪ್ರಾಂತಗಳಲ್ಲೆಲ್ಲ ಇಂದಿಗೂ ಪ್ರಖ್ಯಾತ ಗ್ರಂಥವೆಂದೆನ್ನಿಸಿಕೊಳ್ಳುತ್ತಿರುವ ಪರಮರಮ್ಯವಾದ "ಪ್ರಭುಲಿಂಗಲೀಲೆ" ಯೆಂಬ ಶ್ರೀ ಮದಲ್ಲಮಪ್ರಭುಗಳ ಚರಿತ್ರರೂಪವಾದ ಭಾಮಿನೀಷಟ್ಪದಿಯ ಕಾವ್ಯವನ್ನು ಕನ್ನಡದಲ್ಲಿ ಬರೆದು ಕೀರ್ತಿಶಾಲಿಯಾದ "ಚಾಮರಸ"ನೂ ಸಹ ಪ್ರೌಢರಾಯನ ಆಸ್ಥಾನದಲ್ಲಿಯೇ ಜಕ್ಕಣಾರ್ಯ ಹಾಗೂ ಲಕ್ಕಣ್ಣ ದಂಡೇಶರಿಗೆ ಸಂಗಡಿಗನಾಗಿಯೇ ಇದ್ದನು. ಇಂದಿಗೂ ದೇಶದಾದ್ಯಂತ

ಲಿಂಗವಂತರೆಲ್ಲ ಮಂಗಳಾರತಿಯ ಕಾಲದಲ್ಲಿ ಕೊನೆಗೆ "ಹೇಳತ್ತಕ್ಕ ಪುರ್ವ ಳೇಶಂಕರದೇವ, ನಿಜಕಿನ್ನರಿಯ ಬ್ರಹ್ಮಯ್ಯನಿಗೆ " ಎಂಬ ಹಾಡು ಈ ಚಾಮರಸನ ಪ್ರಭುಲಿಂಗಲೀಲೆಯ ಪೀಠಿಕಾಸಂಧಿಯೊಳಗಿನ ಮಂಗಲ ಪದ್ಯಗಳೇ ಆಗಿವೆಯೆಂಬುದನ್ನು ನೆನಸಿಕೊಂಡರೆ ಹಿಂದೆ ಗಂಗರಾಜನಾದ ಶಿವಮಾರನು ( ಕ್ರಿ. ಶ. ೭೮೦ ರಿಂದ ಆಳಿ ) ಬರೆದ " ಗಜಾಷ್ಟಕ " ವು ಹೆಣ್ಣುಮಕ್ಕಳ " ಒನಕೆವಾಡು " ಆಗಿದ್ದಿತೆಂದು ಶಿಲಾಶಾಸನಗಳಲ್ಲಿ ಹೇಳಿದ ಮಾತು ನೆನಪಿಗೆ ಬರುವದಿಲ್ಲವೆ? ಇವನ ಈ ಗ್ರಂಥವು ರಸದಲ್ಲಿಯೂ ಜ್ಞಾನದಲ್ಲಿಯೂ ಅಮೃತ ಸಮಾನವೇ ಆಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅಥವಾ ಈ ಗ್ರಂಥಕ್ಕೆ " ಪದ್ಯರೂಪಶೂನ್ಯ ಸಂಪಾದನೆ " ಎಂದರೂ ತುಂಬಾ ಒಪ್ಪುವದು.

ಅಲ್ಲದೆ " ಕಲ್ಲಮಠದ ಪ್ರಭುದೇವ, ಕರಸ್ಥಲದ ನಾಗಿದೇವ ವೀರಣ್ಣೊಡೆಯ ಮೊದಲಾದ ವಿರಕ್ತರು ಈತನ ( ಜಕ್ಕಣಾರ್ಯನ ) ಸಮಕಾಲದವರಾಗಿದ್ದಂತೆ ತಿಳಿಯುತ್ತದೆ. ಇವನು ( ಜಕ್ಕಣಾರ್ಯನು ) ವೀರಶೈವ ಗ್ರಂಥಗಳ ರಚನೆಗಾಗಿ ಅಪರಿಮಿತ ದ್ರವ್ಯವನ್ನು ವೆಚ್ಚಮಾಡಿದಂತೆ [ ಎರಡನೆಯ ] ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣದಲ್ಲಿ ( ೧೫೩೦ ) ಹೇಳಿದೆ. " ಎಂದು ಮಾನ್ಯ ಕವಿಚರಿತ್ರಕಾರರು ಹೇಳಿದ್ದಾರೆ ( ಕವಿಚರಿತೆ ಸಂ-೨, ಪುಟ-೫೭ )

ಚೆನ್ನಬಸವ ಪುರಾಣದಲ್ಲಿಯೂ ( ಸಂಧಿ-೬೩ ) ನಿರಂಜನ ವಂಶ ರತ್ನಾಕರದಲ್ಲಿಯೂ ( ಪುಟ-೩೩ ) ನೂರೊಂದು ವಿರಕ್ತ ಯೋಗಿಗಳು ಪ್ರೌಢದೇವರಾಯನ ಕಾಲದಲ್ಲಿಯೇ ಇದ್ದರೆಂದು ಹೇಳಿದೆ. ಆದರೆ ಇವರು ದಕ್ಷಿಣ ಕರ್ನಾಟಕದ ಸಿದ್ಧಗಂಗೆಯ ಕಡೆಯಿಂದ ವಿಜಯನಗರಕ್ಕೆ ಬಂದರೆಂದು ನಿರಂಜನ ವಂಶ ರತ್ನಾಕರವು ಹೇಳುತ್ತಿದೆ. ಆದರೆ ಚೆನ್ನಬಸವ ಪುರಾಣದ ಅಭಿಪ್ರಾಯದಲ್ಲಿ ಬಹುಶಃ ಇವರೆಲ್ಲರು ವಿಜಯನಗರದಲ್ಲಿಯೇ ಮೂಲತಃ ಇದ್ದರೆಂಬ ಊಹೆಗೆ ಅವಕಾಶವಿರುತ್ತದೆ. " ಇತ್ತ ಪ್ರೌಢರಾಯನು ಬಂದಿರಲು, ಅತ್ತ ನೂರೊಂದು ಗಣೇಶ್ವರರು ಬಂದಿದ್ದರು " ಎಂಬಲ್ಲಿ " ಅತ್ತ " ಎಂಬ ಶಬ್ದದಿಂದ ಬೇರೆಕಡೆಯಲ್ಲಿ ಜನ್ಮತಾಳಿದ್ದರೆಂದು ಊಹಿಸುವುದಕ್ಕೂ ಅವಕಾಶವುಂಟು. ( ಚೆನ್ನಬಸವ ಪುರಾಣ, ಸಂಧಿ ೬೩ ಪದ್ಯ-೫ )

ನೂರೊಂದು ವಿರಕ್ತರಲ್ಲಿ ಮುಖ್ಯ ಯೋಗಿಗಳಾದ ಕರಸ್ಥಲದ ನಾಗಿದೇವನ ಗುರುವು ಕರಸ್ಥಲದ ವೀರಣ್ಣೊಡೆಯನು ಗುರುವಿರುವಲ್ಲಿಗೆ ಶಿಷ್ಯನು ಬಂದನೆಂದು ಹೇಳುವಾಗ 'ವಿದ್ಯಾನಗರ'ವೆಂದು ಸ್ಪಷ್ಟವಾಗಿ ಹೇಳದೆ "ಗುರುವಿದ್ದ ಪುರಕೈದಿ ಬರಲು" ಎಂದು ಮಾತ್ರ ಹೇಳಿರುವದರಿಂದಲೂ (ಸಂಧಿ ೬೩, ಪದ್ಯ ೮) ಗುರುಶಿಷ್ಯರಿಬ್ಬರೂ ಕೂಡಿ ವಿದ್ಯಾನಗರಿಗೈತಂದರೆಂದು ಇನ್ನೊಂದೆಡೆಯಲ್ಲಿ (ಸಂಧಿ ೬೩, ಪದ್ಯ ೧೨) ಹೇಳಿರುವದರಿಂದಲೂ ಆಗ ಪ್ರೌಢದೇವರಾಯನು ಇವರನ್ನು ಕರೆಯಿಸಿ ಮನ್ನಿಸಿದನೆಂದು ಹೇಳಿದ್ದರಿಂದಲೂ (ಪದ್ಯ ೧೫) ಇವರು ದಕ್ಷಿಣ ಕರ್ನಾಟಕದ ಸೀಮೆಯಿಂದಲೇ ಬಂದರೋ ಏನೋ ಎಂಬ ಊಹೆಗೆ ಕೆಲಮಟ್ಟಿಗೆ ಅವಕಾಶವಿದೆ. ಆದರೆ ಈ ವಿಷಯವು ಸ್ಪಷ್ಟವಾಗಿಲ್ಲ.

ಕರಸ್ಥಲದ ನಾಗಿದೇವನು ಪತ್ತಾರ ಜಾತಿಯವನು. ಇವನ ಜಡೆಯು ಬಿದಿರು ಮೆಳೆಗೆ ತೊಡಕಿದರೂ ಅದರ ಪರವೆ ಇಲ್ಲದೆ ಅಲ್ಲಿಯೇ ಯೋಗ ಸಮಾಧಿಯಲ್ಲಿ ನಿಂತಿದ್ದನಂತೆ. ಇವನ ಗುರು ಹೋಗಿ ಇವನ ಜಡೆಯನ್ನು ಬಿಡಿಸುವನು. ಶಿಷ್ಯನ ಯೋಗ್ಯತೆಗೆ ಗುರುವು ಬೆರಗಾಗಿ ತಾನೇ ಆತನಲ್ಲಿ ಶಿಷ್ಯತ್ವವನ್ನು ವಹಿಸುವನು. ಇಬ್ಬರೂ ಜ್ಞಾನಿಗಳಾಗಿ ವಿಜಯನಗರಕ್ಕೆ ಬರುವರು

ಈ ಕರಸ್ಥಲದ ನಾಗಿದೇವನು ಗೂಢಾರ್ಥವುಳ್ಳ ಒಂದು ತ್ರಿಪದೀಗ್ರಂಥವನ್ನು ಬರೆದಿದ್ದಾನೆ. ಇದಕ್ಕೆ ಬೇರೆಕೆಲವರು ವ್ಯಾಖ್ಯಾನ ಬರೆದಿದ್ದಾರೆ ಇದರಲ್ಲಿ ೬೧ ಪದ್ಯಗಳು ಮಾತ್ರವೇ ಇವೆ. ಇದರ ಹೆಸರು ಕರಸ್ಥಲದ ನಾಗಿದೇವನ ತ್ರಿವಿಧಿ ಎಂದು ಇದೆ. ಈತನ ವಿಷಯದಲ್ಲಿ ಒಂದು ಸಾಂಗತ್ಯ ರೂಪ ಪುರಾಣವೂ ಹುಟ್ಟಿದೆ.

ಈತನಲ್ಲದೆ, ಕರಸ್ಥಲದ ವೀರಣ್ಣೊಡೆಯ, ಹೊನ್ನಯ್ಯ, ಮಿಡಿಬಿಲ್ಲ ಶಾಂತಿದೇವ, ಹೇಟಿಯ ಮರುಳ, ತಗರಕಾಳಗದ ಪ್ರಭು, ಬಾಲಲಿಂಗಣ್ಣ, ಬತ್ತಲೇಶ್ವರ, ಗುರುಬಸವೇಶ, ನಿರ್ವಾಣಿ ಬೋಳೇಶ ಮೊದಲಾಗಿ ನೂರೊಂದು ಜನ ಶಿವಯೋಗ ಸಮಾಧಿಸಂಪನ್ನರು ವಿವಿಧ ಲೀಲೆಗಳಿಂದ "ಮರುಳರಂದದೊಳು" ಕಾಣಿಸಿಕೊಳ್ಳುತ್ತ ಇದ್ದರೆಂದು ಚನ್ನಬಸವ ಪುರಾಣದಲ್ಲಿ ಹೇಳಿದೆ.

ನೂರೊಂದು ವಿರಕ್ತರಲ್ಲಿಯೇ ಒಬ್ಬನಾದ ಕಲ್ಲುಮಠದ ಪ್ರಭುದೇವನು ಸರ್ವ ಪುರಾತನರ ವಚನಗಳಿಂದ ಆರಿಸಿ ೧೬ ಸ್ಥಲಗಳಲ್ಲಿ "ಲಿಂಗಲೀಲಾ ವಿಲಾಸ ಚಾರಿತ್ರ ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

ಹೀಗೆ ವಿಜಯನಗರದಲ್ಲಿ ಪ್ರೌಢದೇವರಾಯನ ಕಾಲದಲ್ಲಿ, ಅಶೋಕ ಮಹಾರಾಜನ ಸಭೆಯೊಳಗೆ ಬೌದ್ಧ ಬಿಕ್ಷುಗಳ ಮಹಾ ಸಂಘ ಕೂಡಿ ಶ್ರೀ ಬುದ್ಧದೇವರ ವಚನಗಳನ್ನು ಸಂಕಲಿಸಿ ತ್ರಿಪಿಟಕಗಳನ್ನು ರಚಿಸಿದಂತೆ ನೂರೊಂದು ವಿರಕ್ತರೂ ಜಕ್ಕಣ್ಣ ಲಕ್ಕಣ್ಣಾದಿ ಮಹಾ ಕವಿಗಳೂ ಕೂಡಿ ಪುರಾತನ ಶಿವಶರಣರ ವಚನಗಳ ಸಂಗ್ರಹ ಹಾಗೂ ಚರಿತ್ರವಿವರಣ ಕಾರ್ಯವನ್ನು ತೃಪ್ತಿಕರವಾಗಿ ನೆರವೇರಿಸಿದರೆಂಬುದು ಅಭಿಮಾನಾಸ್ಪದವಾದ ಸಂಗತಿಯಾಗಿದೆ.

( ಮುಂದೆ ಸಾಗುವದು )

# ಯುಗಾದಿ

( ಲೇಖಕ :— ಶ್ರೀ. ಸಿ. ಸಾ. ಮಹಾಂತಣ್ಣವರ ಮು. ಹೊಸೂರ )

ಜಗದ ಆಗುಹೋಗುಗಳನ್ನು ಆಲೋಚಿಸಿದರೆ, ವನಸ್ಪತಿಗಳಲ್ಲಿ ಕೆಲವು ಇಂದು ತಲೆದೋರಿ, ನಿಲವಾಗಿ ನಿಂತು, ಇನ್ನೊಂದು ತಿಂಗಳಲ್ಲಿ ಫಲದೋರಿ, ಹಲವಾರು ದಿನದೊಳು ಹಸಗೆಟ್ಟು ಹೋಗುವವು. ಇದರಂತೆ ಕೆಲವು ಎರಡು ತಿಂಗಳು ಅಥವಾ ಮೂರು ತಿಂಗಳು ಬಾಳಿ ಬದುಕಿ, ಭರಭರನೆ ಫಲಗಳನೀಯುತ್ತ ಒಣಗಿ ಒರೆಗಲ್ಲಾಗಿ ಹೋಗುವವು. ಮತ್ತೆ ಕೆಲವು, ನಾಲ್ಕಾರು ತಿಂಗಳು ತಮ್ಮ ಜೀವಿತವನ್ನು ಜನಸಮೂಹಕ್ಕೆ ಬೀರಿ, ಅವರ ಬದುಕು ಬಾಳುವೆಗೆ ಈಡಾಗಿ ಓಡುವವು. ಇನ್ನೂ ಕೆಲವು ವರ್ಷಗಳವರೆಗೆ ಬಾಳಿ, ಮಾನವನ ಸೇವೆಗೊಳಗಾಗಿ, ಅವನ ಕೃತಜ್ಞತೆಗೀಡಾಗಿ, ತಮ್ಮಲ್ಲಿ ಉಂಟಾದ ಮಾಧುರ್ಯ ಮಮತೆ, ಮನೋಹರತೆಗಳನ್ನು ಮಾನವನಿಗೆ ತೋರಿ ಬೀರಿ ಅಡಗುವವು. ಇವೆಲ್ಲ ವರ್ಷಾಂತರಾಯುಷ್ಯದ ವನಸ್ಪತಿಗಳ ಜನಜೀವನದ ಕಾಯಿಪಲ್ಯೆ, ಹಣ್ಣುಹಂಪಲ, ಧಾನ್ಯಧವಸಗಳ ಧರ್ಮವು. ಇವಲ್ಲದೆ ಕಾಡಿನಲ್ಲಿ ಕಾತರಿಸಿ ನಿಂತ, ಮಾನವನ ಆಯುಷ್ಯಮಾನಕ್ಕಿಂತ ಹೆಚ್ಚಿಗಿದ್ದ ಎಷ್ಟೋ ಜಾತಿಯ ವೃಕ್ಷಗಳು ತಮ್ಮ ಬೇರು, ಬೊಡ್ಡೆ, ಹರಿ, ಟೊಂಗೆ, ಎಲೆ, ಹೂವು, ಕಾಯಿ, ಹಣ್ಣು ಬೀಜಗಳನ್ನು ಮಾನವನಿಗೆ ನೀಡಿ, ನೀಟಾಗಿ ನಿಂತು, " ಪರೋಪಕಾರಾಯ ಇದಂ ಶರೀರಂ " ಎಂಬ ನಾಣ್ನುಡಿಯನು ಸಾರುವವೆಂಬಂತೆ ತೋರುವವು. ಆದರೆ ಇಂಥ ವೃಕ್ಷಗಳಾದರೂ ಪ್ರಕೃತಿದೇವಿಯಿಂದ ವಿಕೃತಿದೋರುತ್ತ, ಸುಕೃತಿಯ ಸುಕಾಲವು ಎಂದು ಬಂದೊದಗುವದೋ ಎಂದು, ಆ ಪ್ರಕೃತಿದೇವಿಯನ್ನೇ ಮರೆಹೊಕ್ಕು ನವಯುಗದ ಕಾಲವನ್ನು ನಿರೀಕ್ಷಿಸುತ್ತ ಮೋಟ ಮರಗಳಾಗಿ ನಿಂತು, ನಿಜ ಸೊಬಗನ್ನೀವ ವಸಂತಕಾಲಿನ ಧ್ಯಾನದಲ್ಲಿ ನಿರತವಾಗಿರುವವು.

ಮಾನವನಾದರೂ ತನಗೂ ತನ್ನ ಕುಟುಂಬಕ್ಕೂ ಸಮಾಜಕ್ಕೂ ಬೇಕಾಗುವ ಕಾಯಿಪಲ್ಯೆ, ಹಣ್ಣು ಹಂಪಲ, ಧಾನ್ಯದವಸಗಳನ್ನು, ಕಾಲವರಿತು ಕಷ್ಟಬಟ್ಟು ಹದವರಿತು ಹರೇಕತರದ ಬೀಜಗಳನ್ನು ಬಿತ್ತಿ ಬೆಳೆದು, ಆಯಾಯ ಋತುಗಳಲ್ಲಿ ಅಂದರೆ ಬೇಸಿಗೆಯೊಳು ಹೊಲವ ಹಸನಂಗೈದು ಮುಂದೆ ಮಳೆಗಾಲದೊಳು ಬೀಜಗಳ ಬಿತ್ತಿ, ಕಸಕಳೆ ಕಿತ್ತಿ, ಚಳಿಗಾಲದೊಳು ಬಳಬಳನೆ ಬೆಳೆದು ಹಣ್ಣಾದ ಬೆಳೆಯನೆ ಕೊಯ್ದು ಒಕ್ಕಿ ಹಗೇವಿಗೆ ಹಾಕಿ ಬಣವೆಯನೊಟ್ಟಿ, ಸಕಾಮ ನಿಷ್ಕಾಮಪೂರಿತ ಶಿವಭಕ್ತಿ ಶಿವಪೂಜೆಗಳ ಫಲವೇ ಇದೆಂದು ಮನವರಿದು " ಶ್ರೀ ಗುರುಲಿಂಗಜಂಗಮಕ್ಕೆ ಅರ್ಚನೆ ಪೂಜನೆ ದಾಸೋಹವನು, ಧರ್ಮವ ಕಾಮಿಸಿ ಮಾಡಿದೊಡೆ ಧರ್ಮವಪ್ಪುದು. ಅರ್ಥವ ಕಾಮಿಸಿ ಮಾಡಿದೊಡೆ ಅರ್ಥವಪ್ಪುದು. ಕಾಮವ ಕಾಮಿಸಿ ಮಾಡಿದೊಡೆ ಕಾಮವಪ್ಪುದು. ಮೋಕ್ಷವ ಕಾಮಿಸಿ ಮಾಡಿದೊಡೆ ಮೋಕ್ಷವಪ್ಪುದು. ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದವು ಕಾಮಿಸಿ ಮಾಡಿದೊಡೆ ಆ ಪದಗಳಪ್ಪವು. ಕಾಮಧೇನುವ ಕಾಮಿಸಿ ಮಾಡಿದೊಡೆ ಕಾಮಧೇನು ದೊರಕೊಂಬುದು. ಕಲ್ಪತರುವ ಕಾಮಿಸಿ ಮಾಡಿದೊಡೆ, ಕಲ್ಪತರು ದೊರಕೊಂಬುದು. ಚಿಂತಾಮಣಿಯ ಕಾಮಿಸಿ ಮಾಡಿದೊಡೆ ಚಿಂತಾಮಣಿ ದೊರಕೊಂಬುದು. ಪರುಷವ ಕಾಮಿಸಿ ಮಾಡಿದೊಡೆ ಪರುಷ ದೊರಕೊಂಬುದು. ಆವುದು ಕಾಮಿಸಿ ಮಾಡಿದೊಡೆ, ಆ ಕಾಮಿಸಿದ ಫಲಂಗಳು ತಪ್ಪವು, ಕೂಡಲಚನ್ನಸಂಗಮದೇವಯ್ಯ ಪ್ರಭುವಿನಾಣೆ " ಈ ವಚನವ ಜ್ಞಾಪಕಕ್ಕೆ ತಂದು, ತನ್ನ ಶ್ರಮಪರಿಹಾರಾರ್ಥ ಶಿವಯೋಗ-ಸುಖವನನುಭವಿಸುತ್ತ, ಹೋಳಿಹಬ್ಬದ ಹೋಳಿಗೆಯನುಂಡು ನವಯುಗದ ಆದಿ ( ಯುಗ+ಆದಿ ) ಯನು ಆಕಾಂಕ್ಷಿಸುತ್ತ ಮುಂದಿನ ವರ್ಷದ ಮಳೆಬೆಳೆಗಳ ವ್ಯಾಪಾರೋದ್ಯೋಗಗಳ ಸಲಹೆ ಸೂಚನೆಗಳನ್ನು ತಿಳಿಸುವ ಹೊಸಪಂಚಾಂಗಗಳನ್ನೂ, ಕುರುಬರಟ್ಟನ್ನೂ, ಶಿವಶರಣರ ಕಾಲಜ್ಞಾನವನ್ನೂ ತಿಳಿದುಕೊಳ್ಳಲಾತುರದ ಕುತೂಹಲನಾಗಿ, ಕುಣಿಯುತ್ತಿರುವನು.

ಫಾಲ್ಗುಣಮಾಸದ ಅಂತ್ಯ; ಚೈತ್ರಮಾಸದ ಆಗಮನ. ಆಗ ಕಾಡಡವಿಗಳ ಗಿಡಗಂಟಿಗಳೂ ಮರಗಳೂ ಬರವಾಗಿ ಒಣಗಿದ ಕಟ್ಟಿಗೆಗಳಂತೆ ನಿಂತು, ತಪಸ್ವಿಯು ತನ್ನ ಮನೋಭೀಷ್ಟವನ್ನು ಹೊಂದಲು

ಕಠಿಣವಾದ ತೇಜಸ್ಸನ್ನು ಬರಿವೈಯಿಂದಲೂ, ಒಂಟಿಗಾಲಿನಿಂದಲೂ ನಿಂತಿರುವದನ್ನು ಅನುಕರಿಸುತ್ತಿದ್ದವು ಅವುಗಳಲ್ಲಿ ಕೆಲವು ಆದೇ ಮಾಗುಳು ಒಡೆದು ಕೆಂಬಣ್ಣವನ್ನು ಸೂಸುತಲಿದ್ದವು. ಕೆಲವು ಚಿಗು ರೆಲೆಗಳಿಂದ ಚಿಮ್ಮುತ್ತಿದ್ದವು ಕೆಲವು ಎಳೆ ಹಸರು ಬಣ್ಣವನ್ನು ಬೀರು ತ್ತಿದ್ದವು. ಕೆಲವು ಮೃದುವಾದ ಹಸರೆಲೆಗಳಿಂದಲೂ, ಹೂವುಗಳಿಂದಲೂ ಶೋಭಿಸುತ್ತಿದ್ದವು. ಇದರಂತೆ ತೋಟಪಟ್ಟಿ ಗ್ರಾಮಾಂತರಗಳಲ್ಲಿದ್ದ ಫಲ ವೃಕ್ಷಗಳೂ, ಇನ್ನಿತರ ಗಿಡಗಳೂ ಅಂದಚಂದವಾಗಿ ಕಾಣುತ್ತಿ ದ್ದವು ಇವೆಲ್ಲವುಗಳಲ್ಲಿ ಬೇಸಿಗೆಯ ಬೇಸರವನ್ನು ಓಸರಿಸಿ ಓಡಿಸುವ ಪಶುಪಕ್ಷಿಗಳಿಗೂ ಮಾನವಜಾತಿಗೂ, ತಂಪನ್ನು ನೀಡುವ ಬೇವಿನಮರ ಗಳು ಗಡಚಾದ ಟೊಂಗೆಗಳಿಂದಲೂ, ಮೃದು ಮಧುರ ಎಲೆಗಳಿಂದಲೂ ಸೃಷ್ಟಿಸೌಂದರ್ಯವನ್ನು ಬೀರುತ್ತಿದ್ದವು. " ಕಾಯಿಗಳಲ್ಲಿ ಹಾಗಲಕಾಯಿ ಬೀಜಗಳಲ್ಲಿ ಚಾಂಚಲಿ, ಹಾಗು ಔಷಧಗಳಲ್ಲಿ ಕ್ವಿನಾಯಿನಗಳು ವಿಷ ವಾದರೂ ಪ್ರಸಾದ ಲಿಂಗಾರ್ಪಿತಕ್ಕೆ ಹ್ಯಾಗೆ ಯೋಗ್ಯವೋ ಹಾಗೆ, ಮುಂದು ವರಿವ ಬೇಸಿಗೆಯ ಬಿಸಿಲಿನ ತಾಪಹರಣಕ್ಕೆ ಔಷಧವೂ ಶಾಂತಿಮಯವೂ ಆದ ಬೇವಿನ ಹೂವು, ಯುಗದಾದಿಯ ದಿನದೊಳು ಪ್ರಸಾದಂಗಳಲ್ಲಿ ಆದಿ ಪ್ರಸಾದವಾಗಿರುವದು. ಅಂತೆಯೇ ಪ್ರಾಪಂಚಿಕ ಪಾರಮಾರ್ಥಿಕ ಲೋಕವೆಲ್ಲ ಊಟದ ಮೊದಲು ಬೇವು ಇಚ್ಚದೆ, ಊಟವನ್ನು ಸಾಗು ಮಾಡುವದಿಲ್ಲ ಆ ಹೂವಿನಲ್ಲಿ ಪಂಚಪದಾರ್ಥಗಳನ್ನು ಕೂಡಿಸಿ ಸುರುಚಿ ಯನ್ನಾಗಿ ಮಾಡುವರು. ಇವಲ್ಲದೆ ವಿಷಗುಡಿದ ದೇವತೆಗಳನ್ನು ಸಲು ಹಿದ ನೀಲಕಂಠ ನಂಜುಂಡೇಶ್ವರನೆನಿಸಿಕೊಂಡ ಸದಾಶಿವನ ಜ್ಞಾಪ ಕತ್ವವೂ, ಈ ಯುಗಾದಿಹಬ್ಬದ ಮಹಪಾಂಚಣೆಯಾಗಿದೆ

ಈ ವಿಶ್ವವನ್ನು ಬೆಳಗುವ ವಿಶ್ವನಾಥನಿಗೆ ಯುಗಯುಗಂಗಳಿದ್ದರೂ ತನ್ನ ವಿಶ್ವಂಭರೀಶಕ್ತಿಯಿಂದ ಕಾಲಪರಿಚ್ಛೇದವೂ ಆತ್ಮಾನಾತ್ಮಗಳೂ, ಚರಾಚರಗಳೂ ಹಗಲು ರಾತ್ರಿಗಳೂ ಜ್ಞಾನಾಜ್ಞಾನಗಳೂ ಸುಖದುಃಖ ಗಳೂ ಉಂಟಾಗಿರುವವಲ್ಲವೇ? ಭೂಮಿಯನ್ನು ಬೆಳಗುವ ಸೂರ್ಯನ ಸುತ್ತಲು ಪೃಥ್ವಿಯ ಒಂದು ಪ್ರದಕ್ಷಿಣೆಯ ಕಾಲವೇ. ಒಂದು ವರ್ಷ. ಈ ವರ್ಷದ ಪ್ರವರ್ತನೆಯಲ್ಲಿ ಒಡಮೂಡುವ ಬೇಸಿಗೆ, ಮಳೆ, ಚಳಿಗಾಲ ಗಳೇ ಮೂರು ಮುಖ್ಯ ಋತುಗಳು. ಒಂದೊಂದು ಮುಖ್ಯ ಋತು,

ವಿನಲ್ಲಿ ತಲೆದೋರುವ ನೈಸರ್ಗಿಕ ಶಕ್ತಿಗಳಾದ ಎರಡೆರಡು ಭಾಗಗಳೇ ಋತುಮಾನಗಳು ಈ ಪ್ರತಿಯೊಂದು ಋತುವು ಎರಡು ತಿಂಗಳಾವಧಿಯದು. ಪ್ರತಿಯೊಂದು ತಿಂಗಳಲ್ಲಿ ಶುಕ್ಲ ಮತ್ತು ಕೃಷ್ಣಪಕ್ಷಗಳೆಂದೂ, ಒಂದೊಂದು ಪಕ್ಷದಲ್ಲಿ ಎರಡು ವಾರಗಳೆಂದೂ ಒಂದು ವಾರದಲ್ಲಿ ಏಳು ದಿನಗಳೆಂದೂ, ಒಂದೊಂದು ದಿನದಲ್ಲಿ ಹಗಲು ರಾತ್ರಿಗಳೆಂದೂ, ಅವುಗಳಲ್ಲಿ ತಾಸು, ಗಳಿಗೆ, ಫಳ, ವಿಘಳಿಗಳೆಂದೂ, ಕಾಲಪರಿಚ್ಛೇದವನ್ನು ಜ್ಯೋತಿಷಿಗಳು ಶಾಸನಗೊಳಿಸಿದಾರೆ. ಇದಲ್ಲದೆ ಕೃತ, ತ್ರೇತಾ, ದ್ವಾಪರ, ಕಲಿಯುಗ ಗಳೆಂಬ ಮಹಾಯುಗಗಳನ್ನೂ ಪ್ರಕೃತಿದೇವಿಯು ವಿಕೃತಿಗಳನ್ನನುಸರಿಸಿ ವಿಚ್ಛೇದಿಸಿದ್ದಾರೆ. ಈ ಪ್ರಕೃತಿದೇವಿಯು ಪ್ರಚಲಿತ ಶಕೆ, ಮಳೆ, ಚಳಿಗಾ ಲಗಳಿಗನುಸಾರವಾಗಿ, ಮಾನವನ ನೂರು ವರ್ಷದ ಆಯುರ್ಮಾನದಲ್ಲಿ ಆಚರಿಸುವ ಹುಟ್ಟು ಹಬ್ಬದಂತೆ ಯುಗ ( ವರ್ಷ) ದ ಆದಿಯ ದಿನವನ್ನು ಆಚರಿಸಲು ನಿರ್ಧರಿಸಿದ್ದಾರೆ.

ಇದರಂತೆ ಪರತತ್ವವಸ್ತುವು ಪರಿಪೂರ್ಣವಾಗಿದ್ದರೂ, ಏಕಮೇವಾ, ದ್ವಿತೀಯವಾದ ಬ್ರಹ್ಮಸ್ವರೂಪವಾದ ಪರಮಾನಂದವಾದ ಪ್ರಣವಸ್ವರೂ ಪವಾದ ವಿಶ್ವತೋಮುಖವಾದ ವಿಶ್ವಾತ್ಮನಾದ ವಿಶ್ವಜ್ಯೋತಿಯಾಗ ವಿಶ್ವಮಯವಾದ ಸಮಷ್ಟಿರೂಪಾದ ಘನಲಿಂಗವು, ವ್ಯಷ್ಟಿಯು ( ಮಾನ ವನ) ಲ್ಲಿ ನಿಃಕಲ ನಿಶ್ಶೂನ್ಯ ನಿರಂಜನ ಸ್ವರೂಪಗಳಾದ ಇಷ್ಟ, ಪ್ರಾಣ, ಭಾವಲಿಂಗಗಳೆಂದೂ, ಒಂದೊಂದು ಲಿಂಗದಲ್ಲಿ ದ್ವಿವಿಧವಾಗಿ ಆಚಾರ ಗುರು, ಶಿವ, ಜಂಗಮ, ಪ್ರಸಾದ, ಮಹಾಲಿಂಗಗಳೆಂದೂ, ಈ ಒಂದೊಂದ ಲಿಂಗದಲ್ಲಿ ದ್ವಿವಿಧವಾಗಿ ಆಚಾರಗುರು, ಶಿವ, ಜಂಗಮ, ಪ್ರಸಾದ ಮಹಾಲಿಂಗಗಳೆಂದೂ ಒಂದೊಂದು ಲಿಂಗದಲ್ಲಿ ಎಂದರೆ, ಆಚಾರಲಿಂಗ ದಲ್ಲಿ ಕ್ರಿಯಾ, ಮಂತ್ರ, ವೇದ್ಯ ವ್ಯಜನ, ಈಶ, ನಿರೀಕ್ಷಣಲಿಂಗ ಗಳೆಂದೂ, ಗುರುಲಿಂಗದಲ್ಲಿ ಕ್ರಿಯಾದೀಕ್ಷೆಲಿಂಗ, ಮಂತ್ರದೀಕ್ಷೆಲಿಂಗ, ವೇಧಾದೀಕ್ಷೆಲಿಂಗ, ಭೋಗದೀಕ್ಷೆಲಿಂಗ ಪ್ರಸನ್ನದೀಕ್ಷೆಲಿಂಗ, ನಿರ್ವಾಣದೀಕ್ಷೆ ಲಿಂಗಗಳೆಂದೂ, ಶಿವಲಿಂಗದಲ್ಲಿ ಕರಸ್ಥಲ, ನಯನಸ್ಥಲ, ಹೃದಯಸ್ಥಲ ಮಂತ್ರಸ್ಥಲ, ತ್ರಿಕೂಟಸ್ಥಲ, ಲಯಸ್ಥಲದ ಲಿಂಗಗಳೆಂದೂ, ಜಂಗಮ ಲಿಂಗದಲ್ಲಿ ಸ್ವಯಂ, ಸ್ವತಂತ್ರ, ಚರ, ಪರಿಣಾಮ, ನಿರುಪಾಧಿಕ, ಪರಿಪೂರ್ಣಲಿಂಗಗಳೆಂದೂ, ಪ್ರಸಾದಲಿಂಗದಲ್ಲಿ ಇಂದ್ರಿಯಾನಂದ,

ಪ್ರಾಣಾನಂದ, ಜ್ಞಾನಾನಂದ, ಭಾವಾನಂದ, ತುರ್ಯಾನಂದ, ಮಹಾನಂದಲಿಂಗಗಳಿಂದೂ, ಸಾಹಲಿಂಗಗಳಲ್ಲಿ ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಖಾವಗವ್ಯ, ಸರ್ವಶಕ್ತ್ಯಾಶ್ರಯ, ಪರಿಪೂರ್ಣ ಪ್ರಕಾಶಲಿಂಗಗಳಿಂದೂ, ೩೬ ಲಿಂಗಗಳು ೬ ಅಂಗಗಳಲ್ಲಿ ಪ್ರಾಶಿಸುತ್ತಿರುವವು. ಈ ಅಂಗಲಿಂಗಗಳ ಸಂಬಂಧವರಿತು, ಆಯಾಲಿಂಗಗಳನ್ನು ಆಯಾ ಅಂಗಗಳಲ್ಲಿ ಅಳವಡಿಸಿಕೊಳ್ಳಲು, ಆ, ಆ ಲಿಂಗಗಳ ಜಪಸಂಖ್ಯೆಯೂ ಜಪಕಾಲವೂ ಅರಿಯಲ್ಪಡುವದು ಅತ್ಯವಶ್ಯವು. ಇದನ್ನರಿತ ನಿಜಗುಣ ಶಿವಯೋಗಿಗಳು "ದೇಶಕಾಲ ವಸ್ತುಗಳಿಂದ ಈಶನೊಲಿಯುವನು, ಎಂದು ಹಾಡಿಕೊಂಡಿದ್ದಾರೆ. ದೇಶವೆಂದರೆ ಸ್ಥಲ. ಕಾಲವೆಂದರೆ ಶುಭಮುಹೂರ್ತ, ವಸ್ತುವೆಂದರೆ ನೈಸರ್ಗಿಕಪರಿಸ್ಥಿತಿ. ಯುಗಾದಿಯು ಪ್ರಾಥಮ್ಯದ ತಿಥಿಯು ಆಯಾ ಸ್ಥಲಗಳ ಆಚಾರವಂತರಿಗೆ ಜಪಾರಂಭಕ್ಕೆ ಹಾಗು ಸತ್ಕಾಯಕದ ಆರಂಭಕ್ಕೆ ಅನುಕೂಲವಾದದ್ದು. ಕ್ವಿನಾಯಿನದಿಂದ ಚಳಿಜ್ವರರೋಗವು ನಾಶವಾಗುವಂತೆ, ಆ ದಿನದಲ್ಲಿ ಪಂಚಪದಾರ್ಥಗಳಿಂದೊಡಗೂಡಿದ ಬೇವಿನ ಹೂಗಳ ಸೇವನೆಯಿಂದ ಜೀವಭಾವವಳಗಿ ಶಿವಭಾವಿಯಾಗಿ ಭವರೋಗವು ಅಡಗುವದಕ್ಕೆ ಯಾವ ಸಂದೇಹವೂ ಇಲ್ಲ.

ಆಚಾರಾಂಗ, ಗೌರವಾಂಗ, ಶಿವಾಂಗ, ಚರಾಂಗ, ಪ್ರಸಾದಾಂಗ ಮಹದಂಗವೆಂಬ ಭಕ್ತನ ಅಂಗವಾರು। ಆ ಭಕ್ತಗ ಇಷ್ಟಲಿಂಗ। ಆ ಇಷ್ಟಲಿಂಗದ ಶಕ್ತಿಪೀಠದಲ್ಲಿರುವ ಆಚಾರಲಿಂಗಕ್ಕೆ ಜಪಗಳೆಷ್ಟೆಂದರೆ ॥೧೭೨೮॥ ಗಳಿಗೆ ೪ ಪಳ ೪೮॥ ಮಹೇಶ್ವರನ ಅಂಗವಾರು। ಆಚಾರ ನೈಷ್ಠೆ, ಗುರು ನೈಷ್ಠೆ, ಶಿವಲಿಂಗನೈಷ್ಠೆ, ಚರನೈಷ್ಠೆ, ಪ್ರಸಾದನೈಷ್ಠೆ, ಮಹಾನೈಷ್ಠೆ। ಇಷ್ಟಲಿಂಗದ ಕಟಿಯಲ್ಲಿರುವ ಗುರುಲಿಂಗಕ್ಕೆ ಜಪಗಳೆಷ್ಟೆಂದರೆ।೨೫೯೨॥ ಗಳಿಗೆ ೭ ಪಳ ೧೨॥ ಪ್ರಸಾದಿಯ ಅಂಗವಾರು। ಆಚಾರಾವಧಾನಿ, ಗೌರವಾವಧಾನಿ, ಲಿಂಗಾವಧಾನಿ, ಚರಾವಧಾನಿ, ಪ್ರಸಾದಾವಧಾನಿ, ಮಹಾವಧಾನಿ। ಇಷ್ಟಲಿಂಗದ ವರ್ತುಳದಲ್ಲಿರುವ ಶಿವಲಿಂಗಕ್ಕೆ ಜಪಗಳೆಷ್ಟೆಂದರೆ ॥೪೩೨೦॥ ಗಳಿಗೆ ೧೨॥ ಪ್ರಾಣಲಿಂಗಿಯ ಅಂಗವಾರು। ಸಾಧ್ಯ, ವೇದ್ಯ, ಭೇದ್ಯ, ಯೋಗ್ಯ, ಸನ್ನಿಹಿತ, ಮಹಾನುಭಾವಿ। ಇಷ್ಟಲಿಂಗದ ಗೋಮುಖದಲ್ಲಿರುವ ಚರಲಿಂಗಕ್ಕೆ ಜಪಗಳೆಷ್ಟೆಂದರೆ ॥೫೧೮೪॥ ಗಳಿಗೆ ೧೪ ಪಳ ೨೪॥ ಶರಣನ ಅಂಗವಾರು। ಆಯತ, ಸ್ವಾಯತ, ಸನ್ನಿಹಿತ, ಕಳಾನುಗ್ರಹ,

ಕಾಮನೋಮಗ್ನತೆ, ಘನಸಮರಸ। ಆ ಇಷ್ಟಲಿಂಗದ ನಾಳದಲ್ಲಿ ಪ್ರಸಾದ ಲಿಂಗಕ್ಕೆ ಜಪಗಳೆಷ್ಟೆಂದರೆ ॥೬೯೧೨॥ ಗಳಿಗೆ ೧೯ ಪಳ ೧೨॥ ಐಕ್ಯನ ಅಂಗ ವಾರು। ಆಚಾರತೃಪ್ತಿ, ಗೌರವತೃಪ್ತಿ, ಲಿಂಗತೃಪ್ತಿ, ಚರತೃಪ್ತಿ, ಮಹಾನ ಭಾವತೃಪ್ತಿ, ನಿರ್ಭರವತೃಪ್ತಿ। ಆ ಇಷ್ಟಲಿಂಗದಲ್ಲಿರುವ ಮಹಾಲಿಂಗಕೆ ಜಪಗಳೆಷ್ಟೆಂದರೆ ॥೮೬೪॥ ಗಳಿಗೆ ೨ ಪಳ ೨೪॥

ಆಧಾರಾದಿ ಷಟ್ಚಕ್ರಗಳ ದಳಗಳ, ಕ್ರಮದಿಂದ ೪, ೬, ೧೦, ೧೨, ೧೬, ೨, ಇರುವವಷ್ಟೇ ಇವೆಲ್ಲ ಒಟ್ಟು ೫೦ ದಲ. ೨೪ ತಾಸಿನಲ್ಲಿ ಪ್ರತಿವ್ಯಕ್ತಿಯು ಹಂಸಜಪಗಳು ೨೧೬೦೦ ಆಗುತ್ತವೆ. ೨೧೬೦೦÷೫೦=೪೩೨ ಒಂದು ದಲಕ್ಕೆ ೪೩೨ ಜಪಗಳಾಗುವವು. ಆಧಾರ ಚಕ್ರದ ದಳ ೪×೪೩೨=೧೭೨೮ ಆಚಾರಲಿಂಗದ ಜಪಗಳಾಗುವವು. ಇದೇ ರೀತಿ ಯಾಗಿ ಸ್ವಾಧಿಷ್ಠಾನ ಚಕ್ರದ ದಳ ೬×೪೩೨=೨೫೯೨ ಜಪಗಳು ಗುರು ಲಿಂಗದವುಗಳಾಗುವವು. ಇದರಂತೆ ಉಳಿದ ಚಕ್ರಗಳಲ್ಲಿಯು ಆಯಾ ಲಿಂಗಗಳ ಜಪಸಂಖ್ಯೆಯನ್ನು ಅರಿಯತಕ್ಕದ್ದು.

ಒಂದು ದಿನಗಳಲ್ಲಿ ೨೪ ತಾಸುಗಳು. ಒಂದು ತಾಸಿಯಲ್ಲಿ ೨॥ ಗಳಿಗೆ. ಒಂದು ಗಳಿಗೆಯಲ್ಲಿ ೬೦ ಪಳಗಳು. ೨೪×೨½×೬೦=೩೬೦೦ ಪಳಗಳು. ೨೪ ತಾಸಿನಲ್ಲಿ ೨೧೬೦೦ ಜಪಗಳಾಗುವದರಿಂದ ೨೧೬೦೦÷೩೬೦೦=೬ ಜಪಗಳಾಗಲು ೧ ಪಳ ವೇಳೆಬೇಕು. ಆಚಾರಲಿಂಗದ ಜಪ ಸಂಖ್ಯೆಯು ೧೭೨೮÷೬=೨೮೮ ಪಳ ಅಂದರೆ ೪ ಗಳಿಗೆ ೪೮ ಪಳ. ಇನ್ನು ಗುರುಲಿಂಗದ ಜಪಸಂಖ್ಯೆಯು ೨೫೯೨÷೬=೪೩೨ ಪಳ ಅಂದರೆ ೭ ಗಳಿಗೆ ೧೨ ಪಳ. ಇದರಂತೆ ಉಳಿದ ಲಿಂಗಗಳ ಜಪಕಾಲವನ್ನು ತಿಳಿದುಕೊಳ್ಳತಕ್ಕದ್ದು.

ನವಯುಗದ ದಿನಾಚರಣೆಯ ಹಿಂದಿನ ದಿವಸವೇ ಫಾಲ್ಗುಣ ಮಾಸದ ಅಮಾವಾಸ್ಯವು. ಆದಿನ ರಾತ್ರಿ ಊರ ಹಿರಿಯರು ಊರ ಹೊರಗಿನ ವಿಶಿಷ್ಟಸ್ಥಳದಲ್ಲಿ ಫಲಕಟ್ಟುವರು. ಅಲ್ಲಿ ೨೭ ನಾಳಿಗಳ ನಕ್ಷತ್ರ ಗಳನ್ನು ಸೂಚಿಸುವ ಆಯಾ ಮಳೆಗಳ ದಿವಸಗಳಷ್ಟು ಸಂಖ್ಯೆಯುಳ್ಳ ಜೋಡಿಸಿಟ್ಟ ಯಕ್ಕೆಲೆಯ ಗುಂಪುಗಳೂ, ಆಯಾ ಧಾನ್ಯಗಳ ತೆನೆಗಳೂ, ರೆಂಟೆ, ಕುಂಟೆ, ಕೂರಿಗೆ, ಎತ್ತು ಬಂಡೆಗಳ ಮಾದರಿಗಳೂ ಬುತ್ತಿ ಬುರಲಿಗಳೂ, ಇಡಲ್ಪಟ್ಟು ಯುವಾದಿ ವಾದ್ಯಗಳು ಬೆಳಗಿನ

ಘಂಟಿಗೆ ವರ್ಷದ ಮಳೆಬೆಳೆಗಳ ಫಲಗಳನ್ನು ಸೂಚಿಸುವ ಸುಚಿಹ್ನ ದುಶ್ಚಿಹ್ನಗಳನ್ನು, ಭಾವಿಕರು ಭಾವಿಸಿ ಹೇಳುವರು. ಕೆಲವರು ಸೂರ್ಯೋದಯಕ್ಕೆ ಮೋಡವು ಅಡ್ಡಬಂದ ಚಿಹ್ನವನ್ನು ನೋಡುವರು. ಕೆಲವರು ರಕ್ಷ ಪಕ್ಷಿಗಳ ದರ್ಶನ ತೆಗೆದುಕೊಳ್ಳುವರು. ಕೆಲವರು ದೇವರ ದರ್ಶನ ಮಾಡಿಕೊಂಡು ತಾಯಿ ತಂದೆಗಳ ಗುರು ಹಿರಿಯರ ಶ್ರೀ ಜಂಗಮ ಮೂರ್ತಿಗಳ ಪಾದದರ್ಶನವನ್ನು ಪ್ರಣಾಮ ಪೂರ್ವಕ ಮಾಡಿಕೊಳ್ಳುವರು. ಕೆಲವರು ಅಭ್ಯಂಗ ಸ್ನಾನ, ಜಪ ತಪ, ನಿಷ್ಠೆ ನಿಯಮ ಪೂಜಾದಿಗಳನು ತೀರಿಸಿಕೊಂಡು, ಸಾರ್ವಜನಿಕ ಮಠಗಳಲ್ಲಿ ಪಂಚಾಂಗ-ಶ್ರವಣ, ಕುರುಬರಟ್ಟಿ, ಕಾಲಜ್ಞಾನವನ್ನು ಕೇಳಿ ಮನೆಗೆ ಬಂದು, ನಿತ್ಯದಂತೆ ಲಿಂಗಾರ್ಚನೆ ಜಂಗಮಾರ್ಚನೆಗಳಲ್ಲಿ ನಿರತರಾಗಿ ಪಾದಾರ್ಚನೆಯಲ್ಲಿ ಪರಿಣಮಿಸಿ ಬಂದು ಬಾಂಧವರೊಡನೆ, ಆದಿಪ್ರಸಾದ ವೆನಿಸುವ ಬೇವು ಕಚ್ಚಿ, ಶಾವಿಗೆ ಪಾಯಸದ ಭೋಜನವನ್ನು ಆತ್ಮಾ ನಂದದಿಂದ ಮಾಡಿ, ಶ್ರೀ ಜಂಗಮಕ್ಕೆ ನೂತನ ವಸ್ತ್ರವನಿತ್ತು, ಬಳಿಕ ತಾವೂ ಹೊಸ ಬಟ್ಟೆಗನ್ನು ಉಡತೊಡುವರು. ಈ ಲಿಂಗ ಜಂಗಮಾರ್ಚನೆ ಗಳಲ್ಲಿ ವೀರಶೈವ ಆಚಾರನಿಷ್ಠರು ಸಕಲವಾದ ಇಷ್ಟಲಿಂಗಪೂಜೆಯನ್ನು ಬೆಳಸಿ ಸಕಲವನ್ನು ಸೂಚಿಸುವ "ಜಗದಾದಿ ಬೀಜಂಗೆ ನಿಗಮಾಂತ ವೇದ್ಯಂಗೆ। ನಗರಾಜಸುತೆಯ ರಮಣಂಗೆ। ಶಂಭುವಿಂಗಗಣಿತೋತ್ಸವದಿ ನತನಪ್ಪೆಂ,, ॥ ಎಂಬ ಸ್ತೋತ್ರವನ್ನು, ಪ್ರಾಣಲಿಂಗಾರ್ಚನೆಯ ನಂತರ ಸಕಲ ನಿಃಕಲ ಸೂಚಕವಾದ "ಶ್ರೀ ಮಹಾದೇವಂಗೆ ಸೋಮಂಗೆ ಸುಖಪೂರ್ಣ। ಧಾಮಂಗೆ ಸತ್ಯ ಚಿದ್ರೂಪಂಗೆ ॥ ಕಾಮಿತ ಜನಕಲ್ಪ ಭೂಜಂಗೆ ಶಂಭುವಿಂ। ಗಾಮೋದದಿಂದ ವಂದಿಸುವೆನು ॥" ಎಂಬ ಸ್ತೋತ್ರವನ್ನೂ ನಂತರ ಭಾವಲಿಂಗಾರ್ಚನೆಯ ಕೊನೆಗೆ, ಕೇವಲ ನಿಃಕಲವನ್ನು ಸೂಚಿಸುವ "ಹಾಳ ಮೇಲಿನ ಮಡಿಯ ಕಾಣಲಾರಳವಲ್ಲ ಪೊಳಿಪೊಳಿಯು ಕೋಣೆ ಕೋಣೆಗಳೊಳು ॥ ಮೇಲುಗಿರಿ ಪಶ್ಚಿಮದ್ವಾರ ವನು ಪೊಗಲು। ಕಾಣಬಾರದ ಕದಳಿಯುಂಟು ನೋಡಾ" ॥ ಎಂಬ ಸ್ತೋತ್ರವನ್ನು ಪಾಡಿ ಕೃತಾರ್ಥರಾಗುವರು.

ಯುಗಾದಿಯ ದಿವಸ ಸಂಜೆಯ ವೇಳೆಯಲ್ಲಿ ಮಠದ ಶ್ರೀಗಳ ಪ್ರವಚನವು ನಡೆದಾಗ್ಗೆ, "ಕೇಳಿರಿ; ಕೇಳಿರಯ್ಯಾ। ಆತ್ಮನ ಎರಡು

ಪ್ರಕಾರದ ಆದಿ ಮಧ್ಯ ಅವಸಾನಂಗಳ ತಿಳಿದು ನೋಡಿರಿ. ಕೆಡಬೇಡಿ. ತಂಥೆಯ ದೆಶೆಯಿಂದ ತಾಯಿಯ ಯೋನಿ ಚಕ್ರದಲ್ಲಿ ಬಂದುದೇ ಆದಿ। ಹೊನ್ನು ಹೆಣ್ಣು ಮಣ್ಣು ನನ್ನದೆಂದು ಹಿಡಿದು ಷಟ್ಕರ್ಮ ವನ್ನಾಚರಿಸಿ, ಸುಖ ದುಃಖಗಳಲ್ಲಿ ಮುಣಿಗಿಪ್ಪುದೇ ಮಧ್ಯ। ಆತ್ಮನ ಕೈಯಿಂದ ಅರೆದು ಸಣ್ಣಿಸಿಕೊಂಡು, ಭವಕ್ಕೆ ನೂಕಿಸಿಕೊಂಬುದೇ ಅವಸಾನ। ಇದನರಿದು ಇದಕ್ಕೆ ಹೇಯವಂ ಮಾಡಿರಿ। ಮತ್ತೆ ಆದಿ ಮಧ್ಯ ಅವಸಾನಂಗಳ ತಿಳಹುವೆ ನಾನು। ಮಹಾಲಿಂಗದ ಗರ್ಭಾಬ್ಧಿ ಯಲ್ಲಿ ಬಂದೆನೆಂಬುದೇ ಆದಿ। ಲೋಕದ ವ್ಯವಹಾರವ ಸಾಕುಮಾಡಿ ಇಷ್ಟಲಿಂಗದಲ್ಲಿ ನೈಷ್ಠೆಗೊಂಡು ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿ। ಮುಕ್ತಿಂಗೆ ಭಕ್ತಿಂಗೆ ಮೋಕ್ಷಗಾಮಿಯಾಗಿಪ್ಪುದೇ ಮಧ್ಯ। ತನುವ ಬಿಡು ವಲ್ಲಿ ಮನವ ಪರಬ್ರಹ್ಮಕ್ಕೆ ಸಮರ್ಪಣವ ಮಾಡಿದ ಜನನ ಮರಣ ನೀಗುವದೇ ಅವಸಾನ। ಇದನರಿತು ಇದಕ್ಕೆ ಮೆಚ್ಚಿ ಲಿಂಗವನೆ ಸಾಧಿಸಿರಿ। ಭೇದಿಸಿರಿ। ಕಪಿಯು ಕೈಗನ್ನಡಿಯಂತೆ ಕುಣಿವರೆ ಕುಣಿದು ಯುದ್ಧಿಸಿದರೆ ಯುದ್ಧಿಸಿ, ಹಲ್ಲುಗಿರಿದರೆ ಹಲ್ಲುಗಿರಿದಂತೆ, ಮನವಾಡಿದಂತೆ ನೀವಾಡಬೇಡಿರಿ! ಮನವಾಡಿದಂತೆ ಆಡಿದವಂಗೆ ಭಕ್ತಿಯೆಲ್ಲಿಯದು? ಜ್ಞಾನವೆಲ್ಲಿಯದು? ವೈರಾಗ್ಯವೆಲ್ಲಿಯದು? ಮುಕ್ತಿಯೆಲ್ಲಿಯದಯ್ಯ? ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ॥

ಆದಿಯನರುಹಿದ ಸ್ವಾಮಿಗಳು ಅನಾದಿಯಂತೆ ಈರುವ ಆಕಾಂಕ್ಷಿಗಳಾಗಿ ಆ ಘನವ ಮನವು ವೇಧಿಸಿ, ಸಾಧಿಸುವ ಸುಮಾರ್ಗವನು ಸದು ಯೋಚಿತವಾಗಿ ಬೋಧಿಸಿದರು :—"ಲಿಂಗಾಂಗ ಸಂಬಂಧಿಗಳೆಂದು ಅಂದ ಚಂದಾಗಿ ನುಡಿದುಕೊಂಬ ಕ್ರಿಯಾಭ್ರಾಂತರು ನೀವು ಕೇಳಿರೋ। ಲಿಂಗಾಂಗ ಸಂಬಂಧದ ಉತ್ತರೋತ್ತರ ನಿರ್ಣಯವ। ಹೊರಗಣ ಹೂ ವನೆ ತಂದು ಸ್ಥೂಲತನುವಿನ ಮೇಲಿಪ್ಪ ಆಚಾರ ಲಿಂಗದ ಪೂಜೆಯನೆ ಮಾಡಿ, ತನುವ ಸಮರ್ಪಿಸಿ ಬೇಡಿಕೊಂಡು। ಹೊರಗಣ ಹೆಣ್ಣು ಮಣ್ಣು ಹೊನ್ನು ಷಟ್ಕರ್ಮಂಗಳಂ ಬಿಟ್ಟರೆ॥ ಇಷ್ಟಲಿಂಗದ ಪೂಜೆ॥ ಒಳಗಣ ಹೂವನೆ ತಂದು, ಸೂಕ್ಷ್ಮತನುವಿನ ಮೇಲಿಪ್ಪ ಜಂಗಮ ಲಿಂಗದಂ ಪೂಜೆಯಂ ಮಾಡಿ, ಮನವ ಸಮರ್ಪಿಸಿ ಉಪಾವಸ್ಥೆಯಂ ಮಾಡಿ ಒಳಗಣ ಅಂತಃಕರಣಂಗಳಂ ಸುಟ್ಟರೆ॥ ಪ್ರಾಣಲಿಂಗದ ಪೂಜೆ॥ ಮನೋ ಮಧ್ಯದೊಳಗಿಪ್ಪ ಭಾವ ಪುಷ್ಪವನೆ ತಂದು ಕಾರಣ ತನುವಿನ

ಮೇಲಿಪ್ಪ ತೃಪ್ತಿಲಿಂಗ ಪೂಜೆಮಾಡಿ, ಸಂತೋಷಮಂ ಸಮರ್ಪಿಸಿ ದೈನ್ಯಂಬಿಟ್ಟು ಜ್ಞಾನಕ್ರಿಯೆಂಗಳನಳಿದುದೇ ॥ ಭಾವಲಿಂಗದ ಪೂಜೆ ॥ ಈ ಪ್ರಕಾರದ ಲಿಂಗಾಂಗದ ಸಾಧಕತ್ವದಿಂ ಶಿವರಾತ್ರಿಯು ಸಂಕಣ್ಣಂಗೊಲಿದಂತೆ, ಎನಗೊಲಿದು ಕರುಣಿಸಯ್ಯ, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ "॥ ಇನ್ನು ನಿಮಗೆ ಕ್ರಿಯಾಚಾರದ ಶ್ರೀ ಜಂಗಮಲಿಂಗದ ಪಾದಪೂಜಾ ಕ್ರಮವನ್ನೂ ಪಾದೋದಕ ಪ್ರಸಾದಗಳ ಭೇದಾಭೇದಗಳನ್ನೂ ಅವುಗಳ ಹಾಗು ಲಿಂಗಾಂಗಗಳ ಸಂಬಂಧವನ್ನೂ ಮುಂಬರುವ ಶ್ರೀ ಬಸವಜಯಂತಿಯ ಶುಭಮುಹೂರ್ತದ ಪ್ರತ್ಯಕ್ಷ ಕ್ರಿಯಾಚರಣೆಯಲ್ಲಿ ಅನುಭವಿಸಿ ಆನಂದಬಡುವಂತೆ ಮಾಡಲ್ಪಡುವದೆಂದು ಪ್ರವಚನವು ಪೂರ್ತಿಗೊಳಿಸಲ್ಪಟ್ಟಿತು.

ಮಾತ್ತಂ— ಕಂದಪದ್ಯ

ನಾದವದು ಗುರುಲಿಂಗಂ ।
ಶೋಧಿಸೆ ಬಿಂದುವೆ ಪರತರ ಲಿಂಗಮುಮಲ್ತೇ ॥
ಮೋದವನೀಯುವ ಕಳೆಯೋ ।
ಬೋಧಿಪ ಜಂಗಮ ಸುಮುಕ್ತಿ ಲೋಕೈಕನೊಳಂ ॥ ೧ ॥

ಪುತ್ತಲು ಸುಳಿಯುತ್ತಮವದು ।
ಚಿತ್ತವಿನೊಳಕೊಂಡಿರುತಿರೆ, ಬೊಮ್ಮಸ್ಥಳದೊಳ್ ॥
ಹತ್ತಿದ ಬಳ್ಳಿಯು ಮರವನು ।
ಮುತ್ತುತ ಮೆರೆಯುತ ಹರಿಯದೆ ಹಬ್ಬುವ ತೆರದಿಂ ॥ ೨ ॥

ಪರತರ ವಸ್ತುವ ಬೆರೆಯಲು ।
ಚರಿಸದೆ ಮನ, ಘನದೊಳಾಗಿ ತನ್ಮಯಮಕ್ಕುಂ ॥
ಶರಧಿಯೊಳೇಳುವ ತೆರೆಗಳ ।
ಹರಿಯುವ ಮಾರುತನಿಂದಿರೆ ತೋರುವದೇನೈ ? ॥ ೩ ॥

ಲಿಂಗಧ್ಯಾನದೊಳಿರುತಿರೆ ।
ಅಂಗವನಾಶ್ರಯಿಸಿದ ಮನ, ಲಿಂಗವೆಯಕ್ಕುಂ ॥

ಹಿಂಗದೆ ನೆನೆಯುವ ಕೇಡಿಯು ।
ಮಂಗಲಮಯ ಕುಂಡಲಿಯದು ತಾನಾದಪುದೈ ॥ ೪ ॥

ಸಾಕಾರದ ಸ್ಮರಣೆಯೊಳಂ ।
ಸಾಕರಿಸುತ ಪೋಕರಿಸುತ ತನ್ನಾಪಗಳಂ ॥
ತಾಕಿದೊಡಂ ತದ್ವಿಷಯಂ ।
ಸ್ವೀಕರಿಪುದು ಚಿತ್ಪ್ರಕಾಶ ಚಿದ್ರೂಪಗಳಂ ॥ ೫ ॥

ಮತ್ತೆ ವಚನಂ:—

ಲಿಂಗಮುಖದಿಂ ಬಂದ ಸುಪ್ರಸಾದಂಗಳಿಗೆ ನೋಡಿ ನಲಿಯುವ, ಕಟ್ಟಿ ಮುಟ್ಟಿ ಮೋದಂಗೊಳುವ, ವಾಸಿಸಿ ಸಂತಸಂಬಡಿಸುವ, ಉಂಡು ಉಬ್ಬುವ, ಹಾಡಿ ಹರ್ಷಂಗೊಳುವ ಸವೆಯದ ಸುಖದ ಸಂತೃಪ್ತಿಯೊಳೆನ್ನ ಸರ್ವದಾ ಇರಿಸಯ್ಯ ಸಿದ್ಧೇಶ್ವರಾ ॥ ೧ ॥

ಸೃಷ್ಟಿಯೊಳು ಸೃಜಿಸಿ ಸಜ್ಜೀವಿಯಾಗಿ ಸೃಷ್ಟಿಯ ಆಗು ಹೋಗುಗಳನರಿದು, ಜೀವಸೃಷ್ಟಿಯ ಜರಿದು, ಶಿವ ಸೃಷ್ಟಿಯೊಳು ಸರಿದು, ನಿರ್ದೇಹಿ ನಿರ್ಮಲಾತ್ಮನೆನಿಸಿ ಜ್ಞಾನಾತ್ಮನಾಗಿ ಪರಮಾತ್ಮನ ಅರಿದು, ಪರಮನೊಳು ಬೆರೆದು, ನಿಜಾನಂದದೊಳು ನಿಂದ ಶಿವಶರಣರ ನಿಲವನು ತೋರಿ ಬದುಕಿಸಯ್ಯ ಸಿದ್ಧೇಶ್ವರಾ ॥ ೨ ॥

ತ್ಯಾಗಾಂಗದೊಳು ಇಷ್ಟಲಿಂಗದಷ್ಟೈಶ್ವರ್ಯವ, ಭೋಗಾಂಗದೊಳು ಪ್ರಾಣಲಿಂಗದ ಚಿದೈಶ್ವರ್ಯವ, ಯೋಗಾಂಗದೊಳು ಭಾವಲಿಂಗದ ಘನಕ್ಕೆ ಘನವಾದ ಮಹಾಭಾಗ್ಯವ, ಈ ತೊತ್ತಿಂಗಿತ್ತು ನಿನ್ನತ್ತೆಳೆದುಕೊಳ್ಳೈ ಸಿದ್ಧೇಶ್ವರಾ ॥ ೩ ॥

ನಡೆವ ಕಾಲು, ಹಿಡಿದ ಕೈ, ಬೇಡುವ ಬಾಯಿ,
ನೋಡುವ ಕಣ್ಣು ಮೊದಲಾದವೆಲ್ಲವನೊಡಗೂಡುವ
ಮನವುಡಿಗಿ ಘನಲಿಂಗದೊಳು ಲೋಲುಪನಾಗಿ ನಲಿ
ಯೆಂದ ನಮ್ಮ ಸಿದ್ಧೇಶ್ವರಾ ॥ ೪ ॥

ಯುಗಯಾದಿಯ ದಿನದೊಳು ಜಗದಾದಿ ಬೀಜನ ಸುಗ
ಮವಾದ ಸದ್ವಚನಗಳು ಶರಣರ ಮೊಗದಿಂದುಗಮ
ವಾಗಿ ಆ ಸಚ್ಚಿದಾನಂದ ಲೀಲಾರೂಪನ ಆದಿ ಮಧ್ಯ
ಅವಸಾನಂಗಳನರುಪುವ ನಿಚ್ಚಳವಾದಾ ಬೀಜ ಮಾತು
ಗಳು ಬಿಚ್ಚಿ, ಅರುಹಿನೊಳು ಅಚ್ಚೊತ್ತಿ, ಅಂದು ಬೇವನೆ
ಕಚ್ಚಿ, ಭವರೋಗವು ನುಚ್ಚುನುರಿಯಾಯಿತಯ್ಯ ಸಿದ್ಧೇ
ಶ್ವರಾ ॥ ೫ ॥

# ಶಾಲ್ಯದ ಅರಸಿನವರ ವಚನ.

( ಸಂಗ್ರಾಹಕರು:— ಶ್ರೀ ಬಿ. ನಂಜುಂಡಪ್ಪನವರು ಕಾನಕಾನಹಳ್ಳಿ )

ನಮ್ಮ ಸದಾಶಿವ ಲಿಂಗವ ನೀನೊಮ್ಮೆ ನೆನೆಯೊ ಮನವೆ ।
ಹಮ್ಮಿನ ಸೊಗಡಳಿವುದು ಸಂಸಾರದ ।
ಹೆಮ್ಮರ ಮುಂದಿಳೆ ಗೊರಗುವದಾತ್ಮನ ।
ಸನ್ಮುಖ ಸುಖ ದೊರಕುವದಾನಂದದ ಪೇರ್ಮೆಡು ಪುಕ್ಕುವದು ॥ ಪ ॥

ಕರದಿನ ಭಾವಕೆ ಬಾರದು ಬೆಳ್ಪಿನ ।
ತೆರವನು ಸಾರದು ಕೆಂಪಿನ ರೀತಿಯು ।
ಪೊರಸೂಸದು ಹಳದಿಯು ಬಣ್ಣಕ್ಕೆಡೆಯಾಗದು ಹಸುರಂಗೆ ।
ಎರಗದು ಮಾಂಜಿಷ್ಟವ ಮೈಸೋಂಕದು ।
ಪರಿಸದು ಕಾಪೋತವ ದೃಕ್ಕಿಂಗಿದಿ ।
ರಿರದಗ್ನಿಯು ಗುಣವಂಟದು ತಾನೇ ಚಿತ್ತಹ ಕಾರಣದಿಂ ॥ ೧ ॥

ಪರಿಯೊಡನೊತ್ತರಿಸದು ಪಶ್ಯಂತಿಯು ।
ನೆರವಿಗೆ ಬಾರದು ಮಧ್ಯಮೆಯಲಿ ಏ ।
ಸ್ತರಿಸದು ವೈಖರಿಯಲಿ ಸುಳಿಯದು ತತ್ತ್ವ ಘನ ಸುಷಿರಾದಿಗಳಂ ।
ಕರದಿಂ ಪಿಡಿಯದು ಭೂತಜವಲ್ಲದು ।
ಮರುದಾಹತ ಮಾಗದು ಯುಕ್ತ್ಯಕಾ ।
ಕ್ಷರವಲ್ಲದು ಪರಮಾಕಾಶವೆ ತಾನಾಗಿಹ ಕಾರಣದಿಂ ॥ ೨ ॥

ನೆನೆಯದು ನಿಶ್ಚೈಸದು ಮುಂದ್ವೈದಿದ ।
ಮನಃಸರಿಸದು ತಾನೆನ್ನದು ತತ್ತ್ವ ।
ದ್ವಿಷಯದೊಳಿರದಾಗಿನಗೆ ಮೈಯೊಗ್ಗದು ತಗ್ಗದು ಭೀತಿಯಲಿ ।
ಜಾಗದು ನಾಶವ ಸೈದದು ಕರಗದು ।
ಘನವಾಗದು ನಡಿಸದು ನಡತೆಯು ಕೊಂ ।
ಡಿಸತಿಸಗದು ತಾನೇ ಚಿದಖಂಡ ಪದವ ಪಡೆದಿರ್ಪುದರಿಂ ॥ ೩ ॥

ಒಳಗೆ ಹೊ ಗೆ ನಿಂದಿರುತಿರದೆಡದಲಿ ।
ಬಲದಲಿ ಮುಂಗಡೆಯಲಿ ಹಿಂಗಡೆಯಲಿ ।
ಕೆಳಗೆ ಮೇಲೆ ಮೇಣೆಮಂಟ್ಪಡಿಗಳ ಲೊಂದದು ನೆಲುವಿರುವ ।
ತಿಳಿವಿನ ಬೆಂಕಿಯು ದಾರಿಯಾಗಳದಲಿ ।
ಸುಳಿದಾಡುವ ಕಂಗಳ ಪೊಳಪಿನ ।
ಸುಳಿಗಲಸಗದು ಶಾಂಭವ ಪದವನು ತಾನೊಳಕೊಂಡಿರ್ಪುದರಿಂ ॥ ೪ ॥

ಘನನಾಗದ ಪರಿಮಳಲೇಶವ ।
ನನುಸರಿಸದ ರುಚಿಬಣ್ಣಕೆ ಬಾರದ ।
ಮನಗು ಸುಳಿಯುದಾಪ್ಯಾಯನ ವೆಡೆಯಾಟಕ್ಕೊಡಲಾಗದಿಹ ।
ಘನರವ ಸಂದಿಲ್ಲದ ಸಂಚನೆ ಕ ।
ಣ್ಗೊನೆಯೊಳೊಸರ್ವ ಮಧುದ್ರವ ಯೋಗಿಗ ।
ಳನು ಭವ ವೈದ್ಯವೆನಿಸುವ ರಸಾಯನ ತಾನಾಗಿರ್ದುದರಿಂ ॥ ೫ ॥

ಶೈವರ ಬೀದಿಗೆ ಬಾರದು ವೈಷ್ಣವ ।
ಜೀವರ ಮನೆಯೊಳಗಾಡದು ಕೌಳರ ।
ಶಾವಾಗಲು ಮಾತಾಡಿಸದು ಗಣೇಶಚರರ ನಿಕ್ಕಿಸದು ।
ವೈವಸ್ವತರಂಗಣವನು ಮೆಟ್ಟದು ।
ಧವಕೆ ನಿಲುಕದು ಕಾಪಾಲಿಕರಿಗೆ ।
ದಾವ ಮಹಾ ಮಾಯಾ ಸ್ವತಂತ್ರ್ಯವನೋಳಕೊಂಡಿರುತಿಹುದೋ ॥ ೬ ॥

ಉಪನಿಷದಂಗನೆಯರ ಕೈಕಂಕಣ ।
ನಿಪುಣರು ತಾಳ್ದ ಸುಲೋಚನ ಗುರುವಿನ ।
ಲಿಪಿತಕ್ಕಿದು ಜೀವಾತು ಮಹಾಯೋಗಿಗಳ ಹೃದಂಬುಜಕೆ ।
ತಪನ ಮಹತ್ಸಂಸಾರ ಮತಕ್ಕಾಗ ।
ಲಾಪನ ಸಮಸ್ತಾರಿಷ್ಟ ಘನಾಘನ ।
ದುಪಟಲಕ್ಕಿದು ಝಂಜಾನಿಲ ಕವಿಶಿವಾಕ್ಷಿಪನ ಹೃದಯಂ ॥ ೭ ॥

# ಭಕ್ತಸ್ಥಲ

ಒಬ್ಬ ವಚನಕಾರನು ಭಕ್ತ ಸ್ಥಲವನ್ನು ಕುರಿತು ಹೇಳಿದ್ದು ಹೇಗೆಂದರೆ:—

ತಾಯ ಗರ್ಭದಲ್ಲಿ ಶಿಶು ತಾಯ ಕುರುಹನರಿಯದು. ಆ ತಾಯಿ ಶಿಸುವಿನ ಕುರುಹನೆಂದೂ ಅರಿಯಳು. ಮಾಯಾ ಮೋಹದಲ್ಲಿಪ್ಪ ಭಕ್ತರು ದೇವರನರಿಯರು. ಆ ದೇವರು ಆ ಭಕ್ತರನೆಂದೂ ಅರಿಯನು ಕಾಣಾ ರಾಮನಾಥಾ.

ನಡೆ ನೋಟ ನೊಲ್ಲೆಡೆಯಲ್ಲಿ ಒಂದು ಕಿಚ್ಚು, ಮುತದಿ ಪುರುಷರೆಡೆಯಲ್ಲಿ ಒಂದು ಕಿಚ್ಚು, ತಡೆದುಂಬ ಎಡೆಯಲ್ಲಿ ಒಂದು ಕಿಚ್ಚು, ಪಡೆದರ್ಥ ಕೆಟ್ಟೆಡೆಯಲ್ಲಿ ಒಂದು ಕಿಚ್ಚು, ಕೂಡಿದ ದ್ರವ್ಯದ ಮೋಹದೆಡೆಯಲ್ಲಿ ಒಂದು ಕಿಚ್ಚು, ಇಂತೀ ಐದು ಕಿಚ್ಚನಿಕ್ಕಿ ಬಾಯಲ್ಲಿ ಮಣ್ಣ ಹೊಯಿದು ಕೆಡಸಿದೆಯಯ್ಯಾ ಕಾಣಾ ರಾಮನಾಥಾ.

ಸಂಸಾರದೆಡೆಯಲ್ಲಿ ದುಃಖವಲ್ಲದೆ ಸುಖವಿಲ್ಲ ನೋಡಾ. ಅದೆಂತೆಂದಡೆ, ಭಾರ್ಯಾವಿಯೋಗಸ್ಸ್ವಜನಾಪವಾದಃ । ಋಣಸ್ಯ ಶೇಷಂ ಅಧಮಸ್ಯ ಸೇವಾ ॥ ದಾರಿದ್ರ್ಯಕಾಲೇ ಪ್ರಿಯದರ್ಶನಂ ಚ ವಿನಾಗ್ನಿನಾ ಪಂಚ ದಹಂತಿ ಕಾಯಂ ॥ ಇಂತೆಂದುದಾಗಿ ಈಯೈದು ಕಿಚ್ಚನಿಕ್ಕಿ ಮಣ್ಣ ಹೊಯಿದು ಕೆಡಿಸಿದೆಯಯ್ಯಾ ರಾಮನಾಥಾ.

ದರುಶನ ತಪ್ಪಿಕ ಪ್ರಥಮ ಪಾತಕ, ಸ್ಪರ್ಶನ ತಪ್ಪಿಕ ದ್ವಿತೀಯ ಪಾತಕ, ಗುರುತಪ್ಪಿಕ ತೃತೀಯ ಪಾತಕ, ಪರದಾರ ಚತುರ್ಥ ಪಾತಕ ಮಾಂಸಾಹಾರ ಪಂಚಮಹಾಪಾತಕ, ಈ ಐವರೊಡನೆ ನೀ ನುಡಿಯಲಿಲ್ಲೈ ರಾಮನಾಥಾ.

ಭಕ್ತಿಯ ಬಲ್ಲವರು ನಚ್ಚಿ ಮೆಚ್ಚಿ ಮನವನೊಚ್ಚತಗೊಡುವರು. ಭಕ್ತಿಯನರಿಯದ ಬಲು ಪಾಪಿ ಜೀವಿಗಳು ಕಚ್ಚುವರು ಬೊಗಳುವರು ಕಾಣಾ ರಾಮನಾಥಾ.

ಗುರುವ ತಿಳಿಯದಿರ್ಪ ಗುಣಹೀನನೇಂ ಬಲ್ಲ |
ವಿಶ್ವತೋಭಿರಾಮ ಕೇಳೊ ವೇಮಾ || ३೬೭ ||

ಸದ್ಗುರು ಕೃಪೆಯಿಂದನಿಶಂ |
ಸದ್ಗತಿ ದೀಪಿಪುದು ಬರಿದೆಯೆನಿತೋದಿದಡೇಂ ||
ಸದ್ಗತಿ ದೊರೆಗುಮೆ ಧರೆಯೊಳ್ |
ಸದ್ಗುರುವೇ ದೈವವೆಂದು ಸಾಕ್ಷ್ಯಂ ವೇಮಾ || ३೬೮ ||

## ಮಂತ್ರತಂತ್ರಗಳನ್ನವಲಂಬಿಸಬೇಡ.

ತಂತ್ರವಾದಿಗಳೈದೆ ಬಹು ಜನರಿರ್ಪರು |
ಮಂತ್ರವಾದಿಗಳತಿ ಸರಳ ಜಗದಿ ||
ಜಂತ್ರದವನ ಬೊಂಬೆಯಂದದೊಳಾಡುವ |
ವಿಶ್ವತೋಭಿರಾಮ ಕೇಳೊ ವೇಮಾ || ३೬೯ ||

ಅಹುದು ಅಲ್ಲವೆಂದು ಆತ್ಮದಿ ತಿಳಿಯದೆ |
ಮಂತ್ರತಂತ್ರಗಳಿಗೆ ಮುಗ್ಧರಾಗಿ ||
ಸಂಶಯದಿಂದಲಿ ಸತ್ತರು ಮನುಜರು |
ವಿಶ್ವತೋಭಿರಾಮ ಕೇಳೊ ವೇಮಾ || ३೭೦ ||

## ಉಪವಾಸವಮಾಡಬೇಡ.

ಉಪವಾಸಗಳ ಮಾಡಿ ನೀರೊಳು ಮುಳುಗುತೆ |
ಅನ್ನ ಮಾಡಿ ಬಡಿಸಿ ತಿನ್ನುಯೆಂಮ |
ಅದರ ಬಾಯಿ ಬಡಿದು ತಾವೆ ತಿನ್ನುವರಲ್ಲ |
ವಿಶ್ವತೋಭಿರಾಮ ಕೇಳೊ ವೇಮಾ || ३೭೧ ||

## ವ್ರತಗಳು ನಿಜವಲ್ಲ.

ವ್ರತಗಳೆಷ್ಟಾದರುಂ ನಿಜವದರೊಳಗಿಲ್ಲ ।
ಸತ್ಯವರಿತ ನರನೇ ನಿತ್ಯಯೋಗಿ ॥
ವ್ರತಗಳಲ್ಲಿ ಮುಕ್ತಿ ಬೆವಕೆದೊಡಿಲ್ಲವು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೭೨ ॥

---

## ಜೋತಿಷ್ಯವನ್ನು ನಂಬಬೇಡ

ವಿಪ್ರರೆಲ್ಲರು ಸೇರಿ ಶಾಚ್ತ್ರ ಕೂಗನು ಕೂಗಿ ।
ಸತಿಪತಿಗಳ ಮಾಡಿ ಸಮ್ಮತದೊಳು ॥
ನೆರೆ ಮುಹೂರ್ತವ ಮಾಡ ಮುಂಡೆಯೆಂತಾದಳ್ಳೈ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೭೩ ॥

ದಶಮಿ ಏಕಾದಶಿಯೆನುತ್ತಲಿ ವ್ರತವ ಮಾಡಿ ।
ಕೂಳ ತಿನ್ನದಿರಲ್ ದುರ್ಗುಣಂಗಳಿರವೆ ॥
ಹುತ್ತದೊಳಗಿರ್ದ ಸರ್ಪವು ಮೇಲೆ ಹೊಡೆಯೆ ।
ಸಾಯ್ವುದೇನಯ್ಯ ಸೌಜನ್ಯಶೀಲ ವೇಮಾ ॥ ೩೭೪ ॥

ತನ್ನ ಮನಸಿನೊಳಗೆ ಚರ್ಚಿಸಿ ಜ್ಯೋತಿಷ!
ವೆಷ್ಟು ಬರೆವೆನೆಂದು ಎಣಿಸಿ ನೋಡೆ ।
ತನ್ನ ದೃಷ್ಟವೆಲ್ಲ ದೈವಕ್ಕೆ ತಿಲಿವುದು ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೭೫ ॥

---

## ಶಕುನಗಳನ್ನು ನಂಬಬೇಡ

ಹಾಲಕ್ಕಿ ಶಕುನ ಫಲವೀವುದೆಂಬರು ।
ಹಾಲಕ್ಕಿಗೇನು ಫಲವು ತಿಳಿಗುಂ ॥
ತನ್ನ ಮೇಲು ಕೀಳು ತನ್ನೊಳಗಿರಲಾಗಿ ।
ವಿಶ್ವತೋಽಭಿರಾಮ ಕೇಳೊ ವೇಮಾ ॥ ೩೭೬ ॥

ಒಳ್ಳೆ ಶಕುನಗಳನು ನೋಡಿ ಲಗ್ನವ ಮಾಡ |
ಅವರು ಸ್ಥಿರವೊಳಿಹರೆ ತಿಳಿದು ನೋಡೆ ||
ಜನರ ಕರ್ಮಗಳಿಗೆ ಶಕುನಗಳ್ ನಿಲುವುವೇ |
ವಿಶ್ವತೋಭಿರಾಮ ಕೇಳೊ ವೇಮಾ || ೩೭೭ ||

ಹಕ್ಕಿ ನುಡಿಯ ಕೇಳಿ ತಮ್ಮ ಕಾರ್ಯಗಳೆಲ್ಲ |
ಸಫಲವಾಯಿತೆಂದು ಸಮ್ಮತಿಸುತ ||
ಆಗದ ಕೆಲಸಕ್ಕೆ ಕರ್ಮವೆಂದೆಂಬರು |
ವಿಶ್ವತೋಭಿರಾಮ ಕೇಳೊ ವೇಮಾ || ೩೭೮ ||

---

## ಮೂರ್ತಿಗಳನ್ನು ಪೂಜಿಸಬೇಡ

ಹುಚ್ಚು ನರಿಗಳಂತೆ ವಿಪ್ರರೆಲ್ಲರು ಸೇರಿ |
ವೇದವೆಂದು ನೋದಿ ವಿಗ್ರಹಗಳ ||
ಪ್ರಾಣ ಪ್ರತಿಷ್ಠೆಯ ಮಾಳ್ಪೆವೆಂದೆಂಬರು |
ಭ್ರಮೆಯಿದಲ್ಲವೇನು ಹೇಳೊ ವೇಮಾ || ೩೭೯ ||

ಪ್ರಾಣ ಪ್ರತಿಷ್ಠೆಯೆನೆ ಪ್ರಪಂಚವೇ ಹೊರತು |
ಬೇರೆಯುಂಟೆ ಭುವಿಯೊಳ್ಬಿದಕೆ ನೋಡೆ ||
ಪ್ರಾಣ ಪ್ರತಿಷ್ಠೆಯಿಂ ಪ್ರತಿಮೆಗಳ್ನುಡಿವುವೇ ? |
ವಿಶ್ವತೋಭಿರಾಮ ಕೇಳೊ ವೇಮಾ || ೩೮೦

ಪಾಷಾಣಗಳ ತಂದು ಭರದಿಂದ ಗುಡಿಮಾಡಿ |
ಬೇರೆ ಶಿಲೆಯ ನಟ್ಟು ದೇವರೆಂದು ||
ಪೂಜೆ ಮಾಡಲಾಗಿ ಪುಣ್ಯವು ಬರ್ಪವೇ |
ವಿಶ್ವತೋಭಿರಾಮ ಕೇಳೊ ವೇಮಾ || ೩೮೧ ||

ತೊಗಲು ಹೊಟ್ಟೆಯಲ್ಲಿ ದೊಡ್ಡವನಿರಲಾಗಿ |
ಕಲ್ಲು ಗುಡಿಗಳಲ್ಲಿ ರಾಶಿ ಹಾಕೆ |

ಕಲ್ಲುದೇವರಾಗೆ ರಾಶಿಗಳ್ ಸಂಗನೇ।
ವಿಶ್ವತೋಭಿರಾಮು ಕೇಳೊ ವೇಮಾ || ೩೮೩ ||

ಒಂದು ಹೊತ್ತು ಮಾಡೆ ಊರ್ಹಂದಿಯಾಗುವ ।
ತಪವ ಮಾಡಲವನು ದೀನನಾಗ್ವ ॥
ಸತತ ಶಿಲೆಗೆ ಮುಗಿಯೆ ನಿರ್ಜೀವಿಯಾಗುವ ।
ವಿಶ್ವತೋಭಿರಾಮು ಕೇಳೊ ವೇಮಾ || ೩೮೩ ||

ಅಡವಿ ಕಲ್ಗಳ ತಂದು ಕಾಲು ಕೈಗಳ ಮಾಡಿ ।
ಉರವ ಶಿರವನೈದೆ ಕೊರೆದದರೊಳು ॥
ಜಡ ಶಿಲೆಗೆ ನಮಿಸುವ ಜಡನೇನೆಂಬೆನು ।
ವಿಶ್ವತೋಭಿರಾಮು ಕೇಳೊ ವೇಮಾ || ೩೮೪ ||

ಕಲ್ಲು ಬೊಂಬೆ ಮಾಡಿ ರಾಜಸದೊಳಗಿಟ್ಟು ।
ಪೂಜೆ ಮಾಳ್ಪರಿಳೆಯೊಳ್ಮತಿ ವಿಹೀನರ್ ॥
ಪ್ರಾಣಿಯಲ್ಲಿ ಶಿವನು ವ್ಯಾಪಿಸಿಯಿರ್ಪನು ।
ವಿಶ್ವತೋಭಿರಾಮು ಕೇಳೊ ವೇಮಾ || ೩೮೫ ||

ಶಿಲೆಯ ಪ್ರತಿಮೆ ಮಾಡಿ ಅಂಧಕಾರದೊಳಿಟ್ಟು ।
ಮುಗಿವುದೇಕೆ ಮೂರ್ಖ ಜನರೇ ॥
ಜೀವದೊಳಲ್ಲದೆ ಶಿಲೆಗಳೊಳೇನಿಲ್ಲ ।
ವಿಶ್ವತೋಭಿರಾಮು ಕೇಳೊ ವೇಮಾ || ೩೮೬ ||

ಅಡಿಗಡಿಗೆ ಬಿದ್ದು ಮುಗಿವರ್ ।
ಗುಡಿಯೊಳಗಣ ಕಠಿಣ ಶಿಲೆಯ ಗುಣ ಹೆಚ್ಚುವುದೇಂ॥
ಗುಡಿ ದೇಹವಾತ್ಮದೇವರು ।
ಕೆಡು ಶಿಲೆಗಳ ಪೂಜೆ ಮಾಡದಿರು ವರ ವೇಮಾ || ೩೮೭ ||

ಮಣ್ಣಿನಿಂದಲಿ ಕೆಲವು ಮರದಿಂದಲೇ ಹಲವು ।
ಲೋಹದಿಂದ ಕೆಲವು ಪ್ರತಿಮೆಗಳನು ॥

ಮಾಡಿಟ್ಟ ಭಗವಂತನೆಂದು ಕೈಮುಗಿಯಲು ।
ಮುಕ್ತಿ ಯೊವನೆಂತು ಪೇಳು ವೇಮಾ ॥ ೩೮೮ ॥

ನೀರ ಮುಳುಗಲೇಕೆ ನಿಧಿಗಳ ನೀಡಲೇಕೆ ।
ಪ್ರಿ ಯ ದಿ ಗುಡಿಯ ಮುಂದೆ ಮುಗಿಯಲೇಕೆ ।
ಶಿವ ಮೂತ್ರವು ಹೊಟ್ಟೆ ತುಂಬಿಕೊಂಡಿರಲಾಗಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೮೯ ॥

---

## ದೇಶಾಂತರಿಯಾಗಬೇಡ

ತಿಂಡಿ ನಿದ್ದೆಯುಳಿದು ತಿಳಿವಿನಿತಿಲ್ಲದೆ ।
ಮುಕ್ತಿಗಾಗಿ ಸುತ್ತುತಿಹರು ಜನರು ।
ಹುಚ್ಚು ಹಿಡಿದ ನಾಯಿ ಬೆಗತಿ ರೀತಿಯೊಳ್ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೦ ॥

ಜಾತಿಗಳೊಳಗೆಂಥ ಜಾತಿ ಮುಖ್ಯವೆಂದು ।
ತಿಳಿಯದೈದೆ ತಿರುಗಲೇನು ಫಲವು ॥
ತಿಳಿದ ಮನುಜನ ಜಾತಿ ಯಾವುದಾದರೆಯೇನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೧ ॥

ಬೋಳು ತಲೆಯ ಮೇಲೆ ಕಾವಿಯ ಟೊಪಿಯು ।
ಮೈಗೆ ಬೂದಿ ಬಳಿದ ಕೊಂಡು ತಿರುಗೆ ।
ಇಂಥ ವೇಷಗಳೆಲ್ಲ ಹೊಟ್ಟೆ ಕೂಳಿಗೆ ಹೊರತು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೨ ॥

---

## ತೀರ್ಥಯಾತ್ರೆ ಮಾಡದಿರು

ತಾವು ನಿಂತ ಕಡೆಯೊಳ್ ದೈವವಿಲ್ಲೆನುತೆ ।
ಪಾಮರರಾ ತಿರುಪತಿಯ ತಿರುಗಿ ।
ಕಾಲುಜೋಡು ಕಳೆದು ಕೈಕಾಸ ನೀಗುತೆ।
ಕೆಟ್ಟು ಗೃಹವ ಸೇರುತಿಹರು ವೇಮಾ ॥ ೩೯೩ ॥

ಕಾಶಿ, ಮದುರೆ, ಕಾಂಚಿ, ಗಯ, ಪ್ರಯಾಗವು ಸೇತು ।
ಆಸೆಯಿಂದಲಾತ್ಮವಿವನು ನೋಡ ॥
ವಾಸನೆ ತಿಳಿಯನು ಬರಿಭ್ರಮೆ ದೂರತಾಗಿ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೪ ॥

ಅಡವಿ ತಿರುಗಿದೊಡಿಲ್ಲ ಆಕಸದೊಳಗಿಲ್ಲ ।
ಅವನಿ ತೀರ್ಥಯಾತ್ರೆ ಮಾಡಲಿಲ್ಲ ।
ಒಡಲು ಶುದ್ಧಿ ಮಾಡಿ ಒಡೆಯನ ಕಾಣ್ಬುದು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೫ ॥

ಕಾಶಿನೀರು ಹೊತ್ತು ಕಾಲುಮುಖಗಳು ಬಾತು ।
ಎಲ್ಲಿ ಸುಖವಿಲ್ಲದೆ ವಣಗಿ ವಣಗಿ ॥
ಸತ್ತು ಕೊನೆಗೆ ಮುಕ್ತಿ ಸಾಧಿಸಲಾರರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೬ ॥

ಕಾಶಿಗೆ ಪೋಪನ ಕರ್ಮವೇನೆನಬಹುದು ।
ತಿರುಗಲೇಕೆ ಕಾಲು ತೀಟೆ ಹೊರತು ॥
ಕೂಲಿಯ ಸ್ತ್ರೀಯರು ನೀರನ್ನು ಹೊರರೇನು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೭ ॥

ಕಾಶಿಯಾತ್ರೆಗೆ ಹೋಗಿ ಗಂಗೆಸ್ನಾನವ ಮಾಡಿ ।
ಕಷ್ಟ ಪಟ್ಟಿ ಮುಕ್ತಿ ಕಾಣರವರು ॥

ಎಸೆ ತಿರುಗುತಿಹುದು ಕೋಣನ ಸಂಗತ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೮ ॥

ತನ್ನೊಳಿರ್ಪಾ ದೈವವಂ ಕಾಣಲಾರದೆ ।
ತೀರ್ಥಯಾತ್ರೆಯಲ್ಲಿ ತಿರುಗುತಿಹರು ॥
ಗಂಧವ ತುಂಡುಗಳ್ ಗಾರ್ದಭ ಹೊತ್ತಂತೆ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೩೯೯ ॥

ತೀವ್ರ ಕೋಪದಿಂದ ತೀರ್ಥಯಾತ್ರೆಗೆ ಪೋಗಿ ।
ಕೊಳಕು ದೇಹವನ್ನು ತೊಳೆದು ತೊಳೆದು ॥
ಹಲವು ನಾಯ್ಗಳೆಲ್ಲ ಫಲವೇನು ಪಡೆದರು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೦೦ ॥

ಸಕಲ ತೀರ್ಥಯಾತ್ರೆ ಸಕಲ ಯಜ್ಞಂಗಳುಂ ।
ತಲೆಯ ಬೋಳಿಸದಿರಲು ಫಲಮದಿಲ್ಲ ॥
ಮಂತ್ರ ಜಲಕ್ಕಿಂತ ಕ್ಷೌರದ ಜಲ ಹೆಚ್ಚು ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೦೧ ॥

ತನುವಿನೊಳಡಗಿರ್ಪ ತತ್ವವ ತಿಳಿಯದೆ ।
ಬೇರೆ ಯಾತ್ರೆ ಮಾಳ್ಪ ಹುಚ್ಚು ಮನುಜ ॥
ಸಬರ ಹೊತ್ತು ಹೊತ್ತು ಕತ್ತೆಯು ತಿರುಗದೇ ।
ವಿಶ್ವತೋಭಿರಾಮ ಕೇಳೊ ವೇಮಾ ॥ ೪೦೨ ॥

ಪುರುಷರೆಲ್ಲರು ಪುಣ್ಯ ಭೂಮಿ ಯೆಂದೆಂಬರು ।
ಬುದ್ಧಿಯಿಲ್ಲವಿದುವೆ ಭೂಮಿಯಲ್ಲೆ ॥
ಪುಣ್ಯ ತೀರ್ಥಗಳಿಗೆ ಹೋಗಿದ್ದೆವೆಂಬರು ।
ಏನು ಹೇಳಲಯ್ಯ ಇದನು ವೇಮಾ ॥ ೪೦೩ ॥

ಊರೊಳಗಿಹ ಬಾವಿಯುದಕವ ನಿಂದಿಸಿ ।
ಕಾಶಿತೀರ್ಥವೆಂದು ಭ್ರಮಿಸುತಿಹರು ॥

ಕಾಶಿತೀರ್ಥದಿಂದ ಫಲವೇನು ಕಾಶಿಗೆ |
ವಿಶ್ವತೋಭಿರಾಮ ಕೇಳೊ ವೇಮಾ ॥ ೪೦೪ ॥

## ಸದ್ಗುಣಿಯೇ ಉಚ್ಚಕುಲದವನು.

ರಾಮನಾಮ ಪಠನದಿಂದಲಾ ವಾಲ್ಮೀಕಿ |
ಕೊನೆಗೆ ಬೇಡನಿದ್ದು ದ್ವಿಜನೆನಿಸಿದ ||
ಕುಲವು ಘನವಲ್ಲ ಸದ್ಗುಣವೇ ಘನವದಯ್ಯ |
ವಿಶ್ವತೋಭಿರಾಮ ಕೇಳೊ ವೇಮಾ ॥ ೬೦೫ ॥

ಗುಣಗಣಗಳಿದ್ದವನ ಕುಲವೆಣಿಸ ಬೇಕೆ |
ಗುಣಗಳಿದ್ದರೆ ಕೋಟಿ ಪಾಳ್ಪುದದುವೆ ॥
ಗುಣವಿಲ್ಲದಿರುವವನು ಕುಲಶ್ರೇಷ್ಠ ವಾದರೂ |
ಎಣಿಸಲಾಗದು ನೀಚನವನು ವೇಮಾ ॥ ೪೦೭ ॥

## ದೇವಭಕ್ತರೆಲ್ಲರೂ ದೇವಾಂಶರು

ವಿಷ್ಣು ಗರ್ಭದಲ್ಲಿ ನೆಲಸಿಗೆ ಲೋಕಗಳ್
ಅಲ್ಲಿ ಸಕಲ ಜೀವರಾಶಿಯಿಹವು॥
ಮನುಜವರ್ಗವೆಲ್ಲ ವೈಷ್ಣವರಲ್ಲವೇ |
ವಿಶ್ವತೋಭಿರಾಮ ಕೇಳೊ ವೇಮಾ ॥ ೪೦೭ ॥

## ಜಾತಿಭೇದವಿಲ್ಲ.

ಮರ್ಮವರಿಯದವರು ಮತಗಳ ಕಲ್ಪಿಸಿ |
ಉರ್ವಿಯೊಳಗೆ ಜನರು ದುಃಖಿಸುವರು |
ಒಂದಕೊಂದು ನಾಯಿ ಬೊಗಳಿದ ತೆರನೊಳು |
ವಿಶ್ವತೋಭಿರಾಮ ಕೇಳೊ ವೇಮಾ ॥ ೪೦೮ ॥

# ಶಿವಾನುಭವದ ಸತ್ಯಮಾರ್ಗ

ಶಿವಶರಣರ ಶಿವಾನುಭವದ ತತ್ವಗಳನ್ನು ಅರುಹುವ ಗ್ರಂಥವು ಇದಾಗಿದೆ. ಶ್ರೀ ಶಿವಯೋಗಿಗಳು ಬಂಥನಾಳ, ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಸ್ವಾಮಿಗಳು ವಿಜಾಪುರ, ಶ್ರೀ ಮಹಾದೇವ ಸ್ವಾಮಿಗಳು ಸರ್ವಭೂಷಣ ಮಠ ಬೆಂಗಳೂರ, ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ, ಶ್ರೀಯುತ [illegible] ಬ್ಯಾಳಿ, ಬಿ. ಎ ಬಿ. ಟಿ ಈ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಮಾಡಿದ ಮಹತ್ವದ ಲೇಖಗಳು ಇದರಲ್ಲಿವೆ. ಶಿವಶರಣರ ತತ್ವವಿಚಾರಗಳನ್ನು ತಿಳಿಯಲು ಬಹು ಉಪಯುಕ್ತವಾದ ಗ್ರಂಥವು ಉತ್ತಮ ಕಾಗದ, ಮತ್ತು ಉತ್ತಮ ಬಾಯಿಂಡವುಳ್ಳದ್ದಿದೆ.

ದೊರೆಯುವ ಸ್ಥಳಃ— ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ

ಬೆಲೆಃ— ೧ ರೂ. ೧೦ ಆಣೆ (೧೩೮ ಪುಟಗಳು)

---

# ಶ್ರೀ ಬಸವೇಶ್ವರನ ತತ್ವಗಳು

ಶ್ರೀ ಮಾ. ಸಿದರಾಮಪ್ಪ ಪಾವಟೆ, ಕೈ. ವಾ. ವೀರಪ್ಪ ಬಿಳೀಅಂಗಡಿ, ರಾ॥ ಬ॥ ಪಿ. ಜಿ. ಹಳಕಟ್ಟಿ, ಶ್ರೀಯುತ ವೀರಪ್ಪ ಯಗಟಿ ಬಿ. ಎ. ಎಲ್. ಎಲ್. ಬಿ. ಮೊದಲಾದ ಮಹನೀಯರು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ ಮಹತ್ವದ ಲೇಖಗಳು ಇದರಲ್ಲಿವೆ. ಇದರಲ್ಲಿ ಬಸವೇಶ್ವರನ ನೈತಿಕ ಮತ್ತು ಸಾಮಾಜಿಕ ವಿಚಾರಗಳು, ಅವನು ಮಾಡಿದ ವಾಙ್ಮಯ ಕ್ರಾಂತಿ. ಇವೇ ಮೊದಲಾದ ಮಹತ್ವದ ವಿಷಯಗಳ ಮೇಲೆ ಲೇಖಗಳು ಬಂದಿರುತ್ತವೆ. ಉತ್ತಮ ಕಾಗದ, ಉತ್ತಮ ಬಾಯಿಂಡವುಳ್ಳದ್ದಿರುತ್ತದೆ

ದೊರೆಯುವ ಸ್ಥಳಃ— ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ

ಬೆಲೆಃ— ೧ ರೂ. ೮ ಆಣೆ (೧೦೫ ಪುಟಗಳು)

# ವಿಷಯಾನುಕ್ರಮಣಿಕೆ

ಪುಟ



---


## ಶಿವಾನುಭವ ಪತ್ರಿಕೆ, ವಿಜಾಪುರ.

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ ೩-೧

# ಶಿವಾನುಭವ

ವರ್ಷ ೨೫ | ಸಪ್ಟಂಬರ ೧೯೫೧ | ಸಂಚಿಕೆ ೯

## “ಓಂ”ಕಾರದಲ್ಲಿಯ ಅಕಾರ.

( ಲೇಖಕರು – ಶ್ರೀ. ಬಾಲ ಬೃಹಸ್ಪತಿ ಗಂಗಾಧರ ಶಿವಾಚಾರ್ಯ
ಮಹಾಸ್ವಾಮಿ ಜಡೆಮಠ ಮೊರಬ )

ಹಿಂದೂ ಜನಾಂಗಕ್ಕೆ ಓಂಕಾರವು ಪರಮಪೂಜ್ಯ ಅಕ್ಷರವ್ಯವು ಶೃನ್ನಾದವೆಂದು, ಪರಶಿವವಾಚ್ಯವೆಂದು, ಸರ್ವ ಪ್ರಾಣಿಗಳ ಜೀವಸ್ವರೂ-ಪವೆಂದು, ಜಗತ್ತಿನ ಮೂಲಾಕ್ಷರವೆಂದು, ಸಕಲ ವೇದಾಗಮಗಳಿಂದು ಹೇಳಿದ್ದಾಗಿದೆ. ಸೃಷ್ಟಿಯೊಳಗಣ ಪ್ರತಿಯೊಂದು ಅಣುವು ತನ್ನ ಆದಿ ನಿಯಮದಂತೆ ಉತ್ಪಾದ್ಯತ್ವ, ವೃದ್ಧಿತ್ವ, ವಿಲಯತ್ವಗಳಿಗೆ ಕ
ಒಳಗಾಗುವ ಹಾಗೆ ಓಂಕಾರದೊಳಗಿನ ಅ-ಉ-ಮ-ಗಳು ಉ:
ವೃದ್ಧಿತ್ವ, ವಿಲಯತ್ವಗಳಿಗೆ ಮೂಲಕಾರಣವಾಗಿವೆ. ಯಾವದೇ ಪದ ಕೂಸು ಏನೊಂದು ಭಾಸವಿಲ್ಲದೆ ಹುಟ್ಟಿದಕೂಡಲೆ “ಅ”ಎಂಬ ಸ್ವರಗೆ ಅದರ ಕಂಠದಿಂದ ಉತ್ಪಾದನವಾಗುವದು. ಅದೇ ಸ್ವರವು ಮುಂದೆ ತುಟಿಗಳ ಮೂಲಕ “ಉ”ಕಾರವಾಗಿ ಬೆಳೆದು ಮುಂದೆ ಆ ತುಟಿಗಳಿಂದ ಆ ಸ್ವರವನ್ನು ಮುಚ್ಚುವಾಗ “ಮ್”ಎಂಬ ಅರ್ಧ ಅನುನಾಸಿಕಾಕ್ಷರವು ಜನಿಸಿ ವಿಲಯವಾಗುತ್ತಿದೆ. ಈರೀತಿಯಾಗಿ ಅ-ಉ-ಮ್ ಇವುಗಳಿಂದ

ಕೂಡಿದ ಓಂಕಾರದ ಉಚ್ಚಾರವು ಮನುಷ್ಯಪ್ರಾಣಿಗೆ ಆತನ ಹುಟ್ಟು, ಬೆಳಿಗೆ-ಸಾವು ಈ ಮೂರು ಮಾತಿನ ಇರುವಿಕೆಯ ಕುರುಹನ್ನು ಸೂಚಿಸುತ್ತಿದೆ. ಆದ್ದರಿಂದ ಅಕಾರವು ಸೃಷ್ಟಿಕರ್ತನಾದ ಬ್ರಹ್ಮನೆಂತಲೂ, ಉಕಾರವು ಸ್ಥಿತಿಕರ್ತನಾದ ವಿಷ್ಣುವೆಂತಲೂ ಮಕಾರವು ಲಯಾಧಿಕಾರಿಯಾದ ರುದ್ರನೆಂತಲೂ ಉಕ್ತವಾಗಿದೆ. ಈ ಮೂರು ಅಕ್ಷರಗಳಿಗೆ ನೆಲೆಯಾದ ಓಂಕಾರವೇ ಮೂರು ಮೂರ್ತಿಗಳಿಗೆ ನೆಲೆಯಾದ ಪರಮಾತ್ಮನೆಂದು ತಿಳಿಯಲಾಗುತ್ತಿದೆ. ಈ ಮಾತನ್ನು ಸಿದ್ಧಾಂತಶಿಖಾಮಣಿಯಲ್ಲಿ ಶ್ರೀ ರೇಣುಕಭಗವತ್ಪಾದರವರು ಹೃದಯಂಗಮವಾಗಿ ಚಿತ್ರಿಸಿರುವರು. ಸದ್ಯಃ ಅಕಾರವನ್ನು ಕುರಿತು, ಪ್ರಾಮುಖ್ಯವಾಗಿ ಪರಾಮರ್ಶಿಸುವದಾಗುವದು.

ಒಂದು ಶಬ್ದವು ಒಂದಿಲ್ಲೊಂದು ಅರ್ಥವನ್ನು ಕೊಡುವಂತೆ ಅಕಾರಾಕ್ಷರವು ಸಹ ಕೇವಲ ಆತ್ಮಾರ್ಥ ಬೋಧಕವಾಗಿರುವದ. ಪ್ರಾಣಿಗಳು ಅ, ಹೆಸರಿನಿಂದ ಆತ್ಮನನ್ನು ಸಂಬೋಧಿಸುತ್ತಿರುವವು. "ಅಕ್ಷರಾಣಾಮಕಾರೋಽಸ್ಮಿ,, "ಅಕ್ಷರಗಳಲ್ಲಿ ನಾನು ಅಕಾರ" ಎಂದು ಶ್ರೀಕೃಷ್ಣನು ಗೀತೆಯಲ್ಲಿ ಸಾರಿರುವನು. "ಅಂ-ಪರಮಾತ್ಮನಂ ಗಚ್ಛತೀತಿ ಗಂ,, ಎಂದು ಸುಪ್ರಸಿದ್ಧ ಗ್ರಂಥಗಳೊಳಗೆ ಅಂಗ ಶಬ್ದದ ವ್ಯಾಖ್ಯಾನ ಮಾಡಿರುವರು. ಇಂತು ಅಕಾರಾರ್ಥವು ಪರಮಾತ್ಮನಿಗೆ ಇರುವ ಸುಸ್ಪಷ್ಟವಾಗಿದೆ. ಈ ಅಕಾರವೇ ಪರಬ್ರಹ್ಮದ ನಾಮವೆಂದು, ಗಮಗಳ ಸಾರವನ್ನು ಕನ್ನಡದಲ್ಲಿ ಕನ್ನಡಿಸಿದ ನಿಜಗುಣಶಿವಯೋಗಿ- ಅಲ್ಲಲ್ಲಿ ಉಲ್ಲೇಖಿಸಿರುವರು.

ಅ/ ನಿಸರ್ಗತಃ ಜೀವಾತ್ಮನಿಂದ ಹುಟ್ಟಿ ಬರುವ ಮೂಲಕ ಅಕಾರವು ಕ್ಕ ಮಯವಾದುದೆಂದು ಸರಿಯಾಗಿ ತೋರುತ್ತಿದೆ. ಕಾಲವನ್ನೂ ವಿ.ರಿದ ಸ್ವಯಂ ಪ್ರೇರಿತ ಅಕ್ಷರವೇ ಇದು.

ಪಶು ಮೊದಲಾಗಿ ಅಂಬಾ! ಎಂಬ ಅಕಾರವನ್ನೇ ಉಚ್ಚರಿಸುತ್ತಿವೆ. ಇದರ ಉಚ್ಚಾರಕ್ಕೆ ಬುದ್ಧಿ-ಬಲ ಇವೇನೂ ಬೇಕಿಲ್ಲ. ನಾಲಗೆ ಇಲ್ಲದ ಮೂಕ ಮಂಕರು ಕೂಡ ಉಚ್ಚರಿಸಬಲ್ಲರು. ನಿದ್ದೆಯಲ್ಲಿರುವವನನ್ನು ಅವನ

ಪೂರ್ವದ ಸಂಸ್ಮರಣದ ಭಾಸವು ಎಚ್ಚರಗೊಳಿಸುವ ಪ್ರಕಾರ ಅಕಾರವು ಪ್ರತಿ ಪ್ರಾಣಿಯನ್ನು ಎಚ್ಚರಪಡಿಸುವದಾಗಿದೆ. ಪೂರ್ವದಲ್ಲಿ ಸ್ಮರಿಸಲ್ಪಟ್ಟ ಅಕ್ಷರವಾದ್ದರಿಂದ ಜನ್ಮತಃ ತಾನಾಗಿಯೆ ಉತ್ಪನ್ನವಾಗುವದು.

ಜಾದೂಗಾರನ ವಿಚಿತ್ರ ಚಮತ್ಕೃತಿಯನ್ನು ಕಣ್ಣಾರೆ ಕಂಡಕ್ಷಣ ಆಶ್ಚರಿಯೆನಿಸಿ, ತನ್ನ ಬದಿಯ ಪ್ರೀತಿಯ ಮನುಷ್ಯನನ್ನು ಆತುರದಿಂದ ಕರೆದು ತೋರಿಸುವ ಪ್ರಕಾರ ಆತ್ಮನು ಪರಮಾತ್ಮನ ಅಗಾಧವಾದ ಅದ್ಭುತ ಲೀಲಾ ಜಾಲವನ್ನು ಹುಟ್ಟಿದೊಡನೆ ಕಂಡು ಹಾಹಾರಿ ತನ್ನ ಇರುವಿನ ಕುಹವಾದ 'ಅ, ಅಭಿಧಾನದಿಂದ ಅವನನ್ನು ಜನ್ಮ ಜನ್ಮಗಳಲ್ಲಿ ಆಶ್ಚರಿಯಿಂದ ಕರೆಯುತ್ತ ಬಂದಿದ್ದಾನೆ. ಅಂತೆಯೆ ಆ ನಾಮಕರಣ ವನ್ನು ಪರಶಿವನಿಗೆ ಪ್ರತಿಯೊಬ್ಬರು ಗೊತ್ತುಪಡಿಸಿರುವರು. ಒಟ್ಟಿಗೆ ಆತ್ಮಶಕ್ತಿಯ ವಿಶಿಷ್ಟ ರೂಪವೇ ಅ. ಆಗಮಗಳಲ್ಲಿ ಇದು ಆದಿಶಕ್ತಿ ಯಾಗಿರುವ ಪಾರ್ವತಿಯ ಪರವಾಗಿ ಗುರುತುಗೊಳಿಸಲ್ಪಟ್ಟಿರುವದು ತುಂಬ ಗಮನಾರ್ಹವು. ಇನ್ನು ಹಲವರು ಅ, ಇದಕ್ಕೆ ಇಲ್ಲವೆಂಬ ಅರ್ಥವನ್ನು ಕಲ್ಪಿಸಿ, ಶೂನ್ಯಾರ್ಥದೊಳಗೆ ಎಳೆದಿರುವರು. ಹೀಗೆ ಇದು ಭಿನ್ನಾರ್ಥ ದಿಂದ ನಿಷೇದಾರ್ಥವನ್ನು ನೀಡುವ ಮಾತ್ರದಿಂದ ಅ, ಪರ ವಸ್ತುವಿಗೆ ಶೂನ್ಯನಾಮವನ್ನು ಇರಿಸಿದ್ದಾರೆ. ಅಂದರೆ, ಪರಶಿವನ ನಿರ್ಗುಣ ನಾಮ ವಾಗಿದೆ. ಈ ನಿರ್ಗುಣ ಮೂರ್ತಿಗೆ ಮುಸಲ್ಮಾನರು ಅಲ್ಲಾ ಎಂದರು. ಪೈಗಂಬರರಿಗೆ ಆದಂ ಎಂದರು. ಜೈನರು ಅರ್ಹಂತನೇ ಆದಿ ದೇವರೆಂದು ಬಗೆದರು. ಇಂತು ಅವರ್ಣವು ಅಕ್ಷರ ಮೂಲವಾಗಿದೆ. ಜೀವನದ ಆದಿ ಮಂತ್ರವಾಗಿದೆ.

ಕನ್ನಡ ಜಾಣರು ಅಕ್ಕೆ ಅನ್ಯವಾದದ್ದನ್ನೆಲ್ಲ ಆ, ಎಂಬ ದರ್ಶಕ ಪದ ದಲ್ಲಿ ಎಳೆದು ತೋರಿಸಿರುವರು. ಅ, ಎನ್ನಲು ತಾನು. ಆ, ಎನೆ ತನಗೆ ಹೊರತಾದುದು. ಹೀಗೆ ಅ, ಆ ಕಾರಗಳು ಆತ್ಮ – ಅನಾತ್ಮ ಭಾವವನ್ನು ಸಾಕಾರವಾಗಿ ತೋರ್ಪಡಿಸುವವು. ಆದಕಾರಣ ಜನಾಂಗವು ಅ, ಆ ಗಳನ್ನು ಶಿಕ್ಷಣಕಲೆಯ ಮೊದಲಕ್ಕರಗಳೆಂದೂ ಮೂಲಾಕ್ಷರಗಳೆಂದೂ ಮೊದಲು ಇವನ್ನು ಕಲಿಸುತ್ತ ಬಂದಿದೆ. ಮಹಾ ವ್ಯಾಕರಣಕಾರನಾದ ಪಾಣಿನಿಯು ಮಟ್ಟಮೊದಲು ಅ. ಇ. ಉಣ್. ಋ. ಌ ಕ್ ಎಂದಿದ್ದಾನೆ.

ಭಾರತದ ಶಿಕ್ಷಣದ ಕಲೆಗಳು ಇಂಥ ಅಕಾರದಿಂದ ಆರಂಭವಾಗುತ್ತಿವೆ. ಅಲ್ಲದೆ ಎಷ್ಟೋ ಪಶ್ಚಿಮದ ರಾಷ್ಟ್ರಗಳು ಶಿಕ್ಷಣದ ಆರಂಭವು ಏ ಎಂಬುದು ಅದಿಂದ ಮೊದಲಾಗುವದು. ಇನ್ನು ನಮ್ಮ ದೇಶದ ಲಿಪಿಯು ವಿರುದ್ಧ ದೆಶೆಗೆ ಬರೆಯಲ್ಪಡುವ ಮುಹಮ್ಮದೀಯರ ಶಿಕ್ಷಣಕಲೆ ಸಹ, ಅಲೀಫ್. ಎಂದರೆ ಅಕಾರದಿಂದ ಮೊದಲಾಗಿಸುತ್ತಿದೆ ಯುರೋಪ ಖಂಡದ ಲ್ಯಾಟಿನ್ ಭಾಷೆಯ ಮೂಲ ಶಿಕ್ಷಣಕಲೆಯ ಆರಂಭವು "ಅಲ್ಫಾ ಬೀಟಾ, ಎಂಬುದಾಗಿ ಆ ದುಚ್ಚಾರವಮಾತ್ರದಿಂದ ಕಲಿಸಲಾಗುವದು.

ಆದರೆ ಇನ್ನು ಆ ಇದಕ್ಕೆ ಹೆಚ್ಚು ಬೆಲೆಯನ್ನು ಸಲ್ಲಿಸಿದವರು ಕನ್ನಡಿಗರು. ಇವರನುಳಿದು ಬೇರೆ ಯಾರು ಇದರ ವಿಶಿಷ್ಟತೆಯನ್ನು ಅಷ್ಟೊಂದು ಮನದಟ್ಟು ಮಾಡಿಕೊಂಡಿಲ್ಲ. ಕೆಲವರು ತಮ್ಮ ಮೂಲ ದೇವರಿಗೆ ಮತ್ತು ಮೂಲ ಪುರುಷರಿಗೆ ಅ ಆದಿಯಾದ ಶಬ್ದವನ್ನು ಅಂದರೆ ಆತ್ಮ - ಅರ್ಹಂತ - ಆದಿನಾಥ - ಅಲ್ಲಾ - ಆದಂ - ಆಚಾರ್ಯ ಎಂದು ಹೀಗೆ ನಿಯೋಜಿಸಿರುವದು ಸುಪ್ರಸಿದ್ಧವೇ ಇದೆ. ಕನ್ನಡಿಗರು ಮಾತ್ರ ತಮ್ಮ ಮೂಲ ದೇವರಿಗಷ್ಟೇ ಅಲ್ಲ; ತಮಗೆ ವಂದ್ಯರಾದ ಗುರು-ಹಿರಿಯರಿಗೆಲ್ಲ ಅವರ್ಣಾದಿಯಾದ ಶಬ್ದಗಳನ್ನೆ ನಿರ್ದೇಶ ಮಾಡಿರುವದು. ದೇವರಿಗೆ ಅಪ್ಪ ಗುರುಗಳಿಗೆ ಅಯ್ಯ. ತಂದೆಗೆ ಅಪ್ಪ. ತಾಯಿಗೆ ಅವ್ವ. ತಂದೆಯ ತಂದೆಗೆ ಅಜ್ಜ. ಅಜ್ಜನ ಹೆಂಡತಿಗೆ ಅಜ್ಜಿ. ಇಲ್ಲವೆ ಅಮ್ಮ. ತನಗಿಂತ ಹಿರಿಯ ರಾದವರಿಗೆ ಅಕ್ಕ, ಅಣ್ಣ, ತಂದೆಯ ತಂಗಿಗೆ ಅಥವಾ ಅಕ್ಕನಿಗೆ ಅತ್ತೆ ಈ ರೀತಿಯಾಗಿ ಉದಾಹರಿಸಬಹುದಾಗಿದೆ.

ಇತರ ವಾಙ್ಮಯದೊಳಗೆ ಇಷ್ಟು ರಹಸ್ಯದ ಸರಳ ಶಬ್ದಗಳು ಆವರವರ ಆಪ್ತವಾಚಕ ಶಬ್ದಗಳಲ್ಲಿ ಕಂಡುಬರುವದಿಲ್ಲ. ಹಿಂದೀಭಾಷೆ ಯಲ್ಲಿ ಮಾಯಿ, ಬಾಪ, ಭಾಯಿ. ಮುಸ್ಲೀಂ ಭಾಷೆಯಲ್ಲಿ ಮಾ, ಬಾಪ, ಭಯಿ. ಮರಾಠಿಯಲ್ಲಿ ಆಯಿ, ಬಾಪ, ಭಾವು. ಇಂಗ್ಲೀಷಿನಲ್ಲಿ ಮದರ್, ಫಾದರ್, ಬ್ರದರ್. ಇಂತು ಬೇರೆ ಬೇರೆಯ ಭಾಷೆಗಳಲ್ಲಿ ಬೇರೆ ಬೇರೆಯ ಅಕ್ಷರ ಗಣನೆಗಳು ಕಾಣುವವು. ಆರ್ಯ ಸಂಸ್ಕೃತಿಯ ಮುಖ್ಯ ಭಾಷೆ ಯಾದ ಸಂಸ್ಕೃತದಲ್ಲಿ ನಿರಿಕಿಸಿದರೆ ಮಾತೃ, ಪಿತೃ, ಭ್ರಾತೃ ಇಂತು ಅಂ ತ್ಯಾಕ್ಷರಗಳು ಒಂದಾಗಿದ್ದರು ಆದ್ಯಕ್ಷರಗಳು ತೆರ ತೆರನಾಗಿವೆ. ಮಾತ್ರ

ಭ್ರಾತೃ ಶಬ್ದಗಳು ಅರ್ಥವತ್ತಾಗಿದ್ದರೂ ಏಕಾಕ್ಷರ ಸಂಬಂಧವಿಲ್ಲದಾಗಿರುವವು. ಕನ್ನಡ ವಾಙ್ಮಯಕಾರರು ಸುಯುಕ್ತಿಯಿಂದ ಈ ಅಕ್ಷರಗಳನ್ನು ಬಳಸಿದಂತೆ ಇದೆ. ಕನ್ನಡಿಗರು ತಮ್ಮ ಮೂಲ ಉತ್ಪತ್ತಿಗೆ ಕಾರಣರಾದ ತಾಯಿ - ತಂದೆಗಳಿಗೆ, ಅಜ್ಜ - ಮುತ್ತಂದಿರರಿಗೆ, ಅಲ್ಲದೆ ತಮಗಿಂತ ಮುಂಚೆ ಹುಟ್ಟಿದ ಸಹೋದರರಿಗೆ ಏಕಾಕ್ಷರಾದಿ ಶಬ್ದಸಂಬಂಧವನ್ನು ವಿನಿಯೋಗಿಸಿದ್ದಾರೆ. ಆದರೆ ಹಿರಿಯರು ಕಿರಿಯರಿಗೆ ಸಂಬೋಧಿಸುವ ಶಬ್ದಾಕ್ಷರಗಳು ಮಾತ್ರ ಭಿನ್ನವಾಗಿವೆ. ಏಕೆಂದರೆ, ದೊಡ್ಡವರು ಚಿಕ್ಕವರಿಗಿಂತ ಹೆಚ್ಚು ಹೆಚ್ಚು ಲೌಕಿಕ ಜ್ಞಾನವನ್ನು ಹೊಂದುತ್ತ ಹೋದುದರಿಂದ ಅವರು ಕರೆದ ಶಬ್ದಗಳು ಹೆಚ್ಚು ವ್ಯವಹಾರದ ತಿಳಿವನ್ನೊಳಗೊಂಡಿವೆ. ಅವರು ತವ್ಮನ್ನು ಹಿಂಬಾಲಿಸಿ ಒಂದವರಿಗೆ ತಮ್ಮನೆಂದು, ತಂಗಿ ಎಂದು ಹೀಗೆ ವ್ಯವಹಾರಜ್ಞಾನವು ತುಂಬಿದ ಶಬ್ದಗಳನ್ನು ಬಳಸಿರುವರು. ತಮಗಿಂತ ಮುಂದುವರಿದ ಆಪ್ತಜನತೆಯು ಪೂಜ್ಯವೆಂದು ಅರಿತು, ಆತ್ಮವಾಚಕ ಶಬ್ದವನ್ನು ಪ್ರಯೋಗಿಸುವರು. ಹಿಂಬಾಲಿಸಿ ಉದಿಸಿದವರಿಗೆ ಮಾತ್ರ ಸಂಬಂಧ ವಾಚಕ ಶಬ್ದಗಳನ್ನು ಬಳಸಿರುವರು. ಸಣ್ಣವರು ದೊಡ್ಡವರಿಗೆ ದೇವತಾ ವಾಚಕ ಶಬ್ದಗಳನ್ನೂ ದೊಡ್ಡವರು ಸಣ್ಣವರಿಗೆ ತಮ್ಮ ಸಂಬಂಧ ವಾಚಕ ಶಬ್ದಗಳನ್ನೂ ಬಳಸುತ್ತ ಬಂದಿದ್ದಾರೆ.

ಮೊದಲಿನ ಪೂಜ್ಯವಾಚಕ ಶಬ್ದಗಳೆಲ್ಲವು ಗುರು ಹಿರಿಯರಿಂದ ಚಿಕ್ಕವರಿಗೆ ಕಲಿಸಲ್ಪಡತಕ್ಕವಾಗಿವೆ. ಇನ್ನು ಹಿರಿಯರು ಕಿರಿಯರಿಗೆ ತಾವಾಗಿ ತಮ್ಮ ಸಾಮಾನ್ಯಜ್ಞಾನದ ಸಂಬಂಧ ವಾಚಕ ಶಬ್ದಗಳನ್ನು ಉಪಯೋಗಿಸುತ್ತ ಬಂದಿದ್ದಾರೆ. ಇದರ ಮೇಲಿಂದ ಕನ್ನಡಿಗರು ಮಾಡಿದ ಅಕಾರದ ವಿಚಾರವು ನಿಚ್ಚಳವಾಗಿ ತಿಳಿಯುವದು. ಉಪಯೋಗಿಸಿದ ಚಾತುರ್ಯವು ಉದ್ಬೋಧಕವಾದುದು, ಆದರಣೀಯವಾದುದು. ಅ ಇದಕ್ಕೆ ಸಲ್ಲಿಸಿರುವ ಅವರ ಗೌರವವು ಮನನೀಯವಾಗಿದೆ.

# ಶ್ರಾವಣ ಮಾಸದ ಮಹಿಮೆ.

( ಲೇಖಕ :— ಶ್ರೀ. ಸದಾಶಿವ. ವಿ. ಬಡಿಗಣ್ಣವರ ಗದಗ. )

ಸೃಷ್ಟಿಯಲ್ಲಿ ಮಳೆಗಾಲ, ಚಳಿಗಾಲ, ಬೇಸಿಗೆಕಾಲಗಳು ತಮ್ಮ ನಾಲ್ಕು ನಾಲ್ಕು ತಿಂಗಳ ಅವಧಿಯಲ್ಲಿ ಜನರನ್ನು ಹಣಿಸಿ, ಹಿಗ್ಗಿಸಿ, ಕಾಣೆ ದಾಡಿಸಿ ಸೃಷ್ಟಿ ಸೊಬಗನ್ನು ಮಾಡಿ ತಮ್ಮ ಆಳಿಕೆಯನ್ನು ಕೊನೆ ಗೊಳ್ಳುತ್ತವೆ.

ಈಗ ನಡೆಯುತ್ತಿರುವ ಕಾಲ ಮಳೆಗಾಲ. ಮಳೆಗಾಲವನ್ನು ಸ್ವಾಗತ ಮಾಡುವದು ವಸಂತ ಕಾಲವು. ಚಳಿಗಾಲದ ದಿನಗಳು ದೂರವಾಗಿವೆ, ವಸಂತ ಕಾಲದ ದಿನಗಳು ಹಿಂದುಳಿದಿವೆ. ಇಂಥ ಪ್ರಸಂಗ ಕಾಲದಲ್ಲಿ ಮಳೆಗಾಲದಲ್ಲಿ ಜನರನ್ನು ತಣಿಸುತ್ತ, ಅತಿ ವಿಜೃಂಭಣೆಯಿಂದ ಶ್ರಾವಣ ಮಾಸವು ಆಗಮಿಸುತ್ತದೆ. ಒಳ್ಳೇ ಹೃತ್ಪೂರ್ವಕ ಆದರದಿಂದ ಹಿಂದು ಗಳಾದ ನಾವು ಶ್ರಾವಣ ಮಾಸದ ಬರುವಿಕೆಯನ್ನು ಸ್ವಾಗತಿಸುತ್ತೇವೆ.

ಇತರ ಧರ್ಮದವರಿಗೆ ಒಂದೊಂದು ಮಾಸವು ಪವಿತ್ರವಾದಂತೆ ಹಿಂದುಗಳಿಗೆ ಶ್ರಾವಣ ಮಾಸವು ಪವಿತ್ರವಾಗಿರುವದು. ಆಯಾ ಧರ್ಮ ದವರಿಗೆ ಆಯಾ ಮಾಸದಲ್ಲಿ ರವಿವಾರ, ಸೋಮವಾರ, ಶುಕ್ರವಾರ ದಿನ ಗಳು ಅತ್ಯಂತ ಶುಭದಿನಗಳೆಂದು ತಿಳಿಯಲ್ಪಡುತ್ತವೆ. ಆ ದಿನಗಳಲ್ಲಿ ದೇವರನ್ನು ಪ್ರಾರ್ಥಿಸುವದು, ಪೂಜಾ ಪುನಸ್ಕಾರ ಮಾಡುವದು ಆಯಾ ಧರ್ಮಗಳಲ್ಲಿ ನಡೆದು ಬಂದ, ಪ್ರಾಚೀನ ಸಂಪ್ರದಾಯವು. ಹಿಂದುಗಳಿಗೆ ಶ್ರಾವಣ ಮಾಸವು ಪವಿತ್ರವಾದದ್ದಾಗಿರುವದು. ಅದರಲ್ಲಿ ಸೋಮವಾರ ದಿನವಂತೂ ಅತ್ಯಂತ ಶುಭದಿನವೆಂದು ತಿಳಿಯುತ್ತಾರೆ. ಹಿಂದುಗಳು ಶ್ರಾವಣ ಮಾಸದಲ್ಲಿ ಕ್ಷೌರವನ್ನು ಸಹ ಮಾಡಿಸುವದಿಲ್ಲ. ಈ ಮಾಸವು ಮುಗಿಯುವ ವರೆಗೂ ಅತ್ಯಂತ ಶ್ರದ್ಧೆಯಿಂದ ಆಚರಿಸುತ್ತಾರೆ.

ಶ್ರಾವಣ ಮಾಸದಲ್ಲಿ ಬೆಳೆಗಳ ಸಂಪತ್ತಿನಿಂದ ಭೂವನಿತೆಯು ಸುಂದರಳಾಗಿರುತ್ತಾಳೆ. ಹಾಗು ಭೂವನಿತೆಯು ಪವಿತ್ರವಾಗಿರಬೇಕೆಂದು ಆಗಾಗ ಮಳೆಯ ಸೆಳಕುಗಳು ಬರುತ್ತಿರುತ್ತವೆ. ಈ ಮಾಸದಲ್ಲಿ ಪ್ರಸಿದ್ಧ ದೇವಾಲಯಗಳಲ್ಲಿ, ಗುಡಿ ಗುಂಡಾರಗಳಲ್ಲಿ, ಮಠ ಮಾನ್ಯಗಳಲ್ಲಿ ಯಾವಾಗಲೂ ಭಜನೆ ಮಾಡುತ್ತ ಗುರುಧ್ಯಾನಚಿಂತೆಗಳಲ್ಲಿ ತಲ್ಲೀನರಾಗುವರು. ಹಾಗು ಭಜನೆಯು ಅವ್ಯಾಹತವಾಗಿ ನಡೆದಿರುತ್ತದೆ. ಸಾಯಂಕಾಲ ಪುರಾಣ ಕೀರ್ತನೆ ನಡೆದಿರುತ್ತದೆ ನಿಜವಾದ ವೀರಶೈವರು ಲಿಂಗಪೂಜೆ ಜಂಗಮಾರಾಧನೆ, ಸಮಾಜ ಸೇವೆ ಕಾರ್ಯಗಳಲ್ಲಿ ಕಾಲಕಳೆಯುತ್ತಿದ್ದರು. ಶ್ರಾವಣ ಮಾಸದಲ್ಲಿ ವಿಶೇಷವಾಗಿ ಮಾಡುವ ಪದ್ಧತಿಯು ಬಹು ಪುರಾತನ ಕಾಲದಿಂದ ಬಂದಿದೆ.

ಮಾನವನು ಯಾವಾಗಲೂ ದೇವರ ಧ್ಯಾನದಲ್ಲಿರುವದು ಉತ್ತಮ. ಆದರೆ ಅವನು ಪ್ರಾಪಂಚಿಕ ವ್ಯವಹಾರದಲ್ಲಿ ತೊಡಗಿದವನಾದುದರಿಂದ ಅಷ್ಟೊಂದು ಭಕ್ತಿಯಿಂದ ಸಾಧಿಸಲಾಗುವದಿಲ್ಲ. ಮಾನವನು ಕನಿಷ್ಟ, ವರುಷದಲ್ಲಿ ಒಂದು ತಿಂಗಳಾದರೂ ದೇವರ ಧ್ಯಾನದ ಸಲುವಾಗಿ ಕಾಲ ಹರಣ ಮಾಡುತ್ತಿರಬೇಕೆಂದು ಇಂಥ ಜನರಿಗಾಗಿ ಪ್ರಾಚೀನ ಕಾಲದ ಹಿರಿಯರು ಶ್ರಾವಣ ಮಾಸವನ್ನು ಮೀಸಲಾಗಿಟ್ಟಿದ್ದಾರೆ ಶ್ರಾವಣಮಾಸವು ಶ್ರಾವಣಮಾಸವೆಂದು ಹೇಳುತ್ತ ಬಂದಿದ್ದಾರೆ ಮೊದಲಿನ ಕಾಲದಲ್ಲಿ ಶ್ರಾವಣ ಮಾಸವು ಒಂದು ತಿಂಗಳು ಇರುವಾಗಲೇ ಶ್ರಾವಣ ಮಾಸವು ಬಂದಿತು ಎಂದು ಕುಣಿದಾಡುತ್ತಿದ್ದರಲ್ಲದೆ, ಆ ಮಾಸದಲ್ಲಿ ನಿಷ್ಠೆಯಿಂದ ಆಚರಿಸುತ್ತಿದ್ದರು.

ಶ್ರಾವಣ ಮಾಸವನ್ನೇ ಯಾಕೆ ಮೀಸಲಾಗಿಟ್ಟಿದ್ದಾರೆಂದರೆ, ಈ ಮಾಸದಲ್ಲಿ ಎಲ್ಲ ಉದ್ಯೋಗಿಗಳಿಗೂ ಇತರ ಮಾಸದಲ್ಲಿದ್ದಷ್ಟು ಕೆಲಸ ಇರುವದಿಲ್ಲ. ಮುಂಗಾರಿ ಹೊಲಗಳು ಬಿತ್ತಿಗೆಯಾಗಿವೆ, ಹಸರು ಬಣ್ಣದಿಂದ ಮನೋಹರವಾಗಿ ಕಾಣುತ್ತಲಿರುವವು. ಮಳೆಯು ಮೇಲಿಂದ ಮೇಲೆ ಆಗುತ್ತಿರುವದರಿಂದ ಆದಕ್ಕಾಗಿ ಗುಡಿ ಗುಂಡಾರಗಳಲ್ಲಿ ಮಠ ಮಾನ್ಯಗಳಲ್ಲಿಯೇ ಕುಳಿತುಕೊಂಡು ಮಹಾಪುರುಷರ ಚರಿತ್ರೆಗಳನ್ನು ಹೇಳುವ ಕೇಳುವ ಕಾರ್ಯಕ್ಕೆ ಪೂರ್ಣ ಅವಕಾಶ ದೊರೆಯುವದು. ಆದ್ದರಿಂದ ಮೀಸಲಾಗಿಟ್ಟದ್ದಾರೆ.

ಈ ಮಾಸದಲ್ಲಿ ಕೇವಲ ಭೋಜನ ಪ್ರಿಯರಾಗಿ ಶರೀರವನ್ನು ತಮ್ಮ ಆತ್ಮೋನ್ನತಿಯ ಸಲುವಾಗಿ, ಸಮಾಜದ ಕಾರ್ಯಕ್ಕಾಗಿ ಸತ್ ಚರಿತ್ರ, ಪುರಾಣ, ಪುಣ್ಯಕಥೆಗಳನ್ನು ಕೇಳಿ ಆಚರಿಸುವ ರೂಢಿ ಬರಬೇಕು ಇಷ್ಟು ರೀತಿಯಿಂದ ಶ್ರಾವಣ ಮಾಸವು, ಮಹಿಮೆಯನ್ನು ಪಡೆದಿರುವದು ಇತ್ತೀಚೆಗೆ ನಾವು ನಿಷ್ಠೆಯಿಂದ ಆಚರಿಸದೆ ಕೆಡಕು ಕಾಲವನ್ನು ತಳ್ಳುತ್ತ ಲಿದ್ದೇವೆ. ಇನ್ನು ಮೇಲಾದರೂ ಎಚ್ಚತ್ತು ಅತ್ಯಂತ ನಿಷ್ಠೆಯಿಂದ ಶ್ರಾವಣ ಮಾಸವನ್ನಾಚರಿಸಿ ನಮ್ಮ ಶ್ರಾವಣ ಮಾಸವು ಸದಾ ಸರ್ವ ಜನರಿಗೆ ಸುಖ ಸಂಪತ್ತನ್ನು, ಸೌಹಾರ್ದತೆ, ಪ್ರೇಮ-ಶಾಂತಿಯನ್ನು ಬೀರುವಂತೆ ತಂಗಾಳಿ ಬೀಸಲೆಂದು ಸದಾ ಹಾರೈಸುವಾ.

---

## ಪ್ರಾಚೀನ ರಾಗ — ರಾಗಿಣಿಗಳ ಅಭಿನವ ರೂಪು.

ಲೇಖಕ :— ಶ್ರೀ. ಜಿ. ಎಸ್. ಜುಕ್ತಿಮಠ
ಗಾಯನ ಕಲಾಕೋವಿದ ವಿಜಾಪುರ.

---

ಈಗ ರಾಗ—ರಾಗಿಣಿಗಳ ಬಗ್ಗೆ ಸವಿಸ್ತಾರ ರೀತಿಯಲ್ಲಿ ಆಲೋಚಿಸಿದಲ್ಲಿ ಪ್ರಾಚೀನ ರಾಗ-ರಾಗಿಣಿಗಳ ರೂಪವು ಪೂರ್ಣ ನಷ್ಟವಾಗಿದೆ ಎಂದು ಗ್ರಂಥಗಳ ಆಧಾರದಿಂದ ಕಂಡುಬರುತ್ತದೆ. ಪ್ರಚಲಿತ ಸ್ಥಿತಿಯಲ್ಲಿ ರಾಗ-ರಾಗಿಣಿಗಳ ಹೆಸರು ಮಾತ್ರ ಬಳಕೆಯಲ್ಲಿವೆ. ಈಗಿನ ರಾಗ ರಾಗಿಣಿಗಳ ಪದ್ಧತಿಗೆ ಮತ್ತು ನಾದ ಸ್ವರೂಪದ ಕಡೆಗೆ ಲಕ್ಷ್ಯ ಕೊಟ್ಟರೆ ಪ್ರಾಚೀನ ರಾಗ-ರಾಗಿಣಿಗಳಿಂದ ಸಂಪೂರ್ಣ ಭಿನ್ನವಾಗಿವೆ ರಾಗ ರಾಗಿಣಿಗಳ ಪದ್ಧತಿಯನ್ನು ಮಾನ್ಯ ಮಾಡತಕ್ಕವರು ಸ್ವರ, ಗ್ರಾಮ ಶೃತಿ, ಮೂರ್ಛನಾ ಇತ್ಯಾದಿ ಇಲ್ಲಿಯವರೆಗೆ ಸ್ಪಷ್ಟೀಕರಣವಾಗಿಲ್ಲ ರೀತಿ ಪ್ರಮಾಣಗಳು ಕೂಡ ಉಪಲಬ್ಧವಿಲ್ಲ. ಆ ಯುಗದಲ್ಲಿ

ಗಾಯಕರು ಮತ್ತು ವಾದಕರು ಶುದ್ಧಸ್ವರ ಸಪ್ತಕವನ್ನು ಇಟ್ಟಿದ್ದರೋ ಏನ್ನುವದು ರಾಗ-ರಾಗಿಣಿಗಳ ನಾದ, ಸ್ವರೂಪ, ಅಥವಾ ಧ್ವನಿಯ ಸೃಷ್ಟಿಯನ್ನು ಸ್ಪಷ್ಟಪಡಿಸುವದು ಅಸಂಭವವಾಗಿದೆ. ಈಗಿನಂತೆ ಆ ಕಾಲ ದಲ್ಲಿ ಮುದ್ರಣ ವ್ಯವಸ್ಥೆ ಇದ್ದಿಲ್ಲ. ಅಲ್ಲದೆ ಗ್ರಾಮ-ಫೋನ್ ರಿಕಾರ್ಡು ಗಳ ವ್ಯವಸ್ಥೆಯಂತೂ ದೂರೇ ಉಳಿಯಿತು. ಆಗಿನ ಸವಿಸ್ತಾರ ಪರಿ ಚಯ ಪಡೆಯುವದು ದುಸ್ತರವಾಗಿದೆ. ಆದರಲ್ಲಿಯೇ ದೊರೆತ ಕೆಲವು ಗ್ರಂಥಗಳ ಆಧಾರದಿಂದಲೇ ಕಂಡು ಹಿಡಿಯಬೇಕಾಗಿ ಬಂದಿದೆ. ಆದರೆ ಈಗಿನ ಬಂಗಾಲ ಭೈರವ ಇದನ್ನು ಕೆಲವರು ಪ್ರಾಚೀನ ಬಂಗಾಲಿರಾಗ ವೆಂದು ಮಾನಿಸುತ್ತಾರೆ. ಆದರೆ ಪ್ರಚಲಿತ ಬಂಗಾಲ ಭೈರವ, ಭೈರವ ರಾಗದ ಜನ್ಯರಾಗವಾಗಿದೆ. ಆದರೆ ಈಗಿನ ಬಂಗಾಲ ಭೈರವಕ್ಕೆ ಪ್ರಾಚಿನ ಬಂಗಾಲಿ ಎಂದು ಹೇಳುವದು ವಿಶೇಷ ನ್ಯಾಯ ಸಮ್ಮತವಲ್ಲವೆಂದು ಕಂಡು ಬರುತ್ತದೆ. ಹನುಮನ್ಮತದಲ್ಲಿ ಬಂಗಾಲಿಯು ಭೈರವ ರಾಗದ ಭಾರ್ಯೆ ಎಂದು ಮಾನಿಸಲ್ಪಟ್ಟಿದೆ. ಬೇರೆ ಗ್ರಂಥಗಳಲ್ಲಿ ಬಂಗಾಲಿಯು ನಟ ನಾರಾ ಯಣ ರಾಗದ ಭಾರ್ಯೆ ಎಂದು ತಿಳಿದು ಬರುತ್ತದೆ.

"ಚತ್ವಾರಿಂಶಚ್ಛತ ರಾಗ ನಿರೂಪಣಂ" ಇದರಲ್ಲಿ ಆರು ರಾಗ ಗಳು ಪುರುಷರಾಗ ವೆಂದು ಹೇಳಿದೆ. ಆದರೆ ಕೆಲವು ಕಡೆಗೆ ೧೦ ಪುರುಷ ರಾಗಗಳೆಂದು ಗಣಿಸಲಾಗಿದೆ. ಅವು ಹೀಗಿವೆ. (೧) ಶ್ರೀರಾಗ, (೨) ಬಸಂತ, (೩) ಪಂಚಮ, (೪) ಭೈರವ, (೫) ಕೌಶಿಕ, (೬) ಮೇಘ, (೭) ನಟನಾರಾಯಣ, (೮) ಹಿಂದೋಲ, (೯) ದೀ ಪಕ, (೧೦) ಹಂಸಕ ಹೀಗೆ ಹೇಳಿದೆ. ಇವುಗಳ ಪರಿವಾರ ಅಂದರೆ ಹೆಂಡರು ಮಕ್ಕಳು ಕೆಳಗಿನಂತೆ ಇವೆಯಂದು ಕಂಡು ಬಂದಿದೆ.

### ೧. ಶ್ರೀರಾಗ ಪರಿವಾರ, (ಕುಟುಂಬ)

ಹೆಂಡರು :— ೧ ಗೌರಿ, ೨ ಕೋಲಾಹಲಿ, ೩ ಆಂಧಾಲೀ, ೪ ದ್ರಾವಿಡಿ, ೫ ಮಾಲವ ಕೌಶಿಕಿ.

ಮಕ್ಕಳು :— ೧ ಶುದ್ಧಗೌಡ, ೨ ಕರ್ನಾಟಕ, ೩ ಮಾಲವ, ೪ ಗೂರ್ಜಿಕ.

ಮಕ್ಕಳ ಹೆಂಡರು :— ೧ ವರಾಟಿ, ೨ ಬೌಲಿ, ೩ ಮಧ್ಯಮಾದಿ ೪ ಆರಭೀ.

## ೨. ಬಸವಂತ ಪರಿವಾರ.

ಹೆಂಡರು :— ೧. ನೀಲಾಂಬರಿ, ೨ ಧನಾಶ್ರೀ, ೩ ರಾಮಕ್ರಿ, ೪ ಪಟಮಂಜರಿ, ೫ ಗೋಡಕ್ರಿ.

ಮಕ್ಕಳು :— ೧ ಸಾಮ, ೨ ಸೋಮ, ೩ ರೀತಿಗೌಲ ೪ ಶಂಕರಾಭರಣ.

ಮಕ್ಕಳ ಹೆಂಡರು :— ೧ ಕಲ್ಯಾಣಿ, ೨ ಮುಖವರಾಟಿ ೩ ಸಾವೇರಿ ೪ ತರಂಗಿಣಿ.

## ೩. ಪಂಚಮ ಪರಿವಾರ

ಹೆಂಡರು :— ೧ ತ್ರಿವಲೀ, ೨ ವಲ್ಲಕೀ, ೩ ಖಂಬಾವತಿ. ೪ ಕಕುಬಾ, ೫ ಆಹರೀ

ಮಕ್ಕಳು :— ೧ ವಲಹಂಸ, ೨ ಗಾಂಧಾರ, ೩ ದೇವಹಿಂಡೋಲ ೪ ಪಾವಕ

ಮಕ್ಕಳ ಹೆಂಡರು :— ೧ ನಾರಾಯಣೀ, ೨ ಭೂಪಾಲಿ, ೩ ಮಾರು, ೪ ನವರೋಚಿಕಾ

## ೪. ಭೈರವ ಪರಿವಾರ

ಹೆಂಡರು :— ೧ ಜೀಲಾವಲಿ, ೨ ಭೈರವಿ, ೩ ಗುರ್ಜರೀ, ೪ ಲಲಿತಾ, ೫ ಕರ್ನಾಟಿ.

ಮಕ್ಕಳು :— ೧ ಪಂಚವಕ್ತ್ರ, ೨ ಕಲ್ಹಾರ, ೩ ಲಲಿತ, ೪ ಚಂದ್ರಶೇಖರ.

ಮಕ್ಕಳ ಹೆಂಡರು :— ೧ ಕುರಂಗಮಾಲೀ, ೨ ವೀಚಿಕಾ, ಮಂಗಲಕೌಶಿಕ, ೪ ಮಾಹುಲೀ.

### ೫. ಕೌಶಿಕ ಪರಿವಾರ.

ಹೆಂಡರು :— ೧ ತೋಡಿ, ೨ ದೇವಗಾಂಧಾರಿ, ೩ ದೇಶಾಖ್ಯಾ ಗುಣಕ್ರಿಯಾ ೫ ಶುದ್ಧ ಸಾವೇರಿ.

ಮಕ್ಕಳು :— ೧ ವಿದ್ಯುನ್ಮಾಲ, ೨ ಕಾಮೋದ, ೩ ಸಾರಂಗ, ೪ ಮೋದಕ.

ಮಕ್ಕಳ ಹೆಂಡರು :— ೧ ನಟ್ಟಾ, ೨ ತರಂಗಿಣೀ, ೩ ಪೂರ್ಣ ಚಂದ್ರಿಕಾ, ೪ ಪಾಲಿಕಾ.

### ೬ ಮೇಘ ಪರಿವಾರ.

ಹೆಂಡರು :— ೧ ತ್ರೋಟಕಿ, ೨ ಮೋಟಕಿ, ೩ ಬೃಹನ್ನಟಾ, ಅಪರಾ, ೫ ಅಹನ್ನಟಾ,

ಮಕ್ಕಳು :— ೧ ಘಂಟಕಂಠ, ೨ ಕಮಲ, ೩ ಘಂಟಾರವ, ೪ ರೋಹಕ.

ಮಕ್ಕಳ ಹೆಂಡರು :— ೧ ಸುಧಾಮಯಿ, ೨ ಡೋಂಬಕ್ರಿ, ೩ ಮೃತ ಸಂಜೀವಿನಿ, ೪ ಮೇಘರಂಜಿ.

### ೭. ನಟನಾರಾಯಣ ಪರಿವಾರ.

ಹೆಂಡರು :— ೧ ಬಂಗಾಲಿ, ೨ ಶುದ್ಧ ಸಾಲಂಕಾ, ೩ ಕಾಂಭೋಜಿ ೪ ಮಧುಮಾಧವೀ, ೫ ದೇವಕ್ರಿ.

ಮಕ್ಕಳು :— ೧ ಶುದ್ಧಬಂಗಾಲಿ, ೨ ನಾಟ, ೩ ಗಾರುಣ, ೪ ಮೋಹನ.

ಮಕ್ಕಳ ಹೆಂಡರು :— ೧ ತ್ರೈಲಂಗೀ, ೨ ನಾಟ, ೩ ಸೋರಟ ೪ ಹಂಬೀರ.

## ೮. ಹಿಂದೋಲ ಪರಿವಾರ.

ಹೆಂಡರು :— ೧ ದೇಶಿ, ೨ ಶಿವಕ್ರಿ, ೩ ಲಲಿತಾ ೪ ಮಲ್ಲಾರಿ ೫ ಸುಹನ್ಸಿಕಾ.

ಮಕ್ಕಳು :— ೧ ರಮಣೀಯ, ೨ ಮುಖಾರಿ, ೩ ಉದಯ ಪಂಚಮ, ೪ ಶುದ್ಧಬಸಂತಿ.

ಮಕ್ಕಳ ಹೆಂಡರು :— ೧ ಸಿಂಧುರಾಮಕ್ರಿಯ, ೨ ವೇಗವಾಹಿನಿ ೩ ಧರಾ, ೪ ಛಾಯಾತರಂಗಿಣಿ.

## ೯. ದೀಪಕ ಪರಿವಾರ.

ಹೆಂಡರು :— ೧ ಆಸಾವರೀ, ೨ ನಾಟಿಕಾ, ೩ ದೇಶಲೀ, ೪ ಕಾನಡಾ, ೫ ಕೇದಾರಿ.

ಮಕ್ಕಳು :— ೧ ಕೇದಾರಗೌಳ, ೨ ವೈರಂಜೀ, ೩ ಹೋಲಿ, ೪ ಸೌರಾಷ್ಟ್ರ.

ಮಕ್ಕಳ ಹೆಂಡರು :— ೧ ಕುರಂಜಮಂಜರಿ, ೨ ನಾಗವರಾಲಿ, ೩ ದೇವರಂಜನಿ, ೪ ಸುರಸಿಂಧು.

## ೧೦. ಹಂಸಕ ಪರಿವಾರ.

ಹೆಂಡರು :— ೧ ಶ್ರೀರಂಜನಿ, ೨ ಮಾಲಶ್ರೀ, ೩ ಸರಸ್ವತಿ ಮನೋಹರಿ, ೪ ಗೌರಿ, ೫ ಈಶಮನೋಹರಿ.

ಮಕ್ಕಳು :— ೧ ನಾಗಧ್ವನಿ, ೨ ಸಾಮಂತ, ೩ ಭಿನ್ನಪಂಚಮ ೪ ಟಕ್ಕ.

ಮಕ್ಕಳ ಹೆಂಡಿರು :— ೧ ಮಾಲವಿ, ೨ ಶ್ಯಾಮಕಲ್ಯಾಣಿ, ೩ ದೇವಾಕ್ಷಿ, ೪ ಬಿಲಹರಿ.

ಈ ರೀತಿ ಹೇಳಲಾಗಿದೆ. ಇಲ್ಲಿ ಆಲೋಚನೆಗೆ ಆಸ್ಪದವಾಗದೆ ಉಳಿಯುದಿಲ್ಲ. ಯಾಕಂದರೆ, ಇಲ್ಲಿ ಹತ್ತು ಪುರುಷರಾಗಗಳು ಮನ್ನಿಸಲ್ಪಟ್ಟು, ಅವುಗಳಿಗೆ ಪ್ರತ್ಯೇಕ ೫-೫ ಹೆಂಡರೆಂದು ಮನ್ನಿಸಲಾಗಿದೆ. ಆದರೆ ಪ್ರತ್ಯೇಕ ರಾಗಕ್ಕೆ ಮಕ್ಕಳು ಮಾತ್ರ ನಾಲ್ಕು ನಾಲ್ಕು ಇರುತ್ತವೆ. ಹತ್ತು ಪುರುಷ ರಾಗಕ್ಕೆ ೫-೫ ಹೆಂಡರಕ್ಕಿಂತ ಒಬ್ಬೊಬ್ಬರನ್ನು ಮನ್ನಿಸಿದ್ದರೆ, ಯೋಗ್ಯವಿತ್ತು. ಒಂದೊಂದು ರಾಗ ವ್ಯತ್ಯಾಸವು ಕೂಡಾ ಒಂದೊಂದು ಮತದಲ್ಲಿ ಇದೆಯೆಂದು ತಿಳಿಯುದಿರಲಾರದು.

ಹನುಮಾನ ಮತದಲ್ಲಿ, ಬಂಗಾಲೀರಾಗವು ಭೈರವ ರಾಗದ ಪತ್ನಿ ಯೆಂದು ಗಣಿಸಲಾಗಿದೆ. ಇಲ್ಲಿ ನಟನಾರಾಯಣರಾಗದ ಭಾರ್ಯೆ ಎಂದು ಇದೆ. ಮತ್ತು ಹನುಮಾನ ಮತದಲ್ಲಿ ವರಾಟಿ ರಾಗವು ಭೈರವ ರಾಗದ ಹೆಂಡತಿಯೆಂದು ಮಾನಿಸಲಾಗಿದೆ. ಆದರೆ ಇಲ್ಲಿ ವರಾಟಿರಾಗವು ಶ್ರೀರಾಗದ ಮಗನ ಪತ್ನಿಯೆಂದು ಇದೆ. ಮತ್ತು ಹನುಮಾನ ಮತದಲ್ಲಿ ಭೂಪಾಲಿ ರಾಗವು ಮೇಘ ರಾಗದ ಪತ್ನಿಯೆಂದು ಹೇಳಿದೆ. ಇಲ್ಲಿ ಪಂಚಮ ರಾಗದ ಮಗನ ಪತ್ನಿಯೆಂದು ಇದೆ. ಈ ಭಿನ್ನಾಭಿಪ್ರಾಯದಿಂದ ನಮಗೆ ಸಂಶಯ ಬಾರದಿರದು. ಇವುಗಳನ್ನು ನಾವು ಕಂಡುಹಿಡಿಯಬೇಕೆಂದು ಪ್ರಯತ್ನಿಸಿದಲ್ಲಿ, ಈಗ ಪ್ರಚಲಿತ ಸ್ಥಿತಿಯಲ್ಲಿರುವ ರಾಗಗಳ ಸ್ವರೂಪ ಬೇರೆಯಾಗಿರುವದರಿಂದ, ಸಿದ್ಧಪಡಿಸಲು ಅದೂ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ; ಇಷ್ಟು ಮಾತ್ರ ಹೇಳಬಹುದು. ಇತರ ರಾಗಗಳ ಹೆಸರು ಮಾತ್ರ ಬಳಕೆಯಲ್ಲಿ ಬಂದಿವೆ. ಇವೂ ಕೂಡ ಅಪೂರ್ಣ ರಾಗಗಳ ಕೆಲವು ಹೆಸರೇ ಕೇಳಬರುವದಿಲ್ಲ ಇರಲಿ.

ಇನ್ನು ಪ್ರಾಚೀನ ನಾದ ಸ್ವರೂಪದಿಂದ ನಿರ್ಣಯಿಸಬೇಕೆಂದಲ್ಲಿ ಪ್ರಾಮಾಣಿಕ ರೀತಿಯಲ್ಲಿ ಅವು ನಮಗೆ ಉಪಲಬ್ಧವಿಲ್ಲ. ಪ್ರಚಲಿತ ಸ್ಥಿತಿಯಲ್ಲಿರುವ ರಾಗಗಳ ನಾದ ಸ್ವರೂಪವನ್ನು ಕೊಡಲಾಗಿದೆ. ನಾವು ಇಸು

ಮಾತ್ರ ಅನ್ನದೆ ಇರಲಾರೆವು. ಸಂಗೀತ ಶಾಸ್ತ್ರ ಪರಿಚಯವಿದ್ದ ಪಂಡಿತರು ಇದನ್ನು ಬರೆದು ಸಾಕಷ್ಟು ಪ್ರಚಾರವಾಡದಿದ್ದುದರಿಂದ ಸಾವು ಈ ಗೊಂದಲದಲ್ಲಿ ಬೀಳದೆ ಗತ್ಯಂತರವಿಲ್ಲ. ಇನ್ನು ಮೇಲಾದರೂ ಈ ಕಾರ್ಯವನ್ನು ಕೈಕೊಂಡಲ್ಲಿ ಸಂಗೀತ ಶಾಸ್ತ್ರಕ್ಕೆ ಮತ್ತು ನಾಡಿಗೆ ಮಹ ದುಪಕಾರ ವಾದೀತೆಂದು ನಮ್ಮ ಆಶೆ.

---

## ವೀರಶೈವ ಧರ್ಮಜ್ಞರಲ್ಲಿ ವಿಜ್ಞಾಪನೆ.

ಲೇಖಕಿ :— ಅಧ್ಯಕ್ಷ, ಅಕ್ಕನ ಬಳಗ ಚಿಕ್ಕೋಡಿ.

—§—

ಪತ್ರಿಕೆಗಳಲ್ಲಿ ಪತಿಪ್ರತಿಯರು ಅಕ್ಕಮಹಾದೇವಿಯ ವೈಭವ ಮೂರ್ತಿಯನ್ನು ಪೂಜಿಸಬೇಕೆಂದು ತಮ್ಮ ಹೃದ್ಗತ ಐಸಿರಿಯ ಆಶೆಯನ್ನು, ಶ್ರೀಮತಿ ಪಾರ್ವತಿಬಾಯಿ ಹುಂಬರವಾಡಿ ಇವರು ಪ್ರದರ್ಶನ ಮಾಡಿ ಉಳಿದ ಮಹಿಳೆಯರ ಅಭಿಪ್ರಾಯ ಕೇಳಿದ್ದರು. ಇದೇವೆ ಮೂರ್ತಿ ಪೂಜೆಯು ವೀರಶೈವ ಧರ್ಮ ಸಮ್ಮತವೇ? ಎಂಬ ಪ್ರಶ್ನೆ ಪೂರ್ವಕ ಉತ್ತರ ಕೊಟ್ಟು, ಮೂರ್ತಿ ಪೂಜೆಗಾಗಿ ವೀರಶೈವ ಧರ್ಮಜ್ಞರ ಒಪ್ಪಿಗೆ ಬೇಕು ಎಂದು ಹೇಳಿದ್ದರಿಂದ ಈಗ ಪಂಚ ಪೀಠದವರಿಗೂ, ಪಂಚ ಶೂನ್ಯ ಸಿಂಹಾಸನಾಧಿಪತಿಗಳಿಗೂ, ,ವಿದ್ಯಾವಂತ ಮಹಾಸ್ವಾಮಿಗಳಿಗೂ, ಪಂಡಿತ ಶಾಸ್ತ್ರಿಗಳಿಗೂ ಅರಿಕೆ ಮಾಡಿಕೊಂಡಿದ್ದೇವೆ. ಉತ್ತರ ಬಂದನಂತರ ವೃತ್ತಪತ್ರಿಕೆ, ಹಸ್ತಪತ್ರಿಕೆ ಮುಖದಿಂದ ಜಾಹೀರ ಮಾಡಲಾಗುವದು.

ವೀರಶೈವರು ಲಿಂಗದ ಹೊರತು ಅನ್ಯ ದೇವತಾರಾಧನೆ ಮಾಡಕೂಡದೆಂದು ಸೂಕ್ಷ್ಮಾಗಮ, ಪಾರಮೇಶ್ವರಾಗಮ, ಸಿದ್ಧಾಂತ, ಶಿಖಾಮಣಿ, ಲಿಂಗಧಾರಣೆ ಚಂದ್ರಿಕೆ ಮೊದಲಾದ ಗ್ರಂಥಗಳಲ್ಲಿಯೂ, ಬಸವಣ್ಣ

ಚೆನ್ನಬಸವಣ್ಣ, ಪ್ರಭುದೇವರು, ಅಕ್ಕಮಹಾದೇವಿ, ಅಂಬಿಗರ ಚವಡಯ್ಯ, ಮೊದಲಾದ ಶಿವಶರಣರ ವಚನಗಳಲ್ಲಿಯೂ ಉಕ್ತವಾಗಿದೆಯೆಂದು ಕೇಳಿದ್ದೇವೆ. ಅದು ನಿಜವೋ? ಲಿಂಗದ ಹೊರತು ಅನ್ಯ ಪೂಜೆ ಮಾಡಿದರೆ ಮಹಾ ರೌರವ ನರಕವೆಂಶಲೂ, ಕಠೋರವಾಗಿ ಶರಣರು ಹೇಳಿದ್ದಾರೆಂದು ಕೇಳಿದ್ದೇವೆ. ಅದು ಯಥಾರ್ಥವೋ? ಈ ಎಲ್ಲ ಮಹಾತ್ಮರು ಉಪದೇಶಿಸಿದ ಲಿಂಗಾಚಾರವನ್ನು ಕೇಳಿ ತಿಳಿದಬಳಿಕ ಅಕ್ಕಮಹಾದೇವಿಯ ಮೂರ್ತಿಯನ್ನು ತಂದು ಸ್ಥಾಪಿಸಿ ಪೂಜಿಸಲು ಯುಕ್ತವೇ? ಎಂಬುವನ್ನು ವೀರಶೈವರು ಒಪ್ಪಬಹುದೋ? ಮೌನವಾಗಿದ್ದರೂ ಸಹ ಅರ್ಧ ಸಮ್ಮತಿ ಕೊಟ್ಟಂತಾಗುವದಿಲ್ಲವೇ?

ಹೊಟ್ಟೆಪಾಡಿಗಾಗಿ ಸ್ಥಾವರ ಲಿಂಗ ಪೂಜೆ ಮಾಡುತ್ತ ಬಂದುದು, ಧಾರ್ಮಿಕ ನಿಯಮವಲ್ಲ. ಶೈವಾಚಾರವನ್ನು ದೂರ ಮಾಡುತ್ತ ಲಿಂಗಾಂಗಿಗಳ ಆಚಾರವನ್ನು ಆಚರಿಸುತ್ತ ಹೋಗುವದು ಯೋಗ್ಯವಲ್ಲವೇ?

ಅಕ್ಕಮಹಾದೇವಿಯ ಮೂರ್ತಿ ಸ್ಥಾಪಿಸಿದ ಬಳಿಕ ದೇವರೆಂದು ಪೂಜಿಸಲು ಸರ್ವರಿಗೂ ಮುಕ್ತದ್ವಾರವಾಗಿ ಹಿಂದೂ ದೇವಸ್ಥಾನವೆಂದು ಪರಿಗಣಿಸಿ ಸಾರ್ವಜನಿಕವಾಗಿ ಅಸ್ಪೃಶ್ಯ ಮೊದಲು ಮಾಡಿಕೊಂಡು ಹಿಂದುಗಳೆಲ್ಲರೂ ಪೂಜಿಸಲು ಹಕ್ಕು ಪ್ರಾಪ್ತವಾಗುವದಿಲ್ಲವೇ?

ಹೀಗೆ ಹಕ್ಕಿನಿಂದ ಅಸ್ಪೃಶ್ಯ ಮೊದಲಾದ ಹಿಂದುಗಳು ಪೂಜಿಸ ಹತ್ತಿದರೆ ಲಿಂಗಾಂಗಿ ವರ್ಗದವರು ಒಪ್ಪಬಹುದೇ?

ಅಕ್ಕನ ಮೂರ್ತಿ ಪೂಜೆ, ಮತ್ತು ಮೂರ್ತಿ ಸ್ಥಾಪನೆ ಇವುಗಳ ಬಗ್ಗೆ ನಾಡಿನ ಎಲ್ಲ ಅಕ್ಕನ ಬಳಗದ ಸಂಸ್ಥೆಯವರು ವೀರಶೈವ ಧರ್ಮ ಸಮ್ಮತವಾದ ಮಾರ್ಗವನ್ನು ಕಂಡುಕೊಳ್ಳುವದು ಯುಕ್ತವಲ್ಲವೇ?

ನಮ್ಮ ವಿಜ್ಞಾಪನೆಗೆ ಮಾನ್ಯತೆ ಕೊಟ್ಟು ಮೂರ್ತಿ ಪೂಜೆ ಯನ್ನು ವೀರಶೈವರು ಮಾಡಬೇಕೋ? ಅಥವಾ ಮಾಡಬಾರದೋ ಎಂಬ ನಿರ್ಣಯವನ್ನು ತಿಳಿಸ ಬೇಕಾಗಿ ವಿನಂತಿ.

ಸ್ಥಾವರ ದೇವತೆಗಳನ್ನು ಪೂಜೆ ಮಾಡುವ ವಿಷಯವಾಗಿ ಶಿವಶರಣರಲ್ಲಿ ಮತಭೇದವಿದಲ್ಲ. ಅವರೆಲ್ಲರೂ ಇಂಥ ದೇವತೆಗಳನ್ನು ಪೂಜೆ ಮಾಡಕೂಡದೆಂದು ತಮ್ಮ ಅಭಿಪ್ರಾಯವನ್ನು ತಮ್ಮ ವಚನಗಳಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಪರಮಾತ್ಮನನ್ನು ಲಿಂಗ ರೂಪದಲ್ಲಿ ಮನ್ನಿಸತಕ್ಕದ್ದೇ ಹೊರತು ಅವನ ಯಾವ ಮೂರ್ತಿಯನ್ನು ಮಾಡಕೂಡದೆಂದು ಅವರು ಹೇಳಿದ್ದಾರೆ.

ಲಿಂಗದಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳೆಂದು ತ್ರಿಲಿಂಗಗಳಿರುತ್ತವೆ. ಇಷ್ಟಲಿಂಗದ ಮೂಲಕ ಪ್ರಾಣಲಿಂಗವನ್ನೂ ತರುವಾಯ ಭಾವಲಿಂಗವನ್ನೂ ಭಕ್ತನು ಸಾಧಿಸುವದು ಅವನ ಕರ್ತವ್ಯವಾಗಿದೆ. ಇಷ್ಟಲಿಂಗದ ಧಾರಣವಿಧಾನಗಳು ಪ್ರಾಣ ಮತ್ತು ಭಾವಲಿಂಗಗಳ ತಿಳಿವನ್ನುಂಟು ಮಾಡುವಂತೆ ಅವುಗಳ ಯೋಜನೆ ಇದೆ. ಆದರೆ ಇದು ಅನ್ಯ ದೈವತಗಳ ಮೂರ್ತಿಗಳಿಂದ ಸಾಧ್ಯವಿಲ್ಲ. ಈ ಮೂರ್ತಿಗಳು ಕೆಲವೊಂದು ಬಗೆಯ ಭಕ್ತಿಭಾವವನ್ನು ಅವುಗಳನ್ನು ಪೂಜಿಸುವವನಲ್ಲಿ ಉಂಟು ಮಾಡಬಹುದು. ಆದರೆ ಅವುಗಳಿಂದ ಪ್ರಾಣಲಿಂಗ ಮತ್ತು ಭಾವಲಿಂಗಾನುಸಂಧಾನಗಳು ಉಂಟಾಗಲಾರವು.

ಆದ್ದರಿಂದ ಇಷ್ಟಲಿಂಗಧಾರಕನು ಶಿವ, ಪಾರ್ವತಿ, ವೀರಭದ್ರ, ಬಸವಣ್ಣ, ಮಲ್ಲಿಕಾರ್ಜುನಲಿಂಗ ಇವರನ್ನೊಳಗೊಂಡು ಯಾವ ದೇವತೆಗಳನ್ನೂ ಮನ್ನಿಸಕೂಡದೆಂದು ಶಿವಶರಣರ ನಿಷ್ಠುರ ವಾಕ್ಯಗಳಿವೆ.

ಇಷ್ಟಲಿಂಗದ ಅರಿಕೆಯು ವೀರಶೈವರಲ್ಲಿ ಇರದ್ದರಿಂದ ಅವರು ಅನೇಕ ದೇವತೆಗಳ ಭಜನೆಯನ್ನು ಮಾಡುವದುಂಟು. ಇದು ಅವರ ತಪ್ಪುಮಾರ್ಗವಾಗಿದೆ. ಇಷ್ಟಲಿಂಗದ ನೆಲೆ ಕಲೆಗಳನ್ನು ತಿಳಿಯದ್ದರ ಪರಿಣಾಮವು ಇದಾಗಿದೆ.

ನಾವು ಈಚೆಗೆ ಶಿವಾನುಭವ ಪತ್ರಿಕೆಯಲ್ಲಿ ವಚನ ಶಾಸ್ತ್ರಸಾರ ಭಾಗ ೩ ಉತ್ತರಭಾಗ ಮತ್ತು ಪ್ರಾಣಲಿಂಗಜ್ಞಾನದರ್ಪಣ ಚರಿತ್ರ ಎಂಬ ಎರಡು ಗ್ರಂಥಗಳನ್ನು ಪ್ರಕಟ ಮಾಡುತ್ತ ಇದ್ದುದನ್ನು ವಾಚಕರು ಇದರಿ

ಕಾಣಬಹುದು. ಇದರಲ್ಲಿ ಇಷ್ಟಲಿಂಗ, ಪ್ರಾಣಲಿಂಗ ಇವುಗಳ ಸ್ವರೂಪದ ವಿವರಣೆಗಳಿರುತ್ತವೆ. ಅವು ಎಷ್ಟು ಅಗಾಧವಾದವುಗಳೆಂಬುದು ವಾಚಕರ ನಿದರ್ಶನಕ್ಕೆ ಬಂದಿರಬಹುದು. ಅವು ಶಿವಶರಣರ ಮಂತ್ರ ಶಾಸ್ತ್ರಗಳಾಗಿವೆ. ಅವುಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳ ಸ್ವರೂಪದ ವಿವರಣೆಗಳಿವೆ. ಅವುಗಳನ್ನು ಸಾಧಿಸುವದೇ ಲಿಂಗಾನುಸಂಧಾನವು.

ಇದನ್ನು ಅರಿತವನು ಇತರ ಸ್ಥಾವರ ದೈವತಗಳ ಪೂಜೆಗೆ ಮನಗೊಡಲಾರನು. ಪರಮಾತ್ಮನನ್ನು ತನ್ನಲ್ಲಿಯೇ ಕಾಣಲಪೇಕ್ಷಿಸುವವನು ಹೊರಗಿನ ಚಿನ್ಹಗಳಿಗೆ ಮೋಹಿಸಲಾರನು. ಅವುಗಳನ್ನು ಮೋಹಿಸಿದಲ್ಲಿ ಅವನು ತನ್ನಲ್ಲಿ ಇಷ್ಟ, ಪ್ರಾಣ, ಭಾವಲಿಂಗಗಳನ್ನು ಕಾಣಲಾರನು. ಆದ್ದರಿಂದ ಅನ್ಯ ದೇವತೆಗಳನ್ನು ಪೂಜಿಸಕೂಡದೆಂದು ಶಿವಶರಣರು ತಮ್ಮ ವಚನಗಳಲ್ಲಿ ಬೋಧಿಸುತ್ತ ಬಂದಿದ್ದಾರೆ.

ಈ ವಿಷಯವಾಗಿ ಶ್ರೇಷ್ಠ ಶಿವಶರಣರಾದ ಕಾಡಸಿದ್ಧೇಶ್ವರರು ಹೇಳಿರುವದೇನಂದರೆ :—

“ಸತ್ತವರ ಸಮಾಧಿಯಲ್ಲಿ ಕಡಿಯ ಕಟ್ಟಿಸಿ ಹಿರಿಯರ ಗದ್ದುಗೆ ಎಂದು ಪೂಜಿಸುವವರು ಮಹೇಶ್ವರರಲ್ಲ. ಕಟ್ಟಿಗೆ ಹಾವಿಗೆ, ಬೆಳ್ಳಿಯ ಕಟ್ಟಿಗೆ, ಜಡಿಗಟ್ಟಿದ ಕೂದಲುಳ್ಳವರು ಹಿರಿಯರೆಂದು ಪೂಜಿಸುವವರು ಮಹೇಶ್ವರರಲ್ಲ. ಸತ್ತ ತಾಯಿ ತಂದೆಗಳ ಹೆಸರು ತಮ್ಮ ಪುತ್ರರಿಗೆ ಇಟ್ಟು ಪರರಿಗೆ ನಮ್ಮ ಹಿರಿಯರ ಹೆಸರೆಂದು ಹೇಳುವವರು ಮಹೇಶ್ವರರಲ್ಲ. ನಮ್ಮ ಹಿರಿಯರು ಗಳಿಸಿದ ಮಠ ಮಾನ್ಯವೆಂದು ಹೋರಾಡಿ ಹಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊನ್ನ ಕೊಟ್ಟವರು ಮಹೇಶ್ವರರಲ್ಲ ಇಂತಹರು ಮಹೇಶ್ವರರೆಂದಡೆ ನಮ್ಮ ಶರಣರು ತಮ್ಮ ಪಾದರಕ್ಷೆಯಿಂದ ಹೊಡೆಯದೆ ಮಾಣ್ಬರೇ ಕಾಡಿನೊಳಗಾದ ಶಂಕರ ಪ್ರಿಯ ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ ?”

ವೀರಶೈವರಲ್ಲಿ ಸತ್ತವರ ಸಮಾಧಿಯನ್ನು ಕಟ್ಟಿಸಿ, ಅದರ ಮೇಲೆ ಗುಡಿ ಗೋಪುರಗಳನ್ನು ಕಟ್ಟಿಸುವ ಸಂಪ್ರದಾಯವುಂಟು. ಸಿದ್ಧರಾಮೇಶ್ವರ

ತೋಂಟದ ಸಿದ್ಧಲಿಂಗ ಇವರ ಸಮಾಧಿ ಸ್ಥಳಗಳಲ್ಲಿ ಲಿಂಗ ಸ್ಥಾಪನೆ ಮಾಡಿ ಅವುಗಳನ್ನು ಪೂಜಿಸುವದುಂಟು. ಮಹಾ ವಿಭೂತಿಗಳಿಗೋಸ್ಕರ ಜನರು ಪೂಜ್ಯ ಭಾವಹನ್ನು ತಾಳಿ ಅವರಿಗೆ ಮನ್ನಣೆ ಕೊಡುವ ಒಂದು ವಿಧವೇ ಹೊರತು ಇದು ವೀರಶೈವರು ಮಾಡತಕ್ಕ ಲಿಂಗ ಪೂಜೆ ಎಂದು ತಿಳಿಯತಕ್ಕದ್ದಲ್ಲ. — ಸಂಪಾದಕ.

---

# ಸತ್ಯಮೇವ ಜಯತೆ

## ಶ್ರೀ ಬಂಥನಾಳ ಶಿವಯೋಗಿಗಳವರ ಉಪನ್ಯಾಸ

ಶ್ರೀ. ಎಸ್. ಎಮ್. ಹಳ್ಳಿ. ಇವರು ಸಂಗ್ರಹಿಸಿದ್ದು.

—೦—

ಸತ್ಯಸಂಧನಾದ, ನಿತ್ಯಾನಂದನಾದ, ಶರಣಸಾನಂದನಾದ ಭಗವಾನ್ ಬಸವೇಶ್ವರನು ಬಹು ಪವಾಡಗಳನ್ನು ದಿನ ದಿನಕ್ಕೂ ತಾಸು ತಾಸಿಗೂ ಮಾಡುತ್ತ ಹೊರಟನು. ಇಂತಹ ಶಕ್ತಿ ಆತನಲ್ಲಿ ಬರಬೇಕಾದರೆ ಸತ್ಯತೆಯು ಆತನ ಜೀವನ ಉಸಿರಾಗಿತ್ತು. ಅಂತೆಯೇ ಆತನಿಗೆ ಆದಿಯಿಂದ ಕೊನೆಯವರೆಗೆ ವಿಜಯ ಶ್ರೀಯು ವಿಜಯ ಮಾಲೆಯನ್ನು ನುಡಿಯಲ್ಲಿ ನಡೆಯಲ್ಲಿ ವಿಜಯಕ್ಕಾಗಿ ತೊಡಕಿಸಲು ಸಿದ್ಧವಾಗಿತ್ತು.

ಸತ್ಯಚರಗಣೆಳಿಗೆ ಸರ್ವಕಾಲಕ್ಕೂ ಈ ಫಲವು ಕಟ್ಟಿಟ್ಟದ್ದು. ಆದರೂ ಸತ್ಯಾಗ್ರಹಿಗಳು ವಿರಳ- ಅಂದಿನಿಂದ ಇಂದಿನವರೆಗೆ ಪ್ರಾಮುಖ್ಯವಾಗಿ ಭಾರತದಲ್ಲಿ ಏಕೆ ಜಗತ್ತಿನಲ್ಲಿಯಂದರೆ ಅತಿಶಯೋಕ್ತಿ ಯಾಗಲಿಕ್ಕಿಲ್ಲ. ಬುದ್ಧ, ಬಸವ, ಹಾಗೂ ಗಾಂಧೀಜಿ, ಈ ಮೂವರ ಹೆಸರೇ ಕೇಳಬರುತ್ತಿವೆ. ಎಂದು ಮಹಾ ಶಿವಯೋಗಿಗಳು ಸಾರಿ ಹಾಗೆಯೇ ಮುಂದುವರಿದು ಸತ್ಯದ ಮೇಲ್ಮೆಯನ್ನು ಬಹುವಿಧವಾಗಿ ಕೊಂಡಾಡಿದರು.

ಮಾನವ ಪ್ರಾಣಿಗೂ, ಉಳಿದ ಪ್ರಾಣಿಗಳಿಗೂ ಇದ್ದ ವ್ಯತ್ಯಾಸ ವೇದರೆ ನುಡಿಯೊಂದೇ ಒಂದು ಮಾತನಾಡುವದೊಂದು ಮಾನವನಿಗಿದ್ದರೆ ಸಾಮಾನ್ಯವಾಗಿ ಜಗದ ಎಲ್ಲ ಪ್ರಾಣಿಗಳಂತೆ ಮಾನವ ಪ್ರಾಣಿಯೊಂದಾಗುತ್ತಿತ್ತು. ಮಹೇಶನು ಕೊಟ್ಟ ಮಾತಿನ ವರದ ಉಪಯೋಗ ಮಾನವನು ಮಾಡಿಕೊಳ್ಳದಿದ್ದರೆ ಮೂರ್ಖನಾಗುವನಷ್ಟೇ ಅಲ್ಲ ಮಾತಿನ ದುರುಪಯೋಗದಿಂದ ತುಂಬಿಕೊಂಡ ಹೊಲಿಪೂರ್ತಿಯಾದಾಗ ಮಾನವನು ಮಹೇಶನ ಶಾಪದಿಂದ ಮೂಕನಾಗಬೇಕಾದೀತು?!| ಇನ್ನುಳಿದ ಪ್ರಾಣಿವರ್ಗಕ್ಕೆ ಪುನಃ ಸೇರಬೇಕಾದೀತು? ತತ್ಕಾರಣ ಮಾತಿದ್ದ ಪ್ರಾಣಿ ಮಹಾ ಸತ್ಯಸಂಧನಾಗಬೇಕು. ನುಡಿ ಸತ್ಯವನ್ನು, ನಡೆ ಸತ್ಯವನ್ನು, ಇದನ್ನು ಅಳವಡಿಸಬೇಕು. ಸತ್ಯವೇ ಸರ್ವ ತತ್ವಗಳ ತಳಹದಿ. ಸತ್ಯವೇಸರ್ವ ಧರ್ಮ ಕುಲಪಂಥಗಳ ಮೂಲ 'ಸತ್ಯನುಡಿವುದೇ ಸ್ವರ್ಗ ಮಿಥ್ಯ ನುಡಿವುದೇ ನರಕ" ಎಂದಿದ್ದಾನೆ ಬಸವ. ಮಾನವನು ನೈಜವಾದ ಸುಖ ಶಾಂತಿಗಳನ್ನು ಹೊಂದಬೇಕಾದರೆ ಜಪ, ತಪ, ಪೂಜೆ, ಪುನಸ್ಕಾರ ನಿತ್ಯ ನಿಯಮಾದಿಗಳೇನೂ ಬೇಡ. ಸತ್ಯವೊಂದೇ ನುಡಿದರೆ ಸಾಕು ಈ ಸತ್ಯದಿಂದ ನೈಜವಾದ ಸುಖ ಶಾಂತಿ ಲಭ್ಯ.

> ದಿಟವನುಡಿವುದು, ನುಡಿದಂತೆ ನಡಿವುದು
> ಹುಸಿಯ ನುಡಿದು, ತಪ್ಪುವ ಪ್ರಪಂಚಿಯನೊಲ್ಲ
> ಕೂಡಲ ಸಂಗಮ ದೇವಾ ||

ಸತ್ಯವನ್ನೇನುಡಿದು, ನುಡಿದಂತೆ ನಡೆವರಿರಬೇಕು. ಸುಳ್ಳನ್ನು ಆಡಿ ಇಡಿ ತಪ್ಪುವ ಪ್ರಪಂಚಿಯನೊಲ್ಲೆಂದು ನಿಷ್ಟುರವಾಗಿ ಕೋರಿದಾನೆ ಬಸವ. ಬಸವನು ಕೊಟ್ಟಮೇಲ್ಮೆ ಸತ್ಯಕ್ಕೆಷ್ಟಿದೆ ಎಂಬುದು ಸ್ಪಷ್ಟ ವಾಗುವದು.

ಸತ್ಯದ ಪ್ರಭಾವದಿಂದ ಧರ್ಮರಾಜನು ನಿಜಧರ್ಮನೆಂದು ಈ ಜಗದೊಳಗೆ ರಾರಾಜಿಸಿದರೂ ನರಕಲೋಕ ನಯನದಿಂದ ನೋಡಿದಾಗ ಸ್ವರ್ಗದನಾಕ ಸುಖವಾತಗೆ. ಸತ್ಯಸಂಧನಾದ ಧರ್ಮನಿಂದ ಕಪಟಿ ನಟ ಕೃಷ್ಣದೇವ ದ್ರೋಣಾಚಾರ್ಯನನ್ನು ಸೋಲಿಸಲುಕ್ಕಿಪರ್ಯಾಯದಿಂದ ಅಶ್ವತ್ಥಾ

ಮಾನ ಹತವಾಯಿತೆಂದು ಸುಳ್ಳುನುಡಿದುದರ ಪ್ರತಿಫಲ ತಕ್ಕ ಪ್ರಾಯಶ್ಚಿತ್ತ ಧರ್ಮನಿಗೆ ಅಂತ್ಯದಲ್ಲಿ ( ಪರ್ಯಾಯದಸುಳ್ಳು ಅಶ್ವತ್ಥಾಮೋಹತಃ ಕುಂಜರೋಹ ).

ಧರ್ಮನಿಂದ ಇದ್ದುವನ್ನೇ ( ಕೃತ್ರಿಮ ಆನೆಯುಹತ ನಿತ್ಯವಾಗಿತ್ತು ) ಆಡಿಸಿದರು ಕುಯುಕ್ತಿ ಗೊತ್ತಿದ್ದ ಧರ್ಮನು ಈ ವಾಕ್ಯೋಚ್ಚಾರ ಮಾಡಬಾರದಾಗಿತ್ತು. ಇಷ್ಟರಿಂದಲೇ ಸತ್ಯದ ಮೇರೆಗೆ ಧಕ್ಕೆ ತಗಲಿ ನರಕ ಲೋಕ ಕಾಣಬೇಕಾಯಿತು ಧರ್ಮ.

ಮಹಾತ್ಮಾಗಾಂಧಿಯವರು ಸತ್ಯತೆಗೇ ಯಾವಸ್ಥಾನ ಕೊಟ್ಟಿದ್ದರೆಂಬುವದನ್ನು ಅವರ ವಚನಗಳಿಂದ ಕಂಡುಕೊಳ್ಳ ಬಹುದಾಗಿದೆ.

( ಅ ) ಮಹಾತ್ಮರೆನಿಸಿಕೊಳ್ಳುವರು, ಧೀರ-ಶೂರರೆನಿಸಿಕೊಂಡಾತರು ನೂರಾರು ಜನರು ನಶಿಸಿ ಹೋಗಲಿ, ಆದರೆ ಸತ್ಯವು ಮಾತ್ರ ನಿರಂತರವಾಗಿರಲಿ, ನಶ್ವರವಾದ ನನ್ನಂಥ ತಪ್ಪುಗಳನ್ನು ನಿರ್ಣಯಿಸುವಾಗ ಸತ್ಯದ ಮೇರೆಗೆ, ಒಂದು ದಾರದಷ್ಟು ಲೋಪ ಕೊರತೆಯಾಗಬಾರದು !!

( ಬಿ ) ನನಗೆ ಸತ್ಯವೆಂದರೆ ಅಸಂಖ್ಯ ತತ್ವಗಳನ್ನೊಳಗೊಂಡ ಒಂದು ಸಾರ್ವ ಭೌಮತತ್ವ, ಈಸತ್ಯಕೇವಲ ಶಾಬ್ದಿಕಸತ್ಯವಲ್ಲ, ಸಂಪೂರ್ಣ ಸತ್ಯ, ನಿರಂತರತತ್ವ, ಸತ್ಯವೇ ತಂದೆ ಸತ್ಯವೇ ತಾಯಿ. ಸತ್ಯವೇ ಬಂಧು, ಸತ್ಯವೇ ಜ್ಯೋತಿ, ಸತ್ಯವೇ ಕೀರ್ತಿ, ಸತ್ಯವೇಜಾತಿ ಸತ್ಯವೇನೀತಿ. ಸತ್ಯವೇಕರ್ಮ, ಸತ್ಯವೇಧರ್ಮ, ಸತ್ಯವೇಮರ್ಮ, ಸತ್ಯವೇಶಕುತಿ, ಸತ್ಯವೇಭಕುತಿ, ಸತ್ಯವೇಮುಕುತಿ, ಸತ್ಯವೇದೇವ, ದೇವನೆ ಸತ್ಯ !!

ಬಾಪೂಜಿಯವರು ತಮ್ಮ ಜೀವನ ಸತ್ಯದಾ ಪ್ರಯೋಗಶಾಲೆಯನ್ನಾಗಿ ಮಾಡಿದರು ಸತ್ಯಾನ್ವೇಷಣೆಯೇ ಅವರ ಧ್ಯೇಯವಾತ್ತು. ಈ ಸತ್ಯತೆಯೇ ಅವರು ಕೀರ್ತಿವಂತ ಪುರುಷ ಪ್ರಭುವನ್ನಾಗಿ ಮಾಡಿತು

ಇಂಥ ಸತ್ಯವನ್ನು ಅವರ "ಸತ್ಯ ಹರಿಶ್ಚಂದ್ರ ನಾಟಕ" ವನ್ನು ನೋಡ
ಹೋಗಿ ಕೂತುಕೊಂಡರಂತೆ. ಸತ್ಯತೆಗಾಗಿ ಹರಿಶ್ಚಂದ್ರನು ಸ್ವರಾಜ್ಯ
ಸ್ವಾತಂತ್ರ್ಯ ಹಾಗೂ ಸತಿ ಸುತ ಹಿತರನ್ನು ಕಳೆದುಕೊಂಡನಲ್ಲದೆ
ಹೊಲೆಯಾಳಾಗಿ ದುಡಿದನು. ಹೆಂಡರು ಮಕ್ಕಳನ್ನು ಮಾರಿಕೊಂಡನು
ಇಂಥಹ ನಾಟಕ ದೃಶ್ಯವನ್ನು ನೋಡಿದ ಗಾಂಧೀಜಿ ಅಂದಿನ ದಿವಸವೇ
ಸತ್ಯಪಾಲನೆಗಾಗಿ ಪಣ ತೊಟ್ಟರು.

ಉದರನಿರ್ವಹ (ದಾರಿದ್ರ್ಯತನಕ್ಕಾಗಿ) ಹೆಗಾಗಿ ಕಸಬನ್ನು ಮಾಡಿ
ಹೆತ್ತ ಸತ್ಯಕಾಮನ ತಾಯಿ ಮಗನ ದೀಕ್ಷಾಸಂಸ್ಕಾರವಿಟ್ಟಳು ಸ್ವಗೋತ್ರಪ
ಕಾರ ದೀಕ್ಷಾಚಾರ್ಯರು ದೀಕ್ಷೆಯಲ್ಲಿ ತಂದೆಯ ಹೆಸರು ಕೇಳಿದಾಗ
ಸತ್ಯಕಾಮನು ಸತ್ಯತೆಗೆ ಮಹತ್ವವಿತ್ತು. "ತಾಯ್ಕಸಬಿನಿಂದ ಹೆತ್ತಾಳೆ
ನಗೆ ಯಾವ ತಂದೆಯ ಹೆಸರನ್ನು ಹೇಳಲಿ" ಎಂದು ಉಲಿಯನ್ನು ಕೇಳಿ
ಗುರುವರನು ಸತ್ಯ ನುಡಿದವನೆ ಬ್ರಾಹ್ಮಣನು ಎಂದು ಬಗೆದು ದೀಕ್ಷೆ
ಯಿತ್ತ ಸತ್ಯಕಾಮನಿಗೆ.

ಅದೇ ಸೂರ್ಯಪುತ್ರನಾದ ಕರ್ಣನು ಕ್ಷತ್ರಿಯವಂಶದಲ್ಲಿ ಜನಿಸಿದ್ದರೂ
ಶಸ್ತ್ರಾಸ್ತ್ರ ಅಧ್ಯಯನಕ್ಕಾಗಿ ಬ್ರಾಹ್ಮಣವಂಶಿಯೆಂದು ಹೇಳಿ ಅಭ್ಯಾಸ ಮಾ
ಡಿದ. ಕರ್ಣನ ನಿಜ ವಂಶ ಅರಿತಾಗ ಗುರು ಪರಶುರಾಮನು ಅಸತ್ಯ
ನುಡಿದುದಕ್ಕಾಗಿ ಪ್ರಸಂಗದಲ್ಲಿ ನಿನ್ನ ವಿದ್ಯೆ ನಷ್ಟವಾಗಲಿ ಎಂದು ಶಾಪ
ವನಿತ್ತ.

ಬುದ್ಧದೇವನೊಮ್ಮೆ ನೀರಡಿಸಿ ಮಾಯಾಂಗನೆಯ ಮನೆಗೆ ಹೋಗಿ
ನೀರು ಹಣಿಸಮ್ಮಾ? ಆಗ ಮಾಯಾಂಗನೆ ಪ್ರಭು ನಾನು ಹರಿಜನಳು
ನಿಮಗೆ ಕೊಡಲಿ ನೀರನ್ನು? ಆಗ ಬುದ್ಧನು ಸತ್ಯಸಂಗತಿ ಹೇಳಿದನೀನು
ಮಾಯಾಂಗನೆಯಲ್ಲಾ. ಸದ್ಬ್ರಾಹ್ಮಣ ಕುಲೀನ ಸ್ತ್ರೀಯು ನೀನು ನೀರು
ಕೊಡಮ್ಮಾ ಎಂದನು.

ಅಸತ್ಯ ನುಡಿದ ಆಪನ ಮೊಗವು, ಅಸತ್ಯ ನುಡಿದ ಬ್ರಹ್ಮ ಅಸತ್ಯ
ನುಡಿದ ಕೇತಕಿಯ ಪುಷ್ಪ, ಈ ಜಗದೊಳಗೆ ಅಪೂಜ್ಯವೆನಿಸಿಲ್ಲವೇ? ಅದೇ
ಕಾನೇ ಸತ್ಯವ ನುಡಿದ ಗೋವಿನ ಬಾಲ ಪೂಜ್ಯವೆನಿಸಿದೆ

ಈ ಲೋಕದಲ್ಲಿ-ಸತ್ಯಕಾಮ, ಬುದ್ಧ, ಕರ್ಣ, ಬ್ರಹ್ಮ, ಗೋವು, ಹಾಗೂ ಕೇತಕಿ ಪುಷ್ಪಗಳಿಗೊದಗಿದ ಪ್ರಸಂಗಗಳಿಂದ ಸತ್ಯದ ಪ್ರಭಾವವನ್ನು ಬೇರೆ ಸ್ಪಷ್ಟ ಪಡಿಸಬೇಕಿಲ್ಲ.

ಸತ್ಯದಿಂದಲೆ ಜಗದಾದಿ ।
ಸತ್ಯದಿಂದಲೇ ಜಗ ಜೀವನದ ಹಾದಿ ॥
ಸತ್ಯ, ಸತ್ಯಕ್ಕೂ ಅನಾದಿ ।
ಸತ್ಯಮೇವ ಜಯತೆ ಮಂತ್ರವಾದಿ ॥

—

## ಶರಣರ ಮಾರ್ಗ

( ಲೇಖಕರು— ಶ್ರೀ ಮಡಿವಾಳ ಸ್ವಾಮಿಗಳು ಗದಗ ತಾ|| ಧಾರವಾಡ )

ಜಗತ್ತಿನಲ್ಲಿ ಮಾನವನು ಶರಣರ ಕುಲದಲ್ಲಿ ಜನ್ಮಿಸಬೇಕಾದರೆ ಅನಂತ ಪುಣ್ಯಗಳ ಸಮೂಹದಿಂದ ಜನಿಸಬೇಕಾಗುತ್ತದೆ. ಅದೇ ಮಾನವನು ನೀಚ ಕುಲದಲ್ಲಿ ಜನ್ಮಿಸ ಬೇಕಾದರೆ ಅನಂತ ಪಾಪದ ಸಮೂಹದಿಂದ ಜನಿಸ ಬೇಕಾಗುತ್ತದೆ. ಇದೇ ಇವೆರಡರ ತಾರತಮ್ಯ ಮೇಲು ಪಙ್ತಿಯ ಮಾನವನಿಗೆ ಶರಣರ ಮಾರ್ಗವು, ಕೆಳತರಗಿಯವನಿಗೆ ಶರಣ ಮಾರ್ಗ ಇಲ್ಲದಿರುವದು ಇದೇ ಇವರಲ್ಲಿ ತಾರತಮ್ಯ ಭಾವ. ಕಾರಣ ಮಾನವನು ಜಗತ್ತಿನಲ್ಲಿ ಸುಖವನ್ನು ಇಚ್ಛಿಸುವನು ಮತ್ತು ಆ ಸುಖವು ಶಾಶ್ವತವಾಗಿ ಇರಬೇಕೆಂದು ಅಪೇಕ್ಷಿಸಡುವನು. ಇದಕ್ಕೆ ಮಾನವನಿಗೆ ಶರಣರ ಮಾರ್ಗವೇ ಸುಖದ ಹಾದಿಯು ಅಂತೆಯೇ ನಿಜಗುಣ ಶಿವ ಯೋಗಿಗಳು ಶರಣ ಜನರ ಸದು ಹೃದಯ ನಳಿನದೊಳು ಪರಿಶೋಭಿಸುತ್ತಿಹುದು ನಿನ್ನ ದಿವ್ಯ ಪಾದಾ" ಎಂದು ಕೈವಲ್ಯ ಪದ್ಧತಿ ( ಕಾರುಣ್ಯಸ್ಥಲದಲ್ಲಿ ) ಅಂದಿರುವರು.

ಇದರ ಮೇಲಿಂದ ದೇವನು ಶರಣರ ಹೃದಯದಲ್ಲಿ ವಾಸಿಸುವನು. ನಡೆನುಡಿ ಹೃದಯ ಪ್ರತಿಯೊಂದು ಅವಯವದಲ್ಲಿ ತುಂಬಿರುವನೆಂಬುದು ಸಿದ್ಧ. ಅಂತೆಯೇ ಜಗತ್ಕರ್ತನು ಜಗದ್ವ್ಯಾಪಕನು ರಕ್ಷಣ ಪಾಲಕನು ಎಂದು ಅವನಿಗೆ ಅಭಿದಾನ ವಿರುವವು. ಶರಣ ಮಾರ್ಗದಿಂದ ಯಾವ ಜೀವನು ಆಚರಿಸುವನೋ ನಡೆಯುವನೋ ಅವನಿಗೆ ಶಂಕರನು ಕಿಂಕರನಾಗುವನೆಂದು ವೇದ ವಾಕ್ಯಗಳು ಘೋಷಿಸುವವು. ಹೇಗೆಂದರೆ "ಆದೌಕರೋತಿಂತಃ ಶಂಕರಾ" ಎನ್ನುವ ಶ್ರುತಿ ಇರುವದು. ಅಂತೆಯೇ ಅಕ್ಕ ಮಹಾದೇವಿಯು ತನ್ನ ಸ್ವಾನುಭವದಿಂದ "ಹತ್ತರೊಳಗೆ ಹನ್ನೊಂದಾಗಿ ನೀರ ತಾವರೆಯಂತೆ ಹೊಂದಿಯೂ ಹೊಂದದಂತೆ ಇಹನು ಎನ್ನ ಚನ್ನಮಲ್ಲಿಕಾರ್ಜುನಾ" ಎಂಬ ವಿಶಾಲವಾದ ಭಾವನೆಯಿಂದ ಕೂಡಿ ತನ್ನ ಶರಣತ್ವ ಮಾರ್ಗದಲ್ಲಿ ಕೊನೆಯ ಮೆಟ್ಟಿಲನ್ನು ಹೊಂದಿರುವಳು.

ಈ ಕಾರಣ ಮಾನವನಲ್ಲಿ ಅಮೋಘವಾದ ವಿಕಾಸಮಾನವಾದ ಜ್ಞಾನವಿರುವದರಿಂದ ಮಾನವನು ಆ ತತ್ವಜ್ಞಾನ (ಶಿವಾನ, ಭವ) ದಲ್ಲಿ ತಲ್ಲೀನನಾದರೆ ಮನಸ್ಸು ಅಂತರಂಗದಲ್ಲಿ ಆನಂದಿಸುವದು. ಅವನ ಜೀವನವು ಶರಣರ ಮಾಲಿಕೆಗಳಲ್ಲಿ ಅಗ್ರ ಸ್ಥಾನವನ್ನು ಪಡೆಯುವದು. ಅಂತೆಯೇ ಜ್ಞಾನಿಗಳು "ನ ಹಿ ಸದೃಶ್ಯಜ್ಞಾನಾತ್" ಎಂಬ ವಾಕ್ಯವನ್ನು ಹೇಳಿರುವರು ಅಂದಮೇಲೆ ಮಾನವನಿಗೆ ಮುಖ್ಯವು ಜ್ಞಾನವೆಂದು ಹೇಳಲ್ಪಡುವದು. ಅದಕ್ಕೆ ಬಸವಣ್ಣನವರು "ಜ್ಞಾನದಬಲದಿಂದ ಅಜ್ಞಾನವ ಕೆಡುವದು ನೋಡಯ್ಯಾ" ಎಂದು ತಮ್ಮ ವಚನದಲ್ಲಿ ಅಂದಿರುವರು. ಶ್ರುತಿಯಲ್ಲಿಯೂ ಕೂಡಾ "ಜ್ಞಾನಾದೇವ ತು ಕೈವಲ್ಯಂ" ಎಂದು ಹೇಳುತ್ತದೆ. ಅಂದ ಮೇಲೆ ಜ್ಞಾನದಿಂದ ಮೋಕ್ಷವೆಂಬುದು ಸಿದ್ಧವಾಯಿತು. ನಾಗೂ ನಿಜಗುಣರು "ಅರಿವು ತಾನಾದೊಡೆ ಮುಕ್ತಿ" ಎಂದು ಹೇಳಿರುವರು ಅಂದ ಮೇಲೆ ಮಾನವನಿಗೆ ಅರಿವು ಪ್ರಾಮುಖ್ಯವೆಂದು ತಿಳಿಯಬೇಕು. ಆದರೆ ಮಾನವನಿಗೆ ಮರವೆಯು ಕವಿದು ನಿಜ ಮರೆಯುವದು.

ಆದರಿಂದ ಅಂತರಂಗದ ಬೆಳಕಿನಿಂದ ಪರಿಶುದ್ಧತೆಯನ್ನು ಹೊಂದಿ ವಿಕಾಸವಾಗಿ ಹೃದಯ ಭಾವನೆಯು ಅರಳಿ ಅವನ ಅಂತರಂಗದ ಜ್ಯೋತಿಯು ಹೊಳೆಯುವದು. ಇದನ್ನೇ ಯೋಗಿಗಳು ತಮ್ಮ ಸಹಸ್ರದಳಕಮಲದಲ್ಲಿ ಬ್ರಹ್ಮರಂಧ್ರಶಿಖಾ ಚಕ್ರದಲ್ಲಿ ಈ ಪರಿಯನ್ನು ಕಂಡುಕೊಂಡು ಸುಖವನ್ನು ಹೊಂದಿ ಆನಂದಿಸುವರು. ಇದನ್ನೇ ನಿಜಗುಣ ಶಿವಯೋಗಿಗಳು ಯೋಗಪ್ರತಿಪಾದನ ಸ್ಥಲದಲ್ಲಿ "ಬಯಲ ಬರಗೊಂಡಂತ ತೋಳ ಹೋಗಣ ಭಾವನೆಯ ಸಂಶಯವಿಲ್ಲದಂಬುಧಿಯೊಳು ಮುಳುಗಿದ ಘಟದಂತೆ ಸ್ವಯ ಮೆಸಿ। ಸುವ ಸುರಿ ಪೂರ್ಣಾಕರಿ ಗೋಡಚ್ಚಳಿಯದೆ। ನಿಚ್ಚಿಯವಾಗಲದೀಗಳೇ ನಿರ್ಮಲ ಸಮಾಧಿಯಾವಸ್ಥೆ॥" ಎಂದು ಹೇಳಿರುವರು.

ಕಾರಣ ಮಾನವನು ತನ್ನ ಜೀವನವನ್ನು ಜ್ಞಾನ ಮಾರ್ಗದಲ್ಲಿ ಸಾಗಿಸಿದ್ದಾದರೆ. ಅವನ "ಜೀವನ ಪ್ರಪಂಚವು ಪವಿತ್ರವಾಗುವದು. ಹಾಗು ಜ್ಞಾನದಿಂದ ಹಿಂದಿನ ಜನ್ಮದ ಪಾಪಗಳು ನಾಶವಾಗುವವು ಅದಕ್ಕೆ ಶ್ರುತಿಯಲ್ಲಿ ಜ್ಞಾನಾಗ್ನಿ ಕರ್ಮಾಣಿ ಭಸ್ಮಸಾತ್ ಕುರುತೆ" ಎಂದು ಹೇಳಿರುವರು. ಅಂದಮೇಲೆ ಜ್ಞಾನವೆಂಬ ಅಗ್ನಿಯಲ್ಲಿ ಪಾಪವೆಲ್ಲವು ನಾಶ ಹೊಂದುವದು ಕಾರಣ ಜ್ಞಾನವೇ ಮಾನವನ ಪ್ರಗತಿಯ ತಳಹದಿಯು ಕಾರಣವೆಂದು ಹೇಳಬೇಕು. ಪ್ರತಿ ಸಂಸಾರದಲ್ಲಿ ಹುಟ್ಟಿದ ಸ್ತ್ರೀ ಪುರುಷರಿಗೆ ಮಾರ್ಗದರ್ಶನವೂ ಈ ಸಂಸಾರದಿಂದ ಸದ್ಗತಿಯೂ ಈ ಸಂಸಾರದ ಅಲಿಪ್ತತೆಯೂ ಒದಗಬೇಕಾದರೆ ಇವರ ಜೀವನವು ಬದಲಾವಣೆಯಾಗಬೇಕಾದರೆ ಜ್ಞಾನವೇ ಕಾರಣವೆಂದು ಹೇಳಬೇಕು. ಕಾರಣ ಸ್ತ್ರೀ ಪುರುಷರು ಜ್ಞಾನವೆಂಬ ಜ್ಯೋತಿಯ ಬೆಳಕಿನಿಂದ ತಮ್ಮ ಜೀವನದ ಮಾರ್ಗವನ್ನೈದಿದರೆ ಸುಖವನ್ನು ಹೊಂದುವರು. ಅಂತೆಯೇ ಬಸವಣ್ಣ, ಅಕ್ಕಮಹಾದೇವಿ, ನೀಲಾಂಬಿಕೆ, ಪ್ರಭುದೇವ ಇವರೆಲ್ಲರು ತಮ್ಮ ಜೀವನವನ್ನು ಜ್ಞಾನದ ತಿಳುವಿನಲ್ಲಿ ನುಡಿದು ನಡೆದು ಅಧ್ಯಾತ್ಮ ತತ್ವಜ್ಞಾನ ಅಂಗ ಲಿಂಗ ಸಮರಸ ಜೀವ ಪರಮಾತ್ಮರ ಐಕ್ಯಜ್ಞಾನವನ್ನು, ಅಂದರೆ ತಮ್ಮ ನಿಜವಾದ ಅನುಭವವನ್ನು ಅಳವಡಿಸಿಕೊಂಡು ವಚನ ರೂಪದಲ್ಲಿ ಮಾನವರ ಮುಂದಿನ ಪೀಳಿಗೆಯ ಸುಖಕ್ಕೋಸ್ಕರ ತತ್ವಜ್ಞಾನ ಪ್ರಸಾರವನ್ನು ಸೂರೆ ಮಾಡಿದರು.

ಅಲ್ಲದೆ ಆಗಿನ ಕಾಲದ ಶರಣ ಸತಿ ಪತಿಗಳು ತಮ್ಮ ಸಂಸಾರವನ್ನು ತತ್ವಜ್ಞಾನ ಮಾರ್ಗದಲ್ಲಿ ನಡೆಸುವರಾಗಿ ಸುಖವನ್ನು ಹೊಂದಿದರು ಅನ್ನುವದು ನಮಗೆ ಹಿಂದಿನ ಶರಣ ಮಾರ್ಗದಿಂದ ಕಂಡುಬರುತ್ತದೆ. ಉದಾಹರಣ :— "ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿ ಪತಿಗಳೊಂದಾಗದ ಭಕ್ತಿ ಅಮೃತದೊಳು ವಿಷ ಬೆರೆದಂತೆ ಕಾಣಾ ರಾಮನಾಥಾ" ಎಂಬುವ ವಚನವು ಇಲ್ಲಿ ಸತಿ ಪತಿಗಳ ಒಂದಾಗುವ ಭಕ್ತಿಯನ್ನು ಎಷ್ಟು ಗಂಭೀರವಾಗಿ ಹೇಳಿರುವರು ನೋಡಿರಿ. ಇದು ಅಲ್ಲದೆ ನಿಜಗುಣ ಶಿವಯೋಗಿಗಳು "ಸತಿ ಪತಿಗಳವರ ಸಮರತಿ ಸುಖದ ಬಾಳುವಿಗೆ ಪ್ರತಿಯುಂಟೆ ಲೋಕದೊಳ; ನೋಡೆ ಲಲಿತಾಂಗಿ" ಎಂದು ಯೋಗ ಪಾದದಲ್ಲಿ ಹೇಳಿರುವರು. ಅಂದ ಮೇಲೆ ಇದರಂತೆ ಮೊದಲಿನ ಕಾಲದ ಶರಣರು ತಮ್ಮ ಜೀವನವನ್ನು ತತ್ವಜ್ಞಾನದಲ್ಲಿ ನಡೆಸು ಆಳವಡಿಸಿ ಅನುಭವಿಸಿ ಶಾಶ್ವತವಾದ ಮುಕ್ತಿಯನ್ನು ಹೊಂದಿದರು. ಅಂತೆಯೇ ಷಪ್ಪಣ್ಣನವರು ಜ್ಞಾನಪ್ರತಿಪಾದನಸ್ಥಲದಲ್ಲಿ "ದೊರೆಯುವೆಂದಿಗು ನಿಜ ಸುಖವು ಪರತತ್ವದನುಭವ ಮಾಡಿಸದರೆ" ಎಂಬುದನ್ನು ಹೇಳಿರುವರು. ಅಂದಮೇಲೆ ನಿಜಸುಖವು ಮಾನವನಿಗೆ ದೊರೆಯಬೇಕಾದರೆ ತತ್ವಜ್ಞಾನವೇ ಮುಖ್ಯವೆಂದು ಮೊದಲಿನ ಶರಣರು ತಮ್ಮ ಅನೇಕ ಅನುಭವ ರೂಪದಿಂದ ಹೇಳಿರುವರು. ಅದರಂತೆ ನಾವು ಇಂದು ಮಾನವ ಪ್ರಾಣಿಗಳು ಅವರ ತತ್ವವನ್ನು ಆಚರಿಸಿ ಅನುಭವಕ್ಕೆ ತಂದರೆ ನಾವು ಸುಖವನ್ನು ಹೊಂದುವೆವು.

—— 

# ಮಾತೇಕೆ? ಕೃತಿಯಿರಲಿ.

( ಶ್ರೀ ಆನಂದಕವಿಗಳು ಕುರುಗುಂದ. )

(೧)

ಮಾತೇಕೆ? ಕೃತಿಯಿರಲಿ.
ಕೃತಿಯಲ್ಲಿ ಸೊಬಗಿರಲಿ.
ಹೂವಾಗಿ ಶೋಭಿಸುವ ತರುಲತೆಗಳಂತೆ.

(೨)

ಸಟೆಯೇಕೆ? ದಿಟವಿರಲಿ.
ದಿಟದಲ್ಲಿ ಮನವಿರಲಿ
ಶಿಸುವು ತಾ ತಾಯಿಯನು ಹಂಬಲಿಸುವಂತೆ.

(೩)

ಅಳುವೇಕೆ? ನಗೆಯಿರಲಿ.
ಶಾಂತತೆಯ ಸೊಬಗಿರಲಿ.
ಅರುಣನುದಯದಿ ಮೆರೆವ ರವಿಕಿರಣನಂತೆ.

(೪)

ಎರಡೇಕೆ? ಒಂದಿರಲಿ
ಹೊಂದಿಕೆಯ ಹೊಲಬಿರಲಿ
ಹಣ್ಣಿನಲಿ ಬೆರತಿರುವ ಶೀ ರಸದಂತೆ.

ಷಟ್ ಅತನು ಸೂಕ್ಷ್ಮಾತ್ಮನೆ ಕರತಳ ಕರಪೃಷ್ಠಾಭ್ಯಾಂ ಸಃ ಎಂದು ಕರ ನ್ಯಾಸಮಂ ಮೇಲು ಕ್ರಮದಿಂದೆ ಹೃದಯಾದಿ ಕರಾಂತ್ಯವಾದ ಷಡಂಗ ಗಳಲ್ಲಿ ಆಯಾಯ ಪಲ್ಲವಂಗೂಡಿ ಅಂಗನ್ಯಾಸಮಂ ಗೆಯ್ವುದು ಹಂ ಸಃ ಸೂರ್ಯಾತ್ಮನೇ ಹೃದಯಾಯ ನಮಃ ಹಂ ಸೀಂ ಸೋಮಾ ತ್ಮನೇ ಶಿರಸಿ ಸ್ವಾಹಾ ಹಂ ಸೂಂ ನಿರಂಜನಾತ್ಮನೆ ಶಿಖಾಯವೌ ಷಟ್ ಹಂ ಸೈಂ ನಿರಾಭಾಸಾತ್ಮನೇ ಕವಚಾಯ ಹ್ರೂಂ ಹಂ ಸಾ ಅವ್ಯಕ್ತಾ ತ್ಮನೇ ನೇತ್ರಯವೌಷಟ್ ಹಂ ಸಃ ಅತನು ಸೂಕ್ಷ್ಮಾತ್ಮನೆ ಅಸ್ತ್ರಾಯ ಫಟ್ ಇತಿ ಅಂಗನ್ಯಾಸಃ

ಬಳಿಕ ಹೃತ್ಕಮಲ ಕರ್ಣಿಕಾ ಮಧ್ಯದಲ್ಲಿ ಶ್ವೇತವರ್ಣದಿಂ ಪರಶು ಮೃಗವರದಾಭಯಂಗಳುಳ್ಳ ಕರ ಚತುಷ್ಟಯದಿಂದೆಸೆವ ಸರ್ವ ಲಕ್ಷಣ ಸಂಪನ್ನವಾದುಮಾಪತಿಧ್ಯಾನಯುಕ್ತನಾಗಿ ಶ್ರೀ ಗುರೂಪದೇಶ ದಿಂದೆ ಅರುಣ ಅರುಣೋದಯದಲ್ಲಿ ಜಪಂಗೆಯ್ದುದಾ ಮಂತ್ರವೆ ಸೂರ್ಯೋ ದಯಾದಿ ಸೂರ್ಯೋದಯಾಂತವಾದ ದಿನ ಒಂದಕ್ಕೆ ೨೧೬೦೦ ಜಪ ವಹುದದರೊಳಗೆ ಆಧಾರಾದಿ ಬ್ರಹ್ಮರಂಧ್ರಾಂತ್ಯವಾದ ಸಪ್ತ ಚಕ್ರ ಕಮಲಂಗಳಲ್ಲಿ ಕ್ರಮದಿವಿಡಿದಿರ್ದ ಆಚಾರಲಿಂಗಕ್ಕೆ ಅರುನೂರು, ಗುರು ಲಿಂಗಕ್ಕಾರು ಸಾವಿರ, ಶಿವಲಿಂಗಕ್ಕಾರು ಸಾವಿರ, ಜಂಗಮ ಲಿಂಗಕ್ಕಾರು ಸಾವಿರ, ಪ್ರಸಾದಲಿಂಗಕ್ಕೆ ಸಾವಿರ ಮಹಾಲಿಂಗಕ್ಕೆ ಸಾವಿರ, ನಿಷ್ಕಲಪರ ಶಿವಲಿಂಗಕ್ಕೆ ಸಾವಿರ, ಅಜಪ ಗಾಯಿತ್ರಿ ಮಂತ್ರ ಜಪಮಂ ನಿವೇದ ಯಾಮಿ ಎಂದು ಸಂಕಲ್ಪಿಸುವುದಿಂತು ಜಪಂಗೈಯ್ದಾತಂಗೆ ಸಮಸ್ತ ಪಾತಕಂಗಳ ಕೆಡಿಸಿ ಆಯುರಾರೋಗ್ಯ ಭೋಗಂಗಳನೀವುದೇ ಸತ್ಯ ಮಿಂ ಇತಿ ಅಜಪ ಗಾಯಿತ್ರಿ ಮಂತ್ರ ಸಮಾಪ್ತ.

---

## ಶರೀರಕ್ಕೆ ಮಂತ್ರಗಳ ಸಂಬಂಧ

೧) ಎನ್ನ ವದನಕ್ಕೆ ಓಂಕಾರವಾದಾತ ಬಸವಣ್ಣ. ಎನ್ನ ಬಲಭುಜಕ್ಕೆ ನಕಾರವಾದಾತ ಬಸವಣ್ಣ. ಎನ್ನ ಎಡಭುಜಕ್ಕೆ ಮಕಾ ರವಾದಾತ ಬಸವಣ್ಣ. ಎನ್ನ ಒಡಲಿಂಗೆ ಶಿಕಾರ ವಾದಾತ ಬಸವಣ್ಣ. ಎನ್ನ ಬಲದ ಪಾದಕ್ಕೆ ವಕಾರವಾದಾತ ಬಸವಣ್ಣ. ಎನ್ನ ಎಡದ ಪಾದಕ್ಕೆ

ಯಕಾರವಾದಾತ ಬಸವಣ್ಣ. ಎನ್ನ ಅಪಾನ ಮಸ್ತಕ ಪರಿಯಂತ ಮಂತ್ರ ಸ್ವರೂಪ ಸಂಬಂಧವಾದಾತ ಬಸವಣ್ಣ. ಎನ್ನ ನಾದಕ್ಕೆ ಅಕಾರವಾದಾತ ಬಸವಣ್ಣ. ಎನ್ನ ಬಿಂದುವಿಗೆ ಉಕಾರವಾದಾತ ಬಸವಣ್ಣ. ಎನ್ನ ಕಳೆಗೆ ಮಕಾರವಾದಾತ ಬಸವಣ್ಣ. ಎನ್ನ ರುಧಿರಕ್ಕೆ ನಕಾರವಾದಾತ ಬಸವಣ್ಣ. ಎನ್ನ ಮಾಂಸಕ್ಕೆ ಮಕಾರವಾದಾತ ಬಸವಣ್ಣ. ಎನ್ನ ಮೇದಸ್ಸುವಿಗೆ ಶಿಕಾರವಾದಾತ ಬಸವಣ್ಣ. ಎನ್ನ ಅಸ್ತಿಗೆ ವಕಾರವಾದಾತ ಬಸವಣ್ಣ. ಎನ್ನ ಮಜ್ಜೆಗೆ ಯಕಾರವಾದಾತ ಬಸವಣ್ಣ. ಎನ್ನ ಸರ್ವಾಂಗಕ್ಕೆ ಓಂಕಾರವಾದಾತ ಬಸವಣ್ಣ. ಇಂತು ಬಸವಣ್ಣನೇ ಪರಿಪೂರ್ಣವಾಗಿ ಬಸವಣ್ಣನೇ ಪ್ರಾಣವಾಗಿ ಬಸವಣ್ಣನೇ ಅಂಗವಾಗಿ ಬಸವಣ್ಣನೇ ಲಿಂಗವಾದ ಕಾರಣ ನೀನು ಬಸವಣ್ಣ ಬಸವಣ್ಣ ಬಸವಣ್ಣ ಎಂದು ಬಯಲಾದೆನು ಕಾಣಾ ಕಲಿದೇವರ ದೇವಾ.

( ೨ ) ಓಂಕಾರ ಲಲಾಟದಲ್ಲಿ ನಕಾರ ಬಲಭುಜದಲ್ಲಿ ಮಕಾರ ಎಡಭುಜದಲ್ಲಿ ಶಿಕಾರ ನಾಭಿಯಲ್ಲಿ ವಕಾರ ಬಲ ಮೊಳಕಾಲದಲ್ಲಿ ಯಕಾರ, ಎಡ ಮೊಳಕಾಲಲ್ಲಿ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಇವು ಆರು ಪ್ರಣವು ಬಲದಬಗಲಲ್ಲಿ ನಮಃಶಿವಾಯ ಎಡದ ಬಗಲಲ್ಲಿ ಬಸ ವ ಕೊರಳಲ್ಲಿ ಮುಂದೆ ಸೆಯಲ್ಲಿ ಅ ಉ ಮ ಅಕ್ಷರ, ಕಂಠದಲ್ಲಿ ಯಕಾರ ತ್ವಕ್ಕಿನಲ್ಲಿ ಎರಡು ವಕಾರ ಎರಡು ಕರ್ಣಗಳು ಎರಡು ಶಿಕಾರ ನೇತ್ರಗಳಲ್ಲಿ ಮಕಾರ ಜಿಹ್ವೆಯಲ್ಲಿ ನಾಸಿಕದಲ್ಲಿ ನಕಾರ, ಬ್ರಹ್ಮರಂಧ್ರದಲ್ಲಿ ಹಕಾರ ಗುದಸ್ಥಾನದಲ್ಲಿ ಲಕಾರ ಇಂತಿಷ್ಟು ಪ್ರಣಮಂಗಳನ್ನು ಸಂಬಂಧವ ಮಾಡಿಕೊಳ್ಳುವದು.

( ೩ ) ಮಂತ್ರವಿಗ್ರಹ ಮೂರ್ತಿಯ ಲಲಾಟದಲ್ಲಿ ಓಂಕಾರ, ತ್ವಕ್ಕಿನಲ್ಲಿ ಯಕಾರ, ಶ್ರುತಿ ಪುಟದಲ್ಲಿ ವಕಾರ, ನೇತ್ರಯುಗ್ಮದಲ್ಲಿ ಶಿಕಾರ ಜಿಹ್ವೆಯಲ್ಲಿ ಮಕಾರ, ನಾಸಾಪುಟದಲ್ಲಿ ನಕಾರ, ಬಳಿಕ ಈ ಷಡಕ್ಷರಿಯೇ ಮುಖ ಭುಜಯುಗ್ಮದೇಹ ಮಧ್ಯ ಪಾದದ್ವಯ ಷಡಾಧಾರಂಗಳಲ್ಲಿ ಸಂಬಂಧವಾಗಿರ್ಪ ಕಾರಣ ಹಸ್ತಪಾದ ಅಂಗುಲಿಗಳಲ್ಲಿ ಪಂಚಾಕ್ಷರಂಗಳು ನ್ಯಾಸವಾಗಿರ್ಪವು.

( ೪ ) ಮಸ್ತಕ ಮುಖ ಹೃದಯ ಗುಹ್ಯ ಪಾದಂಗಳೆಂಬ ಸ್ಥಾನಂಗಳೊಳ್ ಕ್ರಮದಿಂ ಯಕಾರಾದಿ ನಕಾರಾಂತಮಾದ ಪ್ರತ್ಯೇಕ ಬಿಂದು ಸಮೇತಮಪ್ಪ ಮಂತ್ರಾಕ್ಷರಂಗಳು ಸಂಬಂಧವಾಗಿರ್ಪವು.

(೫) ಶರಣಸ್ಥಲ ನೋಡುವಡೆ ಬಹು ಸುಲಭ ನೋಡಯ್ಯ. ಶರಣನು ತಿಳಿದು ತಿಳಿದು ಆಚರಿಸನು, ಮರೆದು ಮರೆದು ಆಚರಿಸುವ, ಜ್ಞಾನದಿಂದ, ಭೇದವಿಲ್ಲದೆ. ದೇಹದಿಂದ ಭೇದವಿಲ್ಲ ನೋಡಯ್ಯ. ಶರಣ ತನ್ನ ದೇಹವೇ ಹಕಾರ ಪ್ರಣವವ ಮಾಡಿಟ್ಟ. ನರನು ತನ್ನ ದೇಹವೇ ದೇಹವೆಂದು ಜಡವೆಂದು ಪ್ರಳಯಕ್ಕೊಳಗು ಮಾಡಿಟ್ಟ. ಶರಣನ ದೇಹವೆಲ್ಲ ಪಂಚಾಕ್ಷರ ಮಯ ನೋಡಾ. ನಕಾರವೇ ಅಸ್ಥಿ, ಮಕಾರವೇ ನಾಡಿ, ಯಕಾರವೇ ರೋಮ, ಮಕಾರವೇ ಮಾಂಸ, ಶಿಕಾರವೇ ತ್ವಕ್ಕು, ಮಕಾರವೇ ರುಧಿರ, ಯಕಾರವೇ ಶ್ಲೇಷ್ಮ, ಶಿಕಾರವೇ ಶುಕ್ಲ, ನಕಾರವೇ ರಸ, ನಕಾರವೇ ಪಿತ್ತ, ಶಿಕಾರವೇ ನಿದ್ರೆ, ನಕಾರವೇ ಕ್ಷುಧೆ, ವಕಾರವೇ ಆಲಸ್ಯ, ಮಕಾರವೇ ತೃಷ್ಣೆ, ಯಕಾರವೇ ಸಂಗ, ಯ ಶಿ ನ ಮ ಎಂಬಿವು ಮೋಹ ಭಯ ರಾಗ ಲಜ್ಜೆ ದ್ವೇಷಕ್ಕೆ ಸೇರಿಸಿದ ನೋಡಾ. ಕ್ಲಂ ಕ್ಲಿಂ ಎಂಬುದೆಚ್ಚರಿಣ ವೃದುವಿಗೆ ಇಟ್ಟ ನೋಡಾ ಕ್ಲಂ ಕ್ಲಿಂ ಎಂಬುದೂಷ್ಣ ಚಲನೆಗೆ ಸೇರಿಸಿದ ನೋಡಾ. ಶಿ ಯ ಮ ವ ನ ಎಂಬುದೇ ಸ್ಪರ್ಶ ಗಂಧ ರೂಪು ಶಬ್ದ ರಸಕ್ಕೆ ಸೇರಿಸಿದ ನೋಡಾ. ಶಿ ಯ ಮ ಎಂಬುದೇ ಪಾದವಾ ಗುಹ್ಯ ಪಾಣಿ ಘಾಯುವಿಗೆ ಸಂಬಂಧಿಸಿದ ನೋಡಾ. ಯ ಮ ವ ನ ಶಿ ಎಂಬುದೇ ಶ್ರೋತ್ರ ಜಿಹ್ವೆ ತ್ವಕ್ಕು ನಾಸಿಕ ನೇತ್ರಕ್ಕೆ ಸಂಬಂಧಿಸಿದ ನೋಡಾ ನ ಶಿ ಯ ಮ ಸ ಎಂಬುದೇ ಪ್ರಾಣೋದಾನ ಸಮಾನಾಪಾನ ವ್ಯಾನಕ್ಕೆ ಸಂಬಂಧಿಸಿದ ನೋಡಾ ಮ ಯ ನ ಶಿ ವ ಯ ಬುದ್ಧಿ ಮನ ಚಿದಹಂಕಾರ ಶ್ವಾಸಕ್ಕೆ ಸಂಬಂಧಿಸಿದ ನೋಡಾ. ಈ ರೀತಿಯಿಂದರಿದು ಶಿವ ತತ್ವ ತಾನಾಗಿ ನಿಂದ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

---

## ದೇಹಕ್ಕೆ ಪ್ರಣವು ಸಂಬಂಧ

(೧) ಸಮಾಧಿ ಸಮಾಧಿ ಎಂಬರಯ್ಯ, ಸಮಾಧಿಯ ಬಗೆಯ ಪೇಳ್ವೆ. ಅದೆಂತೆಂದೊಡೆ,

### ಪಂಚಭೂತಗಳು.

ಪಂಚಭೂತ ಮಿಶ್ರವಾದ ದೇಹವೆಂಬುದೇ ಸಮಾಧಿ. ಅಂತಪ್ಪ ದೇಹದ ಪೃಥ್ವೀ ತತ್ವದಲ್ಲಿ ನಕಾರ ಪ್ರಣವು ಸ್ವಾಯತ. ಅಪ್ಪು ತತ್ವದಲ್ಲಿ ಮಕಾರ ಪ್ರಣವು ಸ್ವಾಯತ. ತೇಜ ತತ್ವದಲ್ಲಿ ಶಿಕಾರಪ್ರಣವು ಸ್ವಾಯತ, ವಾಯು ತತ್ವದಲ್ಲಿ ವಕಾರ ಪ್ರಣವು ಸ್ವಾಯತ ಆಕಾಶ ತತ್ವದಲ್ಲಿ ಯಕಾರ ಪ್ರಣವು ಸ್ವಾಯತ ಆತ್ಮ ತತ್ವಲ್ಲಿ ಓಂಕಾರ ಪ್ರಣವು ಸ್ವಾಯತ.

### ಅವಯುವಗಳು

ಮತ್ತಂ ಬಲಪಾದದಲ್ಲಿ ನಕಾರ, ಎಡಪಾದದಲ್ಲಿ ಮಕಾರ, ಮಧ್ಯ ನಾಭಿಸ್ಥಾನದಲ್ಲಿ ಶಿಕಾರ, ಬಲಹಸ್ತದಲ್ಲಿ ವಕಾರ, ಎಡಹಸ್ತದಲ್ಲಿ ಯಕಾರ, ಮಸ್ತಕದಲ್ಲಿ ಓಂಕಾರ, ಇಂತೀ ಸ್ಥಾನಂಗಳಲ್ಲಿ ಪ್ರಣವು ಸಂಬಂಧವಾದುದೇ ಸಮಾಧಿ.

### ಶರೀರಗಳು

ಮತ್ತಂ ಸ್ಥೂಲ ತನುವಿನಲ್ಲಿ ಬಕಾರ ಪ್ರಣವು ಸ್ವಾಯತ, ಸೂಕ್ಷ್ಮ ತನುವಿನಲ್ಲಿ ಸಕಾರ ಪ್ರಣವು ಸ್ವಾಯತ, ಕಾರಣ ತನುವಿನಲ್ಲಿ ವಕಾರ ಪ್ರಣವು ಸ್ವಾಯತ.

### ಜೀವತ್ರಯುಗಳು

ಮತ್ತಂ ವಿಶ್ವದಲ್ಲಿ ಅಕಾರ ಪ್ರಣವು ಸಂಬಂಧ, ತೈಜಸದಲ್ಲಿ ಉಕಾರ ಪ್ರಣವು ಸಂಬಂಧ, ಪ್ರಾಜ್ಞದಲ್ಲಿ ಮಕಾರ ಪ್ರಣವು ಸ್ವಾಯತ, ಇಂತೀ ಸ್ಥಾನಂಗಳಲ್ಲಿ ಪ್ರಣವು ಸಂಬಂಧವಾದುದೇ ಸಮಾಧಿ.

## ಚಕ್ರಗಳು

ಮತಂ ಆಧಾರದಲ್ಲಿ ನಕಾರ, ಸ್ವಾಧಿಷ್ಠಾನದಲ್ಲಿ ಮಕಾರ, ಮಣಿಪೂರಕದಲ್ಲಿ ಶಿಕಾರ, ಅನಾಹತದಲ್ಲಿ ವಕಾರ ವಿಶುದ್ಧಿಯಲ್ಲಿ ಯಕಾರ ಆಜ್ಞೆಯಲ್ಲಿ ಓಂಕಾರ, ಬ್ರಹ್ಮರಂಧ್ರದಲ್ಲಿ ಓಂಕಾರ ಅಕಾರ ಬಕಾರ, ಶಿಖಿಯಲ್ಲಿ ಕ್ಷಕಾರ ಉಕಾರ ಸಕಾರ, ಪಶ್ಚಿಮದಲ್ಲಿ ಹಕಾರ ಮಕಾರ ವಕಾರ ಇಂತೀ ಸ್ಥಾನಂಗಳಲ್ಲಿ ಪ್ರಣವು ಸಂಬಂಧವಾದುದೇ ಸಮಾಧಿ.

## ಶರೀರದ ಭಾಗಗಳು

ಮತ್ತಂ ಬಲಭಾಗದಲ್ಲಿ ಓಂಕಾರ, ಎಡಭಾಗದಲ್ಲಿ ಉಕಾರ ಮುಂಭಾಗದಲ್ಲಿ ಅಕಾರ, ಹಿಂಬಾಗದಲ್ಲಿ ಮಕಾರ, ಊರ್ಧ್ವ ಭಾಗದಲ್ಲಿ ಹಕಾರ-

## ಹಸ್ತಗಳು

ಮತಂ ಬಲಹಸ್ತದ ಮಧ್ಯದಲ್ಲಿ ಓಂಕಾರ ಹೆಬ್ಬೆರಳಿನಲ್ಲಿ ಯಕಾರ ಉಳಿದ ನಾಲ್ಕು ಬೆರಳಿನಲ್ಲಿ ನಾಲ್ಕು ಪ್ರಣಮಂಗಳು. ಆ ಹಸ್ತದ ಮೇಲು ಭಾಗದಲ್ಲಿ ಅಕಾರ, ಮುಂಗೈಯ್ಯಲ್ಲಿ ಬಕಾರ, ಮೊಳಕೈಯ್ಯಲ್ಲಿ ಉಕಾರ, ರಟ್ಟೆಯಲ್ಲಿ ಸಕಾರ, ಭುಜದಲ್ಲಿ ಮಕಾರ ಹೆಗಲಲ್ಲಿ ವಕಾರ ಇಂತೀಪರಿಯಲ್ಲಿ ಉಭಯ ಹಸ್ತ ತೋಳಿನಲ್ಲಿ ಹಿಂದೆ ಹೇಳಿದ ಪಂಚ ಸ್ಥಾನಂಗಳಲ್ಲಿ ಪ್ರಣಮ ಸಂಬಂಧವಾದುದೇ ಸಮಾಧಿ.

## ಪಾದಂಗಳು

ಮತ್ತಂ ಈ ಉಭಯ ತಳ ಪಾದದಲ್ಲಿ ಓಂಕಾರವು- ಉಭಯ ಪಾದಾಂಗುಷ್ಠದಲ್ಲಿ ಯಕಾರ, ಉಳಿದ ಉಭಯ ನಾಲ್ಕು ಬೆರಳಿನಲ್ಲಿ ನಾಲ್ಕು ಪ್ರಣಮ, ಉಭಯ ಪಾದದ ಮೇಲು ಭಾಗದಲ್ಲಿ ಅಕಾರ, ಈ ಉಭಯ ಪಾದದ ಬಾಹ್ಯ ಹರಡಿನಲ್ಲಿ ಉಕಾರ, ಉಭಯ ಪಾದದಂತರ ಹರಡಿನಲ್ಲಿ ಬಕಾರ, ಉಭಯ ಪಾದದ ಹಿಮ್ಮಡದಲ್ಲಿ ಮಕಾರ, ಉಭಯ

ಕಣಕಾಲದಲ್ಲಿ ನಕಾರ, ಮೊಳಕಾಲಲ್ಲಿ ಹಕಾರ, ಉಭಯ ಕಿರಿವ್ಕೊ
ಯಲ್ಲಿ ಅಕಾರ, ಹಿಂದೊಡೆಯಲ್ಲಿ ಉಕಾರ, ಉಭಯಾಂಗದಲ್ಲಿ ಮಕಾರ
ಇಂತೀ ಸ್ಥಾನಂಗಳಲ್ಲಿ ಪ್ರಣವ ಸಂಬಂಧವಾಮುದೇ ಸಮಾಧಿ.

ಮತ್ತಂ ಉಭಯ ಬರಕಿಯಲ್ಲಿ ಓಂ ನಮಶ್ಶಿವಾಯ ಎಂಬ ಮೂಲ
ಷಡಕ್ಷರ, ಉಭಯ ಮೊಲೆಯಲ್ಲಿ ಓಂಕಾರ, ಉಭಯ ಬಗಲಲ್ಲಿ ಬಕಾರ,
ಕಕ್ಷೆಯಲ್ಲಿ ಅಕಾರ, ಹೃದಯದಲ್ಲಿ ಉಕಾರ, ಕಂಠದಲ್ಲಿ ಮಕಾರ, ಹೆಕ್ಕ
ನಲ್ಲಿ ಪಕಾರ, ಹೆಡಕಿನ ಎಡಬಲದಲ್ಲಿ ವಕಾರ, ಉಭಯ ಕರ್ಣದ ಮಧ್ಯ
ದಲ್ಲಿ ಓಂಕಾರ, ಹಾಲಿಯಲ್ಲಿ ಯಕಾರ, ಕಿರಿಹಾಲಿಯಲ್ಲಿ ಪಕಾರ, ಕರ್ಣ
ಊರ್ಧ್ವಭಾಗ ನಯನದಲ್ಲಿ ಅಕಾರ ಬಕಾರ, ಎಡಭಾಗದ ನಯನದಲ್ಲಿ
ಉಕಾರ ಸಕಾರ, ಉಭಯ ನಯನದ ಮಧ್ಯದಲ್ಲಿ ಮಕಾರ ನಕಾರ,
ಉಭಯ ಗಲ್ಲದಲ್ಲಿ ಓಂಕಾರ, ನಾಸಿಕದ ತುದಿಯಲ್ಲಿ ಮಕಾರ, ಬಂ
ಭಾಗದ ಹೊಟ್ಟೆಯಲ್ಲಿ ಉಕಾರ, ಮೇಲುಭಾಗದ ತುದಿಯಲ್ಲಿ ಬಕಾರ
ಕೆಳಭಾಗದ ತುದಿಯಲ್ಲಿ ಸಕಾರ. ಉಭಯ ಮಧ್ಯದಲ್ಲಿ ನಕಾರ,
ನಾಲಿಗೆಯಲ್ಲಿ ಓಂ ನಮಃ ಶಿವಾಯ ಎಂಬ ಮೂಲ ಷಡಕ್ಷರ, ಮೂಗಿನ
ಪುಟ್ಟಗಳೇ ಹಂ ಕ್ಷಂ ಎಂಬ ಶೂನ್ಯ ಪ್ರಣಮಂಗಳು, ಚರ್ಮವೇ
ನಕಾರ, ಅಸ್ಥಿಯೇ ಮಕಾರ, ಮಾಂಸವೇ ಶಿಕಾರ, ಮಜ್ಜೆಯೇ ವಕಾರ
ರಕ್ತವೇ ಯಕಾರ, ಪ್ರಾಣವೇ ಓಂಕಾರ ರೇಚಕ ಪೂರಕ ಕುಂಭಕ
ವೆಂಬ ಸ್ವರದಲ್ಲಿ ಅಕಾರ ಉಕಾರ ಮಕಾರ.

ಮತ್ತಂ ಆಪಾದ ಮಸ್ತಕ ಪರಿಯಂತರಪ್ಪ ರೋಮಂಗಳಲ್ಲಿ
ನಿರಂಜನ ಮೂಲ ಪ್ರಣವವೆಂಬ ಓಂಕಾರ, ಇಂತೀ ಸ್ಥಾನಂಗಳಲ್ಲಿ
ಪ್ರಣಮು ಸಂಬಂಧವಾದುದೇ ಸಮಾಧಿ.

ಇಂತೀ ಕ್ರಮದಲ್ಲಿ ಅಂತರಂಗದಲ್ಲಿ ಪ್ರಾಣಕ್ಕೆ ಪ್ರಣವ ಸಂಬಂಧವ
ಸುಜ್ಞಾನ ಕ್ರಿಯೆಗಳಿಂದ ಸಂಬಂಧಿಸಿದಡೆಯೂ ದೇಹದಲ್ಲಿ ಇರಲಿಕ್ಕೆ ಸಹ
ಜೀವನ್ಮುಕ್ತನಾಗುವನು.

ಅದೆಂತೆಂದೊಡೆ:— ಚಿದಂಶಿಕನಾದ ಜ್ಞಾನ ಕಲಾತ್ಮಂಗೆ ಸುಜ್ಞಾನೋದಯವಾಗಿ ಸಕಲ ಪ್ರಪಂಚ ನಿವೃತ್ತಿಯಂ ಮಾಡಿ ಶ್ರೀ ಗುರು ಕಾರುಣ್ಯವ ಹಡೆದು ಅಂಗದಮೇಲೆ ಇಷ್ಟಲಿಂಗ ಧಾರಣವಾದಾಕ್ಷಣವೇ ಹಿಂದೆ ಹೇಳಿದ ನಿರ್ಣಯದಲ್ಲಿ ಸರ್ವಾಂಗದಲ್ಲಿ ಮೂಲ ಪ್ರಣವಾದಿ ಕ್ಷಕಾರ ಪ್ರಣವಾಂತ್ಯವಾದ ಸಕಲ ನಿಷ್ಕಲ ಪ್ರಣವಂಗಳು ಬೆಲ್ಲದ ಗಳ್ಳಿಂಗೆ ಇರುವೆ ಮುತ್ತಿದಂತೆ ತನ್ನಿಂದ ತಾನೇ ಸಂಬಂಧವಾಗಿ ಜೀವ ನ್ಮುಕ್ತನಾಗಿ ಲೀಲೆ ಇರುವ ಪರ್ಯಂತರದಲ್ಲಿ ಉದಕದೊಳಗಣ ತಾವರೆ ಯಂತೆ ನಿರ್ಲೇಪಕವಾಗಿ ಪ್ರಪಂಚವನಾಚರಿಸುವನು. ಈ ಭೇದವನು ಶಿವ ಜ್ಞಾನ ಶರಣನೇ ಬಲ್ಲನಲ್ಲದೆ ಈ ಲೋಕದ ಮನುಜರೆತ್ತ ಬಲ್ಲರಯ್ಯ ಕಾಡಿನೊಳಗಾದ ಶಂಕರಪ್ರಿಯ ಚನ್ನ ಕದಂಬ ಲಿಂಗ ನಿರ್ಮಾಯ ಪ್ರಭುವೇ ?

---

## ಜಪಲಕ್ಷಣ

(೧) ಜಂಗಮದ ಜಪ ಪೂಜಾ ಲಕ್ಷಣವೆಂತೆಂದೊಡೆ,

ಕರಸ್ಥಲದಲ್ಲಿ ಶಿವಲಿಂಗವು ಬಾಹ್ಯೋಪಚಾರಂಗಳಲ್ಲಿ ಲೋಲುಪ್ತ ವಾಗಿ ಅಂತರಕ್ಕೆ ವೇಧಿಸಿ ಷಡಾಧಾರ ಚಕ್ರಂಗಳಲ್ಲಿ ಚತುರ್ವಿಧ ಬಿಂದು ಲಿಂಗ, ಷಡ್ವಿಧ ಧಾತುಲಿಂಗ, ದಶವಿಧ ಕ್ಷೇತ್ರಲಿಂಗ, ದ್ವಾದಶ ವಿಕೃತಲಿಂಗ ಷೋಡಶ ಕಳಾಲಿಂಗ, ಆತ್ಮವಿದ್ಯಾಲಿಂಗವೆಂದಾರು ತೆರವಾಗಿರ್ಪವಾಲಿಂ ಗಂಗಳ ಅಂತರಂಗದಲ್ಲಿ ಚಿದಕ್ಷಮಣಿಗಳಾಗಿರ್ಪವು. ಅವಕ್ಕೆ ವಿವರ:—

ಕಂಠಸ್ಥಾನದ ಸ್ವರಾಕ್ಷರ ಸ್ವರೂಪವಾದ ಶ್ರೀ ಕಂಠಾದಿ ಪದಿನಾರು ರುದ್ರರು ವಿಕಲಾಕ್ಷರಾದಿ ದೇವತೆಗಳೆನಿಸುವ ಅನಾಹತಾಕ್ಷರ ಸ್ವರೂಪ ವಾದ ಕ್ರೋಧೀಶಾದಿ ದ್ವಾದಶ ರುದ್ರರು ಮಣಿಪೂರಕಾಕ್ಷರ ಸ್ವರೂಪ

ವಾದ ದಾರುಕಾದಿ ದಶರುದ್ರರು, ಸ್ವಾಧಿಷ್ಠಾನಾಕ್ಷರ ಸ್ವರೂಪವಾದ ಶಿಪಿ ಯಾದಿ ಷಡ್ರುದ್ರರು, ಆಧಾರಾದಿ ಅಕ್ಷರ ಸ್ವರೂಪವಾದ ಪಿನಾಕೀಶಾದಿ ನಾಲ್ವರು ರುದ್ರರು, ಆಗ್ನೇಯ ಚಕ್ರಾಕ್ಷರ ಸ್ವರೂಪವಾದ ಶಿವ ಸಂವ ರ್ತಕರೆಂಬೀರ್ವರುದ್ರರು, ತ್ರಿಶೂಲ ಕಪಾಲಂಗಳ ಧರಿಸಿ ರಕ್ತವರ್ಣ ಶರೀರದಿಂದಿರ್ಪರು. ಈ ರುದ್ರ ಬೀಜಾಕ್ಷರಂಗಳ್ನೈವತ್ತು ಲೋಮವಿಲೋಮ ದೊಳೆಣಿಕೆ ಶತರುದ್ರ ಬೀಜಂಗಳಾಗಿಹವವರಲ್ಲಿ ಓಂ ಹ್ರಾಂ ಹ್ರೀಂ ನಮಃ ಶಿವಾಯ ಎಂಬ ಮಾಯಾಖ್ಯಂಗೂಡಿ ನೂರೆಂಟು ರುದ್ರ ಬೀಜಂಗಳಾಗಿ ಚಿದ್ರುದ್ರಾಕ್ಷಿಗಳೆನಿಸಿರ್ಪರು.

ಇವು ತಾವೇ ಮರಳಿ ನೂರೆಂಟು ಶಕ್ತಿ ಬೀಜಂಗಳಾಗಿರ್ಪವು. ಅದೆಂತೆಂದೊಡೆ ವಿಶುದ್ಧಿ ಅಕ್ಷರ ಸ್ವರೂಪವಾದ ಪೂರ್ಣೋದರಿ ಮೊದ ಲಾದ ಷೋಡಶ ಶಕ್ತಿಯರು ವಿಕಲಾಕ್ಷರ ಸ್ವರೂಪಿಯರೆನಿಸುವ ಅನಾಹ ತಾಕ್ಷರ ಸ್ವರೂಪವಾದ ಮಹಾಕಾಳಿ ಮೊದಲಾದ ದ್ವಾದಶ ಶಕ್ತಿಯರು ಮರಳಿ ಪೂರಕಾಕ್ಷರ ಸ್ವರೂಪರಾದ ನಿರಜೆ ಮೊದಲಾದ ಹತ್ತು ಶಕ್ತಿ ಯರು, ಸ್ವಾಧಿಷ್ಠಾನಾಕ್ಷರ ಸ್ವರೂಪವಾದ ವಾಗ್ಜೆ ಮೊದಲಾದ ಆರು ಶಕ್ತಿಯರು, ಆಧಾರಾಕ್ಷರ ಸ್ವರೂಪರಾದ ವಾರುಣಿ ಮೊದಲಾದ ನಾಲ್ವರು ಶಕ್ತಿಯರು, ಆಗ್ನೇಯ ಚಕ್ರಾಕ್ಷರ ಸ್ವರೂಪರಾದ ವ್ಯಾಪಿನಿ ವ್ಯಾಪಾ ನ್ವಿತೆ ಎಂಬುಭಯ ಶಕ್ತಿಯರು ಮಾಯಾಖ್ಯಂಗೂಡಿ ಮೊದಲೆಣಿಸಿದ ಓಲು ಎಣಿಸಲು ನೂರೆಂಟು ಶಕ್ತಿಗಳಾಗಿ ಚಿದ್ಗ್ರಂಥಿಗಳೆಣಿಸಿ ಸಿಂದೂರ ದೀಪಾ ದಿಯ ಶರೀರದಿಂ ಕನ್ನೆಯ್ದಿಲು ಕಪಾಲಂಗಳಂ ಧರಿಸಿದ ಹಸ್ತಂಗಳಿಂ ನೂರೆಂಟು ದುದ್ರರಿಗೆ ಸತಿಭಾವದಿಂದ ಇರ್ಪರೆಂದವಧರಿಪುದು.

ಬಳಿಕ ಲಿಂಗವೇ ಮಂತ್ರ, ಮಂತ್ರವೇ ಚಿತ್ತು ಎಂದು ತಿಳಿದು ಜಪಿಸಲು ಪ್ರಾಣವಾಯು ವಿಕಾರವಳಿದು ಸುಜ್ಞಾನ ಸೂತ್ರವಾಗಿರ್ಪುದು. ಆದಕ್ಕೆ ಆ ನೂರೆಂಟು ಚಿದ್ರುದ್ರಾಕ್ಷಿಗಳಂ ಅವರ ಮಧ್ಯದಲ್ಲಿ ಆ ನೂರೆಂಟು ಚಿದ್ಗ್ರಂಥಿಗಳಂ ಸಂಬಂಧಿಸಿದೊಡೆ ಅಂತುಮಲ್ಲದೆ ಇನ್ನೊಂದು ಪ್ರಕಾರ—

ಅಂತರಂಗದಲ್ಲಿ ಹವಳದ ಮಣಿಯೋಪಾದಿಯಲ್ಲಿ ಪ್ರಕಾಶಿಸು ತ್ತಿರ್ದ ಊರ್ಧ್ವ ಕುಂಡಲಿ ಎಂಬ ಸೂತ್ರದಿಂ ಪವಣಿಸಲು ತತ್ವಾರೋ

ಹಾವ ರೋಹದಿಂ ನೂರೆರಡು ವರ್ಣಂಗಳೊಳಗೆ ಹಂ, ಸ, ಎಂಬೆರಡು ಅಕ್ಷರಂಗಳಂ ಮೋದುವಿಗೆ ತೆಗೆಯುಲಾಗ ಮಿಕ್ಕ ನೂರು ವರ್ಣಂಗಳು ಅಷ್ಟ ವರ್ಣಾಕ್ಷರಂಗಳಂ ಕೂಡಿ ಪೂರ್ವೋಕ್ತ ಕ್ರಮದಿಂ ಜಪಿಸಲು ಏಕವಿಂಶತಿ ಸಹಸ್ರ ಷಟ್ ಶತ ಜೀವ ಜಪವರಿತು, ರೇಚಕವೇ ಪಂಚಾಕ್ಷರ, ಪೂರಕವೇ ಓಂಕಾರ, ಕುಂಭಕವೇ ಚಿಚ್ಛಕ್ತಿ ಸ್ವರೂಪಿನಿಂ ಉಕಾರ ಅಕಾರ ಮಕಾರವೆಂಬ ಅಕ್ಷರ ತ್ರಯಂಗಳನೊಳಗೊಂಡು ಶಿವಜಪವಾಯಿತು.

---

## ಇಷ್ಟ ಪ್ರಾಣ ಭಾವಲಿಂಗಗಳ ಜಪಸಂಖ್ಯೆ

(೧) ಇಷ್ಟಲಿಂಗದ ಜಪ ೪೩೨೦ ಗಳಿಗೆ ೧೨ ಪಾನಿವಾಳ ಸೂರ್ಯ ನಡೆದದ್ದು ೯೩೩೧೨೦೦೦ ಗಾವುದ ನಡೆದನು.

ಪ್ರಾಣಲಿಂಗದ ಜಪ ೯೫೦೪ ಗಳಿಗೆ ೨೬ ಪಾನಿವಾಳ ಸೂರ್ಯ ನಡೆದದ್ದು ೨೦೫೨೮೬೪೦೦ ಗಾವುದ ನಡೆದನು.

ಭಾವಲಿಂಗದ ಜಪ ೭೭೭೬ ಗಳಿಗೆ ೨೧ ಪಾನಿವಾಳ ಇದಕ್ಕೆ ಸೂರ್ಯ ನಡೆದದ್ದು ೧೬೭೯೬೧೬೦೦ ಗಾವುದ ನಡೆದನು.

ಒಂದು ದಿವಸಕ್ಕೆ ೬೦ ಗಳಿಗೆ. ಸೂರ್ಯ ನಡೆದದ್ದು ೪೬೬೫೬೦೦೦೦ ಗಾವುದ ನಡೆದನು.

ಶತವರುಷಕ್ಕೆ ಜಪ ಎಷ್ಟೆಂದರೆ ೭೭೭೬೦೦೦೦೦ ಎಂದು ತಿಳಿಪುದು. ಇತಿ ಶ್ರೀ.

---

ವಾದ ದಾರುಕಾದಿ ದಶರುದ್ರರು, ಸ್ವಾಧಿಷ್ಠಾನಾಕ್ಷರ ಸ್ವರೂಪವಾದ ಶಿಪಿ
ಯಾದಿ ಷಡ್ರುದ್ರರು, ಆಧಾರಾದಿ ಅಕ್ಷರ ಸ್ವರೂಪವಾದ ಪಿನಾಕೀಶಾದಿ
ನಾಲ್ವರು ರುದ್ರರು, ಆಗ್ನೇಯ ಚಕ್ರಾಕ್ಷರ ಸ್ವರೂಪವಾದ ಶಿವ ಸಂವ
ರ್ತಕರೆಂಬೀರ್ವರುದ್ರರು, ತ್ರಿಶೂಲ ಕಪಾಲಂಗಳ ಧರಿಸಿ ರಕ್ತವರ್ಣ
ಶರೀರದಿಂದಿರ್ಪರು. ಈ ರುದ್ರ ಬೀಜಾಕ್ಷರಂಗಳೈವತ್ತು ಲೋಮವಿಲೋಮ
ದೊಳೆಣಿಕೆ ಶತರುದ್ರ ಬೀಜಂಗಳಾಗಿಹವವರಲ್ಲಿ ಓಂ ಹ್ರಾಂ ಹ್ರೀಂ ನಮಃ
ಶಿವಾಯ ಎಂಬ ಮಾಯಾಖ್ಯಂಗೂಡಿ ನೂರೆಂಟು ರುದ್ರ ಬೀಜಂಗಳಾಗಿ
ಚಿದ್ರುದ್ರಾಕ್ಷಿಗಳೆನಿಸಿರ್ಪರು.

ಇವು ತಾವೇ ಮರಳಿ ನೂರೆಂಟು ಶಕ್ತಿ ಬೀಜಂಗಳಾಗಿರ್ಪವು.
ಅದೆಂತೆಂದೊಡೆ ವಿಶುದ್ಧಿ ಅಕ್ಷರ ಸ್ವರೂಪವಾದ ಪೂರ್ಣೋದರಿ ಮೊದ
ಲಾದ ಷೋಡಶ ಶಕ್ತಿಯರು ವಿಕಲಾಕ್ಷರ ಸ್ವರೂಪಿಯರೆನಿಸುವ ಅನಾಹ
ತಾಕ್ಷರ ಸ್ವರೂಪವಾದ ಮಹಾಕಾಳಿ ಮೊದಲಾದ ದ್ವಾದಶ ಶಕ್ತಿಯರು
ಮರಳಿ ಪೂರಕಾಕ್ಷರ ಸ್ವರೂಪರಾದ ನಿರಜೆ ಮೊದಲಾದ ಹತ್ತು ಶಕ್ತಿ
ಯರು, ಸ್ವಾಧಿಷ್ಠಾನಾಕ್ಷರ ಸ್ವರೂಪವಾದ ವಾಗ್ಲೆ ಮೊದಲಾದ ಆರು
ಶಕ್ತಿಯರು, ಆಧಾರಾಕ್ಷರ ಸ್ವರೂಪರಾದ ವಾರುಣಿ ಮೊದಲಾದ ನಾಲ್ವರು
ಶಕ್ತಿಯರು, ಆಗ್ನೇಯ ಚಕ್ರಾಕ್ಷರ ಸ್ವರೂಪರಾದ ವ್ಯಾಪಿನಿ ಮಾಯಾ
ನ್ವಿತೆ ಎಂಬುಭಯ ಶಕ್ತಿಯರು ಮಾಯಾಖ್ಯಂಗೂಡಿ ಮೊದಲೆಣಿಸಿದ ಓಲು
ಎಣಿಸಲು ನೂರೆಂಟು ಶಕ್ತಿಗಳಾಗಿ ಚಿದ್ಗ್ರಂಥಿಗಳೆಣಿಸಿ ಸಿಂದೂರ ದೀಪಾ
ದಿಯ ಶರೀರದಿಂ ಕನ್ನೆಯ್ದಿಲು ಕಪಾಲಂಗಳಂ ಧರಿಸಿದ ಹಸ್ತಂಗಳಿಂ
ನೂರೆಂಟು ರುದ್ರರಿಗೆ ಸತಿಭಾವದಿಂದ ಇರ್ಪರೆಂದವಧರಿಪುದು.

ಬಳಿಕ ಲಿಂಗವೇ ಮಂತ್ರ, ಮಂತ್ರವೇ ಚಿತ್ತು ಎಂದು ತಿಳಿದು
ಜಪಿಸಲು ಪ್ರಾಣವಾಯು ವಿಕಾರವಳಿದು ಸುಜ್ಞಾನ ಸೂತ್ರವಾಗಿರ್ಪುದು.
ಅದಕ್ಕೆ ಆ ನೂರೆಂಟು ಚಿದ್ರುದ್ರಾಕ್ಷಿಗಳಂ ಅವರ ಮಧ್ಯದಲ್ಲಿ ಆ
ನೂರೆಂಟು ಚಿದ್ಗ್ರಂಥಿಗಳಂ ಸಂಬಂಧಿಸಿದೊಡೆ ಅಂತುಮಲ್ಲದೆ ಇನ್ನೊಂದು
ಪ್ರಕಾರ—

ಅಂತರಂಗದಲ್ಲಿ ಹವಳದ ಮಣಿಯೋಪಾದಿಯಲ್ಲಿ ಪ್ರಕಾಶಿಪ
ತ್ರಿದಳ ಊರ್ಧ್ವ ಕುಂಡಲಿ ಎಂಬ ಸೂತ್ರದಿಂ ಪವಣಿಸಲು ತತ್ಪ್ರಾಣೋ

ಹಾವ ರೋಹದಿಂ ನೂರೆರಡು ವರ್ಣಂಗಳೊಳಗೆ ಹಂ, ಸ, ಎಂಬೆರಡು ಅಕ್ಷರಂಗಳಂ ಮೇರುವಿಗೆ ತೆಗೆಯುಲಾಗಿ ಮಿಕ್ಕ ನೂರು ವರ್ಣಂಗಳು ಅಷ್ಟ ವರ್ಣಾಕ್ಷರಂಗಳಂ ಕೂಡಿ ಪೂರ್ವೋಕ್ತ ಕ್ರಮದಿಂ ಜಪಿಸಲು ಏಕವಿಂಶತಿ ಸಹಸ್ರ ಷಟ್ ಶತ ಜೀವ ಜಪವರಿತು, ರೇಚಕವೇ ಪಂಚಾಕ್ಷರ, ಪೂರಕವೇ ಓಂಕಾರ, ಕುಂಭಕವೇ ಚಿಚ್ಛಕ್ತಿ ಸ್ವರೂಪಿನಿಂ ಉಕಾರ ಅಕಾರ ಮಕಾರವೆಂಬ ಅಕ್ಷರ ತ್ರಯಂಗಳನೊಳಗೊಂಡು ಶಿವಜಪವಾಯಿತು.

---

## ಇಷ್ಟ ಪ್ರಾಣ ಭಾವಲಿಂಗಗಳ ಜಪಸಂಖ್ಯೆ

(೧) ಇಷ್ಟಲಿಂಗದ ಜಪ ೪೩೨೦ ಗಳಿಗೆ ೧೨ ಪಾನಿವಾಳ ಸೂರ್ಯ ನಡೆದದ್ದು ೯೩೩೧೨೦೦೦ ಗಾವುದ ನಡೆದನು.

ಪ್ರಾಣಲಿಂಗದ ಜಪ ೯೫೦೪ ಗಳಿಗೆ ೨೬ ಪಾನಿವಾಳ ಸೂರ್ಯ ನಡೆದದ್ದು ೨೦೫೨೬೪೦೦ ಗಾವುದ ನಡೆದನು.

ಭಾವಲಿಂಗದ ಜಪ ೭೭೭೬ ಗಳಿಗೆ ೨೧ ಪಾನಿವಾಳ ಇದಕ್ಕೆ ಸೂರ್ಯ ನಡೆದದ್ದು ೧೬೭೯೬೧೬೦೦ ಗಾವುದ ನಡೆದನು.

ಒಂದು ದಿವಸಕ್ಕೆ ೬೦ ಗಳಿಗೆ. ಸೂರ್ಯ ನಡೆದದ್ದು ೪೬೬೫೬೦೦೦೦ ಗಾವುದ ನಡೆದನು.

ಶತವರುಷಕ್ಕೆ ಜಪ ಎಷ್ಟೆಂದರೆ ೭೭೭೬೦೦೦೦೦ ಎಂದು ತಿಳಿಪುದು. ಇತಿ ಶ್ರೀ.

---

## ಷಡ್ವಿಧ ಲಿಂಗಗಳ ಜಪಗಳ ಸಂಖ್ಯೆ

(೧) ಷಡ್ವಿಧ ಲಿಂಗ ಷಡ್ವಿಧ ಚಕ್ರದಲ್ಲಿರ್ಪವು. ಆ ಷಡ್ವಿಧ ಚಕ್ರಕ್ಕೆ ೫೦ದಳ, ಒಂದು ದಳಕ್ಕೆ ಜಪ ೪೩೨, ಅದಕ್ಕೆ ಹೊತ್ತು ೧ ಗಳಿಗೆ ೧೨ ಪಾನಿವಾಳ. ೫೦ ದಳ ಜಪ ನಡೆವಷ್ಟೊತ್ತಿಗೆ ೬೦ ಗಳಿಗೆ ಇದಕ್ಕೆ ೨೪ ತಾಸು. ಹಗಲು ಇರುಳು ಕೂಡಿ ೨೧೬೦೦ ಜಪ. ಒಂದು ದಿವಸಕ್ಕೆಂದು ಅರಿವುದು. ಒಂದು ಶ್ವಾಸನಿಶ್ವಾಸಕ್ಕೆ ಒಂದು ಜಿಟ್ಟ ಇಷ್ಟೊತ್ತಿಗೆ ಸೂರ್ಯ ನಡೆದದ್ದು ೨೧೬೦೦ ಗಾವುದ ನಡೆದನು. ಈ ಮರ್ಯಾದೆಯಿಂದ ಅರಿದು ನಂಬುವುದು.

(೨) ಆಚಾರ ಲಿಂಗದ ಜಪ ೧೭೨೮. ಇದಕ್ಕೆ ಹೊತ್ತು ೪ಗಳಿಗೆ ೪೮ ಪಾನಿವಾಳ. ಇಷ್ಟೊತ್ತಿಗೆ ಸೂರ್ಯ ನಡೆದದ್ದು ೩೭೩೨೪೮೦೦ ಗಾವುದ ನಡೆದನು. ಗುರುಲಿಂಗದ ಜಪ ೨೫೯೨ ಇದಕ್ಕೆ ಹೊತ್ತು ೭ಗಳಿಗೆ ೧೨ ಪಾನಿವಾಳ. ಇಷ್ಟೊತ್ತಿಗೆ ಸೂರ್ಯ ನಡೆದದ್ದು ೫೫೯೮೭೨೦೦ ಗಾವುದ ನಡೆದನು. ಶಿವಲಿಂಗದ ಜಪ ೪೩೨೦ ಇದಕ್ಕೆ ಹೊತ್ತು ೧೨ ಗಳಿಗೆ ಪಾನಿವಾಳ ನಾಸ್ತಿ. ಇಷ್ಟೊತ್ತಿಗೆ ಸೂರ್ಯ ನಡೆದದ್ದು ೯೩೩೧೨೦೦೦ ಗಾವುದ ನಸದನು. ಜಂಗಮಲಿಂಗದ ಜಪ ೫೧೮೪, ಇದಕ್ಕೆ ಹೊತ್ತು ೧೪ ಗಳಿಗೆ ೨೪ ಪಾನಿವಾಳ. ಇಷ್ಟೊತ್ತಿಗೆ ಸೂರ್ಯ ನಡೆದದ್ದು ೧೧೧೯೭೪೪೦೦ ಗಾವುದ ನಡೆದನು. ಪ್ರಸಾದಲಿಂಗದ ಜಪ ೬೯೧೨. ಇದಕ್ಕೆ ಹೊತ್ತು ೧೯ ಗಳಿಗೆ. ೧೨ ಪಾನಿವಾಳ. ಇಷ್ಟೊತ್ತಿಗೆ ಸೂರ್ಯ ನಡೆದದ್ದು ೧೪೯೨೯೯೨೦೦ ಗಾವುದ ನಡೆದನು. ಮಹಾಲಿಂಗದ ಜಪ ೮೬೪ ಇದಕ್ಕೆ ಹೊತ್ತು ೨ ಗಳಿಗೆ ೨೪ ಪಾನಿವಾಳ ಇಷ್ಟೊತ್ತಿಗೆ ಸೂರ್ಯ ನಡೆದದ್ದು ೧೮೬೬೨೪೦೦ ಗಾವುದ ಸಡಿದನು,

(೩) ಇನ್ನು ಜಪವ ಮಾಡುವ ಕ್ರಮವೆಂತೆಂದೊಡೆ, ಆಚಾರ ಲಿಂಗದ ಜಪಕ್ಕೆ ೩೦೮ ರಿಂದ ೧೬ ವೇಳೆ ಜಪಿಸಬೇಕು. ಗುರುಲಿಂಗದ ಜಪಕ್ಕೆ ೩೦೮ರಿಂದ ೨೪ ವೇಳೆ ಜಪಿಸಬೇಕು. ಶಿವಲಿಂಗದ ಜಪಕ್ಕೆ ೩೦೮ ರಿಂದ ೪೦ ವೇಳೆ ಜಪಿಸಬೇಕು. ಜಂಗಮಲಿಂಗದ ಜಪಕ್ಕೆ ೩೦೮

ರಿಂದ ೪೮ ವೇಳೆ ಜಪಿಸಬೇಕು. ಪ್ರಸಾದಲಿಂಗದ ಜಪಕ್ಕೆ ೩೮೮ ರಿಂದ ೬೪ ವೇಳೆ ಜಪಿಸಬೇಕು. ಮಹಾಲಿಂಗದ ಜಪಕ್ಕೆ ೩೦೮ ರಿಂದ ೮ ವೇಳೆ ಜಪಿಸಬೇಕು.

(೪) ಭಕ್ತಂಗೆ ಆಧಾರ ಚಕ್ರ. ಆ ಚಕ್ರಕ್ಕೆ ೪ ದಳ ಕಮಲ. ಒಂದೊಂದು ದಳಕ್ಕೆ ೪೩೨ ಜಪ. ಆ ಭಕ್ತಂಗೆ ಆಚಾರಲಿಂಗದೊಳಗಣ ಷಡ್ವಿಧಲಿಂಗವಾವವೆಂದಡೆ, ಕ್ರಿಯ ಲಿಂಗ, ಮಂತ್ರ ಲಿಂಗ, ನಿರೀಕ್ಷಣ ಲಿಂಗ, ಯಜನ ಲಿಂಗ, ಈಳನ ಲಿಂಗ, ವೇದ್ಯ ಲಿಂಗವೆಂಬಿವು ಆಚಾರ ಲಿಂಗದೊಳಗಣ ಷಡ್ವಿಧ ಲಿಂಗವು, ಒಂದೊಂದು ಲಿಂಗಕ್ಕೆ ಜಪ ಎಷ್ಟು ಎಂದೊಡೆ ೨೮೮. ಆ ಒಂದೊಂದು ಲಿಂಗಕ್ಕೆ ಪಳ ಎಷ್ಟು ಎಂದೊಡೆ ೪೮. ಒಂದೊಂದು ಪಳಕ್ಕೆ ಜಪ ಎಷ್ಟು ಎಂದೊಡೆ ಆರಾರು.

ಇನ್ನು ಮುಂದೆ ಸ್ವಾಧಿಷ್ಠಾನ ಚಕ್ರ. ಷಡ್ದಳ ಕಮಲ. ಒಂದೊಂದು ದಳಕ್ಕೆ ಜಪ ಎಷ್ಟು ಎಂದೊಡೆ ೪೩೨. ಗುರುಲಿಂಗದೊಳಗಣ ಷಡ್ವಿಧ ಲಿಂಗ ಅವಾವೆಂದೊಡೆ ಕ್ರಿಯಾ ದೀಕ್ಷೆ ಲಿಂಗ, ಮಂತ್ರದೀಕ್ಷೆಲಿಂಗ, ವೇಧಾ ದೀಕ್ಷೆ ಲಿಂಗ, ಭೋಗ ದೀಕ್ಷೆ ಲಿಂಗ, ಪ್ರಸನ್ನ ದೀಕ್ಷೆ ಲಿಂಗ, ನಿರ್ವಾಣ ದೀಕ್ಷೆ ಲಿಂಗ, ಗುರುಲಿಂಗದೊಳಗಣ ಷಡ್ವಿಧ ಲಿಂಗವು. ಒಂದೊಂದು ಲಿಂಗಕ್ಕೆ ಜಪ ಎಷ್ಟು ಎಂದಡೆ ೪೩೨. ಒಂದೊಂದು ಲಿಂಗಕ್ಕೆ ಪಳ ಎಷ್ಟು ಎಂದಡೆ ೭೨. ಒಂದೊಂದು ಪಳಕ್ಕೆ ಜಪ ಎಷ್ಟು ಎಂದಡೆ ಆರಾರು.

ಅಲ್ಲಿಂದ ಮುಂದೆ ಮಣಿಪೂರಕ ಚಕ್ರ. ಆ ಚಕ್ರಕ್ಕೆ ದಶದಳ ಕಮಲ. ಆ ಒಂದೊಂದು ಕಮಲಕ್ಕೆ ಜಪ ಎಷ್ಟು ಎಂದಡೆ ೪೩೨ ಶಿವ ಲಿಂಗದೊಳಗಣ ಷಡ್ವಿಧ ಲಿಂಗ, ಅವಾವೆಂದೊಡೆ ಕರಸ್ಥಲ ಲಿಂಗ, ನಯನ ಸ್ಥಲ ಲಿಂಗ, ಹೃದಯಸ್ಥಲ ಲಿಂಗ, ಮಂತ್ರಸ್ಥಲ ಲಿಂಗ, ತ್ರಿಕೂಟ ಸ್ಥಲ ಲಿಂಗ, ಲಯಸ್ಥಲ ಲಿಂಗ, ಶಿವಲಿಂಗದೊಳಗಣ ಷಡ್ವಿಧ ಲಿಂಗವು. ಒಂದೊಂದು ಲಿಂಗಕ್ಕೆ ಜಪ ಎಷ್ಟೆಂದಡೆ ೭೨೦ ಒಂದೊಂದು ಲಿಂಗಕ್ಕೆ ದಳ ಎಷ್ಟೆಂದಡೆ ೧೨೦ ಒಂದೊಂದು ದಳಕ್ಕೆ ಜಪ ಎಷ್ಟೆಂದಡೆ ಆರಾರು.

ಅಲ್ಲಿಂದ ಮುಂದೆ ಅನಾಹತ ಚಕ್ರ. ಆ ಚಕ್ರಕ್ಕೆ ದ್ವಾದಶ ದಳ ಕಮಲ. ಒಂದೊಂದು ದಳಕ್ಕೆ ಜಪ ಎಷ್ಟೆಂದಡೆ ೪೩೨. ಇನ್ನು ಜಂಗಮ ಲಿಂಗದೊಳಗಿನ ಷಡ್ವಿಧಲಿಂಗ ಅವಾವೆಂದಡೆ– ಸ್ವಯಂ ಲಿಂಗ. ಸ್ವತಂತ್ರ, ಲಿಂಗ. ಚರಲಿಂಗ ಪರಿಣಾಮ ಲಿಂಗ, ನಿರುಪಾಧಿಕಲಿಂಗ, ಪರಿಪೂರ್ಣ ಲಿಂಗ ಎಂಬಿವು ಜಂಗಮ ಲಿಂಗದೊಳಗಣ ಷಡ್ವಿಧ ಲಿಂಗವು. ಆ ಒಂದೊಂದು ಲಿಂಗಕ್ಕೆ ಜಪ ಎಷ್ಟೆಂದಡೆ ೮೬೪. ಆ ಒಂದೊಂದು ಲಿಂಗಕ್ಕೆ ಪಳ ಎಷ್ಟೆಂದೊಡೆ ೧೪೪. ಒಂದೊಂದು ಪಳಕ್ಕೆ ಜಪ ಎಷ್ಟೆಂದಡೆ ಆರಾರು.

ಅಲ್ಲಿಂದ ಮುಂದೆ ವಿಶುದ್ಧಿ ಚಕ್ರ. ಆ ಚಕ್ರಕ್ಕೆ ಷೋಡಶ ದಳ ಕಮಲ. ಒಂದೊಂದು ದಳಕ್ಕೆ ಜಪ ಎಷ್ಟೆಂದಡೆ ೪೩೨. ಆ ಪ್ರಸಾದ ಲಿಂಗದೊಳಗಣ ಷಡ್ವಿಧಲಿಂಗ. ಅವಾವೆಂದೊಡೆ, ಇಂದ್ರಿಯಾನಂದ ಲಿಂಗ, ಪ್ರಾಣಾನಂದಲಿಂಗ, ಜ್ಞಾನಾನಂದ ಲಿಂಗ, ಭಾವಾನಂದ ಲಿಂಗ, ತೂರ್ಯಾನಂದಲಿಂಗ, ಮಹಾನಾದಲಿಂಗವೆಂಬ ಪ್ರಸಾದಲಿಂಗದೊಳಗಣ ಷಡ್ವಿಧ ಲಿಂಗವು. ಆ ಒಂದೊಂದು ಲಿಂಗಕ್ಕೆ ಜಪ ಎಷ್ಟೆಂದಡೆ ೧೧೫೨. ಆ ಒಂದೊಂದು ಲಿಂಗಕ್ಕೆ ಪಳ ಎಷ್ಟೆಂದಡೆ ೧೯೨. ಒಂದೊಂದು ಪಳಕ್ಕೆ ಜಪ ಎಷ್ಟೆಂದಡೆ ಆರಾರು.

ಅಲ್ಲಿಂದ ಮುಂದೆ ಆಜ್ಞಾಚಕ್ರ. ಆ ಚಕ್ರಕ್ಕೆ ದ್ವಿದಳ ಕಮಲ ಒಂದೊಂದು ದಳಕ್ಕೆ ಜಪ ಎಷ್ಟೆಂದಡೆ ೪೩೨. ಮಹಾಲಿಂಗದೊಳಗಣ ಷಡ್ವಿಧಲಿಂಗ. ಅವಾವೆಂದೊಡೆ ಪಿಂಡಾಕಾಶಲಿಂಗ ಬಿಂದ್ವಾಕಾಶ ಲಿಂಗ. ಮಹಾದಾಕಾಶ ಲಿಂಗ. ಭಾವ ಗಮ್ಯ ಲಿಂಗ. ಸರ್ವತತ್ವಾಶ್ರಯ ಲಿಂಗ ಪರಿಪೂರ್ಣ ಪ್ರಕಾಶ ಲಿಂಗ ಎಂಬ ಮಹಾಲಿಂಗದೊಳಗಣ ಷಡ್ವಿಧ ಲಿಂಗವು. ಒಂದೊಂದುಲಿಂಗಕ್ಕೆ ಪಳ ಎಷ್ಟು ಎಂದಡೆ ೨೪. ಒಂದೊಂದು ಪಳಕ್ಕೆ ಜಪ ಎಷ್ಟು ಎಂದಡೆ ಆರಾರು.

ಮಹಾನುಭಾವ ಜ್ಞಾನ ರತ್ನಾಕರ ಸಾರಾಯ ಸಮಾಪ್ತ.

## ಅಷ್ಟದಳಕ್ಕೆ

(೧) ಪೃಥ್ವಿತತ್ವದ ಪೂರ್ವದಳಕ್ಕೆ ಜಪ ೫೦೦೦, ತಾ ೫ ಗ ೧ ಪಾ ೨೩, ಜ ೭, ೦

ಅಪ್ಪು ತತ್ವದ ವರುಣ ದಳಕ್ಕೆ ಜಪ ೪೦೦೦, ತಾ ೪, ಗ ೧೩ ಪಾ ೬ ಜ ೪, ೦

ವಹ್ನಿ ತತ್ವದ ಅಗ್ನಿ ದಳಕ್ಕೆ ಜಪ ೩೦೦೦, ತಾ. ೩, ಪಾ. ೫೦, ೦
ಪವನ ತತ್ವದ ವಾಯುವ್ಯ ದಳಕ್ಕೆ ಜಪ ೨೦೦೦, ತಾ ೨, ಪಾ ೩೩ ೦

ಆಕಾಶ ತತ್ವದ ಈಶಾನ್ಯದಳಕ್ಕೆ ಜಪ ೧೦೦೦, ತಾ ೧, ಪಾ ೧೬ ಜ ೦

ಸೂರ್ಯ ತತ್ವದ ವಾಯುವ್ಯದಳಕ್ಕೆ ಜಪ ೭೪೦೦, ತಾ ೨ ಗ ೧ ಪಾನಿವಾಳ ೪೦, ೦,

ಚಂದ್ರತತ್ವದ ನೈರುತ್ಯದಳಕ್ಕೆ ಜಪ ೩೨೦೦, ತಾ ೩ ಗ ೧ ಪಾ ೩೩ ಜ ೭, ೦
ಆ ತತ್ವದ ಕುಬೇರ ದಳಕ್ಕೆ ಜಪ ೧೦೦೦ ತಾ ೧, ಪಾ ೧೬, ಓಂ,೦
೨೧೬೦೦ ಜಪ ಅಷ್ಟದಳಂಗಳಿಗೆ ಸೇರಿದ ನಿರ್ಣಯ ಸಮಾಪ್ತ.

---

## ಷಟ್ ಚಕ್ರಗಳು ಮತ್ತು ಷಡ್ವಿಧ ಸ್ಥಳಗಳು ಇವುಗಳಿಗೆ ನೂರಾಒಂದು ಸ್ಥಳಗಳ ಸಂಬಂಧ

(೧) ಷಟ್ ಸ್ಥಲ ಚಕ್ರವರ್ತಿ ಚನ್ನ ಬಸವೇಶ್ವರ ದೇವರು ನಿರೂಪಿಸಿದ ೨೧೬೦೦ ಜಪದ ಸಕೀಲ ವೀರಶೈವ ಸಂಪನ್ನರಾದ ಷಟ್ ಬ್ರಹ್ಮಗಳು ಲಾಲಿಸುವುದು.

ಆಧಾರ ಚಕ್ರದಲ್ಲಿ ದಳ ನಾಲ್ಕು ಒಂದು ದಳಕ್ಕೆ ೪೩೨. ನಾಲ್ಕು ದಳಕ್ಕೆ ೧೭೨೮ ಜಪ, ಗಳಿಗೆ ನಾಲ್ಕು ಪಾನಿವಾಳ ೪೮.

ಸ್ವಾಧಿಷ್ಠಾನ ಚಕ್ರದಲ್ಲಿ ದಳ ೬, ಜಪ ೨೫೯೨, ಗಳಿಗೆ ೭, ಪಾನಿವಾಳ ೧೨.

ಮಣಿಪೂರಕ ಚಕ್ರದಲ್ಲಿ ದಳ ೧೦, ಜಪ ೪೩೨೦, ಗಳಿಗೆ ೧೨, ಪಾನಿವಾಳ ಶೂನ್ಯ.

ಅನಾಹತ ಚಕ್ರದಲ್ಲಿ ದಳ ೧೨, ಜಪ ೫೧೮೪, ಗಳಿಗೆ ೧೪, ಪಾನಿವಾಳ ೨೪.

ವಿಶುದ್ಧಿ ಚಕ್ರದಲ್ಲಿ ದಳ ೧೬, ಜಪ ೬೯೧೨, ಗಳಿಗೆ ೧೯, ಪಾನಿವಾಳ ಹನ್ನೆರಡು.

ಆಜ್ಞಾ ಚಕ್ರದಲ್ಲಿ ದಳ ೨, ಜಪ ೮೬೪, ಗಳಿಗೆ ೨, ಪಾನಿವಾಳ ೨೪,

ಇಂತೀ ಜಪಂಗಳು ಒಟ್ಟು ೨೧೬೦೦, ಗಳಿಗೆ ೬೦, ಪಾನಿವಾಳ ೧೨೦ ಇಂತೀ ಗಳಿಗೆ ಪಾನಿವಾಳ ಕೂಡಲು ೨೪ ತಾಸು ಆಗುವವು.

ಆ ೨೪ ತಾಸಿನೊಳಗೆ ೧೦೧ ಸ್ಥಲಗಳು ನಡೆದ ಲಕ್ಷಣಗಳೆಂತೆನೆ:

ಆಧಾರ ಚಕ್ರದಲ್ಲಿ ೪ ಕ್ಕೆ ೧೨ ಪಾನಿವಾಳ ಕಡಿಮೆ. ೨ ತಾಸು, ಪ್ರಾತಃಕಾಲದಲ್ಲಿ ೧೨ ಪಾನಿಗಳ ಕಡಿಮೆ, ೨ ತಾಸಿನೊಳಗೆ ಭಕ್ತಿಸ್ಥಲ ೧೫, ಆಚಾರ ಲಿಂಗಸ್ಥಲ ೯, ಇಂತೀ ೨೪ ಸ್ಥಲಂಗಳು ನಡೆವವು.

ಸ್ವಾಧಿಷ್ಠಾನ ಚಕ್ರದಲ್ಲಿ ೬ ದಳಕ್ಕೆ ೧೮ ಪಾನಿವಾಳ ಕಡಿಮೆ. ೩ ತಾಸಿನೊಳಗೆ ಮಹೇಶ್ವರ ಸ್ಥಲ ೯, ಗುರುಲಿಂಗ ಸ್ಥಲ ೯, ಇಂತೀ ಕೂಡಲು ೧೮ ಸ್ಥಲಂಗಳು ನಡೆದವು.

ಮಣಿಪೂರಕ ಚಕ್ರದಲ್ಲಿ ದಳ ಮೂವತ್ತು ಪಾನಿವಾಳ ಕಡಿಮೆ ತಾಸಿನೊಳಗೆ ಪ್ರಸಾದಿ ಸ್ಥಲ ೭ ಶಿವಲಿಂಗಸ್ಥಲ ೯ ಇಂತೀ ೧೬ ಸ್ಥಲಂಗಳು ನಡೆದವು.

ಅನಾಹತ ಚಕ್ರಕ್ಕೆ ದಳ ೧೨ ಪಾನಿವಾಳ ೩೬ ಕಡಿಮೆ ೬ ತಾಸಿನೊಳಗೆ ಪ್ರಾಣಲಿಂಗಸ್ಥಲ ೫ ಜಂಗಮಲಿಂಗ ಸ್ಥಲ ೧೨ ಇಂತೀ ೧೭ ಸ್ಥಲಂಗಳು ನಡೆದವು.

ವಿಶುದ್ಧಿ ಚಕ್ರಕ್ಕೆ ೧೬ ದಳ, ೪೮ ಪಾನಿವಾಳ ಕಡಿಮೆ ೮ ತಾಸಿನೊಳಗೆ ಶರಣಸ್ಥಲ ೪ ಪ್ರಸಾದಲಿಂಗಸ್ಥಲ ೯ ಇಂತೀ ೧೩ ಸ್ಥಲಂಗಳು ನಡೆದವು.

ಆಜ್ಞಾಚಕ್ರಕ್ಕೆ ದಳ ೨ಕ್ಕೆ ಪಾನಿವಾಳ ೬ ಕಡಿಮೆ. ಒಂದುತಾಸಿನೊಳಗೆ ಐಕ್ಯಸ್ಥಳ ೪ ಮಹಾಲಿಂಗಸ್ಥಳ ೯ ಇಂತೀ ೧೩ ಸ್ಥಲಂಗಳು ನಡೆದವು.

ಇಂತೀ ತಾಸುಗಳು ಕೂಡಲು ೨೪ ತಾಸು ಆಗುವದು. ಆ ೨೪ ತಾಸಿನೊಳಗೆ ಅಂಗಸ್ಥಳ ೪೪ ಲಿಂಗಸ್ಥಲ ೫೭ ಇಂತು ಅಂಗಸ್ಥಲ ಲಿಂಗಸ್ಥಲಂಗಳು ಕೂಡಲು ನೂರಾ ಒಂದು ಸ್ಥಳಂಗಳು ಆಗುವವು.

ಆದು ನೂರಾ ಒಂದು ಸ್ಥಳಂಗಳು ಇಷ್ಟಲಿಂಗದ ಷಡ್ವಿಧ ಸ್ಥಳಂಗಳಲ್ಲಿ ಸಂಬಂಧವ ಮಾಡುವ ಕ್ರಮವೆಂತೆಂದೊಡೆ,

ಭಕ್ತಸ್ಥಳ ೧೫ ಆಚಾರಲಿಂಗಸ್ಥಳ ೯ ಇಷ್ಟಲಿಂಗದ ವೃತ್ತದಲ್ಲಿ ಸಂಬಂಧವು. ಮಹೇಶ್ವರ ಸ್ಥಳ ೯ ಗುರುಲಿಂಗ ಸ್ಥಲ ೯ ಇಷ್ಟಲಿಂಗದ [illegible]ಯಲ್ಲಿ ಸಂಬಂಧವು. ಪ್ರಸಾದಿ ಸ್ಥಲ ೭ ಶಿವಲಿಂಗಸ್ಥಲ ೯ ಇಷ್ಟಲಿಂಗದ ವರ್ತುಳದಲ್ಲಿ ಸಂಬಂಧವು. ಪ್ರಾಣಲಿಂಗ ಸ್ಥಳಂಗಳು ೫ ಜಂಗಮಲಿಂಗಸ್ಥಳಂಗಳು ೧೨ ಇಷ್ಟಲಿಂಗದ ಗೋಮುಖದಲ್ಲಿ ಸಂಬಂಧವು. ಶರಣಸ್ಥಲಂಗಳು ೪ ಪ್ರಸಾದ ಲಿಂಗಸ್ಥಳ ೯ ಇಷ್ಟಲಿಂಗದ ನಾಳದಲ್ಲಿ ಸಂಬಂಧವು. ಐಕ್ಯಸ್ಥಳ ೪ ಮಹಾಲಿಂಗಸ್ಥಲಂಗಳು ೯ ಇಷ್ಟಲಿಂಗದ ಗೋಳಕದಲ್ಲಿ ಸಂಬಂಧವು.

ಅಂಗಸ್ಥಳಂಗಳು, ೪೪ ಲಿಂಗ ಸ್ಥಲಂಗಳು ೫೭, ಇಂತೀ ೧೩ ಸ್ಥಲಂಗಳು ಇಷ್ಟಲಿಂಗದ ಷಡ್ವಿಧ ಸ್ಥಾನಂಗಳಲ್ಲಿ ಸಂಬಂಧವ ಮಾ ಕೊಂಡು ಆ ಲಿಂಗವನ್ನು ತನ್ನ ಅಂಗದಲ್ಲಿ ಧರಿಸಿಕೊಂಡು ಭಕ್ತಿ ಜ್ಞಾನ ವೈರಾಗ್ಯವನಾಚರಿಸುವ ವೀರಶೈವ ಸಂಪನ್ನರಾದ ಷಟ್ ಸ್ಥಳಗಳ ತೋರಿದರಾದ ಶರಣರಿಗೆ ನಿರ್ವಯಲವು ಸಾಧ್ಯವಹುದು ಕಾಣಾ ಕೂಡ ಸಂಗಮ ದೇವಾ.

## ಪ್ರಸಾದ ಮಾಡುವ ಲಕ್ಷಣ

ಓಂ ಹ್ರಾಂ ಹ್ರೀಂ ಖಾಂ ಆಂ ನಾಂ ಮಾಂ ನಮಃ ಶಿವಾಯ ಎಂದು ರೂಪು ಪದಾರ್ಥವನು ಪೀಠದಲ್ಲಿ ಇಷ್ಟಲಿಂಗಕ್ಕೆಂದು.

ಓಂ ಹ್ರೂಂ ಕ್ಲೈಂ ಸಾಂ ಊಂ ವಾಂ ನಮಃ ಶಿವಾಯ ಎಂದು ರುಚಿ ಪದಾರ್ಥವನು ಗೋಮುಖದಲ್ಲಿಯು ಪ್ರಾಣಲಿಂಗಕ್ಕೆಂದು.

ಓಂ ಹ್ರೌಂ ಹ್ರಃ ವಾಂ ಮಾಂ ಯಾಂ ಓಂ ನಮಃ ಶಿವಾಯ ಎಂದು ತೃಪ್ತಿ ಪದಾರ್ಥವನು ಮಸ್ತಕದಲ್ಲಿಯು ಭಾವಲಿಂಗಕ್ಕೆಂದು

ಓಂ ನಮಃ ಶಿವಾಯ ಎಂದು ಪರಿಪೂರ್ಣ ತೃಪ್ತಿ ಪದಾರ್ಥವನು ನಿಷ್ಕಲ ಲಿಂಗಕ್ಕೆಂದು ಸ್ವೀಕರಿಸುವದು.

ಓಂ ನಮಃ ಶಿವಾಯ ಎಂದು ಮಹಾ ಪರಿಪೂರ್ಣ ತೃಪ್ತಿ ಪದಾರ್ಥ ವನು ನಿರಂಜನ ಲಿಂಗಕ್ಕೆದು ಸ್ವೀಕರಿಸುವದು. ಇದು ಪ್ರಸಾದಮಾಡುವ ಲಕ್ಷಣ.

## ಪ್ರಸಾದವನರ್ಪಿಸುವ ಲಕ್ಷಣ

ಶುದ್ಧ ಸಿದ್ಧ ಪ್ರಸಿದ್ಧ ಪರಿಪೂರ್ಣ ತೃಪ್ತಿ ಪ್ರಸಾದ ಮಹಾ ಪೂರ್ಣ ತೃಪ್ತಿ ಪ್ರಸಾದವೆಂದರಿದರ್ಪಿಸುವದು.

## ಜಪದ ಅವಧಿ

ಒಂದು ಉಶ್ವಾಸ ನಿಶ್ವಾಸಕ್ಕೆ ಒಂದು ಜಪ. ಇವಕ್ಕೆ ಒಂಭತ್ತು

## ಜಪ ಮಾಲಿಕಾ

ಅಂತರ್ವಿದ್ರುಮ ಭಾಸಮಾನ ಭುಜಗಿ । ಸೂತ್ರೋತ ವರ್ಣೋ ಜ್ವಲ । ಮಾರೋಹತವರೋಹತಃ । ಶತಮಯುಸಗರ್ಾಷ್ಟಕೋತ್ತರ। ಹಂಸ ಬ್ರಹ್ಮವಿದೇಹ ಮೇರುಶಿಖರಂ ಶ್ರೀ ಮಾತೃಕಾಕ್ಷಾವಳಿಂ ನಿತ್ಯಂ ನಮಾಮಿ ವಿಚಿತ್ರ ಜನನಿ ಜ್ಞಾನೈಕ ದೀಪಾಂಕುರಂ ||

ಆಧಾರೆ ಲಿಂಗ ನಾಚಾಭಾ। ಭೌ ಪ್ರಕಷಿತ ಹೃದಯೇ । ದಂಡ ಮಾಲೆ ಲಲಾಟೆ ; ದ್ವಿ ಪತ್ರೆ ಷೋಡಶನೇದಾ ದ್ವಾದಶದಳೆ । ಷಟ್ಪತ್ರ್ನ ಚತ್ವಾರಿತೇಷು । ವಾಸಾಂತೆ ಬಾಲಮಧ್ಯೆ । ಡಪಗಣಸಹಿತಂ । ಕಂಠ ಭಿಸ ಸ್ವರಾಷ್ಟ । ಹಂ ಕ್ಷಂ ತಸ್ಯೋಪರಿಷ್ಟಂದಶ ।ಶತದಳ ಮಧ್ಯ ಸ್ವಯಂ ಜ್ಯೋತಿರಸ್ತಿ ||

ಅಂತರ್ವಿದ್ರುಮ ಎಂಬ ವೃತ್ತಕ್ಕೆ ಅಂತರ್ವಿದ್ರುವ ಪ್ರಭೂಜಗಿ ಸೂತ್ರೋತವರ್ಣೋಜ್ವದ

## ಜಪ

ಓಂ ನಾಂ ಮಾಂ ಅಂ ಬ್ರಾಂ ಹ್ರಾಂ ಹ್ರೀಂ ನಮಃಶಿವಾಯ

ಓಂ ಶೀಂ ವಾಂ ಊಂ ನಾಂ ಹ್ರೂಂ ಹ್ರೈಂ ನಮಃಶಿವಾಯ

ಓಂ ಯಾಂ ಮಾಂ ಬಾಂ ಹ್ರೌಂ ಹ್ರಃ ನಮಃಶಿವಾಯ

ಬಾಂ ನಾಂ ವಾಂ ನಾಂ ಮಾಂ ಶೀಂ ವಾಂ ಯಾಂ ಓಂ ಅಂ ಮಾಂ ಶಿವಾಯ

ಓಂ ಪೂಾಂ ವಾಂ ಹ್ರಾಂ ಹ್ರೀಂ ನಮಃಶಿವಾಯ

ಬಾಂ ಸಾಂ ವಾಂ ಮಾಂ ಶೀಂ ವಾಂ ಓಂ ಶೀಂ ವಾಂ ಊಾ ಸಾಂ ಹ್ರಾಂ ಹ್ರೈಂ ನಮಃಶಿವಾಯ

ಓಂ ಶೀಂ ಯಾಂ ಓಂ ಮಾಂ ವಾಂ ಹ್ರಾಂ ಹ್ರಃ ನಮಃಶಿವಾಯ

ಬಾಂ ಸಾಂ ವಾಂ ನಾಂ ಮಾಂ ಶೀಂ ವಾಂ ಯಾಂ ಓಂ

ಆಂ ಊಾಂ ಮಾಂ ಬಾಂ ಸಾಂ ವಾಂ ನಾಂ

ಶ್ರೀಂ ವಾಂ ಯಾಂ ಓಂ ಆಂ ಊಾ ಮಾಂ ಓಂ

ಹ್ರಾಂ ನಾಂ ಆಚಾರಲಿಂಗಾಯನಮಃ

ಓಂ ಹ್ರಾ ಮಾಂ ಗುರುಲಿಂಗಾಯನಮಃ

ಓಂ ಹ್ರೂಂ ಶೀಂ ಶಿವಲಿಂಗಾಯನಮಃ

ಓಂ ಹ್ರೇಂ ವಾಂ ಜಂಗಮಲಿಂಗಾಯನಮಃ

ಓಂ ಹ್ರಾಂ ಯಾಂ ಪ್ರಸಾದಲಿಂಗಾಯನಮಃ

ಓಂ ಹ್ರಃ ಓಂ ಮಹಾಲಿಂಗಾಯನಮಃ

ಓಂ ಆಂ ಇಷ್ಟಲಿಂಗಾಯನಮಃ

ಓಂ ಊಾಂ ಪ್ರಾಣಲಿಂಗಾಯನಮಃ

ಹೀಗೆಂದು ಆರು ವೇಳೆ ಜಪಿಸುವದು.

---

## ಇಷ್ಟಲಿಂಗಕ್ಕೆ ಅರ್ಪಣ

ಓಂ ಹ್ರಃ ನಮಃಶಿವಾಯ ಎಂದು ಪೀಠದಲ್ಲಿರುವ ಆಚಾರಲಿಂಗಕ್ಕೆಂದು

ಓಂ ಹ್ರೀಂ ನಮಃ ಶಿವಾಯ ಎಂದು ಕಟಿಯಲ್ಲಿರುವ ಗುರುಲಿಂಗ ಂದು ಒವ್ಮೆ ಅರ್ಪಿಸುವದು.

ಓಂ ಹ್ರೂಂ ನಮಃಶಿವಾಯ ಎಂದು ವರ್ತುಳವಲ್ಲಿರುವ ಶಿವಲಿಂಗ ಕ್ಕೆಂದು ಅರ್ಪಿಸುವುದು.

ಓಂ ಹ್ರೈಂ ನಮಃಶಿವಾಯ ಎಂದು ಗೋಮುಖದಲ್ಲಿರುವ ಜಂಗಮ ಲಿಂಗಕ್ಕೆಂದು, ಎರಡುವೇಳೆ ಅರ್ಪಿಸುವುದು.

ಓಂ ಹ್ರೌಂ ನಮಃಶಿವಾಯ ಎಂದು ನಾಳದಲ್ಲಿರುವ ಪ್ರಸಾದ ಲಿಂಗ ಕ್ಕೆಂದು ಅರ್ಪಿಸುವುದು.

ಓಂ ಹ್ರಃ ನಮಃಶಿವಾಯ ಎಂದು ಗೋಳಕದಲ್ಲಿರುವ ಮಹಾ ಲಿಂಗಕ್ಕೆಂದು ಮೂರುವೇಳೆ ಅರ್ಪಿಸುವದು.

---

## ಲಿಂಗಗಳಿಗೆ ಅರ್ಪಿತ

ಓಂ ಹ್ರಾಂ ನಾಂ ನಮಃಶಿವಾಯ ಆಚಾರಲಿಂಗಾಯನಮಃ

ಓಂ ಹ್ರೀಂ ನಾಂ ನಮಃಶಿವಾಯ ಗುರುಲಿಂಗಾಯನಮಃ

ಇಷ್ಟಲಿಂಗವೇ ನಿಮಗರ್ಪಿತ. ಓಂ ಹ್ರೂಂ ಶೀಂ ನಮಃಶಿವಾಯ ಶಿವಲಿಂಗಾಯನಮಃ

ಓಂ ಹ್ರೈಂ ವಾಂ ನಮಃಶಿವಾಯ ಜಂಗಮಲಿಂಗಾಯನಮಃ

ಪ್ರಾಣಲಿಂಗವೇ ನಿಮಗರ್ಪಿತ. ಓಂ ಹ್ರೌಂ ಯಾಂ ನಮಃಶಿವಾಯ ಪ್ರಸಾದಲಿಂಗಾಯ ನಮಃ

ಓಂ ಹ್ರಃ ಓಂ ನಮಃಶಿವಾಯ ಮಹಾಲಿಂಗಾಯನಮಃ

ಭಾವಲಿಂಗವೇ ನಿಮಗರ್ಪಿತ. ಓಂ ನಮಃಶಿವಾಯ ಬಸವ ಚನ ಬಸವ ಪ್ರಭುಸ್ವಾಮಿ ಮುಂತಾದ ಏಳ್ನೂರೆಪ್ಪತ್ತು ಪ್ರಮಥ ಗಣಂಗಳು ನಿಮಗರ್ಪಿತ.

---

## ಅರ್ಪಣ

(೧) ಓಂ ಜಾಂ ಓಂ ಸಾಂ ಓಂ ವಾಂ ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಆಚಾರಲಿಂಗಾಯನಮಃ

(೨) ಓಂ ಬಾಂ ಓಂ ಸಾಂ ಓಂ ಮಾಂ ಜಂ ನಾಂ ಓಂ ಮಾಂ ಓಂ ಶೀಂ ಜಂ ವಾಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಗುರುಲಿಂಗಾಯನಮಃ

(೩) ಓಂ ಬಾಂ ಓಂ ಸಾಂ ಓಂ ವಾಂ ಓಂ ನಾಂ ಓಂ ಮಾಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಶಿವಲಿಂಗಾಯನಮಃ

(೪) ಓಂ ಬಾಂ ಓಂ ಸಾಂ ಓಂ ವಾಂ ಓಂ ಸಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಜಂಗಮ ಲಿಂಗಾಯನಮಃ

(೫) ಓಂ ಬಾಂ ಓಂ ಸಾಂ ಓಂ ವಾಂ ಓಂ ನಾಂ ಓಂ ಮಾಂ ಓಂ ಶೀಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಪ್ರಸಾದ ಲಿಂಗಾಯನಮಃ

(೬) ಓಂ ಬಾಂ ಓಂ ಸಾಂ ಓಂ ಸಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಓಂ ನಾಂ ಓಂ ಯಾಂ ಓಂ ಶೀಂ ಓಂ ಸಾಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಮಹಾ ಲಿಂಗಾಯನಮಃ

ಓಂ ವಾಂ ಓಂ ಸಾಂ ಓಂ ವಾಂ ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ ಓಂ ಓಂ ಓಂ ಅಂ ಓಂ ಊಂ ಓಂ ಮಾಂ ಇಷ್ಟ ಲಿಂಗಾಯನಮಃ

ಓಂ ಬಾಂ ಓಂ ಸಾಂ ಓಂ ವಾಂ ಓಂ ನಾಂ ಓಂ ಮಾಂ
ಶೀಂ ಓಂ ವಾಂ ಓಂ ಯಾಂ ಓಂ ಓಂ ಓಂ ಆಂ ಓಂ ಮಾಂ
ಪ್ರಾಣ ಲಿಂಗಾಯನಮಃ

ಓಂ ಬಾಂ ಓಂ ಸಾಂ ಓಂ ವಾಂ ಓಂ ನಾಂ ಓಂ ಮಾಂ ಓಂ
ಓಂ ವಾಂ ಓ ಂಯಾಂ ಓಂ ಓಂ ಓಂ ಅಂ ಓಂ ಊಂ ಓಂ
ಂ ಭಾವಲಿಂಗಾಯನಮಃ

---

## ಕಾಯಾರ್ಪಣ

(೧) ಭೋಜ್ಯವೆಂಬ ರೂಪವನು ಕಠಿಣವೆಂಬ ದ್ರವ್ಯವನು ಗಂಧವೆಂಬ ಪದಾರ್ಥವನು ಕ್ಷೀರ ಸ್ನಾನವನು ಓಂ ಹ್ರಾಂ ನಾಂ ನಮಃ ಶಿವಾಯ ಎಂಬ ಮಂತ್ರದಿಂದ ಆ ಪೀಠದಕ್ಷಿಣ ಆಚಾರ ಲಿಂಗಕ್ಕೆ ಅಷ್ಟ ವಿಧ ಸಕೀಲವನ್ನು ತಿಳಿದು ಸಮರ್ಪಿಸುವದು.

ಪಾನ್ಯವೆಂಬ ರೂಪು ಮೃದುವೆಂಬ ದ್ರವ್ಯವನು ರಸವೆಂಬ ಪದಾರ್ಥವನು ದಧಿ ಸ್ನಾನವನು ಓಂ ಹ್ರೀಂ ಮಾಂ ನಮಃ ಶಿವಾಯ ಎಂಬ ಮಂತ್ರದಿಂದ ಕಟಿಯಲ್ಲಿಯ ಗುರುಲಿಂಗಕ್ಕೆ ಸಮರ್ಪಿಸುವದು.

ಭಕ್ಷವೆಂಬ ರೂಪನು ಉಷ್ಣವೆಂಬ ಪದಾರ್ಥವನು ಘೃತಸ್ನಾನವ ಓಂ ಹ್ರೂಂ ಶೀಂ ನಮಃಶಿವಾಯ ಎಂಬ ಮಂತ್ರದಿಂದ ವರ್ತುಳದಲ್ಲಿಯ ಶಿವಲಿಂಗಕ್ಕೆ ಸಮರ್ಪಿಸುವದು.

ಚೋಹ್ಯವೆಂಬ ರೂಪನು ಶೈತ್ಯವೆಂಬ ದ್ರವ್ಯವನು ಸ್ಪರ್ಶವೆಂಬ ಪದಾರ್ಥವನು ಇಕ್ಷು ಕ್ಷೀರ ಸ್ನಾನವನು ಓಂ ಹ್ರೈಂ ವಾಂ ನಮಃ ಶಿವಾಯ ಎಂಬ ಮಂತ್ರದಿಂದ ಗೋಮುಖದಲ್ಲಿಯ ಜಂಗಮ ಲಿಂಗಕ್ಕೆ ಸಮರ್ಪಿಸುವದು.

ಲೇಹ್ಯವೆಂಬ ರೂಪನು ಮಿಶ್ರವೆಂಬ ದ್ರವ್ಯವನು ಶಬ್ದವೆಂಬ ಪದಾರ್ಥವನು ನಾರೀ ಕೇಳ ಕ್ಷೀರ ಸ್ನಾನವನು ಓಂ ಹ್ರಾಂ ಯಾಂ ನಮಃ ಶಿವಾಯ ಎಂಬ ಮಂತ್ರದಿಂದ ನಾಳದಲ್ಲಿಯ ಪ್ರಸಾದಲಿಂಗಕ್ಕೆ ಸಮರ್ಪಿಸುವದು.

ಇಲ್ಲದಲ್ಲಿಯ ರೂಪನು ಪರಿಣಾಮವೆಂಬ ದ್ರವ್ಯವನು ತೃಪ್ತಿಎಂಬ ಪದಾರ್ಥವನು ಪಾದೋದಕ ಸ್ನಾನವನು ಓಂ ಹ್ರಃ ಓಂ ನಮಃ ಶಿವಾಯ ಎಂಬ ಮಂತ್ರದಿಂದ ಮಸ್ತಕದಲ್ಲಿಯ ಮಹಾಲಿಂಗಕ್ಕೆ ಸಮರ್ಪಿಸುವುದು. ಕಾಯಾರ್ಪಣದ ಭೇದ ಸಮಾಪ್ತ.

---

## ನಾಲ್ಕು ಮುದ್ರೆಗಳು

ನಾಲ್ಕು ಮುದ್ರೆಗಳು ಆವಾವೆಂದರೆ:— ಧ್ಯಾನ ಮುದ್ರೆ, ಖೇಚರಿ ಮುದ್ರೆ, ಷಣ್ಮುಖ ಮುದ್ರೆ, ಶಾಂಭವೀ ಮುದ್ರೆ.

**ಧ್ಯಾನ ಮುದ್ರೆ:—** ಮನುಷ್ಯನು ಕಿಂಚಿತ್ ಜ್ಞಾನ ಹುಟ್ಟಿದ ಬಳಿಯಾದ ಒಂದು ಸ್ಥಳದಲ್ಲಿ ಪದ್ಮಾಸನ ಮಾಡಿಕೊಂಡು ಕುಳಿತು ಕಣ್ಣಿನ ನೋಟಗಳು ಎರಡನ್ನು ನಾಸಿಕಾಗ್ರದಲ್ಲಿ ದೃಷ್ಟಿ ಇಟ್ಟು ಕಣ್ಣುಗಳ ಮುಚ್ಚಿಕೊಂಡು ತನಗೆ ಹಿತವಾದ ದೇವರನ್ನು ಧ್ಯಾನ ಮಾಡುತ್ತ ಪಂಚಾಕ್ಷರೀ ಮೊದಲಾದ ಮಂತ್ರಗಳ ಜಪ ಮಾಡುವದು. ಇದೇ ಮಂತ್ರಯೋಗ, ಅದೇ ಧ್ಯಾನ ಮುದ್ರೆ.

**ಖೇಚರಿ ಮುದ್ರೆ:—** ಕೆಳಗೆ ನಾಸಿಕಾಗ್ರದಲ್ಲಿ ನೋಡುತ ತರ್ಜನಿ ಎರಡು ಬೆರಳಿನಿಂದ ಎರಡು ಕಿವಿಗಳನ್ನು ಮುಚ್ಚಿದರೆ ಅಲ್ಲಿ ಮಹಾ ಧ್ವನಿ ಕೇಳುವದು. ಆ ಧ್ವನಿ ಕೇಳು ಕೇಳುತ್ತ ಮುಂದೆ ಗೆಜ್ಜೆ ಶಬ್ದ, ಕಿರಿಗೆಜ್ಜೆ ಧ್ವನಿ, ಗಂಟೆ, ಶಂಖ ವೇಣು, ತಾಳ, ಪಿಳ್ಳಂಗೋವಿ ಮದ್ದಳೆ, ಭೇರಿ, ಮೇಘ ಇವು ಮೊದಲಾದ ದಶವಿಧ ನಾದಗಳು ಕೇಳು ವವು. ಇದರಲ್ಲಿ ಒಂಬತ್ತು ನಾದಗಳನ್ನು ಪರಿತ್ಯಾಗ ಮಾಡಿ ಹತ್ತನೇ ನಾದವನು ಅಭ್ಯಾಸ ಮಾಡಿ ಅಲ್ಲಿ ಮನಸ್ಸು ಲೀನವಾಗುವದು.

ನಾದವೇ ಪ್ರಣವನಾದ. ಅಕಾರ ಉಕಾರ ಮಕಾರಗಳು ಇವು ಮೂರು ಕೂಡಿ ಪ್ರಣವ ರೂಪಾಗಿ ಅನಾಹತ ಚಕ್ರದಲ್ಲಿ ಹುಟ್ಟಿ ಅಲ್ಲಿಂದ ಪ್ರಜ್ವಲವಾಗಿ ಕಮಲದಲ್ಲಿ ಮಹಾ ಧ್ವನಿ ಆಗುತ್ತಿರುವದು. ಇದೇ ಖೇಚರೀ ಮುದ್ರೆ. ಇದೇ ಲಯ ಯೋಗ ಮಂತ್ರ ಯೋಗದಿಂದ ಉತ್ತಮ ಶುದ್ಧ ಯೋಗಿಗಳಿಗಿಂತ ಮಧ್ಯಮ.

**ಷಣ್ಮುಖಿ ಮುದ್ರೆ** :— ಎಡಗಾಲು ಹಿಮ್ಮಡದ ಎರಡು ಪಿಡ್ರೆಗಳ ನಡುವೆ ಇಟ್ಟು ಬಲಗಾಲು ಹಿಮ್ಮಡದ ಒಕ್ಕಳದ ಬದಿಯಲ್ಲಿಟ್ಟು ಗಟ್ಟಿಯಾಗಿ ಎದೇ ಮೇಲಕ್ಕೆ ಎತ್ತಿ ಹೆಬ್ಬೆರಳಿನಲ್ಲಿ ಎರಡು ಕಣ್ಣು ಮುಚ್ಚಿ ವಾಯುವೆಂಬ ರೇಚಕ ಪೂರಕ ಕುಂಭಕ ಸುಷುಮ್ನನಾಡಿ ಸಂಗಡ ಸಹಸ್ರ ಪರಿಯಂತರ ತಂದಿಟ್ಟು ಅಲ್ಲಿದ್ದ ಜ್ಯೋತಿ ಸ್ವರೂಪದಲ್ಲಿ ಓಂ ವಣಸ (?) ಮಾಡುವದು ಯಾವದುಂಟೋ ಅದೇ ಹಠಯೋಗ. ಇದೇ ಷಣ್ಮುಖಿ. ಇದೇ ಕೇವಲ ಕುಂಭಕ, ಇದೇ ಸಿದ್ಧಾಸನ ಈ ಯೋಗ ಸಾಧಿಸುವವರು ರಾಜಯೋಗಿಗಿಂತ ಮಧ್ಯಮ, ಕಡಿಮೆಯವರಿಗಿಂತ ಉತ್ತಮ.

**ಶಾಂಭವಿ ಮುದ್ರೆ** :— ಪೂರ್ಣ ದೃಷ್ಟಿ ಎಂಬುದನ್ನು ಶುಚಿಯಾದ ಸ್ಥಳದಲ್ಲಿ ಕುಳಿತುಕೊಂಡು ಆಹಾರ ಕಟ್ಟು ಕಟ್ಟಿಕೊಂಡು ಸದ್ಗುರುವಿನ ಸ್ಮರಣೆ ಮಾಡಿ ಮೋರೆ ಸ್ವಲ್ಪ ಕೆಳಗಣ ರೆಪ್ಪೆ ಕೆಳಗೆ ಇದ್ದ ಬಿಳೀ ಗುಡ್ಡು ಬಯಲಿಗೆ ಕಾಣಿಸುವಹಾಗೆ ಇಟ್ಟು ಸ್ಥಿರವಾದ ಮನಸ್ಸುಳ್ಳವನಾದರೆ, ಈ ಪ್ರಕಾರ ದಿನ ದಿನ ಅಭ್ಯಾಸ ಮಾಡಲಾಗಿ ದೃಷ್ಟಿಗಳು ಎರಡು ಗಳಿಗೆಯಾದರೂ ನಿಂತರೆ ಗಾಢಾಂಧಕಾರ ಕತ್ತಲೆಯಾಗುವದು. ಆ ಕತ್ತಲಲ್ಲಿ ನೋಡುತ್ತ ತಾರಕಾ ಬಿಸ್ತಗಳು ಕಾಣಿಸುವವು. ಅವು ಎಲ್ಲಿ ನಷ್ಟವಾಗಿ ಹೋಗುವದನ್ನು ಒಳ್ಳೇ ಬೆಳದಿಂಗಳಲ್ಲಿ ಕಲವಾದ ಭೂತಗಳು ಕಾಣಿಸುವವು. ನಾಯಕನಾದ ಪರಮಾತ್ಮ ಸ್ವರೂಪವಾಗಿ ಪರಬ್ರಹ್ಮಕೋಟಿ ಸೂರ್ಯ ಪ್ರಕಾಶವಾಗಿ ಕಣ್ಣು ಬೊಂಬೆ ನಡುವೆ ಪರಮಾತ್ಮನ ಸದ್ಗುರುರಾಯ ಒಂದರ ಕ್ಷಣದಲ್ಲಿ ತೋರಿ ಇದ್ದಾನು. ಇದಕ್ಕೆ ಸಂದೇಹವಿಲ್ಲ.

ಕೆಲಬರು ಇದು ಶಾಂಭವಂ, ಅದು ಶಾಂಭವಂ ಎಂಬರು. ಶಾಂಭವಿ ಮುದ್ರೆಯ ಕೀಲನರಿಯದೆ ಶಾಂಭವ ಮುದ್ರೆ ಎನಲು ಗುರು ಶಿಷ್ಯ ಸಂಬಂಧ, ಶಾಂಭವೀ ಮುದ್ರೆ ಎನಲು ನಿರಾಳ ನಿಲಯ, ಶಾಂಭವಿ ಮುದ್ರೆ ಎನಲು ಶರಣ ಸತಿ ಲಿಂಗ ಪತಿನ್ಯಾಯವು ಶಾಂಭವಿಮುದ್ರೆ ಎನಲು ವಾಙ್ಮನಕ್ಕಗೋಚರ ಶಾಂಭವಿ ಮುದ್ರೆ ಎನಲು ಲಿಂಗಾಂಗ ಸಂಗ ಸಮರಸವು. ಶಾಂಭವಿ ಮುದ್ರೆ ಎನಲು ಮನು ಮುನಿ ಅಜ ಹರಿ ಇಂದ್ರಸುರಾಸುರರಿಗೆ ಅಸಾಧ್ಯವು. ಶಾಂಭವಿ ಮುದ್ರೆ ನಿಜಗುರು ಶಾಂತೇಶ್ವರನಿಗಲ್ಲದೆ ಇತರರಿಗೆ ಅಸಾಧ್ಯ.

---

## ಶಾಂಭವ ಯೋಗ

(೧) ಸರ್ಪಾಕಾರವಾದ ಸುವರ್ಣ ತಾರಕ ಮಧ್ಯದಲ್ಲಿ ಗುಹ್ಯ ರೂಪವಾದ ಅಂಗ ವಾಯು ಜ್ಯೋತಿಯು ಕಮಲದಳಾಕಾರವಾದ ಹಿರಣ್ಯ ತಾರಕವ ಕವಚವಾಗಿ ಆ ಅಂಗಮಯ ಜ್ಯೋತಿ ಬಿಂದು ಧವಳ ಕುಂಭ ಮಧ್ಯದ ನೀಲ ವರ್ಣ ತಾರಕ ಯುಗಳ ಮಧ್ಯದಲ್ಲಿ ಎರಡು ಕುಂಭ ಮಯ ಹಸ್ತ ಪರಂಜ್ಯೋತಿಗಳಾಗಿ ಬೆಳಗಲಿಕ್ಕೆ ಆ ಹಸ್ತಮಯ ಪರಂ ಜ್ಯೋತಿಗಳನು ಧವಳ ವರ್ಣ ತಾರಕವು ಮುಚ್ಚಿತ್ತು. ಆ ತ್ರಿಕೋಣ ಮಧ್ಯದಲ್ಲಿ ಮಾಣಿಕ್ಯ ವರ್ಣವಾದ ಚಿದಾಕಾಶ ತಾರಕವು ಆ ತಾರಕ ಮಧ್ಯದಲ್ಲಿ ಪಂಚ ಮುಖದಿಂದ ಒಪ್ಪಿದ ಸಮರಸಮಯ ವಿಮಲ ಪರಂ ಜ್ಯೋತಿಯನು ಹರಿತ ವರ್ಣ ತಾರಕವು ಮುಚ್ಚಿತ್ತಾಗಿ, ಈ ರೀತಿಯಲ್ಲಿ ಷಡುತಾರಕ ತ್ರಿಲಿಂಗ ಸಂಗವು ಲಿಂಗಾಂಗ ಸಂಗ ಸಮರಸವಾದ ಶಾಂಭವ ಯೋಗವು ಗುಹೇಶ್ವರ ಲಿಂಗಕ್ಕಲ್ಲದೆ ಇತರರಿಗೆ ಅಸಾಧ್ಯವು.

---

## ಪಂಚ ಮುದ್ರೆಗಳು

ಭಕ್ತ ತಾನಾದಬಳಿಕ ಪಂಚ ಮುದ್ರೆಗಳಿಂದ ಅಲಂಕೃತವಾಗಿರ ಬೇಕು. ಅಲಂಕಾರಿ ತಾನಾದಬಳಿಕ ಶಿವ ಮುದ್ರೆ ಶಿವ ಭಾವ ಅಚ್ಚೊತ್ತಿರೆ

**ತಾತ್ಪರ್ಯ:** ಪಂಚೇಂದ್ರಿಯಂಗಳ ಮುಖಸನರಿತು ಆವುದಾ ನೊಂದು ಲಿಂಗವು ಪದಾರ್ಥವಾಗಿ ಇಂದ್ರಿಯಂಗಳ ಸಮರ್ಪಿಸಿಕೊಂಡಿತು ಆ ಲಿಂಗದಲ್ಲಿಯೇ ಜೀವನು ಬೆರಸುವನೆಂದು ಈಶ್ವರನು ಪಾರ್ವತಾದೇವಿ ಯರಿಗೆ ನಿರೂಪವಂ ಕೊಟ್ಟರೆಂಬರ್ಥ. ॥ ೯ ॥

ಇಲ್ಲಿ ಪರಿಯಂತರ ಸೂರ್ಯ ಮಂಡಲವೆನಿಸುವದು. ಇನು. ಮುಂದೆ ಚಂದ್ರಮಂಡಲವು.

---

**ಪದ:–** ಹತ್ತು ಶತ ಶತದಳದೊಳಿರ್ಪ ತ್ರೈದ್ವಿದಳದೊ। ಳೊರ್ತಿ ಸುತಲಿರ್ಪ ಪ್ರಸಾದ ಪ್ರಣವದ ನಡುವೆ। ಮತ್ತೆ ಶತಕೋಟಿ ಸೋಮ ಪ್ರಕಾಶದೊಳೆಸೆವ ನಿತ್ಯ ನಿಃಕಲ ವಸ್ತುವಾ॥ ಅತ್ಯಂತ ಉನ್ಮನಿಯ ಚಕ್ರ ದೊಳು ಬೆಳಗುತಿಹ। ವಸ್ತು ನವರತ್ನ ಚಿತ್ ಸೂರ್ಯ ಚಂದ್ರರ ಪ್ರಭೆಯು। ಚಿತ್ತ ಸಂಚಲಿಸದೆ ನಿರೀಕ್ಷಿಸುತಲಿರುವಾತ ಸತ್ಯ ಬ್ರಹ್ಮ ದೈಕ್ಯನು ॥

**ಟೀಕು॥** ಹತ್ತು ಶತ ಹತ್ತುನೂರು ಕೂಡಲು ಒಂದು ಸಾವಿರ ವಾಯಿತು. ಶತ ಒಂದು ನೂರು ದಳದೊಳು ಇಂತು ಒಂದು ಸಾವಿರ ಒಂದುನೂರು ದಳಗಳುಳ್ಳ ಮರೀಚಿಕಾ ವರ್ಣದ ಕಮಲಂಗಳೊಳಗೆ ಇರ್ಪ ಆ ಸಾವಿರದಾ ನೂರಿನಳುಗಳ ಮಧ್ಯದಲ್ಲಿರುವಂಥ ತ್ರಿಮೂರು ದ್ವಿಎರಡು ದಳದೊಳು ಆ ಮೂರು ಎರಡು ಕೂಡಿ ಐದಾದ ಐದು ದಳಂಗಳೊಳಗೆ ವರ್ತಿಸುತಲಿರ್ಪ ವರ್ತಿಸುತಲಿರುವಂಥ ಪ್ರಸಾದ ಪ್ರಣ ವದ ನಡುವೆ ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಯಂಬುವ ಪ್ರಸಾದ ಪ್ರಣವಂಗಳೈದರ ಮಧ್ಯದಲ್ಲಿರುವಂಥ ಮತ್ತೆ ಆ ಮರೀಚಿಕಾ ವರ್ಣವ ರಿ ಶತಕೋಟಿ ಸೋಮಪ್ರಕಾಶದೊಳೆಸೆವ ಒಂದು ಅರ್ಬುದ ಚಂದ್ರ ಪ್ರಕಾಶದಿಂದೊಪ್ಪುವ ನಿತ್ಯ ಕೇಡಿಲ್ಲದ ನಿಃಕಲ ವಸ್ತುವ ಷಟ್ಕಲಾತೀತ ನಿಃಕಲಯೆನಿಸುವ ನಿಃಕಲ ಬ್ರಹ್ಮವನ್ನು ಅತ್ಯಂತ ಓಂಪೆ ಹೇಳಿದಾಧಾ ರಾದಿ ಷಡು ಚಕ್ರಂಗಳಿಂ ಮಿಗಿಲಾದ ಉತ್ಕೃಷ್ಟಯ ಬ್ರಹ್ಮ ರಂಧ್ರದಲ್ಲಿಯ ಚಕ್ರದೊಳು ನೆತ್ತಿ ಸ್ಥಾನದಲ್ಲಿರುವಂಥ ಬ್ರಹ್ಮ ಚಕ್ರದಲ್ಲಿ ಬೆಳಗುತಿಹ ಪ್ರಕಾಶಿಸುತ್ತಿರುವಂಥ ವಸ್ತು ಆ ಕಮಲ ಕರ್ಣಿಕಾ ಮಧ್ಯದಲ್ಲಿರುವ

ಶೂನ್ಯಾಕಾರದ ಗರ್ಭ ಗೃಹದೊಳಗಣ ಓಂಕಾರ ಮಂತ್ರಮೂರ್ತಿ
ನಿಃಕಲ ಬ್ರಹ್ಮವು ನವರತ್ನ ಮೌಕ್ತಿಕಾದಿ ನವರತ್ನಂಗಳ ಚಿತ್ ಸೂರ್ಯನ
ಜ್ಞಾನ ಭಾಸ್ಕರನ ಚಂದ್ರರ ಪ್ರಭೆಯು ಜ್ಞಾನ ಚಂದ್ರರ ದಿವ್ಯ ಕಾಂತಿ
ಯನು ಚಿತ್ತ ಸಂಚಲಿಸದೆ ಮನಸ್ಸು ಎಡಬಲಕ್ಕೆ ಹರಿಯಲೀಸವೆ ಆ
ಸಾವಿರದ ನೂರು ದಳಂಗಳಲ್ಲಿಯು ಸಾವಿರದ ನೂರು ಪ್ರಣವಂಗಳಿಂದೆ
ಷಡಕ್ಷರ ಮಂತ್ರಸ್ಮರಣೆಯುಕ್ತವಾಗಿ ಪಂಚ ಪ್ರಸಾದ ಪ್ರಣಮಂಗಳ
ಧ್ಯಾನದಿಂದೆ ಮಂಡಲ ತ್ರಯದ ಅಕಾರ ಉಕಾರ ಮಕಾರವೆಂಬ ಪ್ರಣವ
ತ್ರಯಂಗಳ ಸ್ಮರಿಸುತ ಓಂಕಾರ ಮಂತ್ರಮೂರ್ತಿ ನಿಃಕಲ ಲಿಂಗವನ್ನು
ಮಾನಸದಿಂ ಪೂಜಿಸಿ ಆ ಮಹಾ ಬೆಳಗಿನ ಪದಾರ್ಥವನರ್ಪಿಸಿ ಅಂತಪ್ಪ
ನಿಃಕಲ ಲಿಂಗದ ಬೆಳಗಿನ ಪ್ರಸಾದವನು ನಿರೀಕ್ಷಿಸುತಲಿರುವಾತ ಆ ನಿಃಕಲ
ಲಿಂಗದ ಧ್ಯಾನದಿಂದಲೇ ಆ ಚಿತ್ ಬೆಳಗ ನೋಡಲಾಗಿ ಅದು ಆ
ಲಿಂಗದ ಬೆಳಗಿನ ಪ್ರಕಾಶವೆನಿಸುವದು. ಅಂತಪ್ಪ ಪ್ರಸಾದಮಯವಾದ
ಆ ಮಹಾ ಬೆಳಗಿನ ಪ್ರಕಾಶವನ್ನು ಜ್ಞಾನ ಚಕ್ಷುವಿನಿಂದ ನೋಡುವ
ಶರಣರು ಸತ್ಯ ಯಥಾರ್ಥವಾದ ಬ್ರಹ್ಮಸೊಳೈಕ್ಯವು. ಆ ನಿಃಕಲ ಲಿಂಗ
ದಲ್ಲಿಯೇ ಏಕಾರ್ಥವಹನೆಂಬರ್ಥ ॥

ಸಾಕ್ಷಿ— ಶ್ಲೋ ॥ ಯಥಾ ವಹ್ನಿ ತಥಾ ಕಾಷ್ಠೆ । ಯಥಾ
ಕ್ಷೀರ ತಥಾ ಘೃತಂ । ಯಥಾ ತಿಲೇ ತಥಾ ತೈಲಂ । ಸರ್ವತ್ರ
ವಸ್ಥಿತಂ ಕಲಃ ॥೧॥

ತಾತ್ಪರ್ಯ:— ಬ್ರಹ್ಮರಂಧ್ರದಲ್ಲಿರುವ ಚಿತ್ಕಲೆಯು ಹ್ಯಾಂಗಿಹು
ದೆಂದಡೆ ಕಾಷ್ಟದಲ್ಲಿ ಅಗ್ನಿ ಹಾಲಿನಲ್ಲಿ ತುಪ್ಪ ಎಳ್ಳಿನಲ್ಲಿ ಎಣ್ಣೆ ಹೇಗೆ
ಹುದುಗಿರ್ಪುದೋ ಹಾಗೆ ಆಧಾರಾದಿ ಆಜ್ಞಾಂತವಾದ ಎಲ್ಲಾ ತಾವಿನ
ಲ್ಲಿಯೂ ಇಂತಪ್ಪ ಕಳೆಯು ಇರುತ್ತಿಹುದೆಂಬ ತಾತ್ಪರ್ಯ ॥೧೦॥

---

ಪದ ॥ ಆರು ನೆಲೆಮಂಟಪದ ನೀರೇ ಜನಂಗಳೊಳ । ಗೇರಿರುವ
ಷಸ್ಟದ್ವಿವಿಂಶತಿ ಪುನಃ ಪುನದಿ । ಸೇರಿಸಲು, ನವ ಉಭಯ, ಶತಶತವು
ಸಾವಿರದಿ ತೋರುತಿಹ ದಳಕಮಲದೀ ॥ ಆ ರಮ್ಯದಿಂಪಲ್ಲಿ ಮರಿಚಿ
ವರ್ಣದೊಳಿರ್ಪ । ವಾರಿ ಪತ್ರದೊಳು ವಿಸ್ತರಿಸಿರ್ಪ ವ್ಯಂಜನದಿ। ಮಾರ
ಹರ ಶರಣರದನಾರೈದು ನೋಡುವುದು ಘೋರ ಭವಿಗಳಿಗಿದಸದಳಾ ॥

ಟೀಕು ॥ ಆರು ನೆಲೆ ಆಧಾರಾದಿ ಆಜ್ಞಾಂತವಾದ ಷಡು
ಚಕ್ರಂಗಳು ಒಂದರಮೇಲೊಂದಂತರಗಳಾಗಿಹ ಕಾರಣ ಆರು ನೆಲೆ ಎನಿ
ಸುವವು. ಮಂಟಪ ಆ ಷಡುಚಕ್ರಂಗಳಲ್ಲಿರುವ ಷಟ್ ಕಮಲಂಗಳ
ಕರ್ಣಿಕಾ ಮಧ್ಯದ ಚತುಃಕೋಣೆ, ಧನುರ್ಗತಿ, ತ್ರಿಕೋಣೆ, ಷಟ್ಕೋಣೆ,
ವೃತ್ತಾಕಾರ ತಮಂಧಾಕಾರವೆಂಬ ಗರ್ಭ ಗೃಹಂಗಳೇ ಮಂಟಪವೆನಿಸು
ವವು. ನೀರಜ ಈ ಷಡುಚಕ್ರಂಗಳಲ್ಲಿರುವ ಷಡುಕಮಲಂಗಳ ಎಸಳಂಗ
ಳೊಳು ಆ ಷಡುಕಮಲಂಗಳ ಐವತ್ತು ದಳಂಗಳೊಳಗೆ ಏರಿರುವ ಆ
ದಳಂಗಳ ಮೇಲಾರೂಢವಾಗಿರುವ ಪನ್ನ ಐವತ್ತು ಅಕ್ಷರಂಗಳನು ದ್ವಿ
ವಿಂಶತಿ ಇಪ್ಪತ್ತೆರಡುಬಾರಿ ಪುನಃ ಪುನದಿ ಆ ಐವತ್ತಕ್ಷರಂಗಳನು ಇಪ್ಪ
ತ್ತೆರಡಾವರ್ತಿ ಮರಳಿ ಮರಳಿ ಸೇರಿಸಲು ಗಣಿತವ ಮಾಡಲು ನವ ಉಭಯ
ಶತ ಒಂಬತ್ತು ಎರಡು ಕೂಡಿ ಹನ್ನೊಂದು ನೂರಾಯಿತ್ತು. ಶತವು
ಸ್ವರದಿ ಆ ಸಾವಿರದ ನೂರು ದಳಂಗಳಲ್ಲಿ ಸಾವಿರದ ನೂರು ಅಕ್ಷ
ರಂಗಳು ತೋರುತ್ತಿಹ ಆ ಶರಣನ ಜ್ಞಾನ ದೃಕ್ಕಿಗೆ ಕಾಣಬರುವ ದಳ
ಕಮಲದಿ ಆ ಬ್ರಹ್ಮರಂಧ್ರದಲ್ಲಿರ್ಪ ಕಮಲದ ಸಾಸಿರದ ನೂರು ದಳಗ
ಳಲ್ಲಿ ಆರವ್ಯಾದಿಂದಲಿ ಅಲ್ಲಿ ಒಪ್ಪಲ್ಪಟ್ಟ ಮರೀಚಿ ವರ್ಣದೊಳಿಪ್ಪ ಒಂದು
ಅರ್ಬುದ ಸೂರ್ಯ ಪ್ರಕಾಶವನುಳ್ಳ ಕಮಲದಲಿ ಇರ್ಪ ಇರುತಿರುವ
ವ್ಯಾರಿ ಪತ್ರದೊಳು ಆ ಹನ್ನೊಂದು ನೂರು ದಳಂಗಳುಳ್ಳ ಬ್ರಹ್ಮ ಕಮಲ
ದಲ್ಲಿ ವಿಸ್ತರಿಸಿರ್ಪ ಆ ಸಾವಿರದ ನೂರು ದಳಗಳೊಳಗೆ ಮೂಲಸ್ತಂಭ
ಸ್ವರೂಪವಾಗಿ ಮೂರ್ತಿ ಮಾಡಿಕೊಂಡಿರ್ಪ ವ್ಯಂಜನದಿ ತಲೆ ಕಟ್ಟಿಲ್ಲದ
ವ್ಯಂಜನಾಕ್ಷರಂಗಳಾದಂಥ ಳಕಾರ ಶೂನ್ಯವಾಗಿ ಕಕಾರಾದಿ ಕ್ಷಕಾರಾಂತ್ಯ
ಅಕಾರಾದಿ ಅಃಕಾರಾಂತ್ಯವಾದೈವತ್ತಕ್ಷರಂಗಳ ಆ ಸಾವಿರದ ನೂರ
ದಳಂಗಳಲ್ಲಿ ವ್ಯಂಜನಾಕ್ಷರದಿಂದೆ ಲೇಖವು ವಿಲೋಮದಲ್ಲಿರುತಿರ್ಪವು.
ಮರ್ತ್ಯಹೀನ ಶರಣರು ಮನ್ಮಥನ ಸಂಹಾರಮಾಡಿದಂಥ ಪರಶಿವನ
ಶರಣರು ಅಂತಪ್ಪ ಪರಶಿವನ ಅಂತರ ಬಾಹ್ಯಂಗಳಲ್ಲಿ ಕ್ರಿಯಾ ಜ್ಞಾನಂಗ
ಳಿಂದ ಪೂಜಿಸುವ ಶರಣರು ಇಂತಪ್ಪ ಪ್ರಾಣಲಿಂಗದ ಲಕ್ಷಣವನು ತಿಳಿದು
ಬ್ರಹ್ಮರಂಧ್ರದಲ್ಲಿರುವ ಸಹಸ್ರದ ನೂರು ದಳದ ಮರ್ಮವನು ಅರೈದು
ನೋಡುವದು. ಆ ಕಮಲ ಕರ್ಣಿಕಾ ಮಧ್ಯದಲ್ಲಿರುವ ಕರ್ಣಿಕೆಯಲ್ಲಿ
ಓಂಕಾರ ಪ್ರಣವ. ಅಲ್ಲಿ ನಿಃಕಲ ಲಿಂಗವು. ಆ ಲಿಂಗದ ತ್ರಿವಿಧ ದಿಕ್ಕಿಲ್ಲ
ಸೂರ್ಯ ಚಂದ್ರಾಗ್ನಿಯೆಂಬ ಮಂಡಲತ್ರಯ, ಆ ಮಂಡಲತ್ರಯದ

ಮಧ್ಯದಲ್ಲಿ ಅಕಾರ ಉಕಾರ ಮಕಾರವೆಂಬ ಪ್ರಣವತ್ರಯ, ಆ ಕರ್ಣಿ ಕೆಯ ಬಳಸಿನಲ್ಲಿ ವೃತ್ತಾಕಾರ, ಆ ವೃತ್ತಾಕಾರದ ಬಳಸಿನಲ್ಲಿ ಐದು ದಳ, ಆ ಪಂಚ ದಳಂಗಳಲ್ಲಿ ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಎಂಬ ಐದು ಪ್ರಸಾದ ಪ್ರಣವಂಗಳು ಮತ್ತಾದಳಂಗಳ ಹೊರವಳಯದಲ್ಲಿ ವೃತ್ತಾಕಾರ ಅದರ ಬಳಸಿನಲ್ಲಿ ೧೦೦ ದಳಂಗಳು ಆ ೧೦೦ರೊಳಗೆ ಷಡಾಧಾರ ಚಕ್ರಂಗಳಲ್ಲಿ ನ್ಯಾಸವಾಗಿರುವ ೫೦ ಅಕ್ಷರಂಗಳನು ಪೂರ್ವೋಕ್ತ ಲೋಮ ವಿಲೋಮದಿಂ ಲಿಖಿಸಲಾಗಿ ಉಭಯಂ ಗೂಡಿ ೧೦೦ ಪ್ರಣವಂಗಳಾದವು. ಆ ೧೦೦ ಪ್ರಣವಂಗಳನು ಆ ೧೦೦ ದಳಂಗಳಲ್ಲಿ ಲಿಖಿಸಿ ಇದೇ ಪರಿಯಾದಿಯಲ್ಲಿ ೧೧ ವೃತ್ತಾಕಾರಂಗಳ ಲಿಖಿಸಿ ಆ ಹನ್ನೊಂದು ವೃತ್ತಾಕಾರಂಗಳ ಬಳಸಿನಲ್ಲಿ ಹನ್ನೊಂದುನೂರು ದಳಂಗಳನು ಲಿಖಿಸಲಾಗಿ ಸಾವಿರದ ನೂರು ದಳಂಗಳಾದವು. ಆ ದಳಂಗಳಲ್ಲಿ ಐವತ್ತು ಅಕ್ಷರಂಗಳನು ಲೋಮ ವಿಲೋಮದಿಂದೆ ಲಿಖಿಸಲು ಸಾವಿರ ನೂರು ಪ್ರಣವಂಗಳಾದವು ಈ ಸಾವಿರದ ನೂರು ಪ್ರಣವಂಗಳೇ ಆ ನಿಃಕಲ ಲಿಂಗದ ೧೧ ನೂರು ಬಳಸಿನಲ್ಲಿ ಸಾವಿರದ ನೂರು ಮಂತ್ರ ಲಿಂಗಂಗಳೆಂದು ಹನ್ನೆರಡನೆಯ ಬಳಸಿನಲ್ಲಿರುವ ಐದು ಪ್ರಸಾದ ಪ್ರಣವ ಮಂತ್ರ ಲಿಂಗಂಗಳೆಂದು ಅದರೊಳಗೆ ಮಂಡಲತ್ರಯ ದಲ್ಲಿ ಆ ಉ ಮಾಕ್ಷರಂಗಳು. ಅಂತು ಸಾವಿರದ ನೂರು ಒಂಬತ್ತು ಪ್ರಣವಂಗಳನನುಭಾವ ಮುಖದಿಂ ಕಾಂಬುದಂಥಾದ್ದು ಹರ ಶರಣರಿಗಲ್ಲದೆ ಘೋರ ಭವಿಗಳಿಗಸದಳ ಇಂತಪ್ಪ ಪ್ರಾಣಲಿಂಗದ ಮರ್ಮವನರಿಯದೆ ಭವ ಘೋರದಲ್ಲಿ ತೊಳಲುವ ಭವಿಗಳಿಗೆ ಅರಿಯಲಾರದಾಗಿಹುದು ಎಂಬರ್ಥ

ಸಾಕ್ಷಿ :— ಶ್ಲೋ॥ ಷಡಕ್ಷರಾಂತ ಮಂತ್ರಸ್ಯ । ಷಡಾಧಾರಸ್ಯ ಬೀಜಕ॥ ಯಥಾಬೀಜಾಕ್ಷರಂ ಜ್ಞಾನಂ।ದುರ್ಲಭಂ ಪ್ರಣು ಪಾರ್ವತಿ

ತಾತ್ಪರ್ಯ :— ಈ ಷಡಕ್ಷರಂಗಳ ತರುವಾಯದಿಂದಪ್ಪ ಮಂತ್ರವು ಷಡಾಧಾರಂಗಳಲ್ಲಿ ಬೀಜಾಕ್ಷರಂಗಳಾಗಿರ್ಪವು. ಈ ಬೀಜಾಕ್ಷರಗಳನರಿವುದು ದುರ್ಲಭವೆಂದು ಪಾರ್ವತಾ ದೇವಿಯವರಿಗೆ ಪರಮೇಶ್ವರನು ಹೇಳಿದ ವಾಕ್ಯ ॥ ೧೧ ॥

---

ಪದ :— ಶಿರದೊಳು ಶಿಖಾಚಕ್ರ ಪರಮತ್ರೈದಳ ಪದ್ಮ । ಪರಿಪೂರ್ಣ ಮಹ ಶೂನ್ಯಾಕಾರದಿಂದೊಪ್ಪುತಿಹ । ಹರೆಯು ದ್ವಿಶತಕೋಟಿ ಪ್ರಭೆಯಿಂದ ಬಿಂಬಿಸುವ ಚಿರನಾಮ ಶೂನ್ಯಲಿಂಗ ॥ ಪರಿಪರಿಯ ನಾಮ ಸೀಮೆಯನಳಿದು ಲಿಂಗದೊಳು । ಕರಿಗೊಂಡು ಪರಮ ಕಾಷ್ಠಿತವಾಗಿಯಾ ಶರಣ । ಅರಳಿಯನಲನಯೋಗದಿರವಿನಿಂದಲಿ ತಾನು ಬೆರದಿರುವ ಶೂನ್ಯದಲಿ ॥

ಟೀಕು:— ಮಸ್ತಕಸ್ಥಾನದಲ್ಲಿರುವದೀಗ ಶಿಖಾಚಕ್ರವು. ಆ ಚಕ್ರವು ಉತ್ಕೃಷ್ಟವಾದ ಆಧಾರಾದಿ ಬ್ರಹ್ಮರಂಧ್ರಾಂತ್ಯವಾದ ಏಳು ಚಕ್ರಂಗಳಿಗೆಲ್ಲಾ ಉತ್ಕೃಷ್ಟವಾದಂಥ ತ್ರೈದಳಪದ್ಮ ಆಕವಲವು ಮೂರುದಳಂಗಳುಳ್ಳಂಥ ಪದ್ಮಪಚ್ಚ ವರ್ಣದ ಕಮಲವು ಪರಿಪೂರ್ಣ ಆ ಕಮಲದ ಮೂರು ಪತ್ರಂಗಳಲ್ಲಿ ಅ ಉ ಮ ಎಂಬ ಮೂರಕ್ಷರಂಗಳು ಮಧ್ಯ ಕರ್ಣಿಕೆಯಲ್ಲಿ ಕ್ಷಕಾರ ಪ್ರಣವದಿಂ ಪೂರ್ಣೀಕರಿಸುವಂಥ ಮಹಾ ಘನಕರವಾದಂಥ ಶೂನ್ಯಾಕಾರದಿಂದೆ ಆ ಕರ್ಣಿಕೆಯ ಮಧ್ಯದಲ್ಲಿ ಶೂನ್ಯಾಕಾರವೆಂಬ ಗರ್ಭಗೃಹದಲ್ಲಿ ಶೋಭಿಸುವ ಹರೆಯು ಚಂದ್ರರು ದ್ವಿಶತ ಕೋಟಿ ಎರಡರ್ಬುದ ಪ್ರಭೆಯಿಂದ ಪ್ರಕಾಶದಿಂದ ಬಿಂಬಿಸುವ ಪ್ರಜ್ವಲಿಸುವ ಚಿರ ಕೇಡಿಲ್ಲದ ನಾಮ ಪೆಸರುಳ್ಳಂಥಾ ಶೂನ್ಯಲಿಂಗ, ಎರಡರ್ಬುದ ಚಂದ್ರ ಪ್ರಕಾಶವನುಳ್ಳ ಕ್ಷಕಾರ ಮಂತ್ರ ಮೂರ್ತಿಯಾದ ಶೂನ್ಯ ಬ್ರಹ್ಮದಲ್ಲಿ ಪರಿಪರಿಯ ಹಲವು ಬಗೆಯ ನಾಮ, ಎಂದರೆ ನಾನು ಸನ್ಯಾಸಿ ನಾನು ದಿಗಂಬರ ನಾನು ಜಟಾಧಾರಿ ನಾನು ಶೀಲವಂತ ನಾನು ಗೃಹಸ್ಥ ನಾನು ಸೇವಾವಂತ ನಾನು ವಿರಕ್ತನೆನಿಸಿಕೊಂಬ ನಾಮದ ಹೆಸರುಗೆಯನು ಸೀಮೆಕಂಠ ಪಾವುಡ, ಧೂಳ ಪಾವುಡ ಮುಖ ಪಾವುಡ ಸರ್ವಾಂಗ ಪಾವುಡ ಚಿಲುಮಿಯಗ್ಗಣಿ, ಪಾಪಾಕ ವರ್ಜಿತ, ಪಂಙ್ತಾ ಭೇದ, ಪಾತ್ರ ಭೇದ, ಇವರು ವಿರಕ್ತರು, ಇವರು ಸಂಸಾರಿಗಳು ಎಂಬ ಪ್ರಪಂಚದ ಲೌಕಿಕ ವರ್ತನೆಯನು ಇಂತಪ್ಪ ನಾಮ ಸೀಮೆಗಳನ್ನು ಅಳಿದು ಇವೆಲ್ಲವು ಪಾರಮಾರ್ಥಕ್ಕೆ ಸಲ್ಲವೆಂದತಿಗಳೆದು ಲಿಂಗದೊಳು ಆ ಶೂನ್ಯ ಬ್ರಹ್ಮದಲ್ಲಿಯೇ ಕರಿಗೊಂಡು ಕ್ರಿಯಾಮಂತ್ರ ಧ್ಯಾನಂಗಳಿಂದ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗದಲ್ಲಿ ಶರಣನ ಮನವು ಚನ್ನಾಗಿ ಏಕೀಕರಿಸಿಕೊಂಡು ಪರಮ ಉತ್ಕೃಷ್ಟವಾದ ಕಾಷ್ಠಿತವಾಗಿ ಜಪತಪ ನಿತ್ಯ ನಿಯಮ ನವರ । ಅನ್ಯದೈವ ಪುತ್ರ ಮಿತ್ರ ಕಳತ್ರರೆಂಬ ಲೌಕಿಕ ವರ್ತನೆಯನು

ಮರೆದು ಲಿಂಗಭಾವದಲ್ಲಿಯೇ ಪರವಶನಾಗಿ ಅಂಗ ಭ್ರಾಂತನಾದಂಥ ಆ ಶರಣ ಆ ಶೂನ್ಯಲಿಂಗವನು ಮಾನಸದಲ್ಲಿ ಪೂಜಿಸುವಾತನು ಅರಳೆ ಕಾರ್ಪಾಸವು ಅನಲ ಅಗ್ನಿಯು ಯೋಗದಿರವಿನಿಂದಲಿ ಆ ಅರಳೆ ಬೆಂಕಿ ಎರಡು ಕೂಡಿ ಉರಿದಲ್ಲಿ ಅರಳೆ ಸುಟ್ಟು ಹೇಗೆ ಭಸ್ಮವಾಗುವದೋ ಅರಳೆ ಭಸ್ಮವಾದನಂತರ ಅಗ್ನಿ ಹೇಗೆ ನಂದಿ ಶಾಂತವಾಗುವದೋ ಹಾಗೆ ತಾನು ಬೆರೆದಿರುವ ಶೂನ್ಯದಲ್ಲಿ ತಾನೆನಿಸುವ ಶರಣನೇ ಅರಳೆಯಾಗಿ ಲಿಂಗವೆನಿಸುವ ಬ್ರಹ್ಮವೇ ಬೆಂಕಿಯಾಗಿ ಶರಣನ ಲಿಂಗವೊಳಕೊಂಡು ಏಕವಾದರೆಂಬರ್ಥ ॥

**ಸಾಕ್ಷಿ** :— ಶ್ಲೋ:- ಜಲತ್ಕಾಲಾನಲಪ್ರಾಭ। ತಟಿತ್ಕೋಟಿ ಸಮಪ್ರಭಾ ॥ ತಸ್ಯೋರ್ಧ್ವೇಂಚ ಶಿಖಾಸೂಕ್ಷ್ಮಾ ಚಿದ್ರೂಪ ಪರಮಾಕಲಾ

**ತಾತ್ಪರ್ಯ** :— ಹೊಳೆಯುತ್ತಿಹ ಕಾಲಾಗ್ನಿಯೋಪಾದಿ ಕಾಂತಿಯನುಳ್ಳಂಥಾ ಕೋಟಿ ಮಿಂಚುಗಳಿಗೆ ಸಮಾನವಾದ ಪ್ರಭೆಯನುಳ್ಳಂಥ ಜ್ಞಾನ ಸ್ವರೂಪವಾದಂಥ ಸೂಕ್ಷ್ಮವಾದಂಥ। ಕಳೆಯು ಶಿಖಾಗ್ರದಲ್ಲಿಹುದೆಂಬ ತಾತ್ಪರ್ಯ ॥ ೧೨ ॥

---

**ಪದ** :— ಸಿರಿಯುಳ್ಳಹರದ ಮರ್ತ್ಯದ ವ್ಯವಹಾರವನೆಲ್ಲ। ಬರಿಮಾಡಿ ಕೊಂಡಷ್ಟು ಲಿಂಗವನು ಒಟ್ಟೈಸಿ। ದೊರೆ ನಿರಂಜನ ಲಿಂಗ ಮಹವಜ್ರದಳದಲ್ಲಿರುವ ಪಶ್ಚಿಮ ಚಕ್ರದೀ ॥ ಶರಿರ ವಿಡಿದಿಹ ಶರಣಶಿರದ ಹಿಂಭಾಗದೊಳು। ಪರಿಪೂರ್ಣಬೆಳಗದಿಟ್ಟೈಸಲು ಆ ಲಿಂಗದೊಳು। ಉರಿ ಕರ್ಪೂರವುಕೂಡಿ ಧಗಧಗಿಸ ಪರಿಯಲ್ಲಿ ನೆರೆವನು ನಿರಂಜನದಲ್ಲಿ ॥

**ಟೀಕು** :— ಸಿರಿಯುಳ್ಳ ಹರದ ಐಶ್ವರ್ಯಯುಕ್ತವಾದ ವಾಣಿಜನು ಮರ್ತ್ಯದ ವ್ಯವಹಾರವನೆಲ್ಲವ ಬರಿಮಾಡಿಕೊಂಡು ತುಂಬಿಕೊಂಡು ವ್ಯವಹರಿಸುತಿರುವ ಪ್ರಕಾರವಾಗಿ ಪಾರಮಾರ್ಥ ಮುಖದಿಂ ವ್ಯವಹರಿ

ಸುವ ಶರಣನು ಅಷ್ಟಲಿಂಗವನು ಆಚಾರಾದಿ ಶೂನ್ಯಾಂತವಾದ ಎಂಟು ಲಿಂಗಗಳನು ಅಷ್ಟಚಕ್ರಗಳೆಂಬ ಅಷ್ಟದಿಕ್ಕಿನ ಅಷ್ಟಪಟ್ಟಣಕ್ಕೆ ಅಷ್ಟಲಿಂಗ ಗಳನೆ ಅಧಿಪತಿಗಳಂ ಮಾಡಿ ಅಲ್ಲಲ್ಲಿಯು ಅಂಗ ಲಿಂಗ ಹಸ್ತಮುಖ ಶಕ್ತಿ ಭಕ್ತಿ ಪ್ರಸಾದ ಪದಾರ್ಥಗಳನು ವ್ಯವಹರಿಸಿಕೊಂಡು ಒಟ್ಟೈಸಿ ಒಂದೊಂದು ಲಿಂಗದಲ್ಲಿ ಒಂದೊಂದು ಅಡಗಿ ಏಕವ ಮಾಡಿದರೆ ಆ ಅಷ್ಟಲಿಂಗಂಗ ಳನು ಗರ್ಭವಾಸವಾದ ನಿರಂಜನ ಲಿಂಗ ಮಾಯಾರಂಜನೆ ರಹಿತವಾದ ನಿರಂಜನ ಬ್ರಹ್ಮವು ವರಶ್ರೇಷ್ಠವಾದ ವಜ್ರ ವಜ್ರಪ್ರಕಾಶವನುಳ್ಳ ದಳ ದಲ್ಲಿ ಪಳಕಿನ ಪ್ರಕಾಶವನುಳ್ಳ ಏಕದಳದಲ್ಲಿ ದರ್ಪಣಾಕಾರದ ಬಿಂದು ವರ್ಣಮುದಿಂದೆ ಇರುವ ವಜ್ರಕಾಂತಿಯನುಳ್ಳ ಏಕದಳದ ಕಮಲಕರ್ಣಿ ಕೆಯಲ್ಲಿ ನಿಃಶೂನ್ಯಾಕಾರವೆಂಬ ಗರ್ಭಗೃಹದಲ್ಲಿ ಅನಂತ ಅರ್ಬುದ ಚಂದ್ರ ಪ್ರಕಾಶವನುಳ್ಳ ವ್ಯಂಜನ ಹಕಾರ ಮಂತ್ರ ಮೂರ್ತಿ ನಿರಂಜನ ಲಿಂಗ ವಾಗಿ ಮೂರ್ತವಮಾಡಿಕೊಂಡು ಇರುವಂಥ ಪಶ್ಚಿಮ ಚಕ್ರದಲ್ಲಿ ಆ ಎಂಟು ಚಕ್ರಂಗಳಿಗೆಯೂ ಉತ್ತಮವಾದ ಪಶ್ಚಿಮ ಚಕ್ರದಲ್ಲಿ ಆ ನಿರಂ ಜನ ಲಿಂಗವಿರ್ಪುದೆಂಬರ್ಥ ॥

ಶರೀರ ವಿಡಿದಿಹ ಶರಣ ಶರೀರವನು ತಾಳಿರುವಂಥ ಶರಣ ಇಷ್ಟ ಪ್ರಾಣ ಭಾವ ಲಿಂಗಂಗಳನಾರಾಧಿಸುವ ಶರಣನು ಶಿರದ ಹಿಂಭಾಗದೊಳ ಗಣ ನ ಮಸ್ತಕದ ಹಿಂದಿಕ್ಕಿನಲ್ಲಿರುವ ಪಶ್ಚಿಮ ಚಕ್ರದಲ್ಲಿ ಪರಿಪೂರ್ಣ ಕಾರತೆಯುಳ್ಳವ ಅಷ್ಟಲಿಂಗಗಳನು ತನ್ನೊಳಗೆ ತಾನೇ ತುಂಬಿಕೊಂಡು ಇರುವ ಬೆಳಗ ಅನಂತ ಕೋಟಿ ಬಾಲಸೂರ್ಯ ಪ್ರಕಾಶ ಅನಂತ ಅರ್ಬುದ ಚಂದ್ರಪ್ರಕಾಶ ಇಂತಪ್ಪ ಚಿತ್ಪ್ರಕಾಶದ ಬೆಳಗನು ದಿಟ್ಟಿಸಲು ಆ ವಜ್ರ ವರ್ಣದ ಏಕದಳ ಕಮಲವನು ಆ ನಿರಂಜನ ಲಿಂಗಕ್ಕೆ ಮೂಲ ಮಂತ್ರಯುಕ್ತನಾಗಿ ವ್ಯಂಜನ ಹಕಾರ ಮಂತ್ರ ಮೂರ್ತಿ ನಿರಂಜನ ಲಿಂಗವೇ ಸಮರ್ಪಿತವೆಂದರ್ಪಿಸಿ ಆ ಮಹಾಬೆಳಗಿನ ನಿರೀಕ್ಷಣೆಯಲ್ಲಿ ಏಕಾಗ್ರಚಿತ್ತನಾಗಿ ಅರ್ಪಿಸಲು ಆ ನಿರೀಕ್ಷಣೆಯೇ ಆ ನಿರಂಜನ ಲಿಂಗಕ್ಕೆ ಪೂಜೆಯೆನಿಸುವದು. ಆ ಲಿಂಗದೊಳು ಆ ನಿರಂಜನ ಬ್ರಹ್ಮದಲ್ಲಿಯೇ ಉರಿ ಅಗ್ನಿಯು ಕರ್ಪೂರವು ಕೂಡಿ ಏಕವಾಗಿ ಧಗಧಗಿಪ ಧಗಧಗಿಳೆ ಉರಿ ಯುತ್ತಿ ಆ ಅಗ್ನಿಯು ಕರ್ಪೂರವು ಎರಡುಕೂಡಿ ಉರಿದಲ್ಲಿ ಬೂದಿ ದೋರದೆ ಅಗ್ನಿಯೆಯಾಗಿ ಬಯಲ ವೇಧಿಸಿ ಬಯಲಾಗುವಂತೆ ನೆರೆವನು ನಿರಂಜ

ನವಲ್ಲಿ ಆ ಶರಣನೇ ಕರ್ಪೂರವಾಗಿ ಆ ಲಿಂಗವೇ ಅಗ್ನಿಯಾಗಿ ಕ್ರಿಯಾ ಜ್ಞಾನಂಗಳಿಂದೆ ಆ ಲಿಂಗವನು ಸೋಂಕಲು ಆ ಶರಣನ ಶರೀರವೆಲ್ಲವು ಲಿಂಗದಲ್ಲಿಯೇ ದಹಿಸಿ ಆ ಶರಣನು ಚಿನ್ಮಯರೂಪವೆ ಆ ನಿರಂಜನ ಲಿಂಗ ದಲ್ಲಿಯೇ ವೇಧಿಸಿ ಆ ಲಿಂಗವೆ ಯಾವನೆಂಬುದೀಗ ನೆರೆವನು ನಿರಂಜ ನದಿ ಎಂಬ ಶಬ್ದಕ್ಕರ್ಥ ॥

**ಸಾಕ್ಷಿಃ** — ಶ್ಲೋ ॥ ವಾಚಾತೀತಂ ಮನಾತೀತಂ ಭಾವಾತೀ ತಂಚ ತತ್ಪದಂ ಜ್ಞಾನಾತೀತಂ ನಿರಂಜನಂ ಕಳಾಯಾಂ ಸೂಕ್ಷ್ಮ ಭಾವಯೇತ್.

**ತಾತ್ಪರ್ಯಃ**— ಆ ಪಶ್ಚಿಮ ಚಕ್ರವಲ್ಲಿರುವ ಕಳೆಯು ವಾಕ್ಕುಗ ಳಿಗೆಯೂ ಮನಕ್ಕೆಯೂ ಭಾವಕ್ಕೆಯೂ ಜ್ಞಾನಕ್ಕೆಯೂ ಮೀರಿ ಉಳುವು ಯಾಗಿಹುದೆಂಬ ತಾತ್ಪರ್ಯ ॥ ೧೩ ॥

---

**ಪದ** ॥ ನವಚಕ್ರ ಕಮಲವನು ಮೌನದಿಂದೀಕ್ಷಿಸುತೆ । ಹವಣಿ ಸಲು ಬಾರವಣಾ ಚಕ್ರದೊಳಗಿರುತಿರ್ಪ । ನವ ರತ್ನ ಸೂತ್ರದಗ್ರದ ಕಲಶ ಮಣಿಯ ವೋಲ್ ಇರುವ ನಿರವಯ ವಸ್ತುವಾ ॥ ಪವನ ಗತಿ ಯಿಂದೆ ನವಲಿಂಗಾರ್ಚನೆಯ ಮಾಳ್ಪ ಅವನಿಯೊಳಗಿರುವ ಮನುಜರು ಗಳಾರಾದೊಡಂ । ತವೆ ಇಷ್ಟಲಿಂಗದೊಳು ಉಭಯುವಳಿದು ಧ್ಯಾನಿಸಲು ಎರಕನಿರವಯ ಲಿಂಗದೀ ॥

**ಟೀಕು** ॥ ನವ ಒಂಬತ್ತು ಚಕ್ರ ಆಧಾರಾದಿ ಪಶ್ಚಿಮಾಂತ್ಯ ಮಾದ ನವ ಚಕ್ರಂಗಳಲ್ಲಿ ಚತುರ್ದಳಾದಿ ಏಕ ದಳಾಂತ್ಯವಾದ ಒಂಭತ್ತು ಕಮಲಂಗಳನು ಮೌನದಿಂದೀಕ್ಷಿಸುತ ಅಂತರಂಗದಲ್ಲಿ ಮಾನಸ ದಿಂದೆ ಆ ನವಲಿಂಗಗಳನು ನವ ಕಮಲಂಗಳನು ದಳ ಪ್ರಣವಂಗಳನು ಬೀಜ ಪ್ರಣವಂಗಳನು ಆ ನವಲಿಂಗವಿಧದ ಪ್ರಕಾಶಂಗಳನು ಆಯಾಯ ಮಂತ್ರಸ್ಮರಣೆಯಿಂದೆ ಆಯಾಯ ಕಮಲಂಗಳಿಂದೆ ಆಯಾಯ ಲಿಂಗಂಗ ಳನು ಅರ್ಚಿಸುತ್ತ ಜ್ಞಾನ ಚಕ್ಷುವಿನಿಂ ನೋಡುತ್ತ ಹವಣಿಸಲುಬಾರದ ಅತ್ಯತಿಷ್ಠದ್ದಶಾಂಗುಲನೆಂದು ಹೇಳುವ ವಾಕ್ಯದ ಹವಣಿಗೆ ನಿಲುಕ

ದ್ದಾದ ಅಪ್ರಮಾಣವಾದ ಅಣುಚಕ್ರ ಆ ನವಲಿಂಗಂಗಳ ಅರು
ಮೇಲೆ ದಶಾಂಗುಲ ಪ್ರಮಾಣಿನಲ್ಲಿ ಜ್ಯೋತಿಯ ಪ್ರಭಾಮಂಡಲ
ಬಿಂಬಿಸುವ ಗವಾಕ್ಷಿ ದ್ವಾರದಲ್ಲಿ ಸೂಸುವ ಸೂರ್ಯನ ಪ್ರಕಾಶ
ಸುಳಿದಾಡುವ ಅಣುಗಳೋಪಾದಿಯಲ್ಲಿರುವದೇ ಅಣುಚಕ್ರವು.
ಅಣುಚಕ್ರದ ಒಳಗಿರುತಿರ್ಪ ಆ ಚಕ್ರ ಮಧ್ಯದಲ್ಲಿರುವಂಥ
ಕೋಟಿ ಬಾಲ ಸೂರ್ಯ ಪ್ರಕಾಶವನು ಅನಂತ ಅರ್ಬುದ
ಪ್ರಕಾಂತಿಯನು ಕೀಳ್ಪಡಿಸುವ ಮಹಾ ದಿವ್ಯ ಕಾಂತಿಯನುಳ್ಳ
ಹಕಾರ ಪ್ರಣಮ ಮಂತ್ರಮೂರ್ತಿ ನಿರವಯ ಲಿಂಗವಾಗಿ
ರ್ಪ ನವಂತ್ನ ಮುತ್ತು ಮಾಣಿಕ ಮುಂತಾದ ನವರತ್ನಂಗಳನು
ನವರತ್ನಗಳನು ದಾರದಲ್ಲಿ ಸರಗೊಳಿಸಿ ಅಗ್ರದ ಆ ನವರತ್ನ
ಮಾಲಿಕದ ತುದಿಯಲ್ಲಿ ಕಳಶಮಣಿಯಂತೋಲ್ ಶಿಖಾಮಣಿಯ ಸೇರಿಸಿ
ಪಾದಿಯಲ್ಲಿ ಇರುವ ನಿರವಯ ಬ್ರಹ್ಮವ ಆ ನವರತ್ನ ಮಾಲಿಕದ
ಮಣಿಯೋಪಾದಿಯಲ್ಲಿ ಆ ನವಲಿಂಗಗಳೇ ನವರತ್ನಂಗಳಾಗಿ ಆ
ಲಿಂಗಗಳ ಧ್ಯಾನಿಸುವ ಶರಣನ ಧ್ಯಾನವೇ ಸೂತ್ರವಾಗಿ ಆ ನವ
ಗಗಳನರ್ಚಿಸುವ ಅರ್ಚನೆಯೇ ಜ್ಞಾನ ಜಪವಾಗಿ (ಅಂತಪ್ಪ ನವ
ಗಗಳಿಗೆ ಶಿಖಾಮಣಿಯೆನಿಸುವ ನಿರವಯ ವಸ್ತುವನು ಪವನ ಗತಿ
ಂದೆ ಚಿತ್ಪ್ರಾಣ ವಾಯು ಸ್ವರೂಪಿನಿಂದೆ ನವಲಿಂಗಾರ್ಚನೆಯ ಮಾಳ್ಪ
ಅಂತಪ್ಪ ನವ ಬ್ರಹ್ಮ ಜ್ಞಾನದಿಂದೆ ಅರ್ಚನೆಯ ಮಾಡುವಂಥವರುಗಳು
ವನಿಯೊಳಗಿರುವ ಈ ಭೂಮಿಯ ಮೇಲಿರುವ ಮನುಜರುಗಳಾರಾದೊಡಂ
ಬ್ರಾದಿ ಶ್ವಪಚಾಂತ್ಯವಾದವರೊಳಗಾರಾದೊಡಾಗಲಿ ತವೆ ಚನ್ನಾಗಿ
ಲಿಂಗದೆ ಳು ಗೋಳಕ ಗೋಮುಖ ವೃತ್ತಾಕಾರಂಗಳಿಂದೇಕವಾದ
ಮಹಾಲಿಂಗದಲ್ಲಿ ಉಭಯವಳಿದು ಅಂತರಂಗದಿ ಪ್ರಾಣಲಿಂಗವೇ
ರೂಪವಾಗಿ ಬಾಹ್ಯದಲ್ಲಿ ಷಟ್ಕೃತಿಗಳಿಂ ಕೂಡಿ ಇಷ್ಟಲಿಂಗವೆನಿಸಿ
ಇಷ್ಟಲಿಂಗವೇ ಜ್ಞಾನಸ್ವರೂಪಿನಿಂದಂತರಂಗದಲ್ಲಿ ಆಚಾರಾದಿ ಮಹಾ
ಲಿಂಗಾಂತ್ಯವಾದ ಪ್ರಾಣಲಿಂಗವೆನಿಸಿತ್ತು. ಇಂತು ಅಂತರ್ಬಾಹ್ಯದಲ್ಲಿ
ಧ್ಯಾನ ಪೂಜಾ ನಿಮಿತ್ಯವಾಗಿ ಇಷ್ಟ ಪ್ರಾಣವೆನಿಸಿಕೊಂಬುದು ಒಂದೇ
ವಸ್ತುವೆಂದರಿದು ಧ್ಯಾನಿಸಲು ಬಹಿರಂಗದಿಷ್ಟಲಿಂಗದ ಪೀಠ ಕಟಿ ವೃತ್ತ
ಗೋಮುಖನಾಳ ಗೋಳಕಂಗಳಲ್ಲಿ ಷಡಕ್ಷರ ಸ್ವರೂಪ ಷಡ್ವಿಧ ಲಿಂಗಂಗಳ
ಕ್ರಿಯಾ ಪೂಜೆಯ ಮಾಡುವುದು. ಅಂತರಂಗದಲ್ಲಿ ಆಧಾರಾದಿ

ಆಜ್ಞಾಂತ್ಯವಾದ ಷಡುಚಕ್ರಂಗಳಲ್ಲಿ ಷಡಕ್ಷರ ಷಡ್ವಿಧ ಲಿಂಗಂಗಳ ಧ್ಯಾನಿಸಿ ಜ್ಞಾನಪೂಜೆಯ ಮಾಡುವುದು. ಇಂತು ಅಂತರಂಗ ಬಹಿರಂಗ ದಲ್ಲಿ ಕ್ರಿಯಾ ಜ್ಞಾನಗಳಿಂ ಧ್ಯಾನಿಸಲು ಎರಕ ನಿರವಯ ಲಿಂಗದಿ ಇಂತಪ್ಪ ಇಷ್ಟ ಪ್ರಾಣ ಭಾವ ಲಿಂಗಗಳನು ಅಂತರ್ಬಾಹ್ಯದಲ್ಲಿ ಕ್ರಿಯಾ ಜ್ಞಾನಂಗಳಿಂದರ್ಚಿಸುವ ಶರಣನು ಕರುವಿಟ್ಟ ಪ್ರತಿಮೆಯೊಳಗೆ ಮೇಣ ದಾಕಾರವೆಲ್ಲವು ಅಳಿದು ಪಂಚಲೋಹ ಸುವರ್ಣ ಪ್ರತಿಮೆಯಾದಂತೆ ಆ ಶರಣನ ಶರೀರವೆಲ್ಲವು ಜ್ಞಾನಾಗ್ನಿಯಲ್ಲಿ ಕರಗಿ ನಿರಂಜನವೆಯಾದಂತೆ ಆ ನಿರವಯ ಬ್ರಹ್ಮದಲ್ಲಿಯೇ ಬದಲಾಗುವನೆಂಬರ್ಥ. ॥ ೧೪ ॥

---

**ಪದ** :— ಓಂಕಾರವೆಂಬ ಮೂಲ ಪ್ರಣವುದೊತ್ತಿನಲ್ಲಿ। ಹ್ರಾಂಕಾರವೆಂಬ ಪ್ರಣವುದಸಮಾಕ್ಷದೊಳೆಸೆವ । ಹ್ರೀಂಕಾರದೊತ್ತಿನಲಿ ನಮಃ ಶಿವಾಯೆಂಬಷ್ಟು ಮಾಯಾಖ್ಯ ಪಂಚಾಕ್ಷರಿಯಿದು ॥ ಓಂಕಾರ ಸಹಿತ ಉನ್ಮನಿ! ಐದುದಳದೊಳಿಹ । ಹ್ರೂಂಕಾರ ಹ್ರೀಕಾರ ನಿಮಿಂತುತ್ರೈಪ್ರಣ ಮಂಗಳು । ಹ್ರೂಂಕಾರ ಹ್ರೈಂಕಾರವೆನಿಪುಭಯ ಸಹ ಪಂಚ ಶೇಷ ಪ್ರಣ ಮಂಗಳೆನಿಪವೂ ॥

**ಟೀಕು** :— ಓಂಕಾರವೆಂಬ ತಾರಕಾಕೃತಿಯು ದಂಡಕಾಕೃತಿಯು ಕುಂಡಲಾಕೃತಿಯು ಅರ್ಧ ಚಂದ್ರಾಕೃತಿಯು ದರ್ಪಣಾಕೃತಿಯು ಜ್ಯೋತಿ ರಾಕೃತಿಗಳೆಂಬ ಷಟ್ಕೃತಿಗಳಿಂ ಸಂಪೂರ್ಣವಾದ ಓಂಕಾರವೆಂದು ಹೇಳಿಸಿ ಕೊಂಬ ಮೂಲ ಪ್ರಣವುದ ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಮೊದಲಾದ ಈರೇಳು ಭುವನ ಹದಿನಾಲ್ಕು ಲೋಕ ನಾಲ್ಕುವೇದ ಇಪ್ಪ ತ್ತೆಂಟಾಗಮುಗಳು ಮುಂತಾದವಕ್ಕೆ ಈ ಓಂಕಾರವೇ ಮಾತೃಸ್ಥಾನವಾದ ನಿಮಿತ್ಯ ಮೂಲ ಪ್ರಣವುವೆನಿಸುವದು. ಅಂತಪ್ಪ ಮೂಲ ಪ್ರಣವುವೆ ನಿಸುವ ಓಂಕಾರದ ಒತ್ತಿನಲ್ಲಿ ಅಂತಪ್ಪ ಓಂಕಾರ ಸಮುಕ್ಷದಲ್ಲಿ ಹ್ರಾಂಕಾರವೆಂಬ ಪ್ರಸಾದ ಪ್ರಣವುವು ಸಮುಕ್ಷದೊಳೆಸವ ಈ ಹ್ರಾಂಕಾರ ಪ್ರಣ ಮುದ ಸಮೀಪದಲ್ಲಿ ಶೋಭಿಸುವ ಹ್ರೀಂಕಾರ, ಹ್ರೀಂಕಾರವೆಂಬ ಶುದ್ಧ ಪ್ರಸಾದ ಪ್ರಣವುವು ವೃತ್ತಿನಲ್ಲಿ ಹ್ರೀಂಕಾರ ಪ್ರಣವುದ ಸಮುಕ್ಷದಲ್ಲಿ ನಮಃ ಶಿವಾಯುಯೆಂಬ ಮೂಲ ಪಂಚಾಕ್ಷರಂಗಳೈದು ಅಷ್ಟ ಇಂಕ್ರ

ಓಂ ಹ್ರಾಂ ಹ್ರಿಂ ನಮಃಶಿವಾಯವೆಂಬೆಂಟು ಪ್ರಣವುಗಳು ಮಾಯಾಖ್ಯ ಪಂಚಾಕ್ಷರಿ ಇದು ಈ ಎಂಡು ಪ್ರಣವುಗಳು ಕೂಡಲಾಗಿ ಮಾಯಾಖ್ಯ ಪಂಚಾಕ್ಷರಿಯೆಂದು ಹೇಳಲ್ಪಡುವದು. ಇದೀಗ ಮಾಯಾಖ್ಯ ಪಂಚಾಕ್ಷರಿಯು ಮಂತ್ರವು ಓಂಕಾರ ಸಹಿತ ಈ ಓಂಕಾರ ಪ್ರಣವುವಾದಿಯಾಗಿ ಉನ್ಮನಿ ಐದು ದಳದೊಳಿಹ ಉನ್ಮನಿಯೆನಿಸುವ ಬ್ರಹ್ಮರಂಧ್ರದ ಐದು ದಳದೊಳಗಿರುವ ೧೧೦೦ ದಳಗಳ ಮಧ್ಯದಲ್ಲಿರುವ ೫ ದಳಂಗಳಲ್ಲಿರುತಿರ್ಪ ಹ್ರಾಂಕಾರ ಹ್ರೀಂಕಾರವಿಂತು ತ್ರೈಪ್ರಣವುಂ ಓಂಕಾರ ಹ್ರಾಂಕಾರ ಹ್ರೀಂಗಳು ಓಂ ಹ್ರಾಂ ಹ್ರಿಂ ಎಂಬುವ ಮೂರು ಪ್ರಣವುಗಳು ಹ್ರೂಂಕಾರ ಹ್ರೈಂಕಾರವೆನಿಪುಭಯ ಹ್ರೂಂಕಾರ ಹ್ರೈಂಕಾರವೆಂಬುಭಯ ಕೂಡಿ ಪಂಚ ಶೇಷ ಪ್ರಣವುಗಳೆನಿಪವು. ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಯಂಬೈದು ಪ್ರಣವುಗಳೇ ಪ್ರಸಾದ ಪ್ರಣವುಗಳೆನಿಸುವವೆಂಬರ್ಥ ॥ ೧೫ ॥

---

**ಪದ** :— ನೆತ್ತಿಯೊಳು ರಾಜಿಸುವ ಕರ್ಣಿಕೆಯ ಪೀಠಕ್ಕೆ । ಕರ್ತುರ್ನಿಃಕಲಕೆ ಬಿತ್ತಾವುದೆಂದೊಡೆ ಪೇಳ್ವೆ । ವರ್ತಿಸುವ ಬಿಂದು ರಹಿತೋಂಕಾರ ಪ್ರಣವುವೇ ಸಾರ್ಥಕಾರಣವೆನಿಪುದೂ ॥ ಒತ್ತಿನೊಳಗಿರುವ ಪ್ರಶಿಖಿಯ ಶೂನ್ಯಕೆ ಬೀಜ । ಮತ್ತಂ । ಳಕಾರಕ್ಕೆ ಅಂತ್ಯವಾದಕ್ಷರವ । ಅರ್ಥವಿಟ್ಟರಿದುದಾಚರಿಸುತಿಹ ಶ್ರುತಿ ಮಹಿಮನಂ ಮರ್ತ್ಯನೆಂದೆನಲಾಗದು ॥

**ಟೀಕು** :— ನೆತ್ತಿಯೊಳು ಬ್ರಹ್ಮರಂಧ್ರಸ್ಥಾನದೊಳಗೆ ರಾಜಿಸುವ ಅಲ್ಲಿ ಒಪ್ಪಲ್ಪಟ್ಟಂಥ ಕರ್ಣಿಕೆಯ ಪೀಠಕ್ಕೆ ಆ ಮರೀಚಿಕಾ ವರ್ಣದ ಸಾವಿರದ ನೂರೈದು ದಳಂಗಳಿಂದೊಪ್ಪುವ ಕಮಲದ ಕಿಂಜಲ್ಕದ ಸಿಂಹಾಸನಕ್ಕೆ ಕರ್ತುರ್ ಒಡೆಯನಾದಂಥ ನಿಃಕಲಕೆ ನಿವೃತ್ಯಾದಿ ಶಾಂತ್ಯಾತೀತೋತ್ತರಾಂತ್ಯಮಾದ ಷಟ್ಕಲಾಶಕ್ತಿ ರಹಿತವಾದ ನಿಃಕಲ ಲಿಂಗಕ್ಕೆ ಬಿತ್ತಾವುದೆಂದೊಡೆ ಪೇಳ್ವೆ ಆ ನಿಃಕಲಲಿಂಗಕ್ಕೆ ಬೀಜವಾವುದೆಂದರೆ ಹೇಳ್ವೆ. ವರ್ತಿಸುವ ವೇದಾಗಮವಾಕ್ಯಂಗಳಿಂದೆ ಪ್ರವರ್ತಿಸುವ ಬಿಂದುರಹಿತ ಶಕ್ತಿ ಸ್ವರೂಪಿನ ಅನುಸ್ವಾರ ದರ್ಪಣಾಕಾರ ಶೂನ್ಯವಾದಂಥ ಓಂಕಾರ ಪ್ರಣವುವೇ ಪರಬ್ರಹ್ಮ

ಸ್ವರೂಪವಾದ ಓಂಕಾರ ಪ್ರಣವುವೇ ಸ್ವಾರ್ಥ ಕಾರಣವೆನಿಸುದು ಆ ಓಂಕಾರ ಪ್ರಣವುವೇ ಆ ನಿಃಕಲ ಲಿಂಗಕ್ಕೆ ಆ ಮೂಲೋಂಕಾರವೇ ಪರ ಶಿವ ಬೀಜಾಂಕುರವೆನಿಸುದು. ನೆತ್ತಿಯೊಳಗಿರುವ ಆ ಬ್ರಹ್ಮ ಚಕ್ರಕ್ಕೆ ಸಮೀಪದಲ್ಲಿರುವ ಆ ಪ್ರಶಿಖಿಯು ಬ್ರಹ್ಮಚಕ್ರಕುಪರಿಯಾದ ಮಸ್ತಕವ; ಶಿಖಾಸ್ಥಾನದಲ್ಲಿಯು ಶೂನ್ಯಕ್ಕೆ ಶೂನ್ಯಲಿಂಗಕ್ಕೆ ಬೀಜ ಬಿತ್ತಾವುದೆಂದರೆ ಮತ್ತೆ ಆ ಬಳಿಕ ಳಕಾರಕ್ಕೆ ಳಕಾರವೆಂಬಕ್ಷರಕ್ಕೆ ಅಂತ್ಯವಾದಕ್ಷರವ ಆ ಳಕಾರಕ್ಕೆ ಕಡೆಯಕ್ಷರವೆನಿಸುವ ಕ್ಷಕಾರವೆಂಬ ಪ್ರಣವುವನು ಅರ್ಥವಿಟ್ಟರಿದು ಅನುಭಾವ ಮುಖದಿಂವೆ ತಿಳಿದು ಶಿಖಾಚಕ್ರವಲ್ಲಿರುವ ಶೂನ್ಯ ಲಿಂಗಕ್ಕೆ ಕ್ಷಕಾರ ಪ್ರಣಮವೇ ಬೀಜ ಪ್ರಣವುವೆಂಬುವ ತಿಳಿದು ಆಚರಿಸುತ್ತಿಹ ಮಹಿಮನು ಆ ಶೂನ್ಯಲಿಂಗಕ್ಕೆ ಮನೋಹಸ್ತದಿಂವೆ ಅಂತರಂಗದಲ್ಲಿ ಪಚ್ಚವರ್ಣವ ತ್ರಿದಳಂಗಳೇ ಪುಷ್ಪವಾಗಿ ಮಧ್ಯ ಕರ್ಣಿಕೆಯೇ ಪೀಠವಾಗಿ ಉ ಮಾ ಕ್ಷರಂಗಳೇ ದಳಪ್ರಣವು ಮಂತ್ರಲಿಂಗಗಳಾಗಿ ಷಡಕ್ಷರಿಯು ಮಂತ್ರ ಸ್ಮರಣೆಯಿಂದ ಬೀಜ ಪ್ರಣವು ಕ್ಷಕಾರ ಮಂತ್ರದಿಂದೆ ಆ ಶೂನ್ಯ ಲಿಂಗವನಾರಾಧಿಸುವಂಥ ಶರಣನನ್ನು ಮರ್ತ್ಯನೆಂದೆನಲಾಗದು. ಜನನ ಮರಣಂಗಳ ಪರಿಭಾವಕ್ಕೆ ಬಂದು ಸುಖದುಃಖಗಳ ಅನುಭವಿಸುವಂಥ ಮನುಜರೊಳಗೆ ಈತನೊಬ್ಬನೆಂದೆನಲಾಗದೆಂಬರ್ಥ ||

**ಸಾಕ್ಷಿಃ**— ಶ್ಲೋ॥ ಲೋಕಾಚಾರ ನಿಶ್ಯಬ್ದಂಚ ಲೋಕಾ ಲೋಕ ವಿವರ್ಜಿತಂ॥ ಲೋಕಾಚಾರ ಪರಿಚ್ಛೇದಂ ಪ್ರಾಣಲಿಂಗಂತು ಸಂಸ್ಕೃತ:

**ತಾತ್ಪರ್ಯಃ**— ಪ್ರಾಣಲಿಂಗಿಯು ಲೋಕಾಚಾರದಲ್ಲಿ ಸಂಬಂಧಿಸುವನಲ್ಲ. ಲೋಕಾ ಲೋಕವೆಂದರೆ ಇಹ ಪರ ಲೋಕದಾಚಾರರಹಿತನೆಂಬರ್ಥ ಅಂತಾ ಲೋಕ ಲೌಕಿಕದ ವರ್ತನೆಯನತಿಗಳೆದು ಪ್ರಾಣಲಿಂಗಸೇಯಹನೆಂಬ ತಾತ್ಪರ್ಯ. ॥ ೧೬ ॥

---

**ಪದ ॥** -ಪರಮ ಪಶ್ಚಿಮ ಲಿಂಗಕಂಕುರುವಾವುದೆನೆ । ಪರವ್ಯೋಮದ ಹಕಾರವೇ ನಿರಂಜನ ಪ್ರಣವು । ತರುಣೇಂದನಂತ ಅರ್ಬುದ ಪ್ರಭೆಯ ಕಿರಣವನು ಕೊರಗಿಸುವ ಮಹ ಬೆಳಗಿನ ॥ ಚಿರ ನಿರವಯಕೆ ಅವಾಚ್ಯದ ಹಕಾರವೇ ಬೀಜ । ತರುವಾಯು ಪಿಡಿದು ಇದನಾರಾಧಿಸುವ

ಕರಣ । ಕರಣಾದಿ ಗುಣಲಿಂಗ ಕಿರಣವಾಗಿರ್ಪ ಪರಿಪೂರ್ಣ ಶಿವ ಯೋಗಿಯೂ ॥

ಟೀಕು ॥ ಪರಮ ಪೂರ್ವೋಕ್ತ ಅಷ್ಟ ಚಕ್ರಂಗಳಿಗೆಯು ಅತಿ ಉತ್ಕೃಷ್ಟವಾದ ಪಶ್ಚಿಮ ಮಸ್ತಕದ ಹಿಂಭಾಗದಲ್ಲಿರುವ ಪಶ್ಚಿಮ ಚಕ್ರ ದಲ್ಲಿರುವಂಥ ಲಿಂಗಕೆ ನಿರಂಜನ ಬ್ರಹ್ಮಗೆ ಅಂಕುರವಾವುದೆನೆ ಆ ನಿರಂ ಜನ ಲಿಂಗಕ್ಕೆ ಬೀಜಪ್ರಣಮವಾವುದೆಂದರೆ ವರ ಶ್ರೇಷ್ಠವಾದ ವ್ಯಂಜನ ಹಕಾರವೇ ನಿರಂಜನ ಪ್ರಣಮವೆನಿಸುವದು. ಆ ನಿರಂಜನ ಲಿಂಗಕ್ಕೆ ವ್ಯಂಜನ ಹಕಾರವೇ ಬೀಜ ಪ್ರಣಮವೆಂದು ಹೇಳಲ್ಪಡುವದು. ತರು ವಾಯೆಂದು ಸೂರ್ಯ ಚಂದ್ರರುಗಳು ಅನಂತ ಲಕ್ಷಿಸಲಶಕ್ಯವಾದ ಅರ್ಬುದ ಪ್ರಭೆಯ ಅನಂತರ್ಬುದ ಸೂರ್ಯ ಪ್ರಕಾಶವನು, ಅನಂತರ್ಬುದ ಚಂದ್ರ ಪ್ರಭೆಯ ಕಿರಣವನು ಕಾಂತಿಯನ್ನು ಕೊರಗಿಸುವ ಮಹಾ ಬೆಳಗಿನ ಅನಂತ ಭೇದ ಸೂರ್ಯ ಚಂದ್ರರ ಪ್ರಭೆಯನ್ನು ತಿರಸ್ಕರಿಸತಕ್ಕಂಥ ಒತ್ತರಿಸುವ ಮಹಾ ಬೆಳಗಿನ ಘನ ಪ್ರಕಾಶವನು ಘನತರವಾದ ಚಿತ್ಪ್ರಕಾಶ ಬೆಳಗನು ಳ್ಳಂಥ ಚಿರ ಹಿರಿಮ ಕಾಲಂಗಳಲ್ಲಿಯು ನಿರವಯಕ್ಕೆ 'ಶ್ರೋತ್ರತ್ವಕ್ಕು ನೇತ್ರ ಜಿಹ್ವೆ ಘ್ರಾಣಂಗಳೆಂಬ ಅವಯವಗಳು ನಾಸ್ತಿಯಾಗಿ ಅಖಂಡ ಗೋಳಕಾಕಾರ ತೇಜೋಮೂರ್ತಿಯಾದಂಥ ನಿರವಯ ಬ್ರಹ್ಮಕ್ಕೆ ಅವಾ ಚ್ಯದ ಹಕಾರವೇ ಬೀಜ ತಲೆಕಟ್ಟು ವ್ಯಂಜನ ಶೂನ್ಯವಾದ ಹಕಾರ ಪ್ರಣಮವೇ ಬೀಜಾಕ್ಷರವು. ತರುವಾಯ ನಿಡಿದು ಆಚಾರಾದಿ ನಿರವಯ್ಯ ಲಿಂಗವಂತ್ಯವಾದ ದಶಲಿಂಗಗಳನು ಗುರೂಪದೇಶದಿಂದ ಷಡ್ವಿಧ ಹಸ್ತಂಗ ಳಿಂದೆ ಪಿಡಿದು ಇದನಾರಾಧಿಸುವ ಇಷ್ಟ ಪ್ರಾಣ ಭಾವಲಿಂಗಗಳನು ಆರಾ ಧಿಸುವ ಕ್ರಿಯಾಜ್ಞಾನ ಮಾನಸದಿಂ ಪೂಜಿಸುವಂಥ ಶರಣ ಆ ಮಹಾ ಶ್ಶನೀ ಕರಣಾದಿ ಗುಣ ಷಟ್ಕರಣಂಗಳಾದಿಯಾದ ಅರುವತ್ತಾರು ಕೋಟಿ ಕರಣಾದಿ ಗುಣಂಗಳೆಲ್ಲವು ಲಿಂಗ ಕರಣಂಗಳೆಲ್ಲವು ಲಿಂಗ ಕರಣಂಗ ಳಾಗಿರ್ಪವು. ಆ ಪರಬ್ರಹ್ಮದ ಚಿತ್ಪ್ರಕಾಶವೆಯಾಗಿ ಬೆಳಗುತಿರ್ಪ ಪರಿ ಪೂರ್ಣ ಸ್ಥೂಲ ಸೂಕ್ಷ್ಮ ಕಾರಣವೆಂಬ ತ್ರಿವಿಧಾಂಗದಲ್ಲಿ ಇಷ್ಟ ಪ್ರಾಣ ಭಾವಲಿಂಗಂಗಳನ್ನು ತುಂಬಿಕೊಂಡಿರುವಂಥ ಶರಣನು ಶಿವಲಿಂಗಯೋ ಗಿಯು ಆ ಪರಶಿವ ಲಿಂಗದಲ್ಲಿಯೇ ಕೂಡಿದನೆಂಬುದೀಗ ತಾತ್ಪರ್ಯಾರ್ಥ

**ಪದಃ—** ಅವನಿಯಪ್ಪಗ್ನಿ ಮಾರುತ ವ್ಯೋಮಾತ್ಮರೆಂ । ಬಿವನ
ಳಿದು ಚಿತ್ಪೃಥ್ವಿ ಚಿಜ್ಜಲ ಚಿದಗ್ನಿ ಚಿ । ತ್ಪವನ ಚಿದ್ವ್ಯೋಮ ಚಿದಾ
ತ್ಮರೆಂದೆನಿಸಿ ಚಿಲ್ಲಿಂಗಗಳ ಭಜಿಸುತಿರ್ಪ ॥ ಶಿವಶರಣಸಂಗ ಹಸ್ತಲಿಂಗ
ಮುಖಭೇದ । ವಿವರಗಳನರಿದು ಷಡುವಿಧ ಪದಾರ್ಥಗಳನಿತ್ತು । ಶಿವ
ಪ್ರಸಾದವೇ ತನಗೆ ಒಡಲಾಗಿ ಯಿರುತಿರುವನೇ ನಿರವಯ ಭೇದಕಃ ॥

**ಟೀಕು** ॥ ಅವನಿ ಪೃಥ್ವಿಯು ಅಪ್ಪು ಜಲವು ಅಗ್ನಿ ಬೆಂಕಿಯು
ಮಾರುತ ವಾಯುವ್ಯೋಮ ಆಕಾಶ ಆತ್ಮರೆಂಬ ಚೈತನ್ಯವೆಂಬ ಆತ್ಮಗೂಡಿ
ಷಡುಭೂತಂಗಳೆಂಬವನ್ನು ಇವನಳಿದು ಈ ಷಡ್ಭೂತಂಗಳ ವಿಕಾರ
ಗುಣಂಗಳಂ ಕೆಡಿಸಿ ಚಿತ್ಪೃಥ್ವಿ ಚಿತ್ಪೃಥ್ವಿಯೇ ಅಂಗವಾದ ಭಕ್ತನು
ಚಿಜ್ಜಲ ಚಿದಪ್ಪುವೇ ಅಂಗವಾದ ಭಕ್ತನು ಚಿಜ್ಜಲ ಚಿದಪ್ಪುವೇ ಅಂಗ
ವಾದ ಮಹೇಶನು ಚಿದಗ್ನಿ ಚಿತ್ ಶಿಖಿಯೇ ಅಂಗವಾದ ಪ್ರಸಾದಿಯು
ಚಿತ್ಪವನ ಚಿದ್ವಾಯುವೇ ಅಂಗವಾದ ಪ್ರಾಣಲಿಂಗಿಯು ಚಿದ್ವ್ಯೋಮ
ಚಿದಾಕಾಶವೇ ಅಂಗವಾದ ಶರಣನು ಚಿದಾತ್ಮ ಚಿದಾತ್ಮನೇ ಅಂಗವಾದ
ಐಕ್ಯನು. ರೆಂದೆನಿಸಿ ಇಂತಿವರ ಪೂರ್ವಾಶ್ರಯದ ಜಡತ್ವವನಳಿದು ಶಿವ
ಜ್ಞಾನ ಶಿವಮಂತ್ರಕಳಿಂದೆ ಜ್ಞಾನಮೂರ್ತಿಗಳೆಂದೆನಿಸಿ ಚಿಲ್ಲಿಂಗಗಳ ಭಜ
ಸುತಿರ್ಪ ಶಿವಶರಣ ಅಂತಪ್ಪ ಷಣ್ಮೂರ್ತಿ ಷಡ್ವಿಧ ಲಿಂಗಗಳನು ಗರ್ಭೀ
ಕರಿಸಿಕೊಂಡಂಥ ಶಿವಯೋಗೀಶ್ವರನ ಅಂಗ ಚಿತ್ಪೃಥ್ವಿಯಾದಿಯಾಗಿ
ಚಿದಾತ್ಮನೇ ಅಂತ್ಯಮಾದ ಷಡ್ವಿಧಾಂಗ ಹಸ್ತಂ ಸುಚಿತ್ತವಾದಿಯಾಗಿ
ಸದ್ಭಾವಾಂತ್ಯಮಾದಾರು ಹಸ್ತಗಳು ಲಿಂಗ ಆಚಾರಾದಿ ಮಹಾ ಲಿಂಗಾಂತ್ಯ
ಮಾದಾರು ಲಿಂಗಗಳು ಮುಖ ಘ್ರಾಣಾದಿ ಹೃದಯಾಂತ್ಯಮಾದ ಷಡ್ವಿಧ
ಮುಖಂಗಳು ಈ ಭೇದ ವಿವರಗಳನರಿದು ಆಯಾಯ ಲಿಂಗಗಳಿಗೆ
ಆಯಾಯ ಹಸ್ತ ಮುಖ ಭೇದಂಗಳನು ಗುರುಮುಖದಿಂದೆ ತಿಳಿದು
ಷಡ್ವಿಧ ಪದಾರ್ಥವನಿತ್ತು ಶಬ್ದ, ಸ್ಪರ್ಶ, ರೂಪು, ರಸ, ಗಂಧ, ತೃಪ್ತಿ
ಗಳೆಂಬ ಷಡ್ವಿಧ ಪದಾರ್ಥಂಗಳನು ಷಡ್ವಿಧ ಭಕ್ತಿಯಿಂದಾಯಾಯ ಲಿಂಗ
ಕರ್ಪಿಸಿ ಶಿವಪ್ರಸಾದವೇ ಆ ಷಡ್ವಿಧ ಲಿಂಗಗಳ ಪ್ರಸಾದವೇ ತನಗೆ ಒಡ
ಲಾಗಿ ಆ ಶರಣಂಗೆ ಆ ಲಿಂಗ ಪ್ರಸಾದವೇ ಅಂಗವಾಗಿ ಇರುತಿರುವವನೆ
ಇಂತಪ್ಪ ಜ್ಞಾನ ಲಿಂಗಾರ್ಚನೆಯನು ಮಾಡಿ ಆ ಲಿಂಗ ಪ್ರಸಾದವನೆ
ಭೋಗಿಸುತ್ತಿರುವ ಶಿವಶರಣನೇ ನಿರವಯ ಭೇದಕ ಮೇಲಣ ನಿಃಕಲ

...ಗ ಶೂನ್ಯ ಲಿಂಗ ನಿರಂಜನ ಲಿಂಗವನು ಸಾಧಿಸಿ ಕೇವಲ ಪ್ರಸಾದ ...ರವಾದ ನಿರವಯ ಬ್ರಹ್ಮವನು ಸಾಧಿಸಿಕೊಂಡಾತನೆಂದು ತಾತ್ಪರ್ಯ.

...ಸಾಕ್ಷಿಃ— ಶ್ಲೋ॥ ಭಕ್ತ ಜಿಹ್ವಾಗ್ರತೋ ಲಿಂಗಂ। ಲಿಂಗ ಜಿಹ್ವಾಗ್ರತೋರುಚಿ। ರುಚಿ ಜಿಹ್ವಾಗ್ರೇ ಪ್ರಸಾದಂಚ ಪ್ರಸಾದಂ ಪರಮಂ ಪದಂ

ತಾತ್ಪರ್ಯಃ— ಶರಣನ ಜಿಹ್ವಾಗ್ರದಲ್ಲಿ ಲಿಂಗವಿಹುದು. ಲಿಂಗ ಜಿಹ್ವಾಗ್ರಹದಲ್ಲಿ ರುಚಿ ಇಹುದು. ಆ ರುಚಿಯು ಜಿಹ್ವೆಯಲ್ಲಿ ಪ್ರಸಾದ ವಿಹುದು. ಆ ಪ್ರಸಾದತಾನೇ ಪರಮ ಪದವಾದ ಮುಕ್ತಿ ಸ್ಥಾನವೆಂ ॥ ೧೮ ॥

---

ಪದಃ— ನವಗುಹ್ಯ ಸ್ಥಾನದೊಳು ನವಚಕ್ರ ನವ ವರ್ಣ ನವ ಕರ್ಣಿಕೆಯು ನವಗರ್ಭಗೃಹದೊಳಗೆ। ನವ ಬೀಜ ಪ್ರಣವದಿಂ ...ತೇಜದಿಂದಿರ್ಪ ನವಲಿಂಗ ಮೂರ್ತಿಗಳನೂ॥ ನವವಿಧದಿ ಬಳಸಿ ...ಡಿರ್ಪ ಮಂತ್ರಾಕ್ಷರದ। ಅವಯವಾಗಿರುತಿರ್ಪ ಅಧಿದೈವ ಶಕ್ತಿಯುತ ವಿವೇಕವರಿದು ನವಲಿಂಗಾರ್ಚನೆಯ ಮಾಳ್ಪನವನೆ ಮಂತ್ರಾತ್ಮನಹುದು॥

ಟೀಕುಃ— ನವಗುಹ್ಯಸ್ಥಾನದೊಳು ಇಂತಪ್ಪ ಲಿಂಗಾರ್ಚನೆಯ ಮಾಡುವ ಭಕ್ತನಂಗವೇ ಮಹಮೇರು ಪರ್ವತವು. ಆ ಪರ್ವತದೊಳಗಿ ...ಗುದ ಗುಹ್ಯ ನಾಭಿ ಹೃದಯ ಕಂಠ ಭ್ರೂಮಧ್ಯ ನೆತ್ತಿ ಶಿಖಿ ಹಿಂಭಾ ...ಸುವ ಒಂಬತ್ತು ಗವಿಗಳೆನಿಸುವ ಸ್ಥಾನಂಗಳಲ್ಲಿ ನವಚಕ್ರ

...ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆ ...ರಂಧ್ರ ಶಿಖಿ ಪಶ್ಚಿಮಚಕ್ರವೆಂದು ಒಂಬತ್ತು ಚಕ್ರಂಗಳಲ್ಲಿ ನವ ...ತ ಶ್ವೇತಕುಂಕುಮ ಹರಿತ ಸ್ಫಟಿಕ ಮಾಣಿಕ್ಯ ಮರೀಚಿಕ ಪಚ್ಚೆ ...ವೆಂಬ ಒಂಬತ್ತು ವರ್ಣಗಳು

ನವ ಪದ್ಮಕರ್ಣಿಕೆಯು ಚತುರ್ದಳ ಷಡ್ದಳ ದಶದಳ ದ್ವಾದಶ ಷೋಡಶದಳ ದ್ವಿದಳ ಸಾವಿರದನೂರೈದು ದಳತ್ರಿದಳ ಏಕದಳದ

# ಶಿವಾನುಭವ.

ಸಂಪುಟ ೨೫.] ( ಮಾಸಪತ್ರಿಕೆ ) [ ಸಂಚಿಕೆ ೧೦



ಅಕ್ಟೋಬರ ೧೯೫೧] ವಿಜಾಪೂರ [ ಆಶ್ವಿನ ೧೮೭೩

ವಾ ಚಂ. ೫-೧೨-೦

# ವಿಷಯಾನುಕ್ರಮಣಿಕೆ




## ಶಿವಾನುಭವ ಪತ್ರಿಕೆ, ವಿಜಾಪುರ.

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ ೫-೧೨-೦

# ಶಿವಾನುಭವ

ವರ್ಷ ೨೫ | ಅಕ್ಟೋಬರ ೧೯೫೦ | ಸಂಚಿಕೆ ೧೦

## ಶಾಲ್ಯದ ಅರಸಿನವರ ವಚನ

( ಸಂಗ್ರಾಹಕ:— ಶ್ರೀ ಬಿ. ನಂಜುಂಡಪ್ಪ ಕಾನಕಾನಹಳ್ಳಿ )
ಜಿ|| ಬೆಂಗಳೂರ

---

### ಭಕ್ತಿಸಾಗರ ಸರೋವರ

ರಾಗ — ಸಾವೇರಿ

ನಿನ್ನ ಬಲವೇಂ ಬಲಂ, ನೀಲಕಂಠಾ
ನಿನ್ನ ಬಲುಮೆಗೆ ಸಕಲ ನಿರ್ಜರರು ದಾನವರು
ಪನ್ನಗರು ದಿಕ್ಪಾಲಕರು ನವಗ್ರಹಗಳು ಮು
ಹೋನ್ನತರು ದೇವಮುನಿಗಳು ಸಾಕ್ಷಿನಿಮಗದೇಕಿನ್ನು ಮಿಕ್ಕವರ
ಗೊಡವೆ ?

ಬಾಹುಬಲ ನಿನ್ನೊಳುಂಟೆಂಬುದಕೆ ದೇವತಾ
ವ್ಯೂಹ ದಿರವಾಗಿರ್ಪ ಮೇರುಸಾಕ್ಷಿ ಮಿಗೆ
ಮೋಹದಟ್ಟುಳಿ ನಿನ್ನನೆಂಟನೆಂಬುದ ಕಬ್ಬ
ಗೇಹಿನಿಯ ಮಗನ ವಿಗ್ರಹವೆ ಸಾಕ್ಷಿ।

ಸ್ನೇಹಭಕ್ತರೊಳು ನಿನಗುಂಟೆಂಬುದಕೆ ಶಿಶು
ದ್ರೋಹಿಯಾದಂತಕ ನೆದೆಯೆ ಸಾಕ್ಷಿ
ಸಾಹಸವು ನಿನ್ನೊಳುಂಟೆಂಬುದಕೆ ಗೈದನೀ
ಶಾಹುತಿಶವವ ನೆಗ್ಗಿದ ದಕ್ಷನೆ ಸಾಕ್ಷಿ ॥ ೧ ॥

ಅಪರಿಮಿತ ವಸ್ತು ನೀನೆಂಬುದಕ್ಕಡಿ ಮುಡಿಯ
ನರಸಿಕಾಣದ ಹರಿಯು ವಿಧಿಯು ಸಾಕ್ಷಿ
ಉಪಮಾನರಹಿತ ನೀನೆಂಬುದಕ್ಕೊಡಲಾದ
ವಿಪುಲಾದಿ ರೂಪ ಮೂರ್ತಿಗಳೆ ಸಾಕ್ಷಿ ।
ಅಪವಾದ ನಿನ್ನೊಳಿರದೆಂಬುದಕ್ಕಾದ್ಯಂತ
ದೊಳಿರುವ ಕಟಾಹಗಳೆ ಸಾಕ್ಷಿ
ವಿಪರೀತ ಭಾವ ನಿನಗಿಲ್ಲೆಂಬುದಕ್ಕಖಿಲ
ವಿಧಿಗಳನು ಬೋಧಿಸುವ ವೇದಗಳೆ ಸಾಕ್ಷಿ ॥ ೨ ॥

ಎಲ್ಲರೊಳು ನೀನೆ ಮೇಲೆಂಬುದಕೆ ಪ್ರಣವದೊಳ
ಗುಳ್ಳಮಾತ್ರೆಗಳೊಳು ಮಕಾರ ಸಾಕ್ಷಿ
ಇಲ್ಲ ನಿನಗಿಂತಾಣ್ಮರೆಂಬುದಕೆ ಪಳೆನುಡಿಗ
ಳಿಲ್ಲವನು ಪೆತ್ತಗಾಯತ್ರಿ ಸಾಕ್ಷಿ
ಬಲ್ಲವರೊಳಗೆ ನೀನೆ ಬಲ್ಲಾತನೆಂಬುವ
ಕ್ಕೆಲ್ಲ ವೇದಗಳ ತಲೆನುಡಿ ಸಾಕ್ಷಿ
ಮಲ್ಲಿಕಾರ್ಜುನನೆ ಗೌರೀಶನೆಂಬುದಕೆಲ್ಲ
ರಲ್ಲೀಶನಿಹನೆಂದ ಕೃಷ್ಣನೇ ಸಾಕ್ಷಿ ॥ ೩ ॥

# ಅವಸ್ಥೆಗಳು.

(ಲೇಖಕರು: ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ ಮು. ಒಂಟಮುರಿ)

ಜಾಗ್ರತ್, ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳಿರುವವೆಂದು ಸಾಧಾರಣವಾಗಿ ಎಲ್ಲ ಜನರ ತಿಳುವಳಿಕೆ ಇರುವದು. ಜ್ಞಾನಿಗಳು ಇನ್ನೆರಡು ಅವಸ್ಥೆಗಳನ್ನು ಹೇಳುವರು. ಅವು ತುರೀಯ, ಮತ್ತು ತುರೀಯಾತೀತವೆಂಬುವು. ಇವುಗಳ ಸರಿಯಾದ ಅರ್ಥವನ್ನು ಅರಿತುಕೊಳ್ಳುವದು ವೀರಶೈವರಿಗೆ ಬಹು ಅವಶ್ಯವದೆ. ಆದುದರಿಂದ ಈಗ ಅವನ್ನೇ ವಿವೇಚಿಸೋಣ.

ಇವುಗಳಲ್ಲಿ ಮೊದಲಿನ ಮೂರನ್ನು ಕುರಿತು ಬಹುಜನರು ಮಾತನಾಡುತ್ತಿದ್ದರೂ, ಅವುಗಳ ಅರ್ಥವೇನೆಂದು ಕೇಳಿದರೆ ಹೀಗೆ ಹೇಳುವರು:- ಹಗಲು ಹೊತ್ತಿನಲ್ಲಿ ಮನುಷ್ಯನು ಅಡ್ಡಾಡುವನು, ತಿರುಗಾಡುವನು, ಮಾತನಾಡುವನು, ಕೆಲಸಮಾಡುವನು, ಆಗ ಅವನು ಜಾಗ್ರದವಸ್ಥೆಯಲ್ಲಿರುವನು. ರಾತ್ರಿ ಹೊತ್ತು ಬರಿಯ ಮಲಗಿಬಿಡುವನು. ಅವನ ಎಲ್ಲ ವ್ಯವಹಾರಗಳು ಆಗ ನಡೆಯುವದಿಲ್ಲ. ಬರಿಯ ವಿಶ್ರಾಂತಿಪಡೆಯುವ (ಮಲಗುವ) ದರಲ್ಲಿ ಕಾಲಕಳೆಯುವನು. ಆದಕಾರಣ ಅದಕ್ಕೆ ಸುಷುಪ್ತಾವಸ್ಥೆ ಅಂದರೆ ಗಡದು ಮಲಗುವ ಸ್ಥಿತಿ ಎಂದು ತಿಳಿಯಬೇಕು. ನಿದ್ರೆಯು ಗಾಢವಾಗಿ ಹತ್ತದೆ ಇದ್ದರೆ, ಆ ಅರೆನಿದ್ದೆಯಲ್ಲಿ ಅವನ ಚಿಂತನದ (ಮನದೊಳಗಿನ) ಕೆಲ ಕಾರ್ಯಗಳು ಪ್ರತ್ಯಕ್ಷ ನಡೆದಂತೆ ಭಾಸವಾಗುತ್ತದೆ. ಅದೇ ಕನಸು ಇಲ್ಲವೆ ಸ್ವಪ್ನ ಆಯಿತು. ಇದೇ ಅವಸ್ಥೆಗಳ ಬಗ್ಗೆ ಅವರು ಅಂದುಕೊಂಡುದರ ಸಾರವು.

ಈ ತರದ ಜಾಗ್ರತ್, ಸುಷುಪ್ತಿಗಳು ಪಶುಗಳಿಗೂ ಕೂಡ ಇರುವವು. ಅವುಗಳಿಗೆ ಕನಸುಬೀಳುವದೋ, ಇಲ್ಲವೋ ಎಂಬುದನ್ನು ನಿಶ್ಚಿತವಾಗಿ ಹೇಳಲಿಕ್ಕೆ ಬರದಿದ್ದರೂ, ಆ ಅವಸ್ಥೆಯೂ ಕೂಡ ಇರುವದೆಂದು

ಭಾವಿಸುವದು ಉಚಿತ. ಏಕೆಂದರೆ, ನಾಯಿಯು ಸ್ವಪ್ನ ಕಾಣುವದೆಂದೂ ಅದಕ್ಕೆ ಅದರ ಪೂರ್ವ ಜನ್ಮದ ಸ್ಮರಣೆ ಪ್ರಾಪ್ತವಾಗಿರುವದೆಂದೂ, ಹಿರಿಯರು ಹೇಳುವುದನ್ನು ಬಹುಜನರು ಕೇಳಿರಬಹುದು. ಹಾಗಾದರೆ ಮೂಕ ಪ್ರಾಣಿಗಳ ಈ ಮೂರವಸ್ಥೆಗಳಿಗೂ, ಮನುಷ್ಯನ ಈ ಮೂರವಸ್ಥೆಗಳಿಗೂ, ಏನಾದರೂ ಅಂತರವಿರುವದು ಯೋಗ್ಯವೋ? ಅಯೋಗ್ಯವೋ? ಎಂದು ಆಲೋಚಿಸಿದರೆ, "ಅವಶ್ಯವಾಗಿ ಮನುಷ್ಯನ ಈ ಅವಸ್ಥಾತ್ರಯವು ಭಿನ್ನವಾಗಿರಲೇ ಬೇಕು" ಎಂದು ಉತ್ತರ ಬಾರದೇ ಇರಲಾರದು. ಆದಕಾರಣ ಇವುಗಳ ಯಥಾರ್ಥವಾದ ಅರ್ಥವೇನೆಂಬುದನ್ನು ನೋಡೋಣ.

ಮನುಷ್ಯನು ಜ್ಞಾನಿಯಾದ ಪ್ರಾಣಿಯು. ಆದುದರಿಂದ ಅವನ ಜಾಗ್ರದವಸ್ಥೆಯು ಪೂರ್ತಿಯಾಗಿ ಜ್ಞಾನಮಯವಾದುದೂ ಇರುವದು ಸ್ವಾಭಾವಿಕ. ಅದನ್ನು ನಾವು ಸಾವಧಾನ ಎಂದು ಕರೆಯುತ್ತೇವೆ. ಲಗ್ನ ಕಾಲದಲ್ಲಿ (ಗೃಹಸ್ಥಾಶ್ರಮ ವಹಿಸುವಾಗ) "ಸಾವಧಾನ ಸುಮುಹೂರ್ತೇ" ಎಂದು ಪುರೋಹಿತನು ಅಕ್ಷತಾರೋಪಣ ಮಾಡುವನು. "ಇಂದಿನ ಒಳ್ಳೆಯ ಕಾಲದಲ್ಲಿ ಸಾಮಾಜಿಕರು, ಗುರುಹಿರಿಯರು ಕೂಡಿ, ನಿನ್ನನ್ನು ಗೃಹಸ್ಥನನ್ನಾಗಿ ಮಾಡುವರು. ಅದರಿಂದ ನಿನಗೆ ಈಗ ಸತಿಯೂ, ಮುಂದೆ ಸುತರೂ, ಲಭಿಸುವರು. ಆಗ ಪ್ರಪಂಚದ ಹೆಚ್ಚಿನ ಹೊಣೆಯು ನಿನ್ನಮೇಲೆ ಬರುವದು. ಆದಕಾರಣ ಬಹು ಎಚ್ಚರದಿಂದ ನಿನ್ನ ಕುಟುಂಬ, ಸಮಾಜ, ರಾಷ್ಟ್ರಗಳೊಡನೆ ನಡೆಯುತ್ತಾ ಹೋಗು" ಎಂದು ವಧೂವರರಿಗೆ ಮುಖ್ಯವಾಗಿ ವರನಿಗೆ ಒತ್ತಿ ಹೇಳುವದೇ ಇಲ್ಲಿ "ಸಾವಧಾನ" ಶಬ್ದದ ಅರ್ಥವಿರುವದು. ಮನಬಂದಂತೆ ನಡೆದು ಮೂರ್ಖತನ ಮಾಡದೆ, ಜಾಣತನದಿಂದ ವರ್ತಿಸಿ, ಆಹುದೆನ್ನಿಸಿಕೊಳ್ಳು ಎಂದು ಪುರೋಹಿತನು ಸಾರಿ ಸಾರಿ ಹೇಳಿದಂತಾಯಿತು. ಈ ಬಹು ಮೂಲ್ಯವುಳ್ಳ ಮಾತನ್ನು ಸಹ ಬಹುಶಃ ಯಾರೂ ಲಕ್ಷಿಸುವದಿಲ್ಲವೆಂಬುದು ದುಃಖದ ಸಂಗತಿಯಲ್ಲವೇ? ಇರಲಿ.

ಈಗ ಗದುಗಿನಲ್ಲಿ ವೀರಶೈವರಿಗಾಗಿ "ಸಾವಧಾನ" ವೆಂಬ ಪಾಕ್ಷಿಕ ಪತ್ರಿಕೆಯು ಹೊರಡುತ್ತಿರುವದಷ್ಟೇ? ಅದರ ಉದ್ದೇಶವಾದರೂ ಇದ

ಭಕ್ತರನ್ನು ಎಚ್ಚರಗೊಳಿಸಿ, ಯೋಗ್ಯ ಮಾರ್ಗದಲ್ಲಿ ನಡೆಯ ಹಚ್ಚುವುದೇ ಉಂಟು.

ನಮ್ಮ ಷಡ್ ಭಕ್ತಿಗಳಲ್ಲಿ ಒಂದು ಭಕ್ತಿಯು ಸಾವಧಾನವೆಂಬುದಿದೆ. ಅದು ಷಟ್‌ಸ್ಥಲಗಳಲ್ಲಿ ಮೂರನೆಯ ಮೆಟ್ಟಲಿನವನಾದ ಪ್ರಸಾದಿಯು ಪೂಜಿಸುವ ಶಿವಲಿಂಗದಲ್ಲಿರುವ ಭಕ್ತಿಯಾಗಿದೆ. ಆಗ ಅವನು "ನಾನು" ಎಂಬುದನ್ನು ತೀರ ಮರೆತು, ತನ್ನಲ್ಲಿ ಶಿವನೇ ಇರುವನೆಂದು ದೃಢವಾಗಿ ನಂಬಿ ವರ್ತಿಸಬೇಕಾಗುತ್ತದೆ. ಹೆಚ್ಚಾದ ಜಾಗ್ರತೆಯಿಂದ ನಡೆಯದಿದ್ದರೆ, ಪ್ರಸಾದಿಯಾಗುವದು ಶಕ್ಯವೇ ಇಲ್ಲ.

ಪ್ರಸಾದಿತ್ವ ಪಡೆಯುವದೇನು ಸಾಮಾನ್ಯವಲ್ಲ. ಅದು ಚನ್ನಾಗಿ ನೆಲೆಗೊಂಡಿದ್ದರೆ, ಪ್ರಾಣಲಿಂಗಿಯು ಜಂಗಮ ಲಿಂಗದ ಪೂಜೆಯಲ್ಲಿ ಯಶಸ್ವಿತೆ ದೊರಕಿಸಲು ಸುಲಭವಾಗುವದು. ಚರಲಿಂಗ ಪೂಜೆಯು ಸಿದ್ಧಿಸಿದ ಭಕ್ತನು ಆ ಲಿಂಗದಲ್ಲಿ ಬೆರೆದು ಸ್ವಯ ಜಂಗಮನೆನಿಸುವನು. ಈತನು ತನ್ನ ಸ್ವಯ ಜಂಗಮತ್ವದ ವಿಸ್ತಾರವನ್ನು ಜಗತ್ತಿನಲ್ಲಿ (ಜನಸಮೂಹದಲ್ಲಿ) ಹರವುತ್ತ ಸಂಚರಿಸಹತ್ತಿದರೆ ಅವನೇ ಮುಂದೆ ಚರಜಂಗಮನೆನಿಸುವನು. ಹೀಗೆ ಜನತೆಯನ್ನೆಲ್ಲ, "ಆತ್ಮವತ್ ಸರ್ವಭೂತಾನಿ" ಎಂಬ ತತ್ವದಂತೆ, ಜಂಗಮವನ್ನಾಗಿಸಿ, ತಾನು ಅವರಲ್ಲಿ ಚನ್ನಾಗಿ ಬೆರೆದಕೂಡಲೆ, ಪರಜಂಗಮತ್ವಕ್ಕೆ ಬಾಧ್ಯಸ್ಥನಾಗುವನು. ಇವನ್ನೇ ಆದಿಪ್ರಸಾದಿ, ಅಂತ್ಯ ಪ್ರಸಾದಿ, ಸೇವ್ಯ ಪ್ರಸಾದಿ ಎಂತಲೂ ಹೇಳುವರು. ಹೀಗೆ ಜಂಗಮತ್ವ ಪಡೆವುದೇ ಭಕ್ತತ್ವದ ಧ್ಯೇಯವಾಗಿದೆ. ಇದಾದರೆ ಮಾತ್ರ ಪ್ರಸಾದಿಯ ಪ್ರಸಾದಿತ್ವವು ಪರಿಪೂರ್ಣತೆ ಹೊಂದುವದು.

"ಅಳಿವುದು ಕಾಯವು ಉಳಿವುದಲ್ಲಿವೆ ಕೀರ್ತಿ. ಇಳೆಯೊಳು ಎಚ್ಚರಿಕೆ" ಎಂದು ದಾಸ ಪಂಥೀಯರು ಉಪದೇಶಿಸಿದ್ದಾರೆ ಇಲ್ಲಿ ಎಚ್ಚರಿಕೆ ಎಂಬುದೇ ಸಾವಧಾನವು. ಇವೆಲ್ಲವರ ಮೇಲಿಂದ ಮಾನವನ ಜಾಗ್ರತೆ ಎಂದರೇನೆಂಬುದು ತಕ್ಕಮಟ್ಟಿಗೆ ಹೊಳೆಯಲು ಸಾಕು.

ನಮ್ಮ ಹೃದಯದೊಳಗಿನ ಅನಾಹತ ಚಕ್ರದಲ್ಲಿ ಕಮಲವು ಹನ್ನೆರಡು ದಳಗಳುಳ್ಳದಿರುವದಷ್ಟೇ. ಮೊದಲಿನ ಎಂಟು ದಳಗಳು ಮೇಲ್ಮ

ಗ್ಗಲು ಎಂಟು ದಿಕ್ಕಿಗೆ ಚಕ್ರಾಕಾರವಾಗಿಯೂ, ಉಳಿದ ನಾಲ್ಕು ಆ ಕಮಲದ ನಾಳದಲ್ಲಿ ತಳತನಕ ಕ್ರಮವಾಗಿಯೂ ಇರುವವೆಂದು ಹೇಳ್ವರು. ಕಮಲದಲ್ಲಿರುವ ಕೇಸರದ ಅಗ್ರದಲ್ಲಿ ಜಾಗ್ರತ್ತು, ಕರ್ಣಿಕೆಯಲ್ಲಿ ಸ್ವಪ್ನ, ಕರ್ಣಿಕೆಯ ತಲದ ಮಧ್ಯದಲ್ಲಿರುವ ಬಿಂದುವಿನೊಳಗೆ (ಲಿಂಗದೊಳಗೆ) ಸುಷುಪ್ತಿ, ಹಾಗೂ ಕಮಲನಾಳದ ಮಧ್ಯಭಾಗದಲ್ಲಿ ವೈರಾಗ್ಯವು ಇರುವದೆಂದು ಉಸುರಿದ್ದಾರೆ. ಇವುಗಳಲ್ಲಿ ಜಾಗ್ರದವಸ್ಥೆಯನು ಮೇಲೆ ಹೇಳಿದೆ. ವೈರಾಗ್ಯದ ವಿಷಯವಾಗಿ ಈಗೇನೂ ನಮ್ಮ ಕರ್ತವ್ಯವಿಲ್ಲ. ಉಳಿದ ಸ್ವಪ್ನ ಸುಷುಪ್ತಿಗಳ ವಿಷಯವಾಗಿ ಮಾತ್ರ ಇನ್ನು ನೋಡಬೇಕಾಗಿದೆ.

**ಸ್ವಪ್ನ:—** ಇದು ಕಮಲದ ಕರ್ಣಿಕೆಯ ಭಾಗದಲ್ಲಿ ಕೆಳಗೆ ಇರುವದು. ಆದುದರಿಂದ ಅದು ಅಜ್ಞಾನದ ಪರಿಣಾಮವು. ಏಕೆಂದರೆ ಅಧಃ ಸ್ಥಾನವನಾಶ್ರಯಿಸಿದೆ. ಜಾಗ್ರತೆಯು ಅಗ್ರದಲ್ಲಿರುವದರಿಂದ, ಅದು ಜ್ಞಾನವನ್ನವಲಂಬಿಸಿರುವದು "ಮನದಲ್ಲಿದ್ದುದು ಕನಸಿನಲ್ಲಿ ಕಾಣುವದು" ಎಂದು ಹೇಳುವದುಂಟು. ಸಾಮಾನ್ಯವಾಗಿ ಬಹುಜನರು ಪ್ರಪಂಚಕ್ಕೆ ಲುಬ್ಧರಾಗಿ ಅವರ ಹೊನ್ನು ಹೆಣ್ಣು ಮಣ್ಣು ಮೊದಲಾದ ವಿಷಯಗಳನ್ನೇ ಯಾವಾಗಲೂ ಚಿಂತಿಸುತ್ತಿರುವದರಿಂದ ಕನಸಿನಲ್ಲಿ ಅವೇ ವಸ್ತುಗಳ ವ್ಯವಹಾರ ನಡೆದಂತೆ, ಭಾಸವಾಗುತ್ತದೆ. ಯಾರಾದರೂ ದೇವರನ್ನು ಕುರಿತು, ಬಹು ಆಲೋಚನೆ ಮಾಡುತ್ತ (ನೆನೆಯುತ್ತ) ಮಲಗಿದ್ದರೆ ಅವರಿಗೆ ದೇವರು ದರ್ಶನವಿತ್ತಂತೆಯೂ ತೋರುವದು. ಆದರೂ ಇವರು ಸಹ ಪ್ರಾಪಂಚಿಕ ಯೋಚನೆಯುಳ್ಳವರಾದುದರಿಂದ ಅದೂ ಅಜ್ಞಾನವೇ!

ಶ್ರೀನಿಜಗುಣ ಶಿವಯೋಗಿಗಳು, "ವಿಷಯ ಸಂಸಾರವಿದನು ಕನಸೆಂದರಿ" ಎಂದು ಹೇಳಿರುವದರಿಂದಲೂ ಆದರಂತೆ ಕಣ್ದೆರೆದು ನೋಡುವವರಿಗೆ, ಅಂತೆಯೇ ಭಾಸವಾಗುವದರಿಂದಲೂ, ಸಂಸಾರವು ಬಹು ದೊಡ್ಡ ಕನಸು. ಇದು ಜೀವಾವಧಿಯೆಲ್ಲವೂ ಬಿದ್ದಿರುವದು. 'ತಿರುಕನ ಕನಸು' ಎಂಬ ಪಾಠದಿಂದ ಬಾಲಕರ ಪುಸ್ತಕದಲ್ಲಿಯೂ ಇದೇ ಮಾತು ವರ್ಣಿತವಾಗಿದೆ. ಆ ಕಾರಣ ಈ ಪ್ರಪಂಚವನ್ನು ನಾವು ಬಿಡದೆ ಅವಲಂಬಿಸಿದರೂ, ಅದರಲ್ಲಿ ಆಸಕ್ತಿಯನ್ನಿಡದೆ (ಅದನ್ನು ನಿಜವೆಂದು ನಂಬದೆ)

ಅಲಿಪ್ತ ಭಾವನೆಯಿಂದ, ಆದರೂ ಅವಶ್ಯ ಕರ್ತವ್ಯವೆಂದು ತಿಳಿದು ನಿರ್ವಹಿಸಲೇಬೇಕು. ಆದಾಗ್ಯೂ ಅದು ವಿನಾಶವಾದುದೇ ಈ ಹಿರಿ ಸ್ವಪ್ನದ ನಿಜಸ್ಥಿತಿಯನ್ನು ವೀರಶೈವರು ಯಾವಾ ರೀತೀ ಆಚರಿಸಬೇಕು.

ಒಂದು ವೃಕ್ಷದ ಮೇಲೆ ಪಕ್ಷಿಗ
ಳೆಂದು ನಿಮಿಷದಿ ಗಜಬಜಿಸುತಲಿ ।
ಹೊಂದಿಕೊಂಡವು ಮರುಳೆ ಕಂಡೆಡೆ ಸೈದುವಂದದಲೀ ॥
ತಂದೆ ತಾಯ್ಗಳು ಬಂಧು ಬಳಗಗ ।
ಳೊಂದು ಸಮಯದಿ ಕೂಡಿ ತಮತ ।
ಮ್ಮೊಂದವನು ತೊಲಗುವರು ಋಣಸಂಬಂಧ ತೀರಿದರೇ ॥೯॥

ಎಂಬ ಪದ್ಯದ ಭಾವವಾದರೂ ಇದೇ ಇರುವದು ಕಾರಣ ವಿರಕ್ತ ಪಕ್ಕೆ ಲವ ಮಾತ್ರವೂ ಭಕ್ತನು ಒಳಗಾಗಬಾರದು.

**ಸುಷುಪ್ತಿ** :— ಇದು ಲಿಂಗದೊಡನೆ ಜೀವನು ಸಂಗವಡೆದಾ ಗಿನ ಸ್ಥಿತಿಯು. ಲಿಂಗವೆಂದರೆ ಸುಜ್ಞಾನವೆಂಬುದನ್ನು ನೀವು ಬಲ್ಲಿರಿ. ಜ್ಞಾನದಲ್ಲಿ ಬೆರೆದ ಸ್ಥಿತಿಯು ಆದಂದಮಯವಿರಲಿಕ್ಕೇ ಬೇಕು. ಅಂತೆಯೇ ಸುಷುಪ್ತಿಯಾದರೂ ಸುಖಮಯವೇ ಆಗಿರುವದು. ಇದು ಜ್ಞಾನಿ ಅಜ್ಞಾನಿಗಳೆಲ್ಲರಿಗೂ ಒದಗುವದು. ಆದರೆ ಯೋಗಿಗಳಿಗೆ (ಲಿಂಗದಲ್ಲಿ ಜಾಗ್ರದವಸ್ಥೆಯಲ್ಲಿ ಕೂಡ ಬೆರೆದವರಿಗೆ) ಆ ನಿದ್ರೆಯು (ಸುಷುಪ್ತಿಯು) ಸಮಾಧಿ ಸ್ವರೂಪವಾಗಿ ಬಿಡುವದು. "ನಿದ್ರಾ ಸಮಾಧಿಸ್ಥಿತಿಃ" ಎಂದು ಸದ್‌ಭಕ್ತರು, "ಆತ್ಮಾತ್ವಂ ಗಿರಿಜಾ ಮತಿಃ ಸಹಚರಾಃ" ಎಂದು ಪದ್ಯದಲ್ಲಿ ಹೇಳಿಕೊಂಡಿದ್ದಾರೆ. ಈ ತರದ ಸಮಾಧಿ ಸ್ಥಿತಿಯು, ಲಿಂಗಾಂಗ ಸಾಮರಸ್ಯ ಪಡೆದವರೆಲ್ಲರಿಗೂ ಲಭಿಸೇ ಲಭಿಸುವದು. ಇಂತಹ ಸುಷುಪ್ತಿಯನ್ನೇ ಭಕ್ತರು ಪಡೆಯುವದು, ಅವರ ಜನ್ಮ ಸಾಫಲ್ಯದ ಗುರುತು. ನಿಜಗುಣ ಶಿವಯೋಗೀಶ್ವರರು, "ಮಾರ ಮರ್ದನ ಶಂಭುಲಿಂಗವ ನೊಲಿಸಿ ಗಂಭೀರ ಸುಖಮೊಳಿರು" ಎಂದು

ತಮ್ಮ ಕೈವಲ್ಯ ಪದ್ಧತಿ ಗ್ರಂಥದ ಮೊದಲನೆಯ ಪದದಲ್ಲಿ ( ಹಾಡಿನಲ್ಲಿ ) ಯೇ ಹೇಳಿಬಿಟ್ಟಿದ್ದಾರೆ.

ಇನ್ನುಳಿದವು ಪಂಚಾವಸ್ಥೆಗಳಲ್ಲಿ ಕಡೆಯವಾದ ತುರೀಯ ತುರೀಯಾತೀತಗಳು. ತುರೀಯವು ನಾಲ್ಕನೆಯ ಸ್ಥಿತಿಯೆಂದು ಹೇಳುವರು. ಗ್ರಂಥಗಳಲ್ಲಿ ನೋಡಿದರೆ ಆತ್ಮಹಂಸನು, ( ಪಿಂಡ ಸ್ಥಿತಿಯ ಜೀವಾತ್ಮನು ) ತಾನಿರುವ ಅನಾಹತ ಚಕ್ರಕಮಲವನ್ನು ತ್ಯಜಿಸಿ, ಹೊರಗೆ ಬಂದರೆ ಅದು ತುರೀಯಾವಸ್ಥೆ ಎಂದು ತಿಳಿಯುತ್ತದೆ. ಕಮಲವು ಹೃದಯದಲ್ಲಿ ಮಾನವನ ದೇಹದೊಳಗೆ ಇರುತ್ತಿರುವದು. ಅದನ್ನುಬಿಟ್ಟು ಹೊರಗೆ ಬರುವದೆಂದರೆ ಅವನು ತನ್ನ ದೃಷ್ಟಿಯನ್ನು ದೇಹದ ಹೊರಗಿರುವ ಬ್ರಹ್ಮಾಂಡದಲ್ಲಿ ಹಾಕಿ, ಅದರ ನಿಜ ಸ್ಥಿತಿಯನ್ನು ಅರಿಯುವದು. ಪರಿಶುದ್ಧ ಆತ್ಮಹಂಸನ ದೃಷ್ಟಿ ಎಂದರೆ ಅದು ಜ್ಞಾನವಲ್ಲದೆ ಬೇರೇನೂ ಅಲ್ಲ. ದೃಷ್ಟಿಯನ್ನು ಹೊರಹಾಕಿದರೆ, ಅದೇ ಆತ್ಮಹಂಸನ ಪದ್ಮತ್ಯಾಗ ಮಾಡಿದಂತಾಯಿತು. ಆಗ ಜಗವು ಸಹ ದೇಹ ಮನಸ್ಸಾದಿಗಳಂತೆಯೇ ತನ್ನ ರೂಪವೇ ಇದ್ದುದು. ಅವನಿಗೆ ತೋರಿಬರುವದು. ಹೀಗೆ ಶರಣು ಮಾಡಬೇಕಾಗುವದೆಂದು, ಷಟ್ ಸ್ಥಲಗಳಲ್ಲಿ ಒಂದೇ ಇರುವದು. ಅದರಿಂದ ಸತ್ಯ ಶರಣನ ಇರವೇ ತುರೀಯಾವಸ್ಥೆಯು.

ಶರಣನು ಪ್ರಸಾದ ಲಿಂಗವಲ್ಲಿ ಬೆರೆದು ( ತುರೀಯಾವಸ್ಥೆ ಪಡೆದು ಮುಂದೆ ತನ್ನನ್ನೂ ಮತ್ತೇನನ್ನೂ ಕಾಣದವನಾಗುವನು. ಎಲ್ಲವೂ ಪ್ರಸಾದಮಯ ಏಕಮೇವಾದ್ವಿತೀಯ-ವಸ್ತುವೇ ಆಗಿ ಬಿಡುವದು. ಅದನ್ನು " ಸ್ವ-ಪರ-ಅಜ್ಞ " ಸ್ಥಲವೆಂದಿರುವರು. ಹೀಗೆ ಎಲ್ಲೆಲ್ಲಿಯೂ ತಾನೇ ತಾನಾಗಿ, ಮುಂದೆ ಜ್ಞಾನಶೂನ್ಯನಾಗುವನು. ಅದೇ ಐಕ್ಯನ ಲಿಂಗಾಂಗ ಸಾಮರಸ್ಯವೆನಿಸುವ ತುರೀಯಾತೀತಾವಸ್ಥೆಯು. ಆಗ ಅವನು ನಾದದಲ್ಲಿ ( ಪರಬ್ರಹ್ಮದಲ್ಲಿ ) ಲೀನವಾಗುವನು.

ನಾದವೆಂದರೆ " ಅ " ಕಾರವು. ಅದು " ಓಂ " ಕಾರದೊಳಗಿನ ಪ್ರಥಮ ಅಕ್ಷರವು. " ಉ " ಕಾರ " ಮ " ಕಾರಗಳು ತದನಂತರ

ಈ ಮೂರರಲ್ಲಿ ಮೊತ್ತ ಮೊದಲಿನದಾದ " ಅ " ಕಾರವೇ ಮೊದಲು ಕಂಠಸ್ಥಾನದಲ್ಲಿ ಹುಟ್ಟುವದರಿಂದ ಆ " ಅ " ಕಾರವೇ ಮೂಲ ನಾದವು. ನಾದವೆಂದರೆ ಸಪ್ಪಳ-ಧ್ವನಿ-ಸ್ವರ ಎಂದರಿಯಬೇಕು. " ಅ " ಕಾರದ ಉಚ್ಚಾರವು ಹುಟ್ಟದೆ " ಓಂ " ಕಾರ ಮಂತ್ರದ ಉತ್ಪತ್ತಿಗೆ ಅವಕಾಶವೇ ಇಲ್ಲ. " ಅ " ಕಾರವೇ ಕಂಠಮೂಲದಲ್ಲಿ ಹುಟ್ಟುವ, ಏಕಮೇವಾದ್ವಿತೀಯ ಸ್ವರೂಪವು, ನಾದವು. ಅದೇ ಪರಬ್ರಹ್ಮಸ್ವರೂಪವು. ವ್ಯಂಜನಗಳಲ್ಲಿ ಕೊನೆಯದಾದ, " ಹ್ " ಕಾರವು ಸಹ ಕಂಠದಲ್ಲಿಯೇ ಹುಟ್ಟುವದು. ಅದಕ್ಕೆ ( ಪರತಂತ್ರ ವ್ಯಂಜನಕ್ಕೆ ) ನಿರಂಜನ ಲಿಂಗ ವೆಂದು ಕರೆಯುವದಾದರೆ, ಸ್ವತಂತ್ರೋಚ್ಚಾರವಾದ ಮೂಲ ಸ್ವರ (ನಾದ ) ಕ್ಕೆ— " ಅ " ಕಾರಕ್ಕೆ ಏಕೆ ನಿರಂಜನತ್ವ - ಏಕಮೇವಾದ್ವಿತೀಯತ್ವ ಪ್ರಾಪ್ತವಾಗಬಾರದು ? ವರ್ಣಮಾಲೆಯಲ್ಲಿ " ಅ " ಕಾರದಿಂದ ಉಪಕ್ರಮವಾಗಿದ್ದರೆ, " ಹ್ " ಕಾರವು ಉಪಸಂಹಾರಾತ್ಮವಾಗಿದೆ. ಎರಡರ ಯೋಗ್ಯತೆಯೂ ಒಂದೇ ಅಂದರೆ ಪರಬ್ರಹ್ಮ ಸ್ವರೂಪವೇ ಉಂಟು. ದಕ್ಷಿಣದೇಶದವರು " ಹ್ " ಕಾರವನ್ನು " ಅ " ಕಾರವೆಂದೂ " ಅ " ಕಾರವನ್ನು " ಹ " ಕಾರವೆಂದೂ ಉಚ್ಚರಿಸುವದನ್ನು ಇಲ್ಲಿ ಸ್ಮರಣೆಗೆ ತರಬೇಕು

ಪಂಚಾವಸ್ಥೆಗಳ ಮೇಲಿನ ವಿವರಣೆಯನ್ನು ನೋಡಿದರೆ ವೀರಶೈವರಿಗೆ ಅವೆಷ್ಟು ಮಹತ್ವದವಾಗಿರುವವೆಂಬುದು ತಾನೇ ಸ್ಪಷ್ಟವಾಗುವದು. ಲಿಂಗಧಾರಿಗಳಾದ ನಾವೇನು ಬರಿಯ ಶೈವರಲ್ಲ ! ವೀರಶೈವರು. ನಮ್ಮ ವೀರತ್ವವು ನಮ್ಮ ಜ್ಞಾನಾಚರಣೆಯಿಂದಲೇ ಹೊರಹೊಮ್ಮಲಿಕ್ಕೆ ಬೇಕು. ವೀರತ್ವವೆಂದರೆ ಪರಾಕ್ರಮವು, ಇಲ್ಲವೆ ಆತ್ಮ ವಿದ್ಯೆಯಲ್ಲಿ ಪ್ರವೀಣರಾಗಿರುವದು, ಎಂಬರ್ಥವು. ಇಂತಹ ವಿಶೇಷಣದಿಂದ ಮೆರೆಯುವವನು ಅದಕ್ಕೆ ತಕ್ಕಂತೆ ವರ್ತಿಸುವದು ಅವಶ್ಯಕವಾಗಿದೆ. ಹಾಗಿಲ್ಲದಿದ್ದರೆ " ಹೆಸರಿಗೆ ಹಾಲಪ್ಪ, ಕುಡಿಯಲು ಜಲವೂ ಇಲ್ಲದಪ್ಪ " ಎಂಬ ಗಾದೆಯ ನುಡಿಗೆ ಪಾತ್ರರಾಗಬೇಕಾಗುವದು.

ಆಶಮ ಷಟ್ಪದಿ —

ಪಂಚಾವಸ್ಥೆಗಳ ।
ಮುಂಚಿನ ಮೂರಂ ಪ್ರ ।
ಪಂಚದ ಜನವೆಲ್ಲ ಪರಿಕಿಹುದು ॥

ಹಿಂಚಿ ನೆರಡುಗಳಂ ।
ಸಂಚಯಿಸೀಗಿಲ್ಲ ।
ಕೆಂಚಿದ್ವಿವರಣೆಯು ನೆಸಗಿಹುದು ॥ ೧ ॥

(ಇದು ಪ್ರೌಢ ಷಟ್ಪದಿಯ ಕಿರಿಯ ಸ್ವರೂಪವಾಗಿದೆ. ಅರ್ಥಾತ್ ಇವರಲ್ಲಿಯೂ ೪ । ೫ ಮಾತ್ರೆಯ ಗಣಗಳು ಪ್ರೌಢದಂತೆ ಕ್ರಮವಾಗಿ ಬಂದಿವೆ. )

---

## ಬಸವಣ್ಣನವರ ಅರ್ಥನೀತಿ

(ಲೇಖಕರು ಶ್ರೀ ಶಂಕರ ತಡಸಮ, ಗದಗ)

ಮಾನವನ ವ್ಯಕ್ತಿತ್ವ ವಿಕಾಸದಲ್ಲಿ ಅರ್ಥ ( Wealth ) ದ ಪಾತ್ರ ಹಿರಿದಾಗಿದೆ. ಶೈಕ್ಷಣಿಕ, ಶಾರೀರಕ, ಬೌದ್ಧಿಕ, ಔದ್ಯೋಗಿಕ ಬೆಳವಣಿಗೆಗಳಿಗೆ ಅರ್ಥವು ಬೆನ್ನುಮೂಳೆಯಾಗಿದೆ. ಅರ್ಥವು ದೈವಿಕಶಕ್ತಿ ( Divine Power ) ಎಂದು ಮಹರ್ಷಿ ಅರವಿಂದರು ಅರುಹಿದ್ದಾರೆ. ಹೊನ್ನು ಮಾಯೆ ಅಲ್ಲವೆಂದು ಪ್ರಭುದೇವರು ಅಂದಿರುವರು. ಅರ್ಥವು ದೈವಿಕ ಶಕ್ತಿಯೇ ಆಗಿರಲಿ; ಮನದ ಪ್ರಚೋದನೆಯು ಮಾಯೆಯಾಗಿಯೇ ಪರಿಣಮಿಸಲಿ. ಅರ್ಥವು ಮಾನವನಿಗೆ ಬೇಕೇಬೇಕು. ಅರ್ಥವು ಕ್ರಮಬದ್ಧ ರೀತ ವಿಜ್ಞಾನ ( a systematic knowledge ) ವಾಗಿ ಪರಿಣಮಿಸಿದ್ದು ಹದಿನೆಂಟನೆಯ ಶತಮಾನದಲ್ಲಿಯೇ. ಔದ್ಯೋಗಿಕ ಕ್ರಾಂತಿಯು ( Industrial Revolution ) ಅರ್ಥವಿಜ್ಞಾನದ ಜನನಿಯಾಗಿದ್ದಾಳೆ. ಅರ್ಥವಿಜ್ಞಾನವು

ಮಾನವನ ಆರ್ಥಿಕಜೀವನವನ್ನು ಅರೈದು ನೋಡಿ ಜೀವನ ವಿಕಾಸದ ಆರ್ಥಿಕ ಪರಿಹಾರನೀಯುವದು. ಇಂದು ಅರ್ಥವಿಜ್ಞಾನದವ್ಯಾಪ್ತಿ, ಹಾಗೂ ವಿಶಾಲತೆಯೂ ಬೆಳೆದಿದೆ. ಅರ್ಥಸಂಗ್ರಹವೇ ಅರ್ಥವಿಜ್ಞಾನದ ಗುರಿ ಎಂಬ ತಿಳುವು ತಿಳಿದಾಗಿ ಅರ್ಥದ ಸದ್ವಿನಿಯೋಗವೇ ( Distribution) ಅರ್ಥ ವಿಜ್ಞಾನದ ಗುರಿಯಾಗಿ ಪರಿವರ್ತನಗೊಂಡಿದೆ.

ಮಾನವನ ಅಪರಿಮಿತ ಇಚ್ಛೆಗಳನ್ನು ( unlimited wants ) ಪರಿಮಿತ ಸಾಧನೆಗಳಿಂದ ( limited means ) ಪೂರೈಸುವದರಲ್ಲಿಯೇ ಅರ್ಥವಿಜ್ಞಾನದ ಉಗಮವಿದೆ. ಮಾನವನ ಅಸ್ತಿತ್ವಕ್ಕೆ ಅವನಲ್ಲಿ ಉಂಟಾಗುವ ಇಚ್ಛೆಗಳಪೂರ್ತಿಕೆಯೇ ( Satisfaction of wants ) ಕಾರಣವು. ಮಾನವನು ಇಚ್ಛೆಗಳ ಪೂರ್ತಿಕೆಗಳನ್ನು ನಿಸರ್ಗದೇಣಿಗೆಗಳ ಸಹಾಯದಿಂದಲೂ ತನ್ನ ಪ್ರಯತ್ನ ( efforts ) ಗಳಿಂದಲೂ ಪಡೆಯುವದರಲ್ಲಿ ಅರ್ಥವಿಜ್ಞಾನದ ಮುನ್ನಡೆಯಿದೆ. ಈ ಉತ್ಪಾದಕ ಪ್ರಯತ್ನವೇ ದುಡಿಮೆಯೆಂದೆನಿಸಿಕೊಳ್ಳುವದು. ಎಲ್ಲ ವಸ್ತುಗಳನ್ನು ಒಬ್ಬನೇ ಉತ್ಪಾದಿಸುವದು ಅವಶ್ಯವಾದ್ದರಿಂದ ದುಡಿತಗಳಲ್ಲಿ ಭಾಗವಿಭಾಗಗಳು ( Division of labour ) ಆಗಿವೆ. ದುಡಿತ ವಿಭಾಗವೇ ಆರ್ಥಿಕಜೀವನದ ಕ್ರಾಂತಿಯ ಮುನ್ನಡೆಯಾಗಿದೆ. ಮಾನವನನ್ನು ಸಮಾಜ ಜೀವಿಯನ್ನಾಗಿ ಮಾಡಿದೆ.

ಪರರಿಗೆ ಭಾರವಾಗದ ತೆರನಾದ ಜೀವನ ನಿರ್ವಹಣೆಗಾಗಿ ಉತ್ಪಾದಕ ಉದ್ಯೋಗವನ್ನು ( Productive laeour ) ಮಾಡುವ ಅವಶ್ಯಕತೆಯನ್ನು ಅರ್ಥಶಾಸ್ತ್ರವು ಅರಹುವದು. ಉಪಯುಕ್ತತೆಗಳನ್ನು ನಿರ್ಮಿಸದ (uncreating utility ) ಹೋರಿಗಳಾದ ಕಳ್ಳತನ ಯಾಚಿಸುವದು, ಸೋಮಾರಿತನ, ಶೋಷಣೆಗಳು ಸಮಾಜದಲ್ಲಿ ಪ್ರಬಲಗೊಂಡಾಗ ಆರ್ಥಿಕಜೀವನದಲ್ಲಿ ಮುಗ್ಗಟ್ಟು ಉಂಟಾಗಿ ಸಮಾಜ ಸ್ವಾಸ್ಥ್ಯವು ಗಂಡಾಂತರಕ್ಕೆ ಆಹುತಿಯಾಗುವದು. ಉತ್ಪಾದಕ ಉದ್ಯೋಗಗಳಲ್ಲಿ ದುಡಿತದ ಗೌರವ ( Dignity of labour ) ಕಾಪಾಡುವದು ಅವಶ್ಯಕವಿದೆ. ದುಡಿತವು ಫಲರೂಪದಿಂದಕೊಡುವ ಹಣದಿಂದಲೇ ಆಗಲಿ; ಮೇಲು ಕೀಳು ಎಂಬ ಮನೋಭಾವನೆಯಿಂದಲೇ ಆಗಲಿ ದುಡಿತದ ಗೌರವವನ್ನು ಅಳಿಯದೇ ಚಿತ್ತಶುದ್ಧಿಯ ಅಳತೆಗೋಲಿನಿಂದ ಅಳೆಯಬೇಕು.

ದುಡಿತ-ದುಡ್ಡು ಇವುಗಳಲ್ಲಿ ಸಂಗ್ರಹಕ್ಕೆ ಯಾವದು ಯೋಗ್ಯ ಎಂಬ ಆಯ್ಕೆಯಿಂದಲೇ ಸಮಾಜಸ್ವಾಸ್ಥ್ಯ ಅವಲಂಬಿಸಿದೆ. ದುಡಿತವೇ ದುಡ್ಡಿನ ಜನನಿಯಾದರೂ ದುಡ್ಡನ್ನು ಕೂಡಿಡುವ ಮನೋವೃತ್ತಿಯು ಮನೆಮಾಡಿಕೊಂಡರೆ ದುಡಿತದ ಗೌರವವು ಕ್ರಮೇಣ ಕರಗುತ್ತ ದುಡ್ಡಿನ ಸಂಗ್ರಹದ ಆಧಿಕ್ಯವು ಬೆಳೆದು ದುಡಿತದ ಶೋಷಣೆಯು ಮೊದಲಾಗುವದು. ದುಡಿತದ ಜೀವನವು ದುಃಖಮಯವಾಗಿ ಪರಿವರ್ತನಗೊಂಡಾಗ ವರ್ಗಕಲಹವು ಅನಿರತವಾಗಿ ಸಾಗುವದು. ದುಡ್ಡಿನ ವಿನಿಯೋಗದ ಅಸಮತೆ (economic inequality) ಯಿಂದ ಅಸಂತೋಷವು ಬಗೆಬಗೆಯಾಗಿ ಅರಳಿ ಉತ್ಕ್ರಾಂತಿಯು ಉಂಟಾಗುವದು. ಆಗ ಅರ್ಥಸಮತೆಯು ಉಂಟಾಗಬೇಕಾದುದು ಅನಿವಾರ್ಯ. ಹೀಗೆ ಆದಾಗ ಉದ್ಯೋಗಗೌರವ, ಮತ್ತು ದುಡ್ಡಿನ ಸಮವಿನಿಯೋಗವೇ ಆರ್ಥಿಕಜೀವನ ಸಮತೆಯನ್ನು ಕಾಯ್ದುಕೊಳ್ಳುವವು.

ಬಸವಣ್ಣನವರು ತಮ್ಮ ಸಂಗಡಿಗರಾದ ಏಳನೂರೆಪ್ಪತ್ತು ಪ್ರಮಥರೊಡನೆ ಆರ್ಥಿಕ ಉತ್ಕ್ರಾಂತಿಯನ್ನು ಮಾಡುವ ಪೂರ್ವದಲ್ಲಿ ಜನದ ಆರ್ಥಿಕ ಜೀವನವನ್ನು ಆಸ್ಥೆಮ ನೋಡಿದರೆ ಬಸವಣ್ಣನವರ ಅರ್ಥನೀತಿಯು ಬೆಳೆದು ಮಾನವ ಜಗತ್ತಿನ ಮೇಲೆ ಬೀಳಲು ಅನುಕೂಲವಾದೀತು. ಅಂದಿನ ಅರ್ಥಜೀವನದಲ್ಲಿ ಉದ್ಯೋಗ ಗೌರವವಿಲ್ಲದಿರುವದು ಉದ್ಯೋಗಗಳಲ್ಲಿ ಅಸಮತೆಯ ಭಾವನೆ, ಜೀವನದಲ್ಲಿ ಜಿಗುಪ್ಸೆ, ದೈವವಾದ, ನರ ಸಪ್ರಯತ್ನಕ್ಕೆ ತಿಲಾಂಜಲಿ, ಧರ್ಮದ ಹೆಸರಿನಲ್ಲಿ ಶೋಷಣೆಯ ಪ್ರಬಲಮನೋವೃತ್ತಿಗಳೇ ಪ್ರಧಾನದೋಷಗಳಾಗಿದ್ದವು. ಬ್ರಹ್ಮ ಒಂದೇ ಸತ್ಯ-ಜಗತ್ತು ಮಿಥ್ಯವಾದದ್ದರಿಂದ ಇಹಜೀವನದ ಅಗ್ಗಳಿಕೆ ಅಳಿದು ಜನರು ಅಂತರ್ಮುಖಿಗಳಾದರು. ಜೀವನ ನಿರ್ವಹಣೆಗೆ ಉತ್ಪಾದಕ ಉದ್ಯೋಗಗಳಿಗಿಂತ ಆಧ್ಯಾತ್ಮಜೀವನವೇ ಅಧಿಕವಾಯಿತು. ಜೀವನದಲ್ಲಿ ಮಂದಿಯೇ ಅಧಿಕವಾದ್ದರಿಂದ ಜಗತ್ತು ಪಶ್ಚಾತ್ತಾಪದ ಬೀಡಾಗಿ ಹಾಗೂ ಹೀಗೂ ಜೀವನಸಾಗಿಸುವ ಮನೋಭಾವ ಬೇರೂರಿತು. ಕೌಟುಂಬಿಕ ಜೀವನವು ಕಾಲ್ತೊಡಕಾದ್ದರಿಂದ ಸನ್ಯಾಸವೇ ಮಹತ್ವಸ್ಥಾನ ಪಡೆದುಕೊಂಡಿತು. ಸನ್ಯಾಸಿಗಳು ಯಾವದೇ ಉತ್ಪಾದಕ ಶ್ರಮಪಡದೇ ಗೃಹಸ್ಥರುಗಳಿಗೆ ಭಾರವಾದರು. ಇಹಲೋಕವು ಸಸ್ಕೃ

ತ್ತಪ ಭೂಮಿಯಾದ್ದರಿಂದ ಗೃಹಸ್ಥಾಶ್ರಮಿಗಳಿಗೂ ಪರಲೋಕ ಚಿಂತನೆ ಅಧಿಕವಾಗಿ ಅವರೂ ಉತ್ಪಾದಕ ಶ್ರಮಗಳಲ್ಲಿ ಕುಶಲತೆ ವಹಿಸಲಿಲ್ಲ. ಸಮಾಜದಲ್ಲಿ ಬ್ರಾಹ್ಮಣರಿಗಿಂತಲೂ ಕ್ಷತ್ರಿಯರು ಕ್ಷತ್ರಿಯರಿಗಿಂತಲೂ ವೈಶ್ಯರೂ ವೈಶ್ಯರಿಗಿಂತಲೂ ಶೂದ್ರರೂ ಕೀಳೆಂಬ ಭಾವನೆಯೊಂದಿಗೆ ಅವರ ಉದ್ಯೋಗಗಳೂ ಕೀಳೆಂಬಭಾವನೆ ಯುಂಟಾಗಿ ಉದ್ಯೋಗ ಗೌರವವೇ ಗಣನೆಗೆ ಬಾರದಂತಾಗಿತ್ತು. ಉತ್ಪಾದನೆಯು ಊನತೆಯಿಂದ ಬಡತನವು ಅಧಿಕ ಪ್ರಮಾಣದಿಂದ ಪ್ರಸಾರವಾಯಿತು. ಬಡತನ ಸಿರಿವಂತಿಕೆಗಳು ಪಾಪ ಪುಣ್ಯಫಲವೆಂಬ ಧಾರ್ಮಿಕ ಭಾವನೆ ಬೇರೂರಿ, ಬಡತನದ ಉಚ್ಚಾಟನೆ ನಡೆಯಲಿಲ್ಲ. ಶೋಷಣೆಯಿಂದ ದುಡ್ಡನ್ನು ಕೂಡಿಸುವದೇ ಪುಣ್ಯದ ಫಲವಾಗಿ ಪರಿಣಮಿಸಿತು ಆದ್ದರಿಂದ ಶೋಷಣೆಯು ಧರ್ಮದ ಮುಖವಾಡ ಧರಿಸಿದ ತನ್ನ ಕಾರ್ಯ ಸಾಧಿಸಿತು. ದಾನಕೊಡುವದು, ಭಿಕ್ಷೆನೀಡುವದು, ಗುಡಿ ಗುಂಡಾರ ಕಟ್ಟಿಸುವದರಿಂದಲೇ ಬಡತನ ಕಳೆಯುವ ಯತ್ನನಡೆದು ಬಡವರು ಸಿರಿವಂತರ ಕರುಣಾಕಟಾಕ್ಷವನ್ನೇ ಅವಲಂಬಿಸುವಂತೆ ದೈವವಾದಿಗಳನ್ನೇ ಮಾಡಿತಲ್ಲದೇ ಪುರುಷ ಪ್ರಯತ್ನಕ್ಕೆ ನೀರೆರೆಯುವಂತೆಯೂ ಮಾಡಿತು. ಬಡತನವು ಸಾಮಾಜಿಕ ದೋಷವಾಗಿ ಪರಿಣಮಿಸದೇ ದೈವದಾಟವಾಗಿ ಪಾರಮಾರ್ಥಿಕ ವಿಷಯವಾಗಿ ಪರಿಣಮಿಸಿತು. ದಾನಧರ್ಮಗಳ ಸಹಾಯದಿಂದ ಬಡತನವು ಹಿಂಗದೇ ಬಡತನದ ಅಸ್ತಿವಾರವು ಭದ್ರವಾಗುವದು ಎಂಬ ಅರಿವು ಜನರ ತಿಳುವಳಿಕೆಗೆ ನಾಟದೇ ಹೋಯಿತು. ದಾನಧರ್ಮ ಸ್ವೀಕರಿಸಲು ಬಡವರ ಅಸ್ತಿತ್ವವು ಇರಬೇಕಾಯಿತಲ್ಲವೆ ? ಇಲ್ಲವಾದರೆ ದಾನಮಾಡಿ ಪುಣ್ಯ ಪಡೆದು ಮೋಕ್ಷ ಹೊಂದುವ ಬಗೆ ಯಾವದು ? ಒಂದೆಡೆ ಅವಿರತವಾದ ಆರ್ಥಿಕಶೋಷಣೆ ನಡೆದರೆ ಇನ್ನೊಂದೆಡೆ ಪುಣ್ಯ ಪ್ರಾಪ್ತಿಗಾಗಿ ಮಾನವತೆಯ ಪ್ರದರ್ಶನಕ್ಕಾಗಿ ದಾನಧರ್ಮಕೊಡುವದು ನಡೆಯುತ್ತಿತ್ತು. ಬಡತನವು ಉತ್ಪಾದಕ ಶ್ರಮದಿಂದ ನೀಗಬೇಕಲ್ಲವೆ ಸಿರಿವಂತರು ಇತ್ತ ದಾನಗಳಿಂದಲ್ಲ. ಆಗಿನ ಸಮಾಜದಲ್ಲಿ ಇಹಲೋಕದ ಮಹತಿಯನ್ನು ಅರುಹಿ, ದೈವವಾದವನ್ನು ಅತಿಗಳೆದು ಪುರುಷ ಪ್ರಯತ್ನಕ್ಕೆ ಪ್ರಾರಂಭಿಸಿ, ಉತ್ಪಾದಕ ಶ್ರಮದಿಂದ ಉತ್ಪಾದನೆಯನ್ನು ಹೆಚ್ಚಿಸಿ, ಉದ್ಯೋಗ ಗೌರವಕಾಪಾಡಿ ದುಡ್ಡಿನ ಸದ್ವಿನಿಯೋಗಮಾಡಿ ಆರ್ಥಿಕ ಸಮತೆ ಮತ್ತು ಶಾಂತಿಯನ್ನು ಕಾಯ್ದುಕೊಳ್ಳಬೇಕಾದಂಥ ಸಂದಿಗ್ಧ ಕಾಲದಲ್ಲಿ ಅವನ್ನು ಬಸವಣ್ಣನವರು ಪೂರೈಸಿದರು.

ಬಸವಣ್ಣನವರು ಒಂದು ವ್ಯಕ್ತಿ ಎನ್ನುವದಕ್ಕಿಂತ ಒಂದು ಮಹಾ ಶಕ್ತಿಯನ್ನಬೇಕು. ಬಸವಣ್ಣನವರು ತಮ್ಮ ಸಂಗಡಿಗರೊಂದಿಗೆ ಜೀವನದ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ ರಂಗಗಳಲ್ಲಿ ವರ್ಗಭೇದ ಲಿಂಗಭೇದ, ಜಾತಿಭೇದ, ಶೋಷಣೆವರ್ಗ, ನಿರುದ್ಯೋಗ, ಶೂನ್ಯವಾದಿ ಗಳ ವಿರುದ್ಧ ಹೋರಾಟವೆಸಗಿ ಜೀವನಕ್ಕೆ ಹೊಸ ಕಳೆಯನ್ನು ತಂದರು.

ಜಗತ್ತು ನಿತ್ಯ ಸತ್ಯವೆಂದು ಅರುಹಿ ಜೀವನದಲ್ಲಿ ಹೊಸ ಕಳೆ ಯನ್ನು ತುಂಬಿದರು. "ಕೂಡಲ ಸಂಗಮ ದೇವನೊಲಿಸಬಂದ ಕಾಯವ ಕೆಡಿಸಲಾಗದು" ಎಂದು ಕಾಯದ ಮಹತ್ವವನ್ನು ಅರುಹಿ, "ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವವರು ಅಲ್ಲಿ ಸಲ್ಲುವರು" ಎಂದು ಹೇಳಿ ಇಹಪರವೆಂಬ ಭ್ರಾಂತಿಯನ್ನು ಅಳಿದರು. ಕೊಲುವೆನೆಂಬ ಭಾಷೆ ದೇವನದು ಗೆಲವೆನೆಂಬ ಭಾಷೆ ಭಕ್ತನದು ಎಂಬ ಪುರುಷ ಪ್ರಯತ್ನದ ಸಂಜೀವಿನಿಯನ್ನು ತುಂಬಿದರು. ಜಗತ್ತು ಕರ್ಮ ಭೂಮಿ ಎಂದರು. ನಿತ್ಯ ಹೋರಾಟದ ವೀರರನ್ನು ಮಾಡಿದರು. ಅನಿಷ್ಟ ಗಳನ್ನು ಎದುರಿಸಿ ಇಷ್ಟಗಳನ್ನು ಆದರಿಸಹೇಳಿದರು. "ಸುಖಬಂದರೆ ಪುಣ್ಯದ ಫಲವೆಂದೆನ್ನೆನು, ದುಃಖ ಬಂದರೆ ಪಾಪದ ಫಲವೆಂದೆನ್ನೆನು ನೀಮಾಡಿದೊಡೆ ಆಯಿತೆನ್ನೆನು. ಕರ್ಮಕ್ಕೆ ಕರ್ತೃವೇ ಕಡೆ ಎಂದೆನ್ನೆನು, ಉದಾಸೀನವಿಡಿದು ಶರಣೆನ್ನೆನು, ಕೂಡಲಸಂಗಮದೇವಾ" "ಪರಾವ ಲಂಬಿಯಾದ ಅದೃಷ್ಟವಾದಕ್ಕಿಂತಲೂ ಸ್ವಾವಲಂಬಿಯಾದ ನಿಷ್ಕಾಮವಾದ ವನ್ನು ಅಪ್ಪಿಕೊಂಡು ಕಾಯಕದಲ್ಲಿ ನಿರತನಾಗಹೇಳಿದರು. ಅರ್ಥ ವಿಜ್ಞಾನಿಗಳು ಹೇಳುವ ಉತ್ಪಾದಕ ಶ್ರಮ ಪದಕ್ಕೆ ಬಸವಣ್ಣನವರು ಬಳಸಿದ ಕಾಯಕ ಪದ ಪಾಸಟಿ ಅಲ್ಲ. ಇನ್ನೂ ಅದರ ಅರ್ಥ ವಿಶಾ ಲತೆ ಅಧಿಕವಿದೆ. ಕಾಯಕವನ್ನು ಅರಸ ಮೊದಲುಗೊಂಡು ಅಗಸನ ವರೆಗೂ ಪಂಡಿತ ಮೊದಲುಗೊಂಡು ಪಾಮರನ ವರೆಗೂ, ವಿಪ್ರ ಮೊದಲ ಗೊಂಡು ಅಂತ್ಯಜನ ವರೆಗೂ ಕಾಯಕದಲ್ಲಿ ನಿರತರಾಗಬೇಕು. ಕಾಯ ಕವು ಆಚಾರವಾದ್ದರಿಂದ ಚಿತ್ತಶುದ್ಧಿ ಇರಬೇಕು. ಕಾಯಕವು ಶಾರೀರಿಕ, ಬೌದ್ಧಿಕ, ವಾಚಿಕ ಶ್ರಮವನ್ನೇ ಒಳಗೊಂಡಿರಲಿ ಹಾನಿ ಇಲ್ಲ. ಕಾಯಕ ದಿಂದಲೇ ಜೀವನ್ಮುಕ್ತಿ, ಲಿಂಗವಾದಡೂ ಕಾಯಕದಿಂದಲೇ ಶಿವನಿಗು ಕುಲ

...ದು; ಜಂಗಮವಾದಡೂ ಕಾಯಕದಿಂದ ವೇಷದ ಪಾಶ ಹರಿವುದು. ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳು. ಗುರುಜಂಗಮ ಭಕ್ತರು ಕೈಯಾಂತು ಯಾಚಿಸುವದು ಸಲ್ಲದ ಹೋರೆಯು. “ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು ಕಾಯಕ ಬಿಟ್ಟು ಹೊನ್ನ ಬೇಡಿಹೆನೆಂಬುವದು ಕರಕಷ್ಟವಲ್ಲವೇ ?....ಆ ಗುಣ ಅಮರೇಶ್ವರ ಲಿಂಗಕ್ಕೆ ದೂರ ”....ಬ್ರಹ್ಮಕ್ಕೆ ಬಾಯ್ದೆರೆದು ಮಾತಾಡಿ, ಪರಬೊಮ್ಮದ ಭಾಷೆಯ ನುಡಿದು, ಒಮ್ಮನ ಅಂಬಲಿಯ ಇಕ್ಕೆಂದು ಹಲುಬುತ್ತ ಹೊಲಬುಗೆಟ್ಟವರ ಕಂಡು ಆವರಿಗೆ ಫಲಪದವಿಲ್ಲೆಂದ....ಎಂದು ಅತಿಗಳೆದಿದ್ದಾರೆ. ವಂಶ ಪರಂಪರಾಗತವಾಗಿ ದುಡ್ಡು ಬಂದಿದೆಂದು, ಬಿಮ್ಮನೆ ಬೆರೆತು ಕೋಡು ಕಾಯಕ ಕೈಕೊಳ್ಳದೇ ಇರಲಾಗದು. ಅಂಥವನ ಮನೆಗೆ “ಅವನ ಕಾಯಕವ ವಿಚಾರಿಸದೇ ಆವನ ಮನೆಯ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏನೆಯ ಪಾತಕ ” ವೆಂದಿದ್ದಾರೆ ಕಾಯಕದಲ್ಲಿ ನಿರತನಾದೊಡೆ ಕಾಯಕದ ಗೌರವವ ಕಾಯಬೇಕು. ಏಕೆಂದರೆ ಕಾಯಕಗಳು ಸಮಾಜ ಪೋಷಣೆಗಾಗಿ ಮಾಡಲ್ಪಟ್ಟದ್ದರಿಂದ ಅವುಗಳಲ್ಲಿ ಮೇಲು ಕೀಳೆಂಬ ಭಾವನೆ ಬರಬಾರದು. ಅಂಥ ಕಾಯಕ ಮಾಡುವವರಲ್ಲಿಯೂ ಮೇಲು ಕೀಳೆಂಬ ಭಾವವಿರಬಾರದು. ಏಕೆಂದರೆ “ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ದ್ವಿಜನಾದ ” ಇದು ಕಾರಣ ..ಲಿಂಗಸಂಗವನರಿತವರೇ ಕುಲಜರು ಎಂದು ಕಾಯಕಗಳಿಂದ ಉಂಟಾಗುವ ಉಚ್ಚ ನೀಚ ಭೇದವನ್ನು ಭೇದಿಸಿದರು. “ವೇಷ ಸಹಿತ ಮನೆಗೆ ಬಂದೊಡೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮ ರಾಣಿವಾಸದಾಣೆ ” ಎಂದು ಪ್ರತಿಜ್ಞೆಗೈದಿದ್ದಾರೆ.

ಉದ್ಯೋಗ - ಕಾಯಕಗಳು ಉತ್ಪಾದಕ ದುಡಿತ ಎಂಬ ಅರ್ಥ ಕೊಡುತ್ತಿದ್ದರೂ ಕಾಯಕ ಎಂಬ ಪದಕ್ಕೆ ವಿಶಾಲಾರ್ಥವಿರುವದನ್ನು ಕಾಣಬೇಕು. ಉದ್ಯೋಗದಿಂದ ತನ್ನ ಮತ್ತು ತನ್ನ ಅವಲಂಬಿಗಳ ಜೀವನ ಸಾಗಿಸುವ ಉದ್ದೇಶವಿದ್ದರೆ ಕಾಯಕದಿಂದ ಸಮಾಜ ಸುಧಾರಣೆಯು ಉದ್ದೇಶವಿದೆ. ಉದ್ಯೋಗದಿಂದ ಹಣದ ಸಂಗ್ರಹ (Pri vate Property) ಶಕ್ಯವಾಗಬಹುದು. ಆದರೆ ಕಾಯಕದಿಂದ ಬಂದ ಹಣ ಮೊದಲು

ಸಲ್ಲುವದು ಜಂಗಮಕ್ಕೆ ಅಥವಾ ಸಮಾಜಕ್ಕೆ. ಸಮಾಜವು ಉಳಿದು ದನ್ನು ಸಂಸಾರ ನಿರ್ವಹಣೆಗಾಗಿ ಕೊಡಬೇಕು. ಇಲ್ಲಿ ಪರಿಗ್ರಹಕ್ಕೆ ಅವ ಕಾಶವಿಲ್ಲ. ಉತ್ಪಾದನೆಯಿಂದ ಬಂದ ಹಣ ಸಮಾಜದ್ದು ಎಂಬ ಆದೇ ಶವೇ ಬಸವಣ್ಣನವರ ಅರ್ಥ ನೀತಿಯ ಅಗ್ಗಳಿಕೆಯಲ್ಲಿ ಒಂದಾಗಿದೆ. ಆದ್ದರಿಂದ ಕಾಯಕದಲ್ಲಿ ನಿರತನಾದೊಡೆ ಗುರು, ಲಿಂಗ, ಜಂಗಮ ಮುಂದಿದ್ದರೂ ಹಂಗುಹರಿಯಬೇಕು. ಏಕೆಂದರೆ ಕಾಯಕದಲ್ಲಿ ಗುರು, ಲಿಂಗ, ಜಂಗಮದ ಆಯತವುಂಟು. ಬಸವಣ್ಣನವರ ಈ ಅಪರಿಗ್ರಹ ನೀತಿಯು ಈಗಿನ ಅರ್ಥನೀತಿಜ್ಞನಿಗೆ ಒಪ್ಪಿಗೆಯಾಗಿದೆ. ಆದ್ದರಿಂದ ಹಣದ ವೈಯ್ಯಕ್ತಿಕ ಒಡೆತನಕ್ಕೆ ಒಪ್ಪಿಗೆ ಈಯದೇ ಹಣವನ್ನು ಸಮವಿನಿಯೋಗ ಮಾಡಬೇಕೆನ್ನುವರು ಸಾಮ್ಯವಾದಿ ಅರ್ಥಜ್ಞರ. ಇಲ್ಲಿ ಬಸವಣ್ಣನವರ ಆರ್ಥಿಕ ಸಾಮ್ಯವನ್ನು ಕಾಣಬೇಕು

" ನೇಮದ ಕೂಲಿ ಅಂದಿನ ನಿತ್ಯ ನೇಮದಲ್ಲಿ ಸಂದಿರಬೇಕು " " ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ, ಅನ್ನದೊಳ ಗೊಂದಗುಳ ಇಂದಿಂಗೆ ನಾಳಿಂಗೆ ಬೇಕೆಂದನಾದೊಡೆ ನಿಮ್ಮ ಪುರಾತನ ರಾಣೆ " ಎಂಬ ವೀರಭಾಷೆಯಲ್ಲಿಯ ತ್ರಿಕಾಲಾಬಾಧಿತ ಸತ್ಯವನ್ನು ಅರಿ ಯಬೇಕು. ಇದು ಬಸವಣ್ಣನವರ ಅರ್ಥ ನೀತಿಯ ವೈಶಿಷ್ಟ್ಯವೇ ಆಗಿದೆ. ತನ್ನ ಮಡದಿ ಮಕ್ಕಳಿಗೆ ಇಂದಿಗೆ ನಾಳಿಗೆ ಬೇಕೆಂದು ಕುದಿದು ಕುದಿದು ಉದ್ಯೋಗ ಮಾಡುವವರಲ್ಲಿಯಾಗಲಿ, ಹೇಮದಾಸೆಗೆ ಕಾಮಿಸಿ ದ್ರವ್ಯವ ಕೂಡಿಡಲು ನೇಮದ ಕೂಲಿಯ ಬಿಟ್ಟು ಕಾಯಕ ಮಾಡುವವ ರಲ್ಲಿಯಾಗಲಿ, ಆಶೆ ಮನದಿಂದ ಇಮ್ಮಡಿ ತರುವಲ್ಲಿಯಾಗಲಿ ಸತ್ಯಕಾಯಕ ವುಂಟೆ ? ಸಮಾಜದ ಹಿತಾರ್ಥ ( Wel fare ) ಉಂಟೇ ? ಇವೆಲ್ಲವುಗಳು ದುಡ್ಡಿನ ವೈಯಕ್ತಿಕ ಒಡೆತನಕ್ಕೆ ಮೂಲ. ನಿತ್ಯ ದುಡಿತದ ಬುಡಕ್ಕೆ ಕೊಡಲಿಯ ಪೆಟ್ಟುಗಳು. ನಿತ್ಯದ ದುಡಿತವೇ ಅಧಿಕ, ಪರದ್ರವ್ಯ ಗ್ರಹ ಣವೇ ತ್ಯಾಜ್ಯ ಎನ್ನುವಲ್ಲಿ ಪೌರುಷವಿದೆ. ಅಭಿಮಾನವಿದೆ. ಗೆಲುವೆನೆಂಬ ಭಾಷೆಯಿದೆ. ಪರರ ದುಡ್ಡು ಅಸ್ಥಿರವಾದದ್ದು. ದುಡಿತವೇ ಸ್ಥಿರವು. ಸ್ಥಾವರಕ್ಕೆ ಅಳಿವುಂಟು. ಜಂಗಮಕ್ಕೆ ಅಳಿವು ಇಲ್ಲವಾಗಿ " ಆದ್ದರಿಂದ ಬಸವಣ್ಣನವರು ಜಂಗಮ ಪ್ರೇಮಿಯಾಗಿದ್ದರು. ಮಾನವನು ಎಲ್ಲಿಯ ವರೆಗೆ ದುಡ್ಡಿನ ಒಡೆತನವನ್ನು ವೈಯಕ್ತಿಕವಾಗಿ ಅವಲಂಬಿಸುವನೋ ಅಲ್ಲಿಯ ವರೆಗೆ ಶೋಷಣೆಯು ಅವ್ಯಾಹತವಾಗಿ ಸಾಗುತ್ತದೆ. ಬಂಡವಾಲು

ರಿಕೆ ಭದ್ರವಾಗುತ್ತದೆ. ವರ್ಗ ಕಲಹಕ್ಕೆ ಕಳೆಯೇರಿ ಜೀವನವು ಆನ
ಶ್ಯಕ ಹೋರಾಟದ ರಂಗಭೂಮಿಯಾಗುವದು. ಆದ್ದರಿಂದ ಸಮಾಜದ
ಲ್ಲ ಅಸಮತೆಗಳಿಗಿಂತಲೂ ಹಣದ ಅಸಮತೆ ( inequality based-
on Wealth ) ಹೆಚ್ಚು ಅನರ್ಥಕಾರಿ. ಇದನ್ನರಿತೇ ಬಸವಣ್ಣನವರು
ದ್ದನ್ನು ದಬ್ಬಿಬಿಟ್ಟು ದುಡಿತವನ್ನು ಅಪ್ಪಿಕೊಂಡು ಸಮಾಜವನ್ನು ದುಡಿ
ತದ ಮೇಲೆ ಕಟ್ಟಿದರು. ಅವರು ಕಟ್ಟಿದ ಸಮಾಜವು ಚಿಕ್ಕದಾದರೂ
ಚೊಕ್ಕವಾಗಿತ್ತು. ಜಂಗಮಕ್ಕೆ ಅರ್ಪಿಸದೇ ಇದ್ದ ಕಿವಿಯೋಲೆಗಳನ್ನು
ತಮ್ಮ ಸತಿಯು ಧರಿಸಿದ್ದಕ್ಕೆ ತಾವು ಕಳ್ಳರಾದೆವೆಂಬ ಭಾವನೆಯಾಯಿತು
ಬಸವಣ್ಣನವರಿಗೆ. ಕಾಯಕದಿಂದ ಬಾರದ ಹೊನ್ನಿನ ಜಾಳಿಗೆಗಳನ್ನು
ಸ್ವೀಕರಿಸದೇ ನಿರಾಕರಿಸಿದರು. ಮೋಳಿಗೆಯ ಮಾರಯ್ಯನವರು. ಕೆಲವೇ
ಹಗ್ಗಗಳನ್ನು ಮಾರಿ ಸಾವಿರ ಹೊನ್ನು ತಂದಾಗ “ಹಾಗದ ಕಾಯಕವ
ಮಾಡಿಕೊಂಡು ಹಣಪಡ್ಡವ ತಾ ಎಂಬಲ್ಲಿ ಸತ್ಯ ಕಾಯಕವುಂಟೆ ?”
ಎಂದು ನಿರಾಕರಿಸಿದರು ನುಲಿಯ ಚಂದಯ್ಯಗಳು. ಪತಿಯು ಇಮ್ಮಡಿ
ಯಾಗಿ ಅಕ್ಕಿಯನ್ನು ಆಯ್ದು ತರಲು ಲಕ್ಕಮ್ಮನವರು ಎಂದಿನಂದದೆ
ಸಾಕು. ಮತ್ತೆ ಕೊಂಡು ಹೋಗಿ ಅಲ್ಲಿಯೇ ಸುರಿ. ಈಸಕ್ಕಿಯ ಆಸೆ
ನಿಮಗೇಕೆ? ಒಮ್ಮನವ ತಂದು ಒಮ್ಮನದಲ್ಲಿಯೇ ಮಾಡಿ” ಎಂದು
ತಿರುಗಿ ಕಳಿಸಿದರು.

ಬಸವಣ್ಣನವರ ಆರ್ಥಿಕ ತಳಹದಿಯ ಮೇಲೆ ನಿಂತ ಸಮಾಜವು
ನಿರುದ್ಯೋಗವನತಿಗಳೆದು ಉದ್ಯೋಗಶೀಲವಾದ, ಶೋಷಣೆಯನ್ನು ಸಮಾ
ಪ್ತಗೊಳಿಸಿ ಪರಪೀಡನೆ ರಹಿತವಾದ ಕಾಡಿಬೇಡುವ ವೃತ್ತಿಯನ್ನು ನೀಗಿ
ಸ್ವಾಭಿಮಾನಿಯಾದ ಸಂಪತ್ತಿನ ಸಂಚಯವನ್ನು ನಿರಸನಗೊಳಿಸಿ ಸಮತೆ
ತಾಯ್ದುಕೊಂಡದ್ದರಿಂದ ಬಸವಣ್ಣನವರು ಅರ್ವಾಚೀನ ಅರ್ಥ ವಿಜ್ಞಾನ
ಅಧ್ಯಾಯಗಳನ್ನು ತಮ್ಮೆಡೆಗೆ ಸೆಳೆದುಕೊಂಡಿದ್ದಾರೆ.

ವೈಯಕ್ತಿಕ ಸಂಪತ್ತಿನ ಒಡೆತನ ಕಾಯಕರಹಿತವಾದ ಶೋಷಣೆ
ಎಂದರೆ ಸಿಡಿದು ಬೀಳುವ ಬಸವಣ್ಣನವರು ಉಗ್ರ ಸಾಮ್ಯವಾದಿಗಳಲ್ಲವೇ?
ಸಾಮ್ಯವಾದವು ರಶಿಯದಲ್ಲಿಯೇ ತಲೆಯೆತ್ತಿತು. ಆದಗ್ಯೂ ಪೂರ್ವದಲ್ಲಿ
ಸಾಮ್ಯವಾದ ಆರ್ಥಿಕ ಸಾಮ್ಯವಾದಿಗಳು ಎಲ್ಲಿಯೂ ಆಗಿರಲಿಲ್ಲವೆಂದೆನ್ನು

ವವರು ಬಸವಣ್ಣನವರ ಅರ್ಥನೀತಿಯನ್ನು ಅರ್ಥ ಮಾಡಿಕೊಳ್ಳಬೇಕು. ಆರ್ಥಿಕ ಸಾಮ್ಯವನ್ನು ಬೆಳಸಿಕೊಂಡವರಲ್ಲಿ ಬಸವಣ್ಣನವರು ಮೊದಲಿಗರು. ನಂತರ ಕಾರ್ಲಮಾರ್ಕ್ಸ, ಎಂಜಿಲ್ಸ, ಗಾಂಧಿಜಿ, ಬರ್ನಾರ್ಡ್‌ಶಾರವರು ಜಗತ್ತಿನ ಸಾಮ್ಯವಾದದ ಜನಕರೆಂದು ಬಗೆಯಲೇ ಬೇಕಾಗುವದು.

೨೩೮

# ಶಕ್ತಿ ವಿಶಿಷ್ಟಾದ್ವೈತ.

( ಲೇಃ — ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು )

ಧಾರವಾಡ ಬಾನುಲಿಯಿಂದ ತೆಗೆದುಕೊಂಡಿದ್ದು

ಮಾನವನಲ್ಲಿ ಮನನ ಶಕ್ತಿಯು ಜಾಗ್ರತವಾದಂದಿನಿಂದ ಆತನು ತನ್ನ ವಿಷಯವಾಗಿ ತನ್ನ ಸುತ್ತುಮುತ್ತಿನ ಸೃಷ್ಟಿಯ ವಿಷಯವಾಗಿ ಹಾಗು ಇವಕ್ಕೆ ಆಧಾರಭೂತವಾದ ವಸ್ತುವಿನ ವಿಷಯವಾಗಿ ಅನೇಕ ಬಗೆಯಾಗಿ ಚಿಂತನೆ ಮಾಡುತ್ತ ವಿವಿಧ ಸಿದ್ಧಾಂತಗಳನ್ನು ಕಾಣುತ್ತ ಬಂದಿರುವನು. ಮಾತ್ರವಲ್ಲ ಸಾಧನೆಯೊಂದರ ನೆರವಿನಿಂದ ತಾನು ಕಂಡ ಸಿದ್ಧಾಂತಗಳ ನಿಲವನ್ನು ಸಂಪಾದಿಸಿಕೊಳ್ಳಲೂ ಹವಣಿಸುತ್ತ ಬಂದಿರುವನು. ಸೃಷ್ಟಿಯು ಒಂದಂಗವೆನಿಸಿದ ತಾನು ಸೃಷ್ಟಿಕರ್ತನನ್ನು ಸೇರುವ ಮಾರ್ಗವನ್ನು ತಿಳಿಸುವ ಅವನ ಅಭಿಪ್ರಾಯಕ್ಕೆ ಮತವೆಂತಲೂ ಸೃಷ್ಟಿಕರ್ತನನ್ನು ಕಾಣುವ ಅವನ ದೃಷ್ಟಿಗೆ ದರ್ಶನವೆಂತಲೂ ಹೆಸರುಂಟು. ಮತದ ಮಾತುಗಳಲ್ಲಿ ಜಗತ್ತು, ಜೀವ, ದೇವ ಮತ್ತು ಇವುಗಳಲ್ಲಿರುವ ಪರಸ್ಪರ ಸಂಬಂಧದ ವಿವೇಚನೆಯು ಅಡಕವಾಗುತ್ತದೆ. ಮತಾಚಾರಗಳಿಗೆ ಪೂರ್ವಭಾವಿಯಾಗಿ

ತ್ವಗಳಿಗೆ ಬೆಂಬಲವಾಗಿರುವ ಸಿದ್ಧಾಂತಗಳಿಗೆ ದರ್ಶನವೆಂಬ ಹೆಸರು. ಮತದರ್ಶನ ಸಿದ್ಧಾಂತಗಳಲ್ಲಿ ಹೀಗೆ ಒಂದು ನಿಕಟವಾದ ಸಂಬಂಧ ವಿರುತ್ತದೆ ನಮ್ಮ ನಾಡು ಇಂತಹ ಅನೇಕ ಮತ ದರ್ಶನ ಸಿದ್ಧಾಂತ ಗಳ ಬೀಡು. ಯಾಕೆಂದರೆ ಬಹು ಪುರಾತನ ಕಾಲದಿಂದ ಇಲ್ಲಿ ತತ್ವ ಜಿಜ್ಞಾಸೆಗೆ ಮೊದಲಾಗಿ ಆ ತತ್ವಗಳ ಬಗೆಗೆ ವಿವಿಧವಾದ ವಿಚಾರಗಳನ್ನು ನಮ್ಮ ಪೂರ್ವಜರು ಮಂಡಿಸಿದ್ದಾರೆ. ಶೈವ ಶಾಕ್ತ ವೈಷ್ಣವ ಮೊದಲಾದ ಮತಗಳೂ ಅವುಗಳ ಭೇದ ಪ್ರಭೇದಗಳೂ ಷಡ್ ದರ್ಶನಗಳೂ ಅದ್ವೈತ, ದ್ವೈತ, ವಿಶಿಷ್ಟಾದ್ವೈತಶಕ್ತಿ, ವಿಶಿಷ್ಟಾದ್ವೈತ ಸಿದ್ಧಾಂತಗಳೂ ಆ ತತ್ವದ ನಾನಾ ಪ್ರಕಾರದ ವಿವರಣೆಯನ್ನು ಮಾಡುತ್ತವೆ. ಈ ವಿವರಣೆಯಲ್ಲಿ ಒಂದೊಂದು ಮತ ದರ್ಶನ ಸಿದ್ಧಾಂತಕ್ಕೆ ಒಬ್ಬೊಬ್ಬ ಕಾರಣ ಪುರು ಷನ ಹೆಸರು ಹೇಳುವದುಂಟು. ಇವುಗಳ ಪ್ರತಿಕ್ರಿಯೆಯು ಪೂರ್ವದ ಅನೇಕ ಗ್ರಂಥಗಳಲ್ಲಿ ಹೆಣೆದುಕೊಂಡಿದೆ. ಸ್ವತಂತ್ರವಾಗಿ ಆಯಾ ಪ್ರತಿ ಕ್ರಿಯೆಯನ್ನು ಎತ್ತಿ ತೋರಿಸುವ ಗ್ರಂಥಗಳೂ ಅನೇಕವಾಗಿವೆ. ವೇದಾ ಗಮೋಪನಿಷತ್ತುಗಳು ಪ್ರತಿಕ್ರಿಯೆಯನ್ನು ವಿವರಿಸುವಲ್ಲಿ ಮತೀಯರಿಗೆ ದಾರ್ಶನಿಕರಿಗೆ ಸಿದ್ಧಾಂತಿಗಳಿಗೆ ಪ್ರಬಲವಾದ ಪ್ರಮಾಣಗಳಾಗಿರುತ್ತವೆ.

## ಮೂಲವಸ್ತು

ಮೂಲ ವಸ್ತುವಿನ ಸ್ವರೂಪವನ್ನು ವಿವರಿಸುವ ಕಾಲಕ್ಕೆ ಅದು 'ಒಂದು" ಎಂಬುದಾಗಿ ಕೆಲವು ವಾಕ್ಯಗಳೂ "ಎರಡು" ಎಂಬುದಾಗಿ ಹಲವು ವಾಕ್ಯಗಳೂ "ಮೂರು" ಎಂಬುದಾಗಿ ಹಲಕೆಲವು ವಾಕ್ಯ ಗಳೂ ಪೂರ್ವದ ಗ್ರಂಥಗಳಲ್ಲಿ ದೊರೆಯುತ್ತವೆ. (ಅದ್ವೈತಿಗಳು ಸರ್ವಂ ಖಲ್ವಿದಂ ಬ್ರಹ್ಮ, ಬ್ರಹ್ಮಂ ಸತ್ಯಂ ಜಗನ್ಮಿಥ್ಯಾ ಎಂದು ತಿಳಿಸಿ ಕೇವಲ ಬ್ರಹ್ಮ ತತ್ವವೊಂದನ್ನೇ ಒಪ್ಪುತ್ತಾರೆ. ದ್ವೈತಿಗಳು ಜೀವಾತ್ಮ—ಪರಮಾತ್ಮ ಎಂಬ ಎರಡು ನಿರಂತರವಾದ ತತ್ವಗಳನ್ನು ನಂಬಿ ಜೀವ-ಪರಮರಲ್ಲಿ, ಜೀವ ಜಡದಲ್ಲಿ, ಜೀವ ಜೀವರಲ್ಲಿ, ಜಡ ಪರವರಲ್ಲಿ, ಜಡ ಜಡದಲ್ಲಿ ಭೇದವಿದೆಯೆಂದು ಪಂಚ ಭೇದಗಳನ್ನು ಮನ್ನಿಸುತ್ತಾರೆ. ವಿಶಿಷ್ಟಾದ್ವೈತಿ ಗಳು ಚಿತ್ ಅಚಿತ್ ಈಶ್ವರ ಎಂಬುದಾಗಿ ಮೂರು ತತ್ವಗಳಿವೆಯೆಂದು ಭಾವಿಸುತ್ತಾರೆ. ಚಿತ್ ಎನಿಸಿದ ಜೀವ ಅಚಿತ್ ಎನ್ನಿಸಿದ [illegible] ಇವು

ಪ್ರತ್ಯೇಕವಾಗಿರದೆ ದಾಳಿಂಬ ಹಣ್ಣಿನ ಕಾಳಿನಂತೆ ಈಶ್ವರನಲ್ಲಿ ಸರ್ವದಾ ಸೇರಿರುತ್ತವೆ, ಎಂದು ಹೇಳಿ ಚಿದಚಿತ್ತಿನಿಂದ ಕೂಡಿದ ಪರಮಾತ್ಮ ಒಂದೆಯಾಗಿದೆಯೆಂದು ಕೊನೆಗೆ ಸಮನ್ವಯಗೊಳಿಸುತ್ತಾರೆ. ಮಾಧುರ್ಯ ಧಾವಲ್ಯಗಳು ಹಾಲಿನಲ್ಲಿ ಅಡಗಿ ಅವರಲ್ಲಿ ಪ್ರತ್ಯೇಕವಾಗ ತೋರದಿರುವಂತೆ ಚಿತ್ ಅಚಿತ್‌ಗಳನ್ನು ಗರ್ಭೀಕರಿಸಿಕೊಂಡು ಪರಮಾತ್ಮನ ನಿಲವು ಎಲ್ಲವನ್ನು ಒಳಗೊಂಡಿರುತ್ತದೆ. ಐತಿಹಾಸಿಕ ದೃಷ್ಟಿಯಿಂದ ಸಿದ್ಧಾಂತಗಳ ನಿರೂಪಣೆಯನ್ನು ಮಾಡುವಾಗ ಅದ್ವೈತಕ್ಕೆ ಶ್ರೀ ಶಂಕರಾಚಾರ್ಯರೂ (ಕ್ರಿ. ಶ. ೮೦೦) ದ್ವೈತಕ್ಕೆ ಶ್ರೀಮನ್ಮಧ್ವಾಚಾರ್ಯರೂ (ಕ್ರಿ. ಶ. ೧೨೦೦) ಮತ್ತು ವಿಶಿಷ್ಟಾದ್ವೈತಕ್ಕೆ ಶ್ರೀ ರಾಮಾನುಜಾಚಾರ್ಯರೂ (ಕ್ರಿ. ಶ. ೧೧೦೦) ಮೊದಲಿಗರೆಂದು ಪ್ರಖ್ಯಾತರಾಗಿದ್ದಾರೆ. ಮೋಕ್ಷೋಪಲಬ್ಧಿಯೇ ಈ ಮೂರು ಸಿದ್ಧಾಂತಗಳ ಮೂಲ ಗುರಿಯಾಗಿದೆ.

## ವಿಶಿಷ್ಟಾದ್ವೈತ

ಈ ಮೂರೂ ಸಿದ್ಧಾಂತಗಳಿಗಿಂತ ಭಿನ್ನವಾದ ಸಿದ್ಧಾಂತವೊಂದು ನಮ್ಮ ನಾಡಿನಲ್ಲಿ ವಿಶೇಷವಾಗಿ ಕನ್ನಡನಾಡಿನಲ್ಲಿ ರೂಢವಾಗಿರುತ್ತದೆ. ಶಕ್ತಿ ವಿಶಿಷ್ಟಾದ್ವೈತವೆನಿಸಿದ ಈ ಸಿದ್ಧಾಂತವು ಯಾರಿಂದ ಎಲ್ಲಿ ಯಾವ ಕಾಲಕ್ಕೆ ಹುಟ್ಟಿತೆಂದು ಗೊತ್ತುಪಡಿಸಲಿಕ್ಕೆ ಸಾಕಷ್ಟು ಸಾಧನ ಸೌಕರ್ಯಗಳಿಲ್ಲ. ಈ ಸಿದ್ಧಾಂತವನ್ನು ಕ್ರಿ. ಶ. ೮ನೆಯ ಶತಮಾನದಲ್ಲಿದ್ದಿರಬಹುದಾದ ನೀಲಕಂಠಾಚಾರ್ಯ ಎಂಬವನು ಪ್ರಸ್ಥಾಪಿಸಿದನೆಂದು ಹೇಳಲಾಗುತ್ತದೆ. ರೇಣುಕಾಚಾರ್ಯರನ್ನು ಈ ಸಿದ್ಧಾಂತದ ಆಚಾರ್ಯರೆಂದು ತಿಳಿಸಲಾಗುತ್ತದೆ. ಆದರೆ ಇವು ಇನ್ನೂ ಸಂಶೋಧಿಸಬೇಕಾದ ವಿಷಯಗಳು. ಈ ಸಿದ್ಧಾಂತಕ್ಕೆ ಶಿವಾದ್ವೈತ, ದ್ವೈತಾದ್ವೈತ ವಿಶೇಷಾದ್ವೈತ, ಭೇದಾಭೇದಾತ್ಮಕ ವಿಶೇಷಾದ್ವೈತ ಈ ಮುಂತಾದ ಪರ್ಯಾಯ ನಾಮಗಳುಂಟು. ಶಿವಯೋಗಿ ಶಿವಾಚಾರ್ಯ (ಕ್ರಿ. ಶ. ೧೩೦೦) ನೀಲಕಂಠ ಶಿವಾಚಾರ್ಯ (೧೪೦೦) ಶ್ರೀಪತಿ ಪಂಡಿತ (೧೪೦೦) ಮಗ್ಗೆಯ ಮಾಯಿದೇವ (೧೪೩೦) ಮರಿತೋಂಟದಾರ್ಯ (೧೭೦೦) ಮೊದಲಾದವರು ಸಿದ್ಧಾಂತದ ವಿವರಣೆಯನ್ನು ಸಂಸ್ಕೃತದಲ್ಲಿ ನಿರೂಪಿಸಿರುವರು. ತಮ್ಮ ಸಿದ್ಧಾಂತ ಪ್ರತಿಪಾದನೆಗೆ ಆಧಾರವಾಗಿ ಶೈವಾಗಮಗಳ ಉತ್ತರ

ಉಪನಿಷತ್ತು, ಶೈವಭಾಗವನ್ನು ನಿರ್ದೇಶಿಸುವ ಇತಿಹಾಸ ಪುರಾಣ ಗಳುಗಳಿಂದ ಪ್ರಮಾಣ ವಾಕ್ಯಗಳನ್ನು ಉದಾಹರಿಸಿದ್ದಾರೆ. ಆಳ್ವರರ್ ಎಂಬ ೧೨ ಜನ ಮಹಾ ಜ್ಞಾನಿಗಳು ಬೋಧಿಸಿದ, ಜ್ಞಾನ ಭಾಗವನ್ನೇ ನಿರೂಪಿಸುವ, ತ್ರೈವರ್ಣಿಕರಲ್ಲದೆ, ಸರ್ವರಿಗೂ ಅಧ್ಯಯನ ಯೋಗ್ಯ ವಾದ ದ್ರಾವಿಡ ಭಾಷೆಯ ೪೦೦೦ ದಿವ್ಯ ಪ್ರಬಂಧಗಳಿಂದ ಸ್ಫೂರ್ತಿ ಯನ್ನು ಪಡೆದು ಬೆಳೆದು ಬಂದ ವಿಶಿಷ್ಟಾದ್ವೈತದಂತೆ ಈ ಸಿದ್ಧಾಂತವೂ ೧೨ನೆಯ ಶತಮಾನದಲ್ಲಿಯ ಶಿವಶರಣರ ಅನುಭಾವಯುಕ್ತ ಕನ್ನಡ ವಚನ ವಾಙ್ಮಯದಿಂದ ಸ್ಫೂರ್ತಿಯನ್ನು ಪಡೆಯಿತೆಂದು ತಿಳಿಯ ಬಹುದು.)

(ಶಿವಾಗಮಗಳಲ್ಲಿ ವ್ಯಕ್ತವಾದ ಶೈವ ಸಿದ್ಧಾಂತದಿಂದ ಪರಶಿವನೇ ಪ್ರಕೃತಿ ಪುರುಷರ ನಿರ್ಮಾಣಕನೆಂದು ಗೊತ್ತಾಗುವದು. ಇದರಿಂದ ಈ ಸಿದ್ಧಾಂತವು ಪ್ರಕೃತಿ-ಪುರುಷ ಪರಶಿವ ಎಂಬ ಮೂರು ತತ್ವಗಳನ್ನು ಒಪ್ಪಿಕೊಳ್ಳುವದೆಂದು ಹೇಳಬಹುದು. ಪ್ರಕೃತಿಯ ಸಂಗವನ್ನು ಪರಿಹರಿಸಿ ಕೊಂಡು ಪುರುಷನು ಪರಶಿವನಲ್ಲಿ ತಾದಾತ್ಮ್ಯ ಪಡೆಯುವದೇ ಶೈವ ಧರ್ಮದ ಪರಮಾದರ್ಶವಾಗಿರುವದು. ಈ ತತ್ವಗಳನ್ನೇ ಪ್ರಾಮುಖ್ಯವಾ ಗಿಟ್ಟುಕೊಂಡಿದ್ದ ಶೈವ ಧರ್ಮವು ಕಾಲಗತಿಯಲ್ಲಿ ನಾಲ್ಕು ಪಂಗಡಗ ಳಿಂದ ಪ್ರಗತಿಯನ್ನು ಪಡೆದಿದ್ದರೂ ಮೂಲ ತತ್ವದ ವಿಷಯವಾಗಿ ಅಲ್ಲಿ ಭಿನ್ನ ಅಭಿಪ್ರಾಯವಿಲ್ಲ.) ಗುಜರಾತದ ಲಕುಲೀಶ ಪಾಶುಪತವು ಪರಶಿ ವನ ಪಶುಪತಿಯೆಂದು ಹೇಳಿ ಪಶು ಪಾಶಪತಿ ತತ್ವಗಳನ್ನು ಮುಂದು ಮಾಡಿದನು. ತಮಿಳ ನಾಡಿನ ಶೈವ ಸಿದ್ಧಾಂತವು ಆಣವ ಮಾಯಾ ಕರ್ಮವೆಂಬವನ್ನು ತಿಳಿಸಿ ಪುರುಷ-ಪರಶಿವರ ಹೊಂದಿಕೆಗಾಗಿ ಮಲತ್ರ ಯದ ನಿವಾರಣೆಯನ್ನು ಸೂಚಿಸಿತು. ಕಾಶ್ಮೀರದ ಪ್ರತ್ಯಭಿಜ್ಞಾ ಎಂಬ ಶೈವ ಧರ್ಮಕ್ಕೆ ಪುರುಷನ ಪ್ರಗತಿಯಲ್ಲಿ ಅಡ್ಡವಾಗಿ ನಿಂತ ಪಂಚ ಕಂಚುಕಗಳೆಂಬ ಐದು ದೋಷಗಳ ಪರಿಹಾರವೇ ಪ್ರಾಮುಖ್ಯವಾದ ಗುರಿಯಾಯಿತು. ಕನ್ನಡನಾಡಿನ ವೀರಶೈವವು ಸ್ಥಿರರೂಪನೂ ಚರರೂ ಪನೂ ಆದ ಪರಶಿವನೇ ಗೊತ್ತಿನ ಗುರಿಯೆಂದು ಭಾವಿಸಿತು. ಪರಶಿವನು ಪುರುಷರ ಕರ್ಮಗಳಿಗೆ ಸಂಬಂಧ ಪಡೆದವನೆಂದು ಪಾಶುಪತ ಧರ್ಮವು ಪರಶಿವನ ಅಪ್ಪಣೆಯಿಂದಲೇ ಕರ್ಮಲೋಪವಾಗಲಿ ಕರ್ಮ ನಿರ್ಮೂಲನ ವಾಗಲಿ ಪುರುಷನಿಗೆ ಒದಗುವದೆಂದು ತಮಿಳ ಶೈವ ಸಿದ್ಧಾಂತವೂ,

ಮಹೇಶ್ವರನು ತನ್ನ ಸಂಕಲ್ಪ ಶಕ್ತಿಯಿಂದಲೇ ಸೃಷ್ಟಿಯನ್ನು ನಿರ್ಮಿಸಿ ಲೀಲೆಯನಾಡುವನೆಂದು ಕಾಶ್ಮೀರ ಶೈವವು ತಿಳಿಯುತ್ತದೆ. ವೀರಶೈವ ಧರ್ಮವು ಈ ತತ್ವಗಳನ್ನು ಮನ್ನಿಸುವದಲ್ಲದೆ ಪ್ರತ್ಯಭಿಜ್ಞಾ ಸಿದ್ಧಾಂತಕ್ಕಿಂತ ಮುಂದೆ ಹೋಗಿ ಪರಶಿವ ಸಂಕಲ್ಪಶಕ್ತಿಯು ಅಥವಾ ಚಿತ್ ಶಕ್ತಿಯು ಪರಶಿವನೊಡನೆ ಅವಿನಾಭಾವ ಸಂಬಂಧದಿಂದ ಒಡನೆರೆದಿದೆ. ಪುರುಷ ಪ್ರಕೃತಿಗೆಲ್ಲ ಪರಶಿವನ ಈ ಚಿತ್ ಪ್ರಭೆಯೇ ತಳಹದಿಯಾಗಿದೆ ಎಂದು ತಿಳಿಸುವದು. ಪ್ರಕೃತಿ, ಪುರುಷ ಪುರುಷ ಪರಬ್ರಹ್ಮ ತತ್ವಗಳನ್ನು ಮೂರೂ ಶೈವ ಪಂಗಡಗಳು ಒಪ್ಪಿಕೊಂಡರೂ ವೀರಶೈವದಂತೆ ಪರಬ್ರಹ್ಮನ ಸಂಕಲ್ಪ ಶಕ್ತಿಗೆ ಮಾತ್ರ ಪ್ರಾಧಾನ್ಯವನ್ನು ನೀಡಲಿಲ್ಲ. ಶಾಕ್ತಾಗಮಗಳು ಶಕ್ತಿಗೆ ಮಹತ್ವದ ಸ್ಥಾನ ಕೊಡುತ್ತಿದ್ದರೂ ಅಲ್ಲಿ ಶಿವನಿಗಿಂತ ಶಕ್ತಿಗೇ ಆಧಿಕ್ಯವುಂಟು. ಸೃಷ್ಟಿಯು ವಿಸ್ತಾರವಾಗುವದು ಅಲ್ಲಿ ಶಿವನಿಂದಲ್ಲ, ಶಕ್ತಿಯಿಂದ. ಶಕ್ತಿಯು ಶಿವನ ಅಂಗವೆಂದು ಹೇಳಿ ವೀರಶೈವ ಸಿದ್ಧಾಂತವು ಸತ್ಯ ಸಂಕಲ್ಪ ಶಕ್ತಿಗಳಲ್ಲಿ ಸಮತೂಕವನ್ನು ಎತ್ತಿಹಿಡಿಯುತ್ತದೆ. ಈ ವಿವರಣೆಯಿಂದ ವೀರಶೈವ ಪ್ರತಿಪಾದಿತ ಶಕ್ತಿ ವಿಶಿಷ್ಟಾದ್ವೈತವು ಪ್ರಕೃತಿ ಪುರುಷ ಪರಶಕ್ತಿ ಪರಶಿವ ಎಂಬ ನಾಲ್ಕು ತತ್ವಗಳನ್ನು ಬಿತ್ತರಿಸುವದೆಂದು ಗೊತ್ತಾಗುವದು. ಪ್ರಕೃತಿಯೂ ಶಕ್ತಿಯೇ, ಆದರೆ ಅದು ಜಡವೆನಿಸಿಹುದು. ಆದರ ಸಂಬಂಧದಿಂದ ಪುರುಷನೂ ಜಾಡ್ಯಕ್ಕೊಳಗಾಗಿಹನು. ಪರಶಕ್ತಿಯು ಮಾತ್ರ ಚೈತನ್ಯಸೂಚಕವಾಗಿಹುದು. ಪರಶಕ್ತಿಯುತ ಪರಶಿವನು ಚೈತನ್ಯಾತ್ಮಕನಾಗಿಹನು. ಪರಶಿವನಂತೆ ಪುರುಷನೂ ಶಕ್ತಿಯಿಂದೊಡಗೂಡಿದವನಿದ್ದರೂ ಜಡ ಚೈತನ್ಯಗಳಿಂದ ಅವರ ವಿಶಿಷ್ಟತೆಯನ್ನು ಮನಗಾಣಲಾಗದು. ಶಕ್ತಿ ವಿಶಿಷ್ಟಾದ್ವೈತದ ನಿರ್ವಚನ ಮಾಡುವಾಗ ಸಿದ್ಧಾಂತಕಾರರು ಅತಿ ಸ್ಪಷ್ಟವಾಗಿ ವಿವರಿಸಿರುವರು. ( ಶಕ್ತಿಶ್ಚ ಶಕ್ತಿಶ್ಚ ಶಕ್ತಿ । ತಾಭ್ಯಾಂ ವಿಶಿಷ್ಟೌ ಜೀವೇಶಾ ತಯೋರದ್ವೈತಂ । ಶಕ್ತಿ ವಿಶಿಷ್ಟಾದ್ವೈತಂ ॥ )

## ಶೈವಾಗಮ

ಈ ಪ್ರಪಂಚದ ಮೂಲ ವಸ್ತುವನ್ನು ವೀರಶೈವರು "ಶಿವ" "ಲಿಂಗ" "ಸ್ಥಲ" ಎಂದು ಬಗೆಬಗೆಯಾಗಿ ಬಣ್ಣಿಸಿರುವರು. ಶೈವಾಗಮಗಳು "ಶೇರಿತೇ ಇನಿ ಶಿವಃ" ಎಂದು ಹೇಳುತ್ತಿವೆ. ತೋರುವ

ತೋರಿಕೆಯೆಲ್ಲ ಪರವಸ್ತುವಿನಲ್ಲಿ ಸೇರುವುದರಿಂದಲೆ ಅದು "ಶಿವ" ಎಂಬ ನಾಮವನ್ನು ಪಡೆಯಿತು.) ಶಿವನು ತನ್ನದೇ ಆದ ತನಗಿಂತ ಭಿನ್ನವಲ್ಲದ ಒಂದು ಪ್ರಕಾಶಶಕ್ತಿಯಿಂದ ಕೂಡಿದ್ದಾನೆ ಮತ್ತು ಆ ಶಕ್ತಿಯಿಂದ ಕೂಡಿಹನೆಂಬ ಸ್ವವಿಮರ್ಶೆಯೂ ಅವನಿಗುಂಟು. ಸೂರ್ಯ, ಚಂದ್ರ, ವಿದ್ಯುದ್ದೀಪ ಇತ್ಯಾದಿಗಳಿಗೆ ಸ್ವಯಂಪ್ರಭೆಯಿದ್ದರೂ ಆ ಪ್ರಭೆಯ ಅರಿವ ಸ್ವವಿಮರ್ಶೆಯು ಅವುಗಳಿಗಿಲ್ಲ. ಆದುದರಿಂದ ಅವು ಜಡರೂಪವಾಗಿ ರುವವೆಂದು ಹೇಳಲಾಗುತ್ತಿದೆ. ಸ್ವಪ್ರಕಾಶದ ಸ್ವವಿಮರ್ಶೆಗಾಗಿ ಶಿವನು ಚೈತನಾತ್ಮಕವಾಗಿದ್ದಾನೆ. ಈ ಆತ್ಮವಿಮರ್ಶೆಯೇ ಪ್ರಕಾಶವಿಮರ್ಶೆಯೇ ಪೂರ್ಣಾನಂವಿತ್ (ಪರಿಪೂರ್ಣವಾದ ಅರಿವು) ಎಂಬ ಸಂಜ್ಞೆಯುಳ್ಳ ಪರ ಶಕ್ತಿಯಾಗಿದೆ. ಕಾರಮೇಘದೊಳಗಣ ಮಿಂಚಿನಂತೆ, ನೀರೊಳಗಣ ಕಿಚ್ಚಿನಂತೆ, ಫಲರಸದೊಳಗಣ ನವರುಚಿಯಂತೆ, ಶಶಿಯೊಳಗಣ ತಣ್ಪಿನಂತೆ, ಮರೀಚಿಯೊಳಗಣ ಬಿಸಿಲಿನಂತೆ, ಆಲಿಯೊಳಗಣ ತೇಜದಂತೆ, ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಚಿನ್ನದೊಳಗಣ ಬಣ್ಣದಂತೆ, ಬೀಜದೊಳಗಣ ವೃಕ್ಷದಂತೆ, ನನೆಯೊಳಗಣ ವೃಕ್ಷದಂತೆ, ನನೆಯೊಳಗಣ ಪರಿಮಳದಂತೆ, ಕನ್ಯೆಯೊಳಗಣ ಸ್ನೇಹದಂತೆ, ಹಸುಳೆಯೊಳಗಣ ಸ್ವಪ್ನದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಉಸಿರೊಳಗಣ ಚೈತನ್ಯದಂತೆ" ಶಿವಶಕ್ತಿಯರ ಅವಿನಾಭಾವ ಸಂಬಂಧವಿದೆ ಎಂದು ವಚನಕಾರರು ವಿವರಿಸಿರುವರು. ಅವರು ಪಿಂಡಸ್ಥಲದ ತಮ್ಮ ವಚನಗಳಲ್ಲಿ ಸೂಚಿಸಿರುವ ಈ ಶಕ್ತಿಯು ಸಾಂಖ್ಯರ ತ್ರಿಗುಣಾತ್ಮಕ ಪ್ರಕೃತಿಯೂ ಅಲ್ಲ, ಅದ್ವೈತಿಗಳ ಅನಿರ್ವಚನೀಯ ಮಾಯೆಯೂ ಅಲ್ಲ ವೆಂಬುದು ಸ್ಪಷ್ಟವಾಗಿದೆ.

## ಲಿಂಗಸ್ವರೂಪ

(ವೀರಶೈವ ಅನುಭಾವಿಗಳು ಪರಶಿವನಿಗೆ ಲಿಂಗ ಎಂದು ಸಂಬೋಧಿಸಿರುವರು "ಶಿವಏವ ಸ್ವಯಂ ಲಿಂಗಂಇತಿಲಿಂಗಸ್ಯ ವೈಭವಂ" (ಅನುಭವಸೂತ್ರ ೩) ಶೈವಾಗಮಗಳಲ್ಲಿ ಶಿವನು ಸದ್ರೂಪನೆಂದೂ ಶಕ್ತಿಯು ಚಿದ್ರೂಪನೆಂದೂ ವರ್ಣಿತವಾಗಿವೆ. ಆದುದರಿಂದ ಶಿವಶಕ್ತಿಯರನ್ನು ಪುರುಷರೆಂದು ಭಾವಿಸುವದು ಸಾಧುವಲ್ಲ. ಲಿಂಗವು ಪರವಸ್ತುವಿನ

ಸದ್ರೂಪ ಚಿದ್ರೂಪಗಳನ್ನು ಒಂದುಗೂಡಿಸುವ ತತ್ವವಾಗಿದೆ ಲಿಂಗ. ಶೈವ ಯಿದಂ ಸಾಕ್ಷಾತ್ ಶಿವಶಕ್ತಿ ಭಯಾತ್ಮಕಂ ಎಂದು ಸೂಕ್ಷ್ಮಾಗ ಮವು ( ೪-೮ ) ಹೇಳುತ್ತಿದೆ ಚರಾಚರಾತ್ಮಕವಾದ ಎಲ್ಲವೂ ಲಿಂಗ ದಿಂದ ಉದಯಿಸಿ ಲಿಂಗದಲ್ಲಿ ಬೆಳೆದು ಲಿಂಗದಲ್ಲಿ ಉಳಿದುಕೊಳ್ಳುವದು. " ಲೀಯತೆ ಗಮ್ಯತೆ ಯತ್ರ ಸರ್ವಂ ಚರಾಚರಂ ತದೇತಂ ಲಿಂಗಭಿ ತ್ಯುಕ್ತಂ ಲಿಂಗತತ್ವ ಪರಾಯಣ " ಎಂದು ಮಗ್ಗೆಯ ಮಾಯಿದೇವನು ತಿಳಿಸುವನು. ಶಿವಪುರಾಣದ ವಿದ್ಯೇಶ್ವರ ಸಂಹಿತೆಯಲ್ಲಿಯೂ ಸಹ ವಿನಾರ್ಥ ಗಮಕಂ ಚಿಹ್ನಂ ಲಿಂಗ ಮಿತ್ಯಭಿಧಾಯತೆ ಎಂದು ಹೇಳಿದೆ. ಇದರಿಂದ ಉತ್ಪತ್ತಿಸ್ಥಿತಿ ಲಯಗಳಿಗೆ ಯಾವುದು ಕಾರಣವಾಗಿದೆಯೋ,. ಯಾವುದು ಎಲ್ಲವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡು ಅದಕ್ಕೆಲ್ಲ ಆಧಾರಭೂತವಾ ಗಿದೆಯೋ ಅದು ಲಿಂಗ ಎಂಬುದು ಸ್ಪಷ್ಟವಾಗುವದು. ಮತ್ತು ಶಿವ ಶಕ್ತಿಯರ ನಡುವೆ ಬೆಸುಗೆಯೊಂದರ ಭ್ರಾಮಕಕಲ್ಪನೆಯನ್ನು ಕೆಡಿಸಿ ಅದರಲ್ಲಿಯ ಒಂದು ಅವಿರಳವಾದ ಬೆಸುಗೆಯನ್ನು ಲಿಂಗ ಪದವು ವ್ಯಕ್ತ ಗೊಳಿಸುವದೆಂದೂ ಸೂಚಿತವಾಗುವದು. )

ವೀರಶೈವ ಆಚಾರ್ಯರು ಪರಶಿವನಿಗೆ ಪರಬ್ರಹ್ಮವೆಂದೂ ಕರೆದಿ ರುವರು. ತೋರಿಕೆಯೆಲ್ಲದರ ಗತಿ ಸ್ಥಿತಿಗೆ ಕಾರಣವಾಗಿಪರಶಿವನಿಹನು, ಮಹದಾದಿ ತತ್ವಗಳಿಂದ ಲಕ್ಷ್ಯವಾದ ಈ ಸೃಷ್ಟಿಗೆಲ್ಲ ಆದಿಯಾಧಾರ ವಾಗಿರುವವನು ಈ ಪರಶಿವನೇ. ಜಡ ಚೈತನ್ಯ ಸೃಷ್ಟಿಯ 'ಅಳಿಮೆಉ ಳಿಮೆಗಳಿಗೆ ಈ ಪರಶಿವನಲ್ಲದೆ ಬೇರೆ ಆಶ್ರಯವಿಲ್ಲ. ವಿಶ್ವವೆಲ್ಲ ತೋರಿ ಅಡಗುವದು ಈ ಪರಶಿವಲಿಂಗದಿಂದ. (ಈ ಪರಶಿವನಲ್ಲಿ ಸ್ಥಿತಿ ಲಯಗಳಿಗೆ ಕಾರಣಭೂತವಾದ ದೆಸೆಯಿಂದ " ಸ್ಥಲ " ವೆಂತಲೂ ಈ ಪರಶಿವನು ಸಂಜ್ಞೆಗೊಂಡಿದ್ದಾನೆ. ಏಕಮೆವ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ ಶಿವತತ್ವಂ ಶಿದಾಚಾರ್ಯೈಃ ಸ್ಥಲಾಭಿತ್ಯಾಹ್ಯಶದರಾತ್ ( ಅನುಭವ ಸೂತ್ರ ೧-೩ )

ಇನ್ನೊಂದು ವಿಧವಾಗಿ ತಿಳಿಸಬೇಕೆಂದರೆ 'ಶಿವಲಿಂಗ ಸ್ಥಲ ಈ ಪದ ಗಳಿಂದ ವರ್ಣಿತನಾದ ಪರಶಿವನು ಪರಿಪೂರ್ಣ ಅರಿವಿನಿಂದ ಭಿನ್ನವಲ್ಲ. ಪರಿಪೂರ್ಣವಾದ ನಿರಂತರವಾದ ಅರಿವೇ ಅವನಾಗಿರುವನು. ಮತ

ವೆಯ ಪರೆಯನ್ನು ಓರೆಮಾಡಿಕೊಂಡ ಪುರುಷನು ಅರಿವಿನ ಹೊಂದು ಗೆಯ ದೆಸೆಯಿಂದ ಪರಶಿವನೇ ಆಗುವನು.

### ಲೀಲಾವಿಲಾಸ

(ವೀರಶೈವ ತತ್ವಜ್ಞರು ಸೃಷ್ಟಿಯ ಕ್ರಮವನ್ನು ಒಂದು ಸ್ವತಂತ್ರ ವಾದ ರೀತಿಯಲ್ಲಿ ಹೇಳಿದ್ದಾರೆ. "ಸೃಷ್ಟ್ಯರ್ಥಂ ಸರ್ವತತ್ವಾನಾಂ ಜಗದುತ್ಪತ್ತಿಕಾರಣೆ. ಯೋಗಿನಾಮುಪಕಾರಾಯ ಸ್ವೇಚ್ಛಾಯಾಚಿಂತ ಯತ್ ಶಿವಃ" ಎಂಬ ಸೂಕ್ಷ್ಮಾಗಮದ ಮಾತುಗಳಲ್ಲಿ ಶಿವನು ತನ್ನ ಸಂಕಲ್ಪ ಶಕ್ತಿಯಿಂದ ಶಿವಯೋಗಿಗಳ ಉಪಕಾರಕ್ಕೆಂದು ಈ ಸೃಷ್ಟಿ ಯನ್ನು ನಿರ್ಮಿಸಿದನು ಎಂಬುದು ಸ್ಪಷ್ಟವಾಗುವದು.* ಶಿವ ತನ್ನ ಶಕ್ತಿಯ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು.) ಲಿಂಗಕ್ಕೆ ಲೀಲಾ ವಿಲಾಸ ತೋರಿದಲ್ಲಿ ಚಿತ್‌ಪ್ರಭಾಕಾಶವೇ ಸ್ಫುರಿಸಿ ನಾನಾತ್ವವನೈದಿ ಪರಿ ಚ್ಛಿನ್ನಾತ್ಮರಾದರು. (ಸಕಲ ಜಗವೆಲ್ಲವೂ ಪರಶಿವನ ನೆನಹುಮಾತ್ರದಿಂದಾ ದವು ಎಂಬೀ ವಚನಕಾರರ ವಾಣಿಗಳಲ್ಲಿ ಪ್ರಪಂಚವೆಲ್ಲ ಶಿವಲೀಲೆಯೆಂಬ ಸ್ಪಷ್ಟವಾದ ಅಭಿಪ್ರಾಯವಡಗಿದೆ.) ವೀರಶೈವರು ಈ ಸೃಷ್ಟಿಯು ಪರ ಶಿವನ ಪರಮಪ್ರಸಾದವೆಂದು ಹೇಳಿ ಅತ್ಯಂತ ಗೌರವದಿಂದ ಇದನ್ನು ಕಂಡಿದ್ದಾರೆ. ಇದರಿಂದಾಗಿ ಇದರ ನಿತ್ಯವನ್ನೂ ಅವರು ಒಪ್ಪಿಕೊಂ ಡಿದ್ದಾರೆ. ಪರಶಿವನ ತನ್ನ ನಿಗೂಹನ ಶಕ್ತಿಯ ಪ್ರಭಾವದಿಂದ ರೂಪಾ ಗಲೂ ಬಲ್ಲ, ರೂಪವಾಗದಿರಲೂ ಬಲ್ಲ, ಜಗವಾಗಲೂ ಬಲ್ಲ, ಜಗವಾ ಗದಿರಲೂ ಬಲ್ಲ. ಲೀಲೆಯಾದಡೆ ಆತ ಉಮಾಪತಿ ಲೀಲೆ ತಪ್ಪಿದಡೆ ಸ್ವಯಂಭು. ಅದಕ್ಕೋಸುಗ ಇಹದ ಬಾಳುವೆಯ ಮಹತಿಯನ್ನು ವೀರ ಶೈವರು ಅಲ್ಲಗಳೆಯುವದಿಲ್ಲ. (ತನ್ನ ವಿನೋದಕ್ಕೆ ತಾನು ಸೃಷ್ಟಿಸಿ ತನ್ನ ವಿನೋದಕ್ಕೆ ತಾನೆ ತಿರುಗಿಸಿ ತನ್ನ ಜಗದ್ವಿಲಾಸಸಾಕಾದಡೆ ಮತ್ತೆ ಶಿವನಾ ಮಾಯಾಪಾಶವನು ಎಂಬ ಅನನ್ಯವಾದ ದೃಢವಾದ ನಂಬುಗೆ ಯುಳ್ಳವರಾಗಿರುವರು ವೀರಶೈವಾನುಭವಿಗಳು.)

ಅದ್ವೈತಿಗಳು ಸೃಷ್ಟಿಯೆಂಬುದೆಲ್ಲ ಅಧ್ಯಾಸವೆಂದು ಈ ಸೃಷ್ಟಿಗೆ ಅನಾದಿ ಮಾಯೆಯೆ ಕಾರಣವೆಂದು ಹೇಳುವರು. ಅಧ್ಯಾಸವೆಂದ

"ಸೃಷ್ಟಿರೂಪಃ ಪರಅಪೂರ್ವದಷ್ಟ್ವವಭಾಸಃ (ಅತದತಿ ತಂದತ್ ಪ್ರಕಾರತ್ವಮು" ಹಗ್ಗವು ಹಾವು ಎಂಬ ತಪ್ಪು ತಿಳಿವಳಿಕೆ. ಆದರೆ ಕಾರಣದ ಗುಣವನ್ನು ಕಾರ್ಯದಲ್ಲಿ ಕಾಣಬೇಕೆಂಬ ತರ್ಕಶಾಸ್ತ್ರದ ನಿಯಮದಂತೆ ಸತ್ಯರೂಪವಾದ ಪರಬ್ರಹ್ಮದಿಂದ ಅಸತ್ಯರೂಪವಾದ ಪ್ರಕೃತಿಯು ಹುಟ್ಟುವದು ಅಸಂಭವ. ಆದಕ್ಕಾಗಿ ಈ ಸೃಷ್ಟಿಯು ಸಟೆಯಲ್ಲ, ದಿಟ. ಇಲ್ಲದ ಮಾಯೆಯನ್ನುಉಂಟೆಂದು ಭಾವಿಸುವದು ಭ್ರಮೆ ಎಂದು ವಿಶಿಷ್ಟಾದ್ವೈತಿಗಳು ನಂಬುತ್ತಾರೆ. "ಗುಹೇಶ್ವರನೆಂಬ ಅರಿವು ಸಿನೆ ಬಂಜೆಯಾದುದಲ್ಲ" ಎಂದು ಅಲ್ಲಮಪ್ರಭು ದೇವರು ತಿಳಿಸುತ್ತಾರೆ.)

(ಜೀವನು ಬ್ರಹ್ಮನಿಗಿಂತ ಭಿನ್ನನು ಎಂಬ ದ್ವೈತಿಗಳ ವಾದವೂ, ಬ್ರಹ್ಮನ ಒಂದಂಶವೆಂಬ ವಿಶಿಷ್ಟಾದ್ವೈತಿಗಳ ವಾದವೂ ವೀರಶೈವರಿಗೆ ಒಪ್ಪಿಗೆಯಿಲ್ಲ ಶಕ್ತಿ ವಿಶಿಷ್ಟಾದ್ವೈತದಲ್ಲಿ ಜೀವನು ದೇವನಿಂದ ಬೇರೆಯಲ್ಲ. ಪರಿಪೂರ್ಣವಾದ ಅರಿವಿನಿಂದ ಬೆರೆತ ಜೀವನವೇ ದೇವನು)

## ದಾರ್ಶನಿಕರು

ಅದ್ವೈತವನ್ನು ಕೇವಲ ಬಾಯಿಯಿಂದ ಹೇಳುವವನ್ನು ಕೃತಿಯಲ್ಲಿ ತಂದವರು ವೀರಶೈವ ದಾರ್ಶನಿಕರು. ಅವರು ಜಗತ್ತನ್ನು ಸತ್ಯವೆಂದು ಭಾವಿಸಿದರೂ ಅದರ ಬಗೆಗೆ ಅಭಿಮಾನವನ್ನು ತೊರೆದು ಪರಿಪೂರ್ಣವಾದ ಅರಿವಿನ ವಿಕಾಸವನ್ನೇ ಜೀವನದ ಪರಮಾದರ್ಶ ಎಂಬ ಹಿರಿಯ ಗುರಿಯನ್ನಾರಿಸಿ ಕೊಂಡಿದ್ದಾರೆ. ಅಹಂಭಾವದಿಂದ ಕುದುರುವ ಕರ್ತೃತ್ವಾಭಿಮಾನ ಫಲಾಪೇಕ್ಷೆ ಇವುಗಳನ್ನು ಅಡಗಿಸಿಕೊಂಡು ಸೃಷ್ಟಿಯಲ್ಲಡಗಿದ ಪರಶಿವನ ಲೀಲಾ ವಿಲಾಸವನ್ನು ಕಾಂಬದೃಷ್ಟಿಯನ್ನು ಪಡೆದಿದ್ದಾರೆ. ಶಕ್ತಿ ವಿಶಿಷ್ಟಾದ್ವೈತಿಗಳು ಅದಕ್ಕಾಗಿ ಹಲವು ದಾರ್ಶನಿಕರಂತೆ ಜೀವರೆಲ್ಲ ಸ್ತ್ರೀ ಪುರುಷನೆಂಬ, ಉಚ್ಚನೀಚವೆಂಬ ಭಾವಕ್ಕೆ ಅನುವನ್ನೀಯುವದು ನ್ಯಾಯವಲ್ಲವೆಂದೂ ಮಾನವರ ಜಾತಿ ಲಿಂಗ ವಯ ವರ್ಣ ಆಶ್ರಮ ಮುಂತಾದವುಗಳು ಅರಿವಿನ ವಿಕಾಸಕ್ಕೆ ಪ್ರತಿಬಂಧಕ ವಾಗಲೆಂದೂ ಈ ಮತದಲ್ಲಿ ಹೇಳಲ್ಪಟ್ಟಿರುತ್ತದೆ. ಅದ್ವೈತವು ಪರಮಾವಧಿಯಲ್ಲಿ ಆತ್ಯಾತಿಕ ಸತ್ಯವಾದರೂ ಸಾಧಕಾವಸ್ಥೆಯಲ್ಲಿ, ಜಿಜ್ಞಾಸುವಾದ ಜೀವನು ದ್ವೈತ

ವನ್ನಾಶ್ರಯಿಸುವವು ಯುಕ್ತವೇದೊ ಶಿಖಿ ಕರ್ಪೂರ ಸಂಯೋಗದಂತೆ ಆ ಸಾಧಕನ ದ್ವೈತ ಭಾವವು ಪರಿಣಾಮದಲ್ಲಿ ಅದ್ವೈತವನ್ನೈದುವದೆಂದೂ ವಿಶಿಷ್ಟಾದ್ವೈತವು ಅಭಿಮತಗೊಳ್ಳುವದು. ಹೀಗೆ ದ್ವೈತಾದ್ವೈತ ಸಮನ್ವಯವು ಅಂಗೀಕೃತವಾಗಿರುವದರಿಂದ ಇತರ ಮತಗಳಲ್ಲಿ ಕಾಣಲಾಗದ ಸರ್ವ ಶ್ರುತಿಸಮನ್ವಯವನ್ನೂ ಈ ಮತವು ಒಪ್ಪಿಕೊಳ್ಳುವದೆಂದು ಶ್ರೀಕರ ಭಾಷ್ಯವು ಸಾರುವದು.

ಅರಿವಿನ ಸಂಪೂರ್ಣವಾದ ವಿಕಾಸಕ್ಕಾಗಿ ಸಾಧಿಸುವ ಶುದ್ಧ ಜೀವನು (ಅಂಗನು) ಸರ್ವಜ್ಞನಾದ ಪರಶಿವನನ್ನು (ಲಿಂಗವನ್ನು) ತನ್ನಲ್ಲಿ ಕಾಣಬಯಸುವನು. ಈ ಅವನ ಗುರಿಯ ಸಾಧನೆಯಲ್ಲಿ ಅನುಭಾವಿಗಳಾದ ಶಾಸ್ತ್ರಕಾರರು ಆರು ಹಂತಗಳನ್ನು ಕಂಡಿರುವರು. ಷಟ್ ಸ್ಥಲವೆಂದು ಹೆಸರಾಂತ ಸಾಧನೆಯ ತಿರಳು ಶಕ್ತಿ ವಿಶಿಷ್ಟ ಅದ್ವೈತದಲ್ಲಿ ಒಂದು ಪ್ರಾಮುಖ್ಯವಾದ ಸ್ಥಾನವನ್ನು ಪಡೆದಿದೆ. ಈ ಸಾಧನೆಯ ಕ್ರಮದಲ್ಲಿ ಲಿಂಗ ಅಂಗ ಸಮರಸವೇ ಶಕ್ತಿ ವಿಶಿಷ್ಟಾದ್ವೈತಕ್ಕೆ ಪರಮ ಧ್ಯೇಯವಾಗಿರುವದು. ಸರ್ವಾಂಗ ಲಿಂಗ ಸ್ಥಲದ ಆ ಅನುಭಾವಿಗಳ ಶರೀರದಲ್ಲಿ ಸರ್ವೇಂದ್ರಿಯಗಳೆಲ್ಲ ಲಿಂಗ ಕಿರಣದಿಂದ ಪ್ರಭಾವಿತವಾಗುತ್ತವೆ.

ಗೀರ್ವಾಣ ವಾರಿಧಿಯಲ್ಲಿ ಶಕ್ತಿ ವಿಶಿಷ್ಟಾದ್ವೈತವೆಂಬ ಅನರ್ಘ ರತ್ನವನ್ನು ಬೆಳಗಿಸಿದ ಶ್ರೇಯಸ್ಸು ವಚನಕಾರರಿಂದ ಈಚೆಗೆ ಆಗಿಹೋದ ಆ ಘನವಿದ್ವಾಂಸರೂ ದಿವ್ಯಾನುಭವಿಗಳೂ ಆದ ಶಿವಯೋಗಿಗಳಿಗೆ ಸಲ್ಲುವದು. ಶಿವಾದ್ವೈತ ಮಂಜರಿ, ಸಿದ್ಧಾಂತ ಶಿಖಾಮಣಿ; ಕ್ರಿಯಾಸಾರ, ಅನುಭವಸೂತ್ರ ಕೈವಲ್ಯಸಾರ, ವೀರಶೈವಾನಂದ ಚಂದ್ರಿಕೆ ಈ ಮುಂತಾದ ಗ್ರಂಥಗಳು ವೀರಶೈವ ವಚನಕಾರರಿಂದ ಸ್ಫೂರ್ತಿಯನ್ನು ಪಡೆದು ಶಕ್ತಿ ವಿಶಿಷ್ಟಾದ್ವೈತವನ್ನು ಬೆಳಗಿಸುತ್ತವೆ. ಪರಬ್ರಹ್ಮನು ಸಚ್ಚಿದಾನಂದ ಸ್ವರೂಪನಾಗಿದ್ದಾನೆ ಎಂಬ ಈ ನಿಲುವನ್ನು ಅಸ್ತಿ ಪ್ರಕಾಶ ನಂದಾಮಿ ಎಂಬ ಪದಗಳು ಸೊಗಸಾಗಿ ವಿವರಿಸುತ್ತಿದ್ದರೂ ಅವನ್ನು ಗತಮಾಡಿಕೊಂಡು ಕನ್ನಡಿಯಂತೆ ಬೆಳಗಿಸಿದ ಬಲ್ಮೆಯು ಈ ಶಕ್ತಿ ವಿಶಿಷ್ಟಾದ್ವೈತಿಗಳಿಗೆ ಸೇರಿದುದು. ಅರಿವು ತಾನೆ ತಾನಾಗಿ ಬೆಳಗುತ್ತಿದ್ದುದರಿಂದ ಅಪರಿಮಿತವಾದ ಆನಂದ ಉಕ್ಕಿ ಹೊರಹೊಮ್ಮುವದು, ಇಂತಹ

ಆನಂದವನ್ನು ಅನುಭವಿಸಿ ಪರಾಪ್ರಕೃತಿಯ ನೆರವಿನಿಂದ ಪುರುಷನು ಪರ
ಬ್ರಹ್ಮನಾಗುವ ಉದ್ದೇಶವು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಹುದು
ಗಿಹುದು.

---

# ಆರ್ಷೇಯ ಸಂಗೀತ

( ಲೇಖಕರು :— ಶ್ರೀ ಜಿ. ಎಸ್. ಜುಕ್ತಿಪುರ )
ಗಾಯನ ಕಲಾಕೋವಿದ ವಿಜಾಪೂರ.

ಸಂಗೀತದ ಪರಂಪರ ದೃಷ್ಟಿಯಿಂದ ನಮಗೆ ಆರ್ಷೇಯ ಸಂಗೀತ ವೆಂಬ ಶಬ್ದ ದೊರೆಯುತ್ತಿದೆ. ಆರ್ಷ ಈ ಶಬ್ದವು ಋಷಿ ಶಬ್ದದಿಂದ ಹೊಂಟಿದೆಯೆಂದು ಪಂಡಿತರ ಅಭಿಪ್ರಾಯವಾಗಿದೆ. ಋಷಿಗಳು ಕೂಡಾ ಸಂಗೀತಶಾಸ್ತ್ರ ಪ್ರಗತಿಗೆ ಕಾರಣರಾದ್ದರಿಂದ " ಆರ್ಷೇಯಸಂಗೀತ " ಈ ಶಬ್ದ ಬಂದಿದೆಯೆಂದು ತಿಳಿದು ಬರುತ್ತದೆ. ಆದರೆ ಸಂಗೀತಶಾಸ್ತ್ರ ದಲ್ಲಿ ಮಾತ್ರ ಈ ಶಬ್ದದ ಉಲ್ಲೇಖವೆಲ್ಲಿಯೂ ಬಂದಿಲ್ಲ. ಆದರೆ ರೂಢ ವಾಗಿ ಬಂದಿದೆ. ಸಂಗೀತಶಾಸ್ತ್ರದಬಗ್ಗೆ ನಮಗೆ ದೊರೆತ ಗ್ರಂಥವೆಂದರೆ ಭರತನಾಟ್ಯಶಾಸ್ತ್ರ ಈ ಗ್ರಂಥವು ಸಂಗೀತದ ಇತರ ಗ್ರಂಥಗಳಿಗಿಂತಲೂ ಮೊದಲಿನದಾಗಿದೆ. ಆದರೆ ಈ ಗ್ರಂಥದಲ್ಲಿ ಸಂಗೀತವಿಷಯಕ ಪರಿಚ ಯವು ಅಷ್ಟೊಂದು ತೃಪ್ತಿಕರವಿಲ್ಲ. ಹೆಚ್ಚಾಗಿ ಅಭಿನಯ ಕಲೆಯ ವರ್ಣ ನೆಯಿದೆ. ಅಲ್ಲದೆ ಈ ಗ್ರಂಥದಿಂದ ಇದಕ್ಕಿಂತಲೂ ಪೂರ್ವದಲ್ಲಿ ಸಂಗೀತ ಸಂಬಂಧದ ಗ್ರಂಥಗಳಿವೆಯೆಂದು ತಿಳಿದುಬರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ ಈ ಮಾತನ್ನು ಸಂಗೀತ ಪಿತಾಮಹ ಚತುರ

ಪಂಡಿತ ಭಾತಖಂಡೆ ಅಲ್ಲದೆ ಪಂಡಿತರಾ ಕಾಂಜನಕರ, ಪಂಡಿತ ವಿಶ್ವಂಭರ ನಾಥಭಟ್ಟ ಇವರೆಲ್ಲರೂ ಒಪ್ಪಿದ್ದಾರೆ. ಈಗ ದೊರೆತ ಈ ಗ್ರಂಥದಲ್ಲಿ ನಾಟ್ಯಕಲೆಯಬಗ್ಗೆ ಸವಿಸ್ತಾರ ಕೊಟ್ಟಿದೆ. ಅದರಲ್ಲಿಯೇ ತುಸು ಸಂಗೀತದ ಚರ್ಚೆಯು ಬಂದಿದೆ. ಅದು ಹೇಗೆ ನಾಟ್ಯಕಲೆಯು ಒಂದು ಅಂಗವಾಗಿ ಪರಿಣಮಿಸಿ ನಾಟ್ಯಕಲೆಗೆ ಎಷ್ಟು ಸಂಗೀತ ಸಂಬಂಧ ಬೀಳುತ್ತದೆ ಎಷ್ಟೇ ವರ್ಣಿಸಲ್ಪಟ್ಟಿದೆ. ನಾಟ್ಯ ಭೇದವು ನಾಲ್ಕುವೇದಗಳ ಅಂಗದಿಂದ ಕೂಡಿದೆಯೆಂದು ಕೆಳಗಿನ ದೃಶ್ಯದಿಂದ ತಿಳಿಯುತ್ತದೆ.

> ಏವಂ ಸಂಕಲ್ಪ್ಯ ಭಗವಾನ್ ಸರ್ವವೇದಾನನುಸ್ಮರನ್ ।
> ನಾಟ್ಯವೇದಂ ತತಶ್ಚಕ್ರೇ ಚತುರ್ವೇದಾಂಗ ಸಂಭವಮ್ ।
> ಜಗ್ರಾಹ ಪಾಠ್ಯಮೃಗ್ವೇದಾತ್ ಸಾಮಭ್ಯೋ ಗೀತ ಮೇವಚ।
> ಯಜುರ್ವೇದಾದಿ ಮಿನಯಾನ್ ರಸಾನಥರ್ವಣಾದಪಿ ॥

ಬ್ರಹ್ಮನು ನಾಲ್ಕು ವೇದಗಳನ್ನು ಮನನಮಾಡಿ ಋಗ್ವೇದದಿಂದ ಭಾಷಾ, ಸಾಮವೇದದಿಂದ ಸ್ವರ, ಯಜುರ್ವೇದದಿಂದ ಅಭಿನಯ, ಅಥರ್ವಣವೇದದಿಂದ ರಸ ಹೀಗೆ ಆಯಾಯ ಶಾಸ್ತ್ರಗಳನ್ನು ನಿರ್ಮಿಸಿ ನಾಟ್ಯಭೇದವನ್ನು ನಾಲ್ಕುವೇದಗಳಅಂಗದಿಂದ ನಿರ್ಮಾಣಮಾಡಿದ್ದಾನೆಂದು ತಿಳಿದುಬರುತ್ತಿದೆ.

ಪ್ರತಿಯೊಂದು ಮೂಲವಸ್ತುವನ್ನು ಬ್ರಹ್ಮನೇ ಉತ್ಪನ್ನ ಮಾಡಿದ್ದಾನೆಂದು ನಮಗೆ ರೂಢಿಯಿಂದ ಮಾತ್ರ ತಿಳಿಯುತ್ತದೆ.

ಪಂಡಿತಶಾರ್ಙದೇವನು "ಸಂಗೀತ ರತ್ನಾಕರ" ದಲ್ಲಿ ಗಾಂಧರ್ವ ಶಬ್ದವನ್ನು ಈ ರೀತಿ ತೋರಿಸಿದ್ದಾನೆ "ಅನಾದಿ ಸಂಪ್ರದಾಯಂ ಯದ್ಗಂಧರ್ವೈಃ ಸಂಪ್ರಯುಜ್ಯತೆ। ನಿಯತಮ್ ಶ್ರೇಯಸೋ ಹೇತುಸ್ತದ್ಗಂಧರ್ವ ಜಗು ಬುಧಾಃ ॥ ಈ ರೀತಿ ಅನಾದಿಕಾಲದಿಂದ ಬಂದಿವೆಯೆಂದು ಹೇಳುತ್ತಾನೆ. ಆದರೆ ಇದು ಹೇಗೆ ಬಂದಿವೆ ಎಂಬುದನ್ನು ಹೇಳಲಿಲ್ಲ ಮತ್ತು ಇದರ ಪ್ರಯೋಗ ಗಂಧರ್ವ (ಸ್ವರ್ಗೀಯ ಗಾಯಕ) ರೆಂದು ಮಾಡುತ್ತಿದ್ದರು. ಮತ್ತು ಯಾವದರಿಂದ "ಅವಶ್ಯಮೇವ

ಆತ್ಮಿಕ ಉನ್ನತಿ " ಆಗುತ್ತದೆಯೋ ಅದುವೇ ಸಂಗೀತ " ಸೋಗಾಂಧರ್ವ" ಹೀಗೆ ಕೆಲವರ ಅಭಿಪ್ರಾಯ. ಮತ್ತು ರತ್ನಾಕರದ ಟೀಕಾಕಾರನ್ನಾದ ಕಲ್ಲಿನಾಥನು ಈಶ್ವರನು ನಿರ್ಮಿಸಿದ್ದಾನೆಂದು ಮಾನಿಸಿದ್ದಾನೆ: ಅಲ್ಲದೆ ಗಾಂಧರ್ವ ಈ ಶಬ್ದಕ್ಕೆ ಮಾರ್ಗಸಂಗೀತ " ಈ ಸೂಚನೆಯನ್ನು ತಿಳಿಸಿದ್ದಾನೆ ಆದರೆ ಶಾರ್ಙದೇವನು ಎಲ್ಲಿಯೂ ಹೇಳಿದಂತೆ ಕಂಡುಬಂದಿಲ್ಲ ಮಾರ್ಗ ಇದರ ಅರ್ಥ ಅನ್ವೇಷಣವಾಗುತ್ತದೆ. "ಮಾರ್ಗಸಂಗೀತ"ದ ಪರಿಭಾಷಾದಲ್ಲಿ ಅದಕ್ಕೆ " ವಿರಿಂಚಾದ್ಯೈಃ " ಬ್ರಹ್ಮನೇ ಮೊದಲಾದವರಿಂದ ಸಂಶೋಧಿತವಾಗಿದೆ ( ಕೇವಲ ಬ್ರಹ್ಮ ಒಬ್ಬನಿಂದಲೇ ಸಂಶೋಧಿತವಾಗಿಲ್ಲ ಕೆಲವು ದೇವತೆಗಳಿಂದಲೂ ಸಂಶೋಧಿತವಾಗಿದೆ ) ಎಂದು ಮಾನಿಸಲ್ಪಟ್ಟಿದೆ. ಗಂಧರ್ವರಲ್ಲಿ ಹಾ ಹಾ, ಹು ಹು, ಕಂಬಲ, ಅಶ್ವತರ, ಋಷಿ, ಮುನಿನಾರದ, ತುಂಬುರು, ಹನುಮಾನ, ಭರತ, ದತ್ತಿಲ, ಕೋಹಲ, ಯಾಷ್ಟಿಕ್, ಕಶ್ಯಪ, ಮತಂಗ, ಅಲ್ಲದೆ ಇತರ ವಿಭೂತಿಗಳಲ್ಲಿ ರಾವಣ, ಅರ್ಜುನ ಇವರೆಲ್ಲರೂ ಸಂಗೀತ ಜ್ಞಾತಾ ಎಂದು ಮಾನಿಸಲ್ಪಟ್ಟಿದ್ದಾರೆ. ಇವರಲ್ಲಿ ನಾರದ, ಭರತ, ದಾತ್ತಿಲ, ಕೋಹಲ ಹಾಗೂ ಮತಂಗ ಇವರ ಗ್ರಂಥಗಳು ದೊರೆತಿವೆ. ಇದರಲ್ಲಿ ಒಂದು ಸಂಶಯವನ್ನು ವ್ಯಕ್ತಗೊಳಿದ್ದಾರೆ ಪಂಡಿತರು. ಪೌರಾಣಿಕ ನಾರದ, ಹನುಮಾನ ಇವರು ಬೇರೆ ಗ್ರಂಥಕಾರ ನಾರದ ಹನುಮಾನ ಮತಪ್ರಚಾರಕ ಹನುಮಾನ ಇವರು ಬೇರೆಯೆಂದು ವಿದ್ವಾನರು ಅಭಿಪ್ರಾಯ ತಳೆದಿದ್ದಾರೆ. ಆದರೆ ಇನ್ನೂ ಸಂಪೂರ್ಣ ಸಂಶೋಧನೆಯಾದಂತೆ ಎಲ್ಲಿಯೂ ಕಂಡುಬಂದಿಲ್ಲ.

" ಗಾಂಧರ್ವ ಶಾಸ್ತ್ರ " ಹೀಗೆ ಕೇಳಬರುತ್ತದೆ ಇದರ ಬಗ್ಗೆ ಸವಿಸ್ತಾರ ವ್ಯಾಖ್ಯೆಯ ಗ್ರಂಥಗಳು ದೊರೆತಿಲ್ಲ. ಆದರೆ ಸಾಮಗಾನದ ಮೇಲೆ ಬರೆದ ಶಿಕ್ಷಾಗ್ರಂಥದ ಆಧಾರದಿಂದ ಸ್ವಲ್ಪ " ಗಾಂಧರ್ವಶಾಸ್ತ್ರ " ಹೀಗೆ ತಿಳಿಯುಬರುತ್ತದೆ. ಮಹಾನ್ ಮಹಾನ್ ಆಚಾರ್ಯರು ಋಷಿವರ್ಯರು ವೇದಮಂತ್ರಗಳನ್ನು ಹೇಳುವಲ್ಲಿ ಶುದ್ಧ ಸ್ವರ ಸಹಿತ ಉಚ್ಚಾರಣೆಯನ್ನು ತಿಳಿಸುವ ಗ್ರಂಥವಾಗಿದೆ. ಮತ್ತು ಇದರಲ್ಲಿ ನಮ್ಮ ವರ್ಣಮಾಲೆಯಲ್ಲಿ ಬರತಕ್ಕ ಪ್ರತ್ಯೇಕಸ್ವರ, ವ್ಯಂಜನ ಇವುಗಳ ಉಚ್ಚಾರಣಾ ಕಂಠ ಹಾಗೂ ಮುಖ ಇವುಗಳಲ್ಲಿ ಹೇಗೆ ಹೊರಡಿಸಬೇಕು ಅನುಸ್ವಾರ

ಯುಕ್ತಾಕ್ಷರ, ವಿಸರ್ಗ ಮೊದಲಾದವುಗಳ ಪರಿಣಾಮ ಎರಡನೇ ಅಕ್ಷರ
ಗಳಮೇಲೆ ಹೇಗೆ ಆಗುತ್ತದೆ. ಮತ್ತು ಅವುಗಳ ಪರಿಣಾಮಕ್ಕನುಸರಿಸಿ
ಹೇಗೆ ಉಚ್ಚರಿಸಬೇಕು. ಮಂತ್ರಗಳನ್ನು ಹೇಳುವದರಲ್ಲಿ ಸ್ವರದ ಏರಿ
ಳಿತಗಳ ತಾರತಮ್ಯ ಮತ್ತು ಹ್ರಸ್ವ, ದೀರ್ಘ, ಪ್ಲುತ, ಉದಾತ್ತ, ಅನು
ದಾತ್ತ ಇವುಗಳ ವಿಷಯದಲ್ಲಿ ಚರ್ಚಿಸಲಾಗಿವೆ. ಶಿಕ್ಷಾ ಈ ಗ್ರಂಥದಲ್ಲಿ
ಇನ್ನು ಸಾಮವೇದಗೇಯ, ಅರ್ಥಾತ್ ಗಾಯನವಿಷಯದಬಗ್ಗೆ ಪರಿಚ
ಯಮಾಡಿಕೊಡುವ ವೇದ ಜೈಮಿನಿಸೂತ್ರದಲ್ಲಿ "ಸಾಮ" ಈ ಶಬ್ದದ
ಅರ್ಥ "ಗೀತಿಷು ಸಾಮಾಖ್ಯಾಂ" ಛಾಂದೋಗ್ಯೋಪನಿಷತ್ತಿನಲ್ಲಿ ಕೂಡ
ಶಿಲಕಾದಿ ಸಂವಾದದಲ್ಲಿ "ಕಾ ಸಾಮ್ನೋ ಗತಿಃ" ಈ ರೀತಿ ಅದರ
ಉತ್ತರ "ಸ್ವರ" ಎಂದು ಕೊಟ್ಟಿದೆ. ಇದೇ ರೀತಿಯಾಗಿ ವೃಹದಾರಣ್ಯ
ದಲ್ಲಿ "ತಸ್ಯಹ ಏತಸ್ಯ ಸಾಮ್ನಾಃ ಯಃ ಸರ್ವಂ ವೇದಭವತಿ, ಹ ಅಸ
ವಂ ತಸ್ಯ ಸ್ವರ ವದಸ್ವಂ" ಈ ರೀತಿ ವಿಧಾನವಿದೆ. [ಸಾಮ ವಿಧಾನ
ದಲ್ಲಿ "ಸ್ವರೋವಾವ ಸಾಮ್ನಃ ಸ್ವಂ ಕುಟಾದಿ ಭೇದ ಭಿನ್ನಃ ಸ್ವರ ಏವ
ಸಾಮ್ನಃ ಸ್ಯಮ್" ಅರ್ಥಾತ್ ಕುಷ್ಟ, ಪ್ರಥಮ ಇತ್ಯಾದಿ ಭೇದದಲ್ಲಿ
ಸ್ವರ ಇದು ಸಾಮವೇದದ ಸ್ವರೂಪವಿದೆ ಇದರ ಬಗ್ಗೆ ಸೂತ್ರ ವ್ಯಾಖ್ಯಾ
ನದಲ್ಲಿ ಹೀಗೆ ಹೇಳಿದೆ — "ಸಾಮವೇದೆ ಸಂತಿ ಸಹಸ್ರಂ ಗೀತ್ಯುಪಾಯಾಃ
ಏಕೈಕತಮೇತೆ ಗೀತ್ಯುಪಾಯಾ ಸಾಮ ಉಚ್ಯತೆ ಗೀತಿರ್ನಾಮ ಕ್ರಿಯಾಹ್ಯ
ಅಭ್ಯಂತರ ಜನ್ಯಾಸ್ವರ ವಿಶೆ ಷಾಣಾಮ ಭಿವ್ಯಂಜಕಾಃ ಸಾಮಶಬ್ದಾಭಿ
ಲಪ್ಯಾಸಾನಿಯತ ಪ್ರಣಾಯಾಮ್ ಋಚಿಗೀಯತೆ । ತತ್ ಸಂಪಾದ
ನಾರ್ಥೋಯಂ ಋಗಕ್ಷರ ವಿಲೇಷಃ ವಿಕರ್ಷಣಮ್ ಅಭ್ಯಾಸಃ ವಿರಾಮ।
ಸ್ತೋಮಃ ಇತ್ಯೇವ ಮಾದಯಃ ಸರ್ವೆಸಾಮವೇದೆ ಸಾಮಗಾನ್ ಮಾಯಂತಿಃ

ಸಾಮವೇದದಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟ ಭಾಷೆಯ ಕಂಠಸ್ವರದ
ಯೋಗ್ಯ ಪ್ರಮಾಣದಲ್ಲಿ ಧ್ವನಿಯ ಏರಿಳಿತ ಎಲ್ಲಿ ಎಳೆಯಬೇಕು. ಎಲ್ಲಿ
ನಿಲ್ಲಬೇಕು. ಇವೇ ಮೊದಲಾದ ಕ್ರಿಯೆಗಳಬಗ್ಗೆ ಇದೆ. ಅರ್ಥಾತ್
ಋಗ್ವೇದದ ಕೆಲವು ಮಂತ್ರಗಳನ್ನು ತಕ್ಕೊಂಡು ಮೊದಲಿನವರು ಶಾಸ್ತ್ರ
ನಿಯಮಕ್ಕನುಸರಿಸಿ ಸುಸ್ವರದಿಂದ ಆಲಾಪ ಸಹಿತವಾದ ಗಾನ ಇದುವೇ
"ಸಾಮಗಾನ" ಎಂದು ಹೇಳಿದೆ. ಅಲ್ಲದೆ ಉಕ್ತಿಗಳಿಂದ "ಸಾಮವೇದ
ಗೇಯ" ಈ ಶಬ್ದವು ಕಂಡುಬರುತ್ತದೆ. ಸಾಮವೇದದಲ್ಲಿ ಬರುವ ಸ್ವರಕ್ಕೆ

" ಯಮ " ಎಂದು ಕರೆಯಲಾಗಿದೆ. ಸ್ವರ ಇಳಿಯುವವುಂದೆ ಕ್ರಮಶಃ ಕುಷ್ಟ, ಪ್ರಥಮ, ದ್ವಿತೀಯ ತೃತೀಯ, ಚತುರ್ಥ, ಮಂದ್ರ ಹಾಗು ಅತಿಸ್ವಾರ್ಯ ಎಂದು ಹೇಳಿವೆ. ಇವುಗಳಲ್ಲಿ ಎಲ್ಲಕ್ಕಿಂತಲೂ ಎತ್ತರ ಧ್ವನಿಗೆ ಕುಷ್ಟವೆಂದು ಕರೆಯಲಾಗಿದೆ. ಅವಕ್ಕಿಂತಲೂ ಕೆಳಗಿನ ಧ್ವನಿಗೆ ಪ್ರಥಮ ಇದಕ್ಕಿಂತಲೂ ಕೆಳಗಿನ ಧ್ವನಿಗೆ ದ್ವಿತೀಯ ಹೀಗೆಯೇ ಅತಿಸ್ವಾರ್ಯದ ವರೆಗೆ ಸಾಗಿದೆ. ಯಮ ಈ ಹೆಸರು ಮಾತ್ರ ದೊರೆಯುತ್ತದೆ ಆದರೆ ಕುಷ್ಟ, ಪ್ರಥಮ ಈ ಮೊದಲಾದ ಸ್ವರಗಳೊಡನೆ ಯಾವ ಸಂಬಂಧವಿದೆ ಎಂದು ತಿಳಿಯಬರುವದಿಲ್ಲ ಆದರೆ ಸದ್ಯದ ಪರಿಸ್ಥಿತಿಯಲ್ಲಿ " ಸಾಮ ಗಾಯನ " ಈ ಶಬ್ದವು ಕೇಳಬರುತ್ತದೆ. ಮುಂದೆ ಋಗ್ವೇದದ ಪಾಠದಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಅಘಾತ ಏರಿಳಿತಗಳು ಇವೇ ಮೊದಲಾದ ಮೂರು ಕ್ರಿಯೆಗಳ ಬಗ್ಗೆ ಹೇಳಿದೆ.

ಇನ್ನು ಸಾಮಗಾನದಲ್ಲಿ ಏಳು ಪ್ರಕಾರವೆಂದು ಹೇಳಲಾಗಿದೆ. ಕ್ರಮವಾಗಿ ಗಾಯತ ಗಾಯನ, ಆಗ್ನೇಯ ಗಾಯನ, ಏಂದ್ರ ಗಾಯನ, ಪಾವ ಗಾನ, ಮರ್ಕ ಪರ್ವ, ದ್ವಂದ್ವ ಪರ್ವ, ಹಾಗು ವ್ರತ ಪರ್ವ, ಇವುಗಳಲ್ಲಿ ಮತ್ತೆ ಉಪಭೇದಗಳಿವೆಯೆಂದು ಶುಕ್ರಿಯ ಗಾನ, ಮಹಾನಾಮ್ನೀಯ ಹೀಗೆ ಹೇಳಿದೆ. ಏಳು ಪ್ರಕಾರಗಳಲ್ಲಿ ಮೊದಲಿನ ನಾಲ್ಕು ಪ್ರಕಾರಗಳ ಸರ್ವಸಾಧಾರಣ ಗಾಯನ ಪದ್ಧತಿ ಸಮಾಜದ ಬಳಕೆಯಲ್ಲಿದೆ ಇವುಗಳಿಗೆ ಗ್ರಾಮಗೇಯವೆಂದು ಕರೆದಿದ್ದಾರೆ. ಅಲ್ಲದೆ ಉಳಿದ ಪ್ರಕಾರಗಳು " ಅರಣ್ಯಕ " ಅಂದರೆ ಏಕಾಂತದ ಬಗ್ಗೆ ಯೋಗ್ಯವಾದವುಗಳೆಂದು ತಿಳಿದುಬರುತ್ತದೆ. ಇವೆಲ್ಲ ವಿಚಾರಗಳಿಂದ ಸಿದ್ಧವಾಗುತ್ತಿದೆಯಲ್ಲಾ " ಸಾಮಗಾಯನ " ಇದು ನಿಯಮಬದ್ಧವಿದೆಯೆಂದು ಇವೇ " ಸಾಮಗಾಯನ " ಈ ಶಬ್ದದಿಂದ ಸಂಗೀತವೆಂದು ಕರೆಯಲಾಗಿದೆಯೆಂದು ತಿಳಿದುಬರುತ್ತದೆ. " ಸಾಮವೇದಾದಿದಮ್ ' ಗೀತಮ್ ' ಸಂಜಗ್ರಾಹ ಪಿತಾಮಹ "

ಸಾಮವೇದದಿಂದಲೇ ಬ್ರಹ್ಮನು ಸಂಗೀತ ನಿರ್ಮಾಣ ಮಾಡಿರುವನೆಂದು ಮತ್ತು ಸಂಗೀತ ಶಾಸ್ತ್ರಕಾರರು ಈ ಪ್ರಮಾಣವನ್ನೇ ಮಾನಿಸುತ್ತ ಬಂದಿದ್ದಾರೆ. ಇದುವೇ " ಮಾರ್ಗ ಸಂಗೀತ " ಸಾಮಗಾಯನ

ಇದನ್ನು ಕೇವಲ ದೇವನಾಮ ಪಠಣ ಮಾಡುವಾಗ್ಗೆ ಈ ಗಾಯನವನ್ನು ಬಳಸುತ್ತಿದ್ದರು. ಭಕ್ತಿ ಪುರಸ್ಸರ ರೀತಿಯಲ್ಲಿ ಉಪಯೋಗಿಸುತ್ತಿದ್ದರು. "ಸಾಮ ಗಾಯನ" ಈ ಶಬ್ದವು ಬರಬರುತ್ತ ಬಳಕೆಯಲ್ಲಿ "ಗಾಯನ" ಇಷ್ಟೇಪ್ರಚಾರದಲ್ಲಿ ಬಂದಿತು.

ಪ್ರಾಚೀನಕಾಲದಲ್ಲಿ ಪ್ರತ್ಯೇಕ ಮನುಷ್ಯನು ಕೂಡಾ ಆ ಜನ್ಮ ಮರಣಾಂತ್ಯದ ವರೆಗೆ ಯಾವತ್ತೂ ಸಂಸ್ಕಾರಗಳಲ್ಲಿ ಸಂಗೀತದ ಅವಶ್ಯಕತೆಯನ್ನು ಹೆಚ್ಚು ಇಟ್ಟುಕೊಂಡಿದ್ದರು. ಒಂದು ಕುಟುಂಬ, ಸಮಾಜ, ರಾಷ್ಟ್ರೀಯ ಕಾರ್ಯಗಳಲ್ಲಿ ಯಾವದಾದರು ಒಂದನ್ನು ಬಿಡುತ್ತಿದ್ದರೇ ವಿನಹ ಸಂಗೀತವನ್ನು ಮಾತ್ರ ಬಿಡುತ್ತಿದ್ದಿಲ್ಲ ಸಂಗೀತವನ್ನು ಕಾವ್ಯಛಂದ, ನಾಟಕ, ಮೊದಲಾದವುಗಳಲ್ಲಿ ಮತ್ತು ಧೃವಗೀತೆ, ಆರ್ಯಗೀತೆ, ಪ್ರಬಂಧ, ವಸ್ತು, ರೂಪಕ, ಅಷ್ಟಪದಿ, ಪುಷ್ಪಾಂಜಲಿ, ದೇವತಾ ಸ್ತೋತ್ರ, ಮಂಗಲಾಷ್ಟಕ, ಆಶೀರ್ವಾದಾತ್ಮಕ, ಗೀತ, ಮೊದಲಾದ ರೀತಿಯಲ್ಲಿ ಸಂಗೀತವು ಸಾಕಷ್ಟು ಪರಿಪುಷ್ಟ ರೀತಿಯಲ್ಲಿ ಬಳಕೆಯಲ್ಲಿದ್ದಿತೆಂದು ಕಂಡುಬರದಿರದು. ಪದ್ಯಗಳ ಭಾವವನ್ನು ವ್ಯಕ್ತಗೊಳಿಸುವಸಲುವಾಗಿ ಉಪಯೋಗಿಸುತ್ತಿದ್ದರು. ಭಾರತೀಯ ಸಂಸ್ಕೃತಿಯನ್ನು ಸಾಗಿಸಿಕೊಂಡು ಬರುವದಾಗಿದೆ ಸಂಗೀತವು.

ಇಂಥ ಉತ್ತಮ ಮಾರ್ಗದಲ್ಲಿ ಮತ್ತು ಸಮಾಜದಲ್ಲಿ ಮೊದಲಿನ ಸ್ಥಾನವನ್ನು ಸಂಗೀತವು ಪಡೆದದ್ದರಿಂದಲೇ ಆಗಿನ ಕಾಲದಲ್ಲಿ ಸ್ವತಂತ್ರ ಸಂಗೀತ ಶಾಸ್ತ್ರ ನಿರ್ಮಾಣವಾಗಿದೆ. ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತಕ್ಕೆ ಶಾರ್ಙದೇವ ಮೊದಲಾದವರು "ಮಾರ್ಗ ಸಂಗೀತ" ವೆಂದು ಕರೆದಿದ್ದಾರೆ.

ಟೀಕಾಕಾರರಲ್ಲಿ ನಾಥನು ಈ ಉಕ್ತಿಯನ್ನು ಅಂದಿದ್ದಾನೆ

"ಸಾಮ ನಿತಧ್ಯೈಕೃಷ್ಟ ಪ್ರಥಮ ದ್ವಿತೀಯ ತೃತೀಯ ಚತುರ್ಥ ಮಂದ್ರಾದಿ ಸ್ವಾರ್ಥಾಖ್ಯಾಃ ಸಪ್ತಸ್ವರಾಃ । ಇಹತು ತವವ ಯಥಾ ಯೋಗ ಷಡ್ಜಾ ದಿವ್ಯ ಪದೇಶ ಭಾಜ ಇತಿ ॥"

ಸಾಮ ಗಾಯನದ ಕುಷ್ಟ, ಪ್ರಥಮ, ದ್ವಿತೀಯ, ಇತ್ಯಾದಿ ನಾಮ ಸ್ವರಗಳು ಇಳಿಕೆಯ ಕ್ರಮದಲ್ಲಿ ಹೇಳಿದೆ. ಇನ್ನು ಮೇಲೇರುವ ಕ್ರಮ

ದಲ್ಲಿ ಸಂಗೀತ ಸ್ವರಗಳ ಹೆಸರು ಷಡ್ಜ, ಋಷಭ, ಗಾಂಧಾರ, ಮುಂತಾದವುಗಳು ಈ ರೀತಿ ಇವೆ. ಈ ಹೆಸರು ಮಾತ್ರ ಸರ್ವ ಪ್ರಸಿದ್ಧವಿವೆ. ಆದರೆ ಪ್ರಾಚೀನ ಸಮಯದಲ್ಲಿ ಪರಸ್ಪರ ಧ್ವನ್ಯಂತರ ಏನು ಇದ್ದಿತು. ಇದೂ ಒಂದು ದೊಡ್ಡ ಸಮಸ್ಯೆಯಾಗಿದೆ. ಕೆಲವು ಗ್ರಂಥಕಾರರು ಸಾಮ ಗಾಯನಕ್ಕೆ "ಯಮ" ಇದು ಸಂಗೀತ ಸ್ವರಕ್ಕೆ ತುಲನಾ ಇದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ನಾರದೀ ಶಿಕ್ಷಾದಲ್ಲಿ ॥ "ಯಃಸಾಮ ಗಾನಾಂ ಪ್ರಥಮ ॥ ಸರ್ವೇಣೋ ಮರ್ಧ್ಯಮಃ ಸ್ವರಃ" ॥ ಸಾಮ ಗಾಯನದ ಹೆಸರು "ಪ್ರಥಮ" ಅದು ಬೀನದಲ್ಲಿ ಮಧ್ಯಮ ಸ್ವರದಿಂದ ಪ್ರಸಿದ್ಧವಿದೆಯೆಂದು ಈ ವಿಧಾನ ಕೊಡಲ್ಪಟ್ಟಿದೆ.

ಪ್ರಾಚೀನ ಸಂಗೀತದ ಸ್ವರ ಗ್ರಾಮ ಶುದ್ಧ ಸ್ವರ ಸಪ್ತಕ ಇವುಗಳ ನಿಶ್ಚಯ ಇದುವರೆಗೂ ಇಲ್ಲ. ಭರತ, ಶಾರ್ಙದೇವರು ಸ್ವರಾಂತರದ ಹೆಸರು. ಶೃತಿ ನಾಮ ಸೂಕ್ಷ್ಮ ಧನ್ಯಂತರ ದ್ವಾರ ಕೊಟ್ಟಿದ್ದಾರೆ. ಪ್ರತಿಯೊಂದು ಶೃತಿಯ ಹೆಸರು ಅವರ ಕಾಲದಲ್ಲಿ ಪ್ರಚಾರದಲ್ಲಿದ್ದವು. ಗ್ರಾಮದ ಬಗ್ಗೆ ಎರಡು ಗ್ರಾಮ ಷಡ್ಜ, ಹಾಗು ಮಧ್ಯಮಕ್ಕೆ ಪಂಚಮ ಸ್ವರದ ಧ್ವನ್ಯಂತರವಾಗುತ್ತದೆ. ಇವು ಎರಡು ಗ್ರಾಮ ಈಗ ಪ್ರಚಾರದಲ್ಲಿಲ್ಲವೆಂದು ತಿಳಿಯದಿರಲಾರದು. ಶೃತಿಗಳಿಗೂ ಕೂಡ ನಿಶ್ಚಿತ ಪ್ರಮಾಣದ ಧ್ವನ್ಯಂತರ ಕೊಟ್ಟಿಲ್ಲ. ಸ್ವರಾಂತದ ವಿಷಯದಲ್ಲಿ ಭರತನ ಶ್ಲೋಕವನ್ನು ಎಲ್ಲ ಗ್ರಂಥಕಾರರೂ ಮಾನಿಸಿದ್ದಾರೆ. "ಚತುಶ್ಚತುಶ್ಚ ತುಶ್ಚೈವ ಷಡ್ಜ ಮಧ್ಯಮ ಪಂಚಮಾಃ । ದ್ವೇದ್ವೇ ನಿಷಧ ಗಾಂಧಾರೌತ್ರಿಸ್ತ್ರಿ ಋಷಭ ಧೈವತಾ" ॥

ಷಡ್ಜ, ಮಧ್ಯಮ, ಪಂಚಮ, ಇವು ನಾಲ್ಕು ಶೃತಿಗಳ ಧೈವತ, ಋಷಭ ಇವು ಮೂರು ಶೃತಿಗಳ ಗಂಧಾರ, ನಿಷಾಧ, ಇವು ಎರಡೆರಡು ಶೃತಿಗಳ ಸ್ವರಗಳಿರುತ್ತವೆ. ಈ ರೀತಿಯಾಗಿ ತಿಳಿದುಕೊಳ್ಳತಕ್ಕದ್ದು ಯಾವುದನ್ನು ಷಡ್ಜವೆಂದು ಇಟ್ಟುಕೊಳ್ಳುತ್ತೇವೆಯೋ ಆ ಷಡ್ಜದಿಂದ ಮುಂದೆ ಎರಡು ಸೂಕ್ಷ್ಮ ಧ್ವನ್ಯಂತರವಿಟ್ಟುಕೊಂಡು, ಮೂರನೇದರ

ಮೇಲೆ ಋಷಭ, ಋಷಭದಿಂದ ಮುಂದೆ ಒಂದು ಸೂಕ್ಷ್ಮ ಧ್ವನ್ಯಂತರ ಬಿಟ್ಟುಕೊಂಡಲ್ಲಿ ನೇದರ ಮೇಲೆ ಗಾಂಧಾರ ಮುಂದೆ ನಾಲ್ಕರಮೇಲೆ ಪಂಚಮ. ಪಂಚಮದ ಮುಂದೆ ಮೂರರ ಮೇಲೆ ಧೈವತ ಧೈವತದ ಮುಂದೆ ಎರಡರ ಮೇಲೆ ನಿಷಾಧ ನಿಷಾಧದ ಮುಂದೆ ನಾಲ್ಕರಮೇಲೆ ತಾರ ಷಡ್ಜ. ಈ ರೀತಿ ಷಡ್ಜ ಗ್ರಾಮದ ಸ್ವರ ಕ್ರಮ ಇರುತ್ತಿದೆ. ಇದರಲ್ಲಿ ನಿಷಾಧದಿಂದ ಷಡ್ಜ, ಗಾಂಧಾರದಿಂದ ಮಧ್ಯಮ, ಮಧ್ಯಮದಿಂದ ಪಂಚಮ ಇವು ನಾಲ್ಕು ಶೃತಿಗಳ ಕ್ರಮ ಷಡ್ಜದಿಂದ ಋಷಭ ಪಂಚಮದಿಂದ ಧೈವತ ಇವು ಮೂರು ಶೃತಿಗಳ ಕ್ರಮವಿರುತ್ತವೆ. ಋಷಭದಿಂದ ಗಾಂಧಾರ, ಧೈವತದಿಂದ ನಿಷಾಧ, ಇವು ಎರಡು ಶೃತಿಗಳು ಇರುತ್ತವೆ. ಈ ರೀತಿ ಸ್ವರಗಳ ಅಂತರವನ್ನು ನಿಶ್ಚಿತಗೊಳಿಸಲಾಗಿದೆ. ಮತ್ತು ನಿಷಾಧದಿಂದ ಷಡ್ಜ ಎಷ್ಟು ಎತ್ತರವಿದೆಯೋ ಅಥವಾ ಅಂತರವಿದೆಯೋ ಅಷ್ಟೇ ಗಾಂಧಾರದಿಂದ ಮಧ್ಯಮ ಮತ್ತು ಅಷ್ಟೇ ಮಧ್ಯವದಿಂದ ಪಂಚಮ ಸ್ವರಗಳ ಅಂತರವಿರುತ್ತವೆ. ಇನ್ನು ಮಧ್ಯಮ ಗ್ರಾಮದಲ್ಲಿ ಮಧ್ಯಮ ಮತ್ತು ಪಂಚಮ ಇವುಗಳ ಸ್ವರಾಂತರ ತ್ರಿಶೃತಿ ಮತ್ತು ಪಂಚಮ ಹಾಗು ಧೈವತ, ನಾಲ್ಕು ಶೃತಿಗಳ ಅಂತರವಿರುತ್ತವೆ. ಈ ರೀತಿಯಾದಲ್ಲಿ ಷಡ್ಜ ಗ್ರಾಮದಿಂದ ಬೇರೆಯಾಗಿ ಮಧ್ಯಮ ಗ್ರಾಮವಾಗುತ್ತದೆ. ಆದರೆ ಈಗಿನ ಪ್ರಚಲಿತ ಸ್ಥಿತಿಯಲ್ಲಿರುವ ಈ ಸಂಗೀತದಲ್ಲಿ ಈ ಗ್ರಾಮಗಳಿರುವದಿಲ್ಲ.

ಪೂರ್ವಕಾಲದ ಸಂಗೀತದಲ್ಲಿ ಪ್ರಣಾಲೀ ಗ್ರಾಮ, ಮತ್ತು ಮೂರ್ಛನಾ ಜಾತಿ ಇದ್ದಿತು. ಅದರಲ್ಲಿ ಮೂರು ಗ್ರಾಮ ಷಡ್ಜ ಗ್ರಾಮ, ಮಧ್ಯಮ ಗ್ರಾಮ, ಹಾಗು ಗಾಂಧಾರ ಗ್ರಾಮ ಈ ಮೂರು ಗ್ರಾಮಗಳ ಉಲ್ಲೇಖವನ್ನು ಗ್ರಂಥಕಾರರು ಮಾಡಿರುತ್ತಾರೆ. ಈ ಮೂರು ಗ್ರಾಮಗಳಲ್ಲಿ ಗಾಂಧಾರ ಗ್ರಾಮದಬಗ್ಗೆ ಪೂರ್ಣ ಪರಿಚಯದ ಬಗ್ಗೆ ಸಂಶಯವಿದೆ. ಷಡ್ಜ ಗ್ರಾಮ, ಮಧ್ಯಮ ಗ್ರಾಮವು ಪ್ರಾಚೀನ ಕಾಲದಲ್ಲಿ ಪ್ರಚಾರದಲ್ಲಿದ್ದುವು. ಇವು ಎರಡು ಗ್ರಾಮಗಳ ಏಳು ಸ್ವರಗಳಿಂದ ಪ್ರತ್ಯೇಕ ಸ್ವರದಿಂದ ಹೊರಟು ಪೂರ್ಣ ಗಾಯನ ಮಾಡುವ ಒಂದು ಸಪ್ತಕದ ಆರೋಹ ಹೊರಡಿಸುವದರ ಮೇಲೆ ಪ್ರತ್ಯೇಕ ಏಳು ಏಳು ಮೂರ್ಛನಾಗಳು ಆಗುತ್ತಿವೆ. ಮೂರ್ಛನೆಯಲ್ಲಿಯೂ ಕೂಡ ಸ್ವರಸಪ್ತಕ

ವಿದೆ. ಆದರೆ ನಮ್ಮ ವರ್ತಮಾನ ಕಾಲದ ಸಂಗೀತ ಪ್ರಣಾಲಿಯಲ್ಲಿ ಮಾತ್ರ ಈ ಗ್ರಾಮವಿರುವದಿಲ್ಲ. ಆದರೆ ಶುದ್ಧ ಸಪ್ತಕದಿಂದ ಷಡ್ಜದಿಂದ ಋಷಭ, ಮಧ್ಯಮದಿಂದ ಪಂಚಮ, ಪಂಚಮದಿಂದ ಧೈವತ ಇವು ನಾಲ್ಕು ಶ್ರುತಿಗಳ ಋಷಭದಿಂದ ಗಾಂಧಾರ ಮತ್ತು ಧೈವತದಿಂದ ನಿಷಾಧ ಇವು ಮೂರು ಶ್ರುತಿಗಳು ಇರುತ್ತವೆ. ಭಿನ್ನ ಭಿನ್ನ ಸ್ವರಗಳಿಂದ ಹೊರಡುವ ಸ್ವರಗಳ ಅಂತರಕ್ರಮವು ಬೇರೆಯಾಗಿದ್ದು ಇವುಗಳಿಂದ ವಿವಿಧ ಮೇಲಗಳು ಹೊರಟಿವೆಯೆಂದು ತಿಳಿಯುತ್ತದೆ.

ಮಾರ್ಗ ಸಂಗೀತದಲ್ಲಿ " ಜಾತಿ " ನಾಮಕ ಸ್ವರಗಳ ರಚನೆಯು ಪ್ರಚಾರದಲ್ಲಿದ್ದಿತೆಂದು ತಿಳಿಯುತ್ತದೆ. ಈ ಜಾತಿಗಳು ತಾಳ ಬದ್ಧ ಸ್ವರಗಳಿಂದ ರಚನವಾಗಿದ್ದವೆಂದು ತಿಳಿದುಬಂತಿದೆ. ಅವುಗಳಿಗೆ ಈಗಿನ ಪ್ರಚಲಿತ ಸ್ಥಿತಿಯಲ್ಲಿ ಚಾಲ, ಥಾಟ, ಎಂದು ಕರೆಯಲಾಗಿದೆ ಎಂದು ತಿಳಿದು ಬರುತ್ತದೆ. ಇವುಗಳನ್ನು ದೇವಾಲಯದಲ್ಲಿ, ಯಾತ್ರೋತ್ಸವಗಳಲ್ಲಿ, ಸಾಮಾಜಿಕ ಉತ್ಸವಗಳಲ್ಲಿ ಸರ್ವ ಪ್ರಸಿದ್ಧವಾದ ಲೋಕ ಪ್ರಸಿದ್ಧ ಗೀತೆಗಳನ್ನು ಹೇಳುವ ಪರಿಪಾಠವನ್ನು ಇಟ್ಟುಕೊಂಡದ್ದು ಒಳ್ಳೇ ದಟ್ಟ ರೀತಿಯಲ್ಲಿ ತಿಳಿದುಬರುತ್ತದೆ. ಈ ಪದ್ಧತಿಯು ಈಗಲೂ ಕೆಲವುಕಡೆಗಳಲ್ಲಿ ನಡೆಯುವದು ಕಂಡುಬರುತ್ತದೆ. ಆದರೆ ಇವುಗಳಿಗೆ " ಜಾತಿ "ನಾಮದಿಂದ ಶಾಸ್ತ್ರದಲ್ಲಿ ಹೇಳಿದ್ದು ತಿಳಿದುಬರುತ್ತದೆ. ಆ ಸಮಯದಲ್ಲಿ ಭಿನ್ನ ಭಿನ್ನ ಶೈಲಿಯಲ್ಲಿಯೂ ಗಾಯನ ಪದ್ಧತಿಯು ಒಳ್ಳೇ ಪ್ರಚಲಿತ ಸ್ಥಿತಿಯಲ್ಲಿದ್ದಿತೆಂದು ತಿಳಿಯುತ್ತದೆ. ಇವುಗಳಿಗೆ " ಗೀತೆ " ಎಂದು ಹೇಳಲಾಗಿದೆ. ಭರತನು ನಾಲ್ಕು ಪ್ರಕಾರ ಗೀತೆಗಳನ್ನು ಮಾಗಧೀ, ಅರ್ಧಮಾಗಧೀ ಸಂಭಾವಿತ ಹಾಗು ಪ್ರಥುಲ ಹೀಗೆ ಹೇಳಿದ್ದಾನೆ. ರತ್ನಾಕರದಲ್ಲಿ ಐದು ಪ್ರಕಾರ ಗೀತೆಗಳನ್ನು ಶುದ್ಧ, ಭಿನ್ನ, ಗೌಡಿ, ವೇಸರಾ, ಸಾಧಾರಣಿ, ಹೀಗೆ ಹೇಳಿದೆ. ಈಗಿನ ನಮ್ಮ ಸಂಗೀತದ ಜೀವಭೂತ ರಾಗದ ಜಾತಿಗಳಿಂದ ಸ್ವರ ಮತ್ತು ಗೀತೆಗಳನ್ನು ಅನ್ವಯ ಪದ್ಧತಿಯನ್ನು ನಿರ್ಮಾಣ ಮಾಡಿಕೊಂಡಿದ್ದಾರೆ ಗ್ರಾಮ, ಮೂರ್ಛನಾ, ಜಾತಿ, ಗೀತೆ, ಧ್ರುವ, ಕಪಾಲ, ಕಂಬಲ, ವಸ್ತು, ರೂಪಕ, ಪ್ರಬಂಧ, ಕಾವ್ಯಛಂದ, ಗೀತ ಛಂದ, ಇವೆಲ್ಲವೂ ಮಾರ್ಗ ಸಂಗೀತದಲ್ಲಿ ಬರುತ್ತವೆ ಮತ್ತು ಮಾರ್ಗ ಸಂಗೀತದಲ್ಲಿಯ ರಾಗಗಳ ಪ್ರಕಾರ ಇವುಗಳಬಗೆ ಮಾತಂಗ, ಶಾರ್ಙ

ದನೆ ಮೊದಲಾದವರು ತಮ್ಮ ಗ್ರಂಥಗಳಲ್ಲಿ ಬರೆದಿದ್ದಾರೆ. ಈ ರಾಗ ಗಳಲ್ಲಿ ಆರು ಪ್ರಕಾರ ಗ್ರಾಮರಾಗ, ಉಪರಾಗ, ರಾಗ, ಭಾಷಾ, ವಿಭಾಷಾ, ಹಾಗೂ ಅಂತರ ಭಾಷಾ ಈ ಹೆಸರಿನಿಂದ ಹೇಳಿದ್ದಾರೆ. ಭರತನ ಕಾಲದಲ್ಲಿ ಈ ಪದ್ಧತಿಯು ಅಸ್ತಿತ್ವದಲ್ಲಿದ್ದಿತೆಂದು ತಿಳಿದುಬರುತ್ತದೆ. ಆದರೆ ಅವುಗಳ ಪ್ರಯೋಗ ಎಷ್ಟು ಬೇಕು ಅಷ್ಟೇ ಉಪಯೋಗಿಸಿಕೊಂಡು ಬಂದದ್ದರಿಂದ ವಿಶೇಷ ಪ್ರಚಾರದಲ್ಲಿದ್ದದ್ದು ತಿಳಿದುಬಂದಿಲ್ಲ ಇದರ ಬಗ್ಗೆ ಸ್ವಲ್ಪ ಸಂಶಯವಿದೆ ?

ಇನ್ನು ವಾದ್ಯಗಳಬಗ್ಗೆ ವಿವೇಚಿಸೋಣ. ಸಂಗೀತ ರತ್ನಾಕರದಲ್ಲಿ

" ವಾದ್ಯತಂತ್ರೀ ತತಂವಾದ್ಯಂ ಸುಷಿರಂ ಸುಕ್ಷರಂ
ಮತಮ್| ಚರ್ಮಾನವನದ್ಧ ವದನವಮವನದ್ಧಂ ತು
ವಾದ್ಯತೆ || ಘನೋಮೂರ್ತಿಃ ಸಾ ಽ ಭಿಘಾತ್ವದ್ಯತೆ
ಯಂತ್ರ ತದ್ಘನಮ್ || "

ಈ ರೀತಿ ನಾಲ್ಕು ಪ್ರಕಾರಗಳಿರುತ್ತವೆಂದು ಗ್ರಂಥದಲ್ಲಿ ಹೇಳಲಾಗಿದೆ. ತಂತು, ಅವನದ್ಧ, ಸುಷಿರ, ಘನ, ಈ ರೀತಿ ಇರುತ್ತವೆ. " ತಂತು ವಾದ್ಯ " ವೆಂದರೆ ತನಾ, ತಾರ, ತಂತಿಯಿಂದ ಕೂಡಿದ ವಾದ್ಯ, ತಂತು ವಾದ್ಯ " ಅವನದ್ಧವಾದ್ಯ " ಅಂದರೆ ಕೇವಲ ಕಟ್ಟಿಗೆಯಿಂದ ಅಥವಾ ಮಣ್ಣಿನ ಪಾತ್ರೆಗಳಿಂದ ಕೂಡಿದ ವಾದ್ಯ ಅವನದ್ಧವಾದ್ಯ ಇನ್ನು " ಸುಷಿರವಾದ್ಯ " ಅಂದರೆ ಬಾಯಿಂದ ಊದಿಬಾರಿಸುವ ವಾದ್ಯಗಳು ಸುಷಿರ ವಾದನಗಳು " ಘನವಾದ್ಯ " ಅಂದರೆ ಧಾತುವಿನಿಂದ ಮತ್ತು ಕಟ್ಟಿಗೆಯಿಂದ ಅಲ್ಲದೆ ಮಣ್ಣಿನಿಂದ ಕೂಡಿದ ವಾದನಗಳು. ಇವುಗಳನ್ನು ಬಾರಿಸಿದರೆ ಆಳವಾದ ನಾದವು ಉತ್ಪನ್ನವಾಗುವ ವಾದನಗಳು ಘನ ವಾದ್ಯ.

ಶಂಖ, ಡಮರು, ಹುಡಕ್, ಹಾಗು ಥಾಲ ಇವು ಪ್ರಾಚೀನ ವಾದ್ಯಗಳಾಗಿವೆ. ಧನುಷ್ಯದ ಸಿಂಜನಿಯು ಟಣತ್ಕಾರದಿಂದ ತನೆ ಈ ಸೂತ್ರದಿಂದ ತಂತುವಾದ್ಯ ಉತ್ಪನ್ನವಾಗಿದೆ ಎಂಬುದು ತಿಳಿಯುತ್ತದೆ. ಏಕತಂತ್ರಿ, ತ್ರಿತಂತ್ರಿ, ಸಪ್ತಂತ್ರಿ, ಕಿನ್ನರಿ ಈ ರೀತಿ ವಿವಿಧ ಪ್ರಕಾರದ ತಂತುವಾದನಗಳು ಉತ್ಪನ್ನವಾಗಿವೆಯೆಂದು ತಿಳಿಯುತ್ತದೆ.

ಡಮರು ಇದರ ಭಾಗಗಳು ಡಪ್, ಮೃದಂಗ, ಅಥವಾ ಮದ್ದಳೆ ಉತ್ಪನ್ನವಾಗಿವೆಯೆಂಬುದು ಶಾಸ್ತ್ರದಿಂದ ತಿಳಿಯುತ್ತದೆ. ಸುಷಿರವಾದ್ಯಗಳು ಶಂಖ ಇದರ ಕಲ್ಪನೆಯಿಂದ ಉತ್ಪನ್ನವಾಗಿವೆ. ಶೃಂಗ, ಕಾಡುಕೋಣಗಳ ಕೋಡಿನಿಂದ ತಯಾರಾದ ವಾದ್ಯವು ಆದರೆ ವಾದನಗಳು ಕೇವಲ ಒಂದೇಸ್ವರವನ್ನು ವ್ಯಕ್ತಗೊಳಿಸುತ್ತವೆ. ಮತ್ತು ಬೇಕಾದಷ್ಟು ಉತ್ತರ ಧ್ವನಿಯನ್ನು ವ್ಯಕ್ತಗೊಳಿಸುತ್ತವೆ. ಈ ವಾದನಗಳು ರಣಕ್ಷೇತ್ರದಲ್ಲಿ ವೀರಶ್ರೀಯ ಒಲುಮೆಗೋಸ್ಕರ ಉಪಯೋಗಿಸುವಂಥವುಗಳಾಗಿವೆ. ಶಿವನಕೈಯಲ್ಲಿಡಮರು ಮತ್ತು ಸಿಂಗವಾದನಗಳಿವೆ ಆದರೆ ಬಾಯಿಂದ ಊದಿಬಾರಿಸುವ ವಾದನಗಳು “ ಸಿಂಗ ” ಇದರ ವಂಶದ ವಾದನಗಳಾದ ಬೀನ, ಕೊಳಲು, ಪುಂಗಿ, ಕಾಳೆ, ತುತೂರಿ ಇನ್ನೂ ಅನೇಕ ಹೊರಟಿವೆ. ಘನವಾದ್ಯದಲ್ಲಿ ತಾಳ, ಘಂಟಾ, ಝೂಂಝೂ, ಕರತಾಲ, ಗೆಜ್ಜ ಇವುಹೊರಟಿವೆ.

ಇವುಗಳಲ್ಲಿ ತಂತು, ಹಾಗು ಸುಷಿರ, ಈ ವಾದ್ಯಗಳು ಸ್ವರವಾದ್ಯಗಳಿರುತ್ತವೆ. ಅವನದ್ಧ, ಮತ್ತು ಘನ ಈ ವಾದ್ಯಗಳು ತಾಳವಾದ್ಯಗಳಾಗಿರುತ್ತವೆ.

---

## ಅರ್ಧಭಾರ್ಯಾ ಮನುಷ್ಯಸ್ಯ

( ಮಹಾಶಿವಯೋಗಿಗಳು ಬಂಥನಾಳ ಇವರ ಉಪನ್ಯಾಸದ ಸಾರ )

( ಶ್ರೀ ಎಸ್. ಎಮ್. ಹಿಳ್ಳಿ ಇವರು ಕಳಿಸಿದ್ದು )

ಕಾಲಮಾನ ಪರಿಸ್ಥಿತಿಗನುಗುಣವಾಗಿ ಮಾನವನು ಪರಿವರ್ತನೆ ಹೊಂದುತ್ತ ಪ್ರಗತಿಪರಮಾರ್ಗದತ್ತ ಧಾವಿಸುವದು. ಧಾವಿಸಿ ಗುರಿ

ನ್ನು ತಲ್ಪುವದು ನೈಸರ್ಗಿಕವಾದುದು. ಮಾನವ ವರ್ಗಕ್ಕೆ ಈ ನಿಸರ್ಗವು ಸೈಜವಾಗಿ ನಿಕಟವರ್ತಿಯಾಗಬೇಕಿದ್ಧರೂ ಅದರ ನಿಲುವೆ ಮರೆಯದ್ದಕ್ಕೋ ನಡೆ-ನುಡಿಯಲ್ಲಿ ಬೆಡಗು ಇಲ್ಲದ್ದಕ್ಕೋ ಮಾನವನು ಸಹಜವಾಗಿ ಸಾಧಿಸಬೇಕಾದದ್ದನ್ನು ಸುಲಭ ಸಾಧ್ಯವಲ್ಲದ್ದನ್ನಾಗಿ ಮಾಡಿಕೊಂಡು ಸಖೇದಾಶ್ಚರ್ಯಪರಮುಗ್ಧನಾಗುವನು. ಹಾಗಾದರೆ—

ಮಾನವನೆಲ್ಲ ಅಡಿತಪ್ಪುವನೆಂಬುದು ವೈಚಾರಿಕ ಪ್ರಶ್ನೆ ಸೂಕ್ಷ್ಮಾವಲೋಕನೆಗೆ ಒಂದು ಸಂಗತಿ ಸಾಕ್ಷೀಭೂತವಾಗಿನಿಲ್ಲುವದು ಕಣ್ಮನವುಂದೆ ಅದು "ಅರ್ಧಭಾರ್ಯಾ ಮನುಷ್ಯಸ್ಯ"

ಪ್ರಾಪಂಚಿಕನಿರಲಿ ಪಾರಮಾರ್ಥಿಕನಿರಲಿ ಇಬ್ಬರಿಗೂ ಇದೊಂದೇ ಸಂಗತಿ ಎದುರು. ಪ್ರಾಪಂಚಿಕರಲ್ಲಿ ಗಂಡು ಮುಂದೋಡಲು ಹೆಣ್ಣು, ಹೆಣ್ಣು ಮುಂದೋಡಲು ಗಂಡು ಪರಸ್ಪರವಾಗಿ ಅನುಕೂಲಿಯಾಗಿದ್ದರೆ ಸತಿ ಪತಿ ಅನ್ವಯಗಳಿಂದ ಪೂರಿತ ಸಂಸಾರ ರಥದಿಂದ ಸಗ್ಗ ಸುಖ ಸುಲಭಸಾಧ್ಯ. "ಎತ್ತು ಎರೆಗೆ ಕೋಣ ಕೆರೆಗೆ" ಎಂಬಂತಾದರೆ ರಥವು ಸಾಗಬೇಗಾದುದೆತ್ತ ?

ಇದರಂತೆ ಪಾರಮಾರ್ಥಿಗಳಿಗೆ ಪರಮಾರ್ಥ ಪಟುತರ ರಥ ರಂಜಿಸುತ ಸುಲಭ ಸಾಧ್ಯವಾಗಿ ನಿತ್ಯ ಹಾಗು ನಿಖಿಲಾನಂದ ಗುರಿಯೆಡೆಗೆ ಸಾಗಬೇಕಾದರೆ ಆತ್ಮ ಹಾಗು ದೇವಗಳೆರಡೂ ಅಶ್ವಗಳು ಪರಸ್ಪರ ಸಮ ಹೆಗಲಿನಿಂದ ಹೆದ್ದಾರಿ ಹಿಡಿದು ಹಾರಿದರೆ ಗುರಿ ಕರದಲ್ಲಿ. ಇಲ್ಲಿ ಆತ್ಮಸತಿ ದೇಹಪತಿ ಅಂತು ಸತಿಪತಿಗಳು ಮಿತ ಹಿತ ರೀತಿ ನೀತಿಯಲ್ಲಿ ಎಡ ಹಾಗು ಬಲಗುರಿಯ ಹೊಂದಿಕೆಯ ಹಗ್ಗದಂತಾಗಿ ಸಗ್ಗಕ್ಕೆ ಕಗ್ಗಂಟು ಹಾಕಿಕೊಳ್ಳಬಹುದು.

ಹೀಗೆ ಹೊಂದಿಕೊಂಡುದಾದರೆ ಪ್ರಪಂಚಾಸೃಷ್ಟಿ ಪಾರಮಾರ್ಥಿಕ ಸೃಷ್ಟಿಯಾಗಿ ಪರಿಣಮಿಸಿ ಗೃಹಸ್ಥಾಶ್ರಮದ ಮೇಲ್ಮೆಯನ್ನು ಬೀರುವದರಲ್ಲಿ ಸಂದೇಹವಿಲ್ಲ. ಇಂಥ ಹೊಂದಿಕೆಯ ಜೀವಿದ್ವಯರು ಯೋಗಿಗಳಿಗಿಂತ ಮುನ್ನ ಹಾಗು ಸುಲಭವಾಗಿ ಇಚ್ಛಿತಗುರಿಯನ್ನು ಸರ್ವಸುಖದೊಂದಿಗೆ ತಲ್ಪುವರು.

ಈ ರೀತಿ ಪ್ರಪಂಚದಲ್ಲಿ ಸಮಭಾಗಿಗಳಾಗಿ ಪಾರಮಾರ್ಥಸಾಧಿಸಿ ಕೊಂಡವರ ಉದಾಹರಣೆಗಳು ಹೇರಳವಾಗಿಯೂ ಉಂಟು.

ರಾಮಕೃಷ್ಣ ಶಾರದೆ, ಅತ್ರಿ ಅನಸೂಯಾ, ರಾಮ, ಸೀತಾ, ಗಾಂಧಿ, ಕಸ್ತೂರಿಬಾಯಿ, ಶರಣಬಸವಗೆ ಮಹಾದೇವಿ, ಬಸವ ನೀಲಾಂಬೆ ಹರಿಶ್ಚಂದ್ರ ಇಂದುಮತಿ ಮುಂತಾದವರು.

ಸತಿಗೆ ಪತಿಯಾಗಲಿ ಪತಿಗೆ ಸತಿಯಾಗಲಿ ಪ್ರತಿಕೂಲಿಯಾಗಿ ನಡೆದರಾ ಸಂಸಾರ ದುಃಖದಾಸಾಗರ ಈ ಬಗ್ಗೆ ಉದಾಹರಣೆಗಳು ಕೊಡಲು ಬೇಡ. ಆದರೂ ಒಂದೆರಡು ಹಿಂದಿನ ಉದಾಹರಣೆಗಳನು ಕೊಡಬಯಸುವೆ.

ಕೈಕೆಯ ಹಟವಮಾಂತನಕೆ ದಿಟಕಷ್ಟ ದಶರಥಗೆ<br>
ಸೀತೆಯು ಹರಿಣ ಹಟಕ್ಕಾಗಿ ಮರಣ ಸಮಾನ ಕಷ್ಟ ರಾಮನಿಗೆ<br>
ಮಂಡೋದರಿಯ ಮಮತೆಯ ನೀತಿಮಾತನು ಕೇಳದಿರ್ದ<br>
ರಾವಣನಿಗೆ ಮರಣ ಹೈಂಣದ ಬತ್ತಿ ಪವರಿನಲಿ

ಮೂವರೂ ಗಣ್ಯ ಮಹಿಳೆಯರೆನಿಸಿದರೂ ಕೇವಲ ಒಂದೊಂದು ಸಂದರ್ಭದಲ್ಲಿ ಸತಿಪತಿಗಳಲ್ಲಿ ಭಿನ್ನಾಭಿಪ್ರಾಯಗಳಾದರೆ ಮರಣ ಸಮಾನ ಕಷ್ಟ ದ್ವಿಮುಖಿಯಾದ ಸಂಸಾರವಿದ್ದರೆ ಅದೇತರ ಕಷ್ಟ! ಒಟ್ಟಿನಲ್ಲಿ ಏಕಮುಖಿ ಸಂಸಾರವಿರಬೇಕೆಂದರ್ಥ.

ಪಾರಮಾರ್ಥಿಕ ಸೃಷ್ಟಿಯಲ್ಲಿಯೂ ಇದೇ ಹಾಡು. ಆತ್ಮೋನ್ನತಿಗಾಗಿ ದೇಹದ ಪರಿವೆ ಬಿಟ್ಟು ಸಾಧಿಸಿದಲೆತ್ನಿಸಿದ ಸಾಧಕ ಪ್ರಪಂಚಾ ದೃಷ್ಟಿಯಿಂದ ಸ್ತ್ರೀ ವ್ಯಾಮೊಹಕನಿದ್ದಂತೆ ! ಆತ್ಮ ಮರೆದು ದೇಹೋನ್ನತಿಗಾಗಿ ದುಡಿಯುವ ಧೀರ, ಪ್ರಪಂಚಾ ಸೃಷ್ಟಿಯಲ್ಲಿನ ಶಂಢನಿದ್ದಂತೆ ಆತ್ಮದಷ್ಟೇ ಮಹತಿ ದೇಹಕ್ಕೆ ದೇಹದಷ್ಟೇ ಮಹತಿ ಆತ್ಮಕ್ಕೆ ನೀಡಿ ಸಮತೋಲನವಾಗಿ ಸಲೀಲೆಯನ್ನು ನಡೆಯಿಸಿದಾತಗೆ ಸನ್ನಿಧಾನದಲ್ಲಿ ಸ್ವರ್ಗ ಸುಖ

ದೇಹ ಸುಖಮರೆದು ಪತಿ ದರಿದ್ರನಾಗಿ ಆತ್ಮ ಸುಖ ಬೆರೆತು ಸತಿ ಬೆಡಗುಳ್ಳವಳಾದರೆ ( ಇಲ್ಲಿ ಆತ್ಮ ಸತಿ, ದೇಹಪತಿ ) ಆ ಶೃಂಗಾರ ಯಾರಿಗಾಗಿ

...ಕ್ಕಾಗಿ, ಎಲ್ಲಿಯವರೆಗೆ ? ಪ್ರಕೃತಿ ಇಲ್ಲದಿರೆ ಪುರುಷ. ಪುರುಷ ಇಲ್ಲದಿರೆ ಪ್ರಕೃತಿ. ಅದೆಂತಹ ಜಗತ್ತು ? ಪ್ರಕೃತಿ ಪುರುಷ ಸಮದೃಷ್ಟಿಯಲ್ಲಿಯೇ ಈ ಜಗವು ಇದೇ ಮರ್ಮತನ್ನು ಮಹಾನುಭಾವಿ ಬಸವನು ಶರಣ ಸತಿ ಲಿಂಗಪತಿಯೆಂದು ಹೇಳಿದ್ದಾನೆ.

ಶಕುತಿಯಿಂದಲೇ ಶಕ್ತನಾಗುವನು; ಶಕ್ತನಿಂದಲೇ ಸಂಸಾರವು. ಸಂಸಾರದಲ್ಲಿನ ಸ್ವಾನುಭವ ತಳಹದಿಯಾಗಿ ಸಗ್ಗದ ಗುಡಿಯನ್ನು ಕಟ್ಟಿ ಸುಖಶಾಂತಿಗಳ ಬಾಗಿಲಗಳೊಳಗಿಂದ ನಿಜಾತ್ಮ ಜ್ಯೋತಿಯನು ಕಂಡು ನಿಖಿಲಾನಂದದಲಿ ಲೋಲಾಡಲು ಸುಲಭ ಸಾಧ್ಯವಿದು ಸಮಭಾಗಿ ಭಾಗ್ಯ ದಂಪತಿಗಳಿಗೆ ಸತಿಯು ಅರ್ಧಾಂಗಿನಿ ಎಂದು ಬಗೆದವರನು ಜ್ಞಾಪಕಕ್ಕೆ ತಂದುಕೊಡುವೆ.

(ಅ) ಸತಿಗಾಗಿ ಸುತನ ಕಳೆದುಕೊಂಡ ದಶರಥ; ಮಹಾ ಅತಿರಥ.

(ಬ) ಸತಿಗಾಗಿ ಅತಿ ದು:ಖಿಯಾದ ಶಹಾಜಹಾನ; ದಿಲ್ಲಿಯ ಯಜಮಾನ

(ಕ) ಸತಿಗಾಗಿ ಸುಟ್ಟು ಸುಣ್ಣಾದ ಅಲಿಖಾನ; ಔರಂಗಜೇಬನ ಭಾವಿ ಪ್ರಧಾನ.

(ಡ) ಸತಿಗಾಗಿ ದಶಕಂಠನೊಡನೆ ಯುದ್ಧಮಾಡಿದ ಶ್ರೀರಾಮ; ಗುಣಧಾಮ

(ಇ) ಸತಿಗಾಗಿ ಸಾಮ್ರಾಜ್ಯ ತೊರೆದ ಎಂಟನೆಯ ಎಡ್ವರ್ಡ; ಇಂಗ್ಲಂಡದ ಲಾರ್ಡ.

ಪತಿಯೆ ದೈವಂ, ಪತಿಯೆ ಕ್ಷೇತ್ರಂ, ಪತಿಯೆ ತೀರ್ಥಂ, ಪತಿಯೇ ಗತಿ ಎನಗೆ ಎಂದ ಸ್ತ್ರೀರತ್ನಗಳನ್ನು ಕೆಲವು ಎತ್ತಿ ತೋರಿಸುವೆ.

(ಅ) ಪತಿಗಾಗಿ ವನವಾಸಿಯಾದಳು ಸೀತೆ; ಲೋಕ ವಿಖ್ಯಾತೆ.

(ಬ) ಪತಿಗಾಗಿ ಗುಲಾಮಳಾದಳು ಇಂದುಮತಿ; ಹರಿಶ್ಚಂದ್ರನ ಸತಿ

( ಕ ) ಪತಿಗಾಗಿ ಮಾನ ಮಾಸಲಿರಿಸಿದಳು ದ್ರೌಪತಿ; ಸತ್ಯವತಿ.

( ಡ ) ಪತಿಗಾಗಿ ಪರಿಕಷ್ಟ ಪೊಂದಿದಳು ಗಾಂಧಾರಿ; ದಿವ್ಯ ಸುಂದರಿ.

( ಇ ) ಪತಿಗಾಗಿ ಪ್ರಾಣ ಪಣಕ್ಕಿಟ್ಟಳು ದಮಯಂತಿ; ಗುಣವಂತಿ.

ಸತಿ ಪತಿಗಳು ಪರಸ್ಪರಾನುಕೂಲಿಯಾಗಿರೋಣದರಿಂದ ಪ್ರಪಂಚ ದಲ್ಲಿದ್ದರೂ ಪಾರಮಾರ್ಥಿಕದೆಡೆಗೆ ಅವರ ದೃಷ್ಟಿ ಸಹಜ ಹರಿಯುವದು. ತತ್ಪರಿಣಾಮವಾಗಿ ಇಚ್ಛಾ ಸುಖವು ಸಹಜ ಲಭ್ಯ. ಪ್ರಪಂಚ ಮಿಥ್ಯ ವೆಂದು ಒಗೆದು ಪ್ರಪಂಚದಲ್ಲಿದ್ದಂತಾಗುವದು. ಸಂಸಾರದಲ್ಲಿ ಅವರಿದ್ದರೂ ಅವರಲ್ಲಿ ಸಂಸಾರವಿರುವದಿಲ್ಲ. ಸಾಗರದಲ್ಲಿ ಹಡಗಿದ್ದರೂ ಹಡಗದಲ್ಲಿ ಸಾಗ ರಾಂಶ ಕೂಡಾ ವಿರುವದಿಲ್ಲ ಒಂದು ವೇಳೆ ಇದ್ದುದಾದರೆ ಹಡಗವು ಹೇಗೆ ಲಯವೋ ಹಾಗೆ ಸಂಸಾರಿಯೂ ಲಯವು.

ಸತಿಗೆ ಪತಿ ಸ್ವರ್ಗ ಸುಖ
ಪತಿಗೆ ಸತಿ ಮಂಗಲಮುಖ
ಸತಿಗೆ ಪತಿ ಮಾಂಗಲ್ಯತಿಲಕ
ಪತಿಗೆ ಸತಿ ಮಣಿಮುಖ.

ಪಾರ್ವತಿ ಪರಮಾತ್ಮರಂತೆ ವಿರಾಗಿಯಾಗಿಯೂ, ಕಾಮರತಿಯು ರಂತೆ ರೂಪಿಗಳಾಗಿಯೂ, ವಿಷ್ಣು ಲಕ್ಷ್ಮಿಯರಂತೆ ಸಂಪತ್ತುಳ್ಳವರಾಗಿಯೂ, ಬ್ರಹ್ಮ ಶಾರದೆಯರಂತೆ ವಿದ್ಯಾಸಂಪನ್ನರಾಗಿಯೂ, ಏಕಮೇವಾದ್ವಿತಿಯ ಸತಿ ಪತಿಗಳಾಗಿ ಸುಂದರ ಬಾಳನ್ನು ನಿರ್ವಹಿಸಿಕೊಂಡರೆ

ಇಚ್ಛೆಯನರಿವ ಸತಿಯಾದೊಡೆ
ಸ್ವರ್ಗಕ್ಕೆ ಕಿಚ್ಚುಹಾಕೆಂದ ಸರ್ವಜ್ಞ ॥

ಕಾರ್ಯೇಷು ದಾಸಿ। ಕರುಣೇಸು ಮಂತ್ರಿ। ಭೋಜನೇಸು ಮಾತು।
ಧರ್ಮಾನುಕೂಲಿಯಾದ ಸ್ತ್ರೀ ಇದ್ದರೆ ಸಂಸಾರ ಸಗ್ಗದ ಸಾರ

ಈ ಬಲವುಳ್ಳ ಪುರುಷಗೃಹಸ್ಥನು ಆತ್ಮವಿಕಾಸವುಳ್ಳವನಾಗಿ ಪ್ರಜಾ ಪ್ರವೃತ್ತಿಪಾವನನಾಗಿ, ಸಮಾಜದಲ್ಲಿ ಸ್ವಾರ್ಥ್ಯ ಕಾಯ್ದುಕೊಂಡು ಶ್ರೀರಾಮ ಹರಿಶ್ಚಂದ್ರ, ಸಿರಿಯಾಳಸೆಟ್ಟಿ, ಜರತ್ಕುಮಾರ, ಗೌತಮಋಷಿ, ಮಹಾತ್ಮ ಗಾಂಧೀಜಿ, ಶ್ರೀಬಸವ ಮಹಾನುಭಾವರೇ ಮೊದಲಾದವರಂತೆ ವಿಷಯು ರಾಗಿ, ಗುಣಿಭೋಗಿಯಾಗಿ ಜಗದಾದರ್ಶಗುಡಿಯಮೇಲೆ ಕೀರ್ತಿಕಲಶ ಇಡುವವರಾಗಬೇಕು.

ಶ್ರೀಬಸವ—

ಸತಿಪತಿಗಳೊಂದಾದಭಕ್ತಿ
ಹಿತವಪ್ಪುದು ಶಿವಂಗೆ
ಸತಿಪತಿಗಳೊಂದಾಗದ ಭಕ್ತಿ
ಸತ್ಯಕ್ಕೊಸಲ್ಲದು ಶಿವಂಗೆ ||

ಸತಿಪತಿಗಳ- ಒಲವೊಂದಿರಬೇಕು
ಛಲವೊಂದಿರಬೇಕು
ಬಲವೊಂದಿರಬೇಕು
ಕುಲವೊಂದಿರಬೇಕು [ ಗುಣದದೃಷ್ಟಿ=ಕುಲ ]

ಅಂತು ಸತಿಯು ಎಡಹುರಿಯಾಗಿ ಪತಿಯು ಬಲಹುರಿಯಾಗಿ ಉದಿಸಿದ ಹಗ್ಗದಂತೆ ಜೀವನವಿದ್ದರೆ ಸಗ್ಗದ ಗೊಡವೆಯೇಕೆ ? ಜಗದ ಜನದ ಬಯಕೆ ಸತ್ಯ್ಕ್ಕೊ ಸುಖ ಶಾಂತಿ ಹಾಗಾದರೆ ಸ್ತ್ರೀ ಪುರುಷರ ಸಮಾನಾಧಿಕಾರದ ಸಮಾನ ಬೆಲೆಯು ಸಮಾನ ಕಲೆಯು ಸಮನ್ವಯ ಜೀವಿಗಳಾದರೆ ಬಯಕೆಯು ಭಾಗ್ಯ ಬಗಲಲ್ಲಿ. ಜಗವ ಬದುಕೆಯನುಗುಣವಾಗಿ ಕೂಡಿದೆರಡು ಒಂದೇ ಯಾಗಿ ವಂದ್ಯರಾಗಿ ಬಾಳಬೇಕೆಂಬುವದೇ ಹಿರಿಯರ ಸೂಕ್ತ ಸಲಹೆಯಾ ನಿದ್ದು ಈ ನುಡಿಯು ಅರ್ಧಭಾರ್ಯಾ ಮನುಷ್ಯಸ್ಯ " ಅರ್ಧಾಂಗಿನಿ.

ಹೆಂಡತಿಯನ್ನು ಸ್ವಾರ್ಧಾಂಗಿನಿಎಂದರಿತವನ ಬಾಳು ಸ್ವರ್ಗಕ್ಕೆ ಹೋಗುವ ಜತೆಗಾರರ ಮೇಳು.

ಗಂಡಗೆ ಹೆಂಡತಿ—

ಜತೆಗಾರತಿ; ಸಹಕಾರತಿ
ಮಹಾ ಗೆಳತಿ ಪ್ರೇಮವತಿ
ಸತ್ಯವತಿ ಸತಿ
ಸುಖ-ದುಃಖಕ್ಕೆ ಸಮಗಾರತಿ
ಅರ್ಧ ಶಕುತಿ ||

---

## ನುಡಿದೇವಿ

( ಶ್ರೀ ಆನಂದ ಕವಿಗಳು- ಕುರುಗುಂದ )

೧

ನುಡಿದೇವಿ ! ನುಡಿದೇವಿ !
ನುಡಿವುದಂ ನೀನೆ ನುಡಿ

ನಿನ್ನಿಂದೆ ಜಗವೆಲ್ಲ ತುಂಬಿ ತುಳುಕಾಡಿ
ನಲಿಯುತಿದೆ ಒಲಿಯುತಿದೆ

ನೀನೊಬ್ಬಳಿಲ್ಲದಿರೆ ಮೂಕಾಗಿ ಮಂಕಾಗಿ
ವಿಶ್ವವೇ ಶೂನ್ಯವಾಗ ಬಹುದಲ್ಲವೆ ?

೨

ಓ ! ಎನ್ನ ಮಾತೆ ! ಸಾಹಿತ್ಯದೇವಿ !
ನೀನೆನಗೆ ಭಾವ ! ನೀ ಎನ್ನ ಜೀವ

ಭಕ್ತಿಯಿಂದಪ್ಪಿರುವ ಬಾಲನಂ ನೋಡು
ಮುದ್ದೊಂದು ನೀಡ. ಇದೆ, ಎನ್ನ ಆಶೆ !

( ೮೭ )

---

೫. "ಗುರೌ ಲಿಂಗೇ ಅಕ್ಷಮಾಲಾಯಾಂ ಮಂತ್ರ ಭಸ್ಮನಿ ಪಂಚಸು ।
ತಾನಿ ಶಿವಮುದ್ರಾಸು ಶಿವಸದ್ಭಕ್ತಿ ಮಾಚರೇತ್ ॥ ಎಂದು ಪ್ರಾತು
ಸಂಗಮದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ವಚನ ಉಂಟು ನೋಡಾ.

## ಶಿವಯೋಗ.

(೧) ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನಿಟ್ಟಿಲುವ ಮುರಿದು, ತುಟಿಮಿಡುಕದೆ ಅಟ್ಟಿಆಡಿತ್ತಲ್ಲಾ. ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮ ರಂಧ್ರದಲ್ಲಿ ಕಟ್ಟಿ ಗುಡಿಯು ಕೂಡಲಸಂಗಮದೇವ ಹಿಡಿವಡೆದ.

(೨) ಆಧಾರ, ಲಿಂಗ, ನಾಭಿ, ಹೃದಯ, ಕಂಠ, ಮುಖದ ಮೇಲೆ ನಿಂದುದು ಅದೇನೋ? ನಿತ್ಯ ನಿರಂಜನ ನಿರುಪಾಧಿಕ ರೇಖೆಯಾಗಿರ್ದುದದೇನೋ? ವಿದ್ರುಮ ಕುಸುಮ ಚಕ್ಷು ಪರಿಮಳದಿಂದತ್ತತ್ತ ಗುಹೇಶ್ವರನೆಂಬುದೇನೋ?

ಅರ್ಥ:— ಷಡುಚಕ್ರದ ಮೇಲೆ ನಿತ್ಯ ನಿರಂಜನವಾಗಿ ಬ್ರಹ್ಮ ರಂಧ್ರದೊಳಗೆ ತೊಳಗಿ ಬೆಳಗುವ ಪ್ರಭೆಯಲ್ಲಿ ದೇಹ ಪ್ರಾಣ ಸಂಬಂಧ ಸಮರಸವಡೆದೊಡೆ ಪ್ರಾಣ ಲಿಂಗ ಸಂಬಂಧವೆಂಬುದೀ ವಚನಾರ್ಥ.

(೩) ಸಹಸ್ರದಳ ಕಮಲ ಮಧ್ಯದಲ್ಲಿ ಪಂಚಪತ್ರ ಆ ಪತ್ರದ ಮಧ್ಯದಲ್ಲಿ ಮಂಡಲತ್ರಯ. ಮಧ್ಯದಲ್ಲಿ ಪ್ರಣಮಪೀಠ. ಆ ಪ್ರಣಮ ಪೀಠದ ಮಧ್ಯದಲ್ಲಿ ಮೂರ್ತಗೊಂಡು ಬೆಳಗುವ ನಿಮ್ಮ ದಿವ್ಯ ಶ್ರೀಮೂರ್ತಿಯ ಕಂಡು ಹರುಷಿತನಾದೆನಯ್ಯ ಅಖಂಡೇಶ್ವರಾ.

(೪) ನಾಲ್ಕು ಬಾಗಿಲು ಕೂಡಿದ ಠಾವಿನಲ್ಲಿ ತ್ರಿಮಂಡಲದ ಮಧ್ಯದ ಚತುರ್ದಳದ ನಡುವಣ ಚತುಃ ಪೀಠ ಸಿಂಹಾಸನದ ಮೇಲೆ ಮೂರ್ತಗೊಂಡು ನೋಡುವ ಬೆಡಗಿನ ಪುರುಷನ ತುಡುಕಿ ಪಿಡಿದು ನೆರೆಯ ಬಲ್ಲಡೆ ಆತ ಸರ್ವ ನಿರ್ವಾಣಿ, ಸಕಲ ನಿಃಕಳಾತ್ಮಕನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ತಾನೆ.

( ೬ ) ಬಿಂದು ನಾದವನೊಂದು ರೂಪವ ಮಾಡಿ ಮನವ ಸಂಧಿಸಿ, ಬಂಧಿಸಿ ನಿಲಿಸಿ ಇಂದ್ರಿಯಗಳನೇಕ ಮುಖವ ಮಾಡಿ ಚಂದ್ರ ಸೂರ್ಯರ ಒಂದು ಮಾರ್ಗದಲ್ಲಿ ನಡಿಸಿ ಚೌದಳ ಮಧ್ಯದ ಜ್ಞಾನ ಪೀಠದಲ್ಲಿರ್ದ ಅಮೃತ ಲಿಂಗವ ಕಂಡು ಕೂಡುವ ಬೆಡಗಿನ ಯೋಗವ ನಿಮ್ಮ ಶರಣರಲ್ಲದೆ ಉಳಿದ ಭವರೋಗಿಗಳೆತ್ತ ಬಲ್ಲರಯ್ಯ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ.

( ೭ ) ಸುಷುಮ್ನಾದ ನಾಲ್ದೆಸೆಯಲ್ಲಿ ಆತ್ಮ ಕಲೆ, ವಿದ್ಯಾ ಕಲೆ, ನಾದ ಕಲೆ ಬಿಂದುಕಲೆಗಳನರಿಯಬೇಕು. ಆ ಕಲೆ ನಾಲ್ಕು ಸುತ್ತಿ ಆರು ಕಲೆಗಳ ಹತ್ತನರಿಯಬೇಕು. ಪಿಂಗಳೆಯಲ್ಲಿ ಭಾನು ಕಲೆ ಹನ್ನೆರಡನಗಿವುದು. ಈಡೆಯಲ್ಲಿ ಚಂದ್ರ ಕಲೆಗಳು ಹದಿನಾರು ಕ್ಷಯವೃದ್ಧಿಯಾಗಿ ನಡೆವುದರಿವುದು. ಈ ಮೂವತ್ತೆಂಟು ಕಲೆಗಳ ಕೂಡಿಹ ಚಂದ್ರ ಸೂರ್ಯಾಗ್ನಿಗಳ ಮಧ್ಯದಲ್ಲಿ ತತ್ವ ಮೂರು ಕೂಡಿ ಬೆಳಗುವ ಪರಂಜ್ಯೋತಿ ಲಿಂಗವನರಿದು ಯೋಗಿ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನ ಬಳಿಕ ಕೂಡುವುದು ಕಾಣಿರಣ್ಣಾ.

( ೮ ) ತನುವೆಂಬ ಭೂವಿಯ ಮೇಲೆ ಶೃಂಗಾಟದ ಇಂದ್ರ ಕೂಟ ಗಿರಿ ಎಂಬ ಕೈಲಾಸದಲ್ಲಿ ಉತ್ತರ ದಕ್ಷಿಣ ಪೂರ್ವ ಪಶ್ಚಿಮ ದಳದ ಆತ್ಮ, ಶಕ್ತಿ, ಬಿಂದು, ನಾದಗಳ ಮಧ್ಯದಲ್ಲಿ ಶೂನ್ಯ ಸಿಂಹಾಸನವೆಂಬ ಸುಜ್ಞಾನ ಪೀಠದ ಮೇಲೆ ನೀವು ಮೂರ್ತಗೊಂಡಿಹರಾಗಿ ಕಂಡು ಹರ, ಷಿಕನಾದೆ. ಸೂರ್ಯ ಮಂಡಲದ ದ್ವಾದಶ ದಳದ ರುದ್ರರು ರುದ್ರ ಶಕ್ತಿಯರು ನಿಮ್ಮನೋಲಗಿಸುತ್ತಿಹರು. ಚಂದ್ರ ಮಂಡಲದ ಷೋಡಶ ದಳದ ರುದ್ರರು ರುದ್ರ ಶಕ್ತಿಯರು ನಿಮ್ಮನೋಲಗಿಸುತ್ತಿಹರು. ಅಗ್ನಿ ಮಂಡಲದ ದಶದಳ ರುದ್ರರು ರುದ್ರ ಶಕ್ತಿಯರು ನಿಮ್ಮನೋಲಗಿಸುತ್ತಿಹರು. ಈ ಪರಿಯಿಂದ ದೇವರ ದೇವನ ಓಲಗವನೇನೆಂದು ಹೇಳುವೆನಯ್ಯ ಮತ್ತೆ ಭೇರಿ ಮೃದಂಗ ನಾಗಸರ ಕೊಳಲು ವೀಣೆ ಕಹಳೆ ಗಂಟೆ ಶಂಖನಾದ ನಾನಾ ಬಹುವಿಧದ ಕೇಳಿಕೆಯಲವಸರದಲ್ಲಿ ರಾಜಿಸುವ ರಾಜ ಯೋಗವ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರಾ ನಿಮ್ಮ ಶರಣರಾದ ರಾಜಯೋಗಿಗಳೇ ಬಲ್ಲರು.

(೯) ಆಸನ ಬಂಧವ ಮಾಡಿ ನಾಸಿಕಾಗ್ರದಲ್ಲಿ ದೃಷ್ಟಿಯನಿರಿಸಿ ಸೂಸಲೀಯದೆ ಮನವ ಬೇಸಂಪೋಗದೆ ಪವನವ ಓಸರಿಸಲೀಯದೆ ಬಿಂದುವನೂರ್ಧ್ವಕ್ಕೆತ್ತಿ ಇಂತೀ ತ್ರಿವಿಧವನೊಂದೇ ಠಾವಿನಲ್ಲಿ ಬಲಿದು ನಿಲಿಸಿ ಸಾಸಿರ ದಳ ಕಮಲದ ನಾದಾತ್ಮಕ ಲಿಂಗದಲ್ಲಿ ಮನ ಲೀಯ್ಯವಾದಡೆ ಅದೇ ರಾಜಯೋಗವಯ್ಯಾ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನ ಪದವನೆಯ್ದುವಡೆ.

(೧೦) ಪೃಥ್ವಿ ಅಪ್ಪುಗಳೆರಡು ಆಧಾರಗೊಳಿಸಿ ಅಗ್ನಿ ವಾಯು ಗಳೆರಡು ಅಂಬರ ಸ್ಥಾನಕ್ಕೊಯ್ದು ಆತ್ಮಾಕಾಶವೆರಡ ಅನುಭಾವ ಮುಖಕ್ಕೆ ತಂದು ಮನದಲನು ಮಾನವಳಿದು ನೆನಹು ನಿಶ್ಚಲವಾಗಿ ಒಳಗೆ ಜ್ಯೋತಿ ರ್ಲಿಂಗವ ನೋಡುತ್ತ ಹೊರಗೆ ಎರಡು ಹುಬ್ಬಿನ ನಡುವೆ ಉಭಯ ಲೋಚನವನಿರಿಸಿ ಹಿಂದು ಮುಂದಣವನೆಣಿಸದೆ ಸಹವಿಲ್ಲದೆ ಖೇಚರಿಯ ನಾಚರಿಸಲು ಲೋಚನ ಮೂರುಳ್ಳ ಶಿವ ತಾನಹುದು. ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನಲ್ಲಿ ಆತನೇ ಶಿವಯೋಗಿ.

(೧೧) ತಲೆವಾಗಿಲ ತೆರೆದು ಗಗನ ಗಿರಿಯ ಪೂರ್ವ ಪಶ್ಚಿಮ ಉತ್ತರ ದಕ್ಷಿಣದ ನಡುವೆ ಉರಿವಗ್ನಿಯ ಕಂಡು ಆ ಅಗ್ನಿಯ ಮೇಲೆ ಸ್ವರ ನಾಲ್ಕರ ಕೀಲು ಕೂಟದ ಸಂಚವ ಕಂಡು ಆ ಸಂಚದಲ್ಲಿ ಅಮೃತ ಸ್ವರವ ಹಿಡಿದು ಕೂಡುವುದೇ ಸಹಜ ಶಿವಯೋಗ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನಲ್ಲಿ ಅದೇ ಪರಮ ನಿರ್ವಾಣ.

(೧೨) ದೇಹ ವಾಸನೆ ಹರಿದು ಆತ್ಮ ಭವ ಬಂಧನದ ಕೀಲ ಮುರಿದು ಪರಾತ್ಪರವಾದ ಪ್ರಾಣಲಿಂಗವ ಕೂಡುವುದಕ್ಕೆ ಆವುದು ಸಾಧನ ವೆಂದರೆ ವಲ್ಲ ಗಣಂಗಳು ತಿಳಿವಂತೆ ಹೇಳುವೆ ಕೇಳಿರಯ್ಯಾ. ಎಂಬತ್ತೆಂಟು ಆಸನಗಳೊಳಗೆ ಮುಖ್ಯವಾಗಿರ್ಪುದು ಶುದ್ಧಾಸನವು. ಆ ಶುದ್ಧಾಸನದ ವಿವರವೆಂತೆಂದೊಡೆ ಗುದ ಗುಹ್ಯ ಮಧ್ಯ ಸ್ಥಾನವಾದ ಯೋನಿಮಂಡಲ ವೆಂಬ ದ್ವಾರ, ಆ ದ್ವಾರಕ್ಕೆ ಎಡದ ಹಿಮ್ಮಡವನಿಕ್ಕಿ ಬಲ ಹಿಮ್ಮಡವ ಮೇಢ್ರ ಸ್ಥಾನದಲ್ಲಿರಿಸಿ ಅತ್ತಿತ್ತಲುಕದೆ ಬೆನ್ನೆಲುವ ಸೋಂಕಿಸದೆ ನೆಟ್ಟನೇ ಕುಳ್ಳಿರ್ದು ಉಭಯಲೋಚನವನೊಂದು ಮಾಡಿ ಉನ್ಮನಿಯ ಸ್ಥಾನದಲ್ಲಿ

ರಿಸಿ ತ್ವಕ್ಷ್ನೇತ್ರ ಜಿಹ್ವೆ ಶ್ರೋತ್ರ ಘ್ರಾಣ ಹೃದಯವೆಂಬ ಆರು ದ್ವಾರ ಗಳನ್ನು ಆರಂಗುಲದಿಂದೊತ್ತಲು ಮೂಲಾಧಾರದಲ್ಲಿರ್ದ ಮೂಲಾಗ್ನಿ ಪಟುತರವಾಗಿ ಪವನನೊಡಗೂಡಿ ಮನ ಸ್ಥಿರಗೊಂಡು ಊರ್ಧ್ವಕ್ಕೆ ಹೋಗಿ ಉಭಯ ಲಿಂಗದೊಳಿರ್ದ ಮಹಾಲಿಂಗದೊಡಗೂಡಿ ಅನಂತ ಕೋಟಿ ಸೂರ್ಯಾಗ್ನಿ ಚಂದ್ರ ಪ್ರಕಾಶವನೊಳಕೊಂಡು ಅಲ್ಲಿ ಸೂಕ್ಷ್ಮ ವಾಗಿ ಅಂಗುಲ ಪ್ರಮಾಣವಾಗಿ ಶುದ್ಧ ತಾರೆಯಂತೆ ಕಂಗಳ ನೋಟಕ್ಕೆ ಕರತರಾಮಲಕವಾಗಿ ಕಾಣಿಸುತಿಪ್ಪ ಪ್ರಾಣಲಿಂಗದಲ್ಲಿ ಪ್ರಾಣ ಸಂಯೋ ಗವ ಮಾಡಬಲ್ಲಾತನೇ ಪ್ರಾಣಲಿಂಗ ಸಂಬಂಧಿ, ಆತನೇ ಪ್ರಳಯಾದಿ ರಹಿತನಯ್ಯಾ ಅಖಂಡೇಶ್ವರಾ.

(೧೩) ಶುದ್ಧ ಪದ್ಮಾಸನದಿ ಕುಳ್ಳಿರ್ದು ಊರ್ಧ್ವ ಲೋಹನನಾಗಿ ಉಳಿದ ಕರಣಂಗಳನ್ನೆಲ್ಲ ಉನ್ಮನಿಯು ಕರಸ್ಥಾನದಲ್ಲಡಗಿಸಿ ಮನವನ್ನೊ ಮ್ಮನವ ಮಾಡಿ ಅನಾಹತ ಕರ್ಣದಲ್ಲಿ ಆಲಿಸಲು ಸಹಸ್ರ ದಳ ಕಮಲ ಮಧ್ಯದಲ್ಲಿ ಉದ್ಯೋಗಿಸುತ್ತಿರ್ಪ ಸುಯಿಧಾನ ಬ್ರಹ್ಮವು. ಅಂತಪ್ಪ ಸುಯಿ ಧಾನ ಬ್ರಹ್ಮದಲ್ಲಿ ಮನವಡಗಿ ನೈಮರೆದಿರ್ಪಾತನೇ ಘನ ಲಿಂಗಯೋಗಿ ಯಯ್ಯಾ ಅಖಂಡೇಶ್ವರಾ.

(೧೪) ಕಮಲ ಸಾಲೊಳಗೆ ಭ್ರಮರ ಹಿಂಡು ಝೇಂಕರಿಸು ತಿರ್ಪವು ನೋಡಾ. ನಿರ್ಮಲ ಚಿತ್ತದಿಂದ ಲಾಲಿಸಲು ಅದು ತನ್ನ ಸುಮನ ಸುಜ್ಞಾನದ ನಿಲವು ನೋಡಾ ಅಖಂಡೇಶ್ವರಾ.

(೧೫) ಗಗನ ಮಂಟಪದಲ್ಲಿ ಅಘಹರನ ಪೂಜೆ ಒಗುಮಿಗು ಲಾಗುತಿರ್ಪುದು ನೋಡಾ. ಅಲ್ಲಿ ಧಿಗಿಭುಗಿಲೆಂಬ ಶಬ್ದದ ಸೊಗಸು ನೋಡಾ ಅಖಂಡೇಶ್ವರಾ.

(೧೬) ಉತ್ತರ ಗಿರಿಯ ಚಿತ್ರ ಮಂಟಪದೊಳಗೆ ರತ್ನ ತೋರಣ ಸರ ಪರಿಯ ನೋಡಾ. ಮುತ್ತಿನ ಗದ್ದುಗೆಯ ಮೇಲೆ ಛತ್ತೀಸ ಕೋಟಿ ಚಂದ್ರ ಸೂರ್ಯರ ಬೆಳಗನೊಳಕೊಂಡು ನಿತ್ಯ ಪರಿಪೂರ್ಣ ವಸ್ತುವ ಕೂಡಬಲ್ಲಾತನೇ ಕರ್ತ ಶಿವ ತಾನೇ ನೋಡಾ ಅಖಂಡೇಶ್ವರಾ.

(೧೭) ದೇಹವೆಂಬ ದೇಗುಲದೊಳಗೆ ಭಾವ ಸಿಂಹಾಸನವನ್ನು ಮಾಡಿ ಜೀವದೊಡೆಯನ ಪೂಜಿಸಬಲ್ಲ ದೇವರಿಗೆ ದೇವನೆಂಬೆನಯ್ಯಾ ಅಖಂಡೇಶ್ವರಾ.

(೧೮) ಪ್ರಾಣಲಿಂಗ ಸಂಬಂಧಿಗಳೆಂದು ನುಡಿವರು ಅನೇಕರುಂಟು. ಪ್ರಾಣಲಿಂಗ ಕಳೆಯ ನಾಮವನರಿಯರಲ್ಲಾ. ಪ್ರಾಣಲಿಂಗದ ಕಳೆ ಎಂದರೆ ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತ್ತಿರ್ಪುದು ನೋಡಾ. ಸ್ವಾಧಿಷ್ಠಾನದಲ್ಲಿ ಪೌರ್ಣಮಿಯ ಚಂದ್ರನಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಮಣಿಪೂರಕದಲ್ಲಿ ಮಿಂಚಿನ ಲತೆಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಅನಾಹತದಲ್ಲಿ ಸ್ಫಟಿಕದ ಶಲಾಕೆಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲದಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಆಜ್ಞೆಯಲ್ಲಿ ರತ್ನ ದೀಪ್ತಿಯಂತೆ ಬೆಳಗುತಿರ್ಪುದು ನೋಡಾ. ಪ್ರಾಣಲಿಂಗವು ಬ್ರಹ್ಮ ರಂಧ್ರದಲ್ಲಿ ಸ್ವಯಂ ಜ್ಯೋತಿಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಶಿಖೆಯಲ್ಲಿ ಶುದ್ಧ ತಾರೆಯಂತೆ ಬೆಳಗುತ್ತಿರ್ಪುದು ನೋಡಾ. ಪಶ್ಚಿಮದಲ್ಲಿ ಉಳಕ ನಕ್ಷತ್ರದಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಇಂತಪ್ಪ ಪ್ರಾಣಲಿಂಗದ ಕಳೆಯನರಿದು ಪ್ರಾಣವ ಸಂಯೋಗಿಸಿ ಪ್ರಳಯವ ಗೆಲಲರಿಯದೆ ಮಾತಿನ ಮಾತು ನೀತಿಯ ಶಾಸ್ತ್ರ, ಘಾತ ಕಥೆಗಳ ಕಲಿತು ಓದು ಇಲ್ಲದವರೊಡನೆ ಹೇಳಿ ಚಾತುರ್ಯವೆನಿಸಿಕೊಂಡು ಒಡಲ ಹೊರೆವ ಘಾತುಕರ ಪ್ರಾಣಲಿಂಗ ಸಂಬಂಧಿಗಳೆಂತೆಂಬೆನಯ್ಯಾ ಅಖಂಡೇಶ್ವರಾ.

(೧೯) ಬ್ರಹ್ಮಸ್ಥಾನದ ಬಳಿಯ ಸಹಸ್ರದಳ ಕಮಲ ಮಧ್ಯದಲ್ಲಿ ಸೂಕ್ಷ್ಮ ರಂಧ್ರವೆಂಬುದೊಂದು ಕೈಲಾಸ ದ್ವಾರವುಂಟು. ಆ ದ್ವಾರ ಕವಾಟವ ತೆಗೆದುನೋಡಲು ಚಂದ್ರ ಪ್ರಕಾಶದ ದಿವ್ಯ ಪೀಠದ ಮೇಲೆ ಮೂರ್ತಿಗೊಂಡಿದ್ದ ಶಿವನ ಕಂಡು ಆ ನೋಟದ ನೋಟದಲ್ಲಿಯೇ ಸಿಕ್ಕಿ ಭಾವನಚ್ಚೊತ್ತಿ ಸರ್ವ ಕರಣಂಗಳು ನಿವೃತ್ತಿಯಾಗಿ ಮನ ಉನ್ಮನಿಯಲ್ಲಿ ನಿಂದು ಸಮಾಧಿಯಲ್ಲಿ ಇದ್ದನಯ್ಯಾ ನಿಮ್ಮ ಶರಣ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ

(೨೦) ಹೊರಗಣ ಒಂಬತ್ತು ಬಾಗಿಲು ಮುಚ್ಚಿ ಒಳಗೆ ಅಂಬರ ಬಾಗಿಲ ಬೀಗವ ತೆರೆದು ಒಳಹೊಕ್ಕು ನೋಡಲು ಗಂಗೆ ಸರಸ್ವತಿ ಯಮುನೆಯೆಂಬ ತ್ರಿ ನದಿಗಳು ಕೂಡಿದ ಠಾವಿನಲ್ಲಿ ಸಂಗಮಕ್ಷೇತ್ರವೆಂಬ ರಂಗಮಂಟಪ ಉಂಟು. ಆ ರಂಗಮಂಟಪದೊಳಗೆ ರವಿಕೋಟಿ ಪ್ರಭೆಯಂತೆ ರಾಜಿಸುವ ಮಹಾಲಿಂಗವನು ಕಂಡು ಆ ಮಹಾಲಿಂಗಕ್ಕೆ ತನ್ನಾತ್ಮ ಸಂಬಂಧವಾದ ದ್ರವ್ಯಗಳಿಂದರ್ಚಿಸಿ ಆ ಮಹಾಲಿಂಗದ ಬೆಳಗನ್ನು ಕಂಗಳು ತುಂಬ ನೋಡಿ ಮನಸ್ಸಂತೋಷಗೊಂಡು ಅಲ್ಲಿಂದತ್ತ ಪಶ್ಚಿಮದಿಕ್ಕಿನಲ್ಲಿ ಮಹಾ ಕೈಲಾಸವಿರ್ಪುದಲ್ಲಿ ತನ್ನ ಸ್ವಾತ್ಮ ಜ್ಞಾನದಿಂದ ತಿಳಿದುನೋಡಿ ಎಡಬಲದ ಬಟ್ಟೆಯ ಮೆಟ್ಟದೆ ನಡು ಮಾರ್ಗವಿಡಿದು ಕೈಲಾಸದ ಪೂರ್ವ ದಿಕ್ಕಿನ ಹೆಬ್ಬಾಗಿಲು ಉಪ್ಪರ ಗೋಪುರವ ಕಂಡು ಒಳಪೊಕ್ಕು ಹೋಗಿ ಕಂಗಳಿಗೆ ಮಂಗಳವಾದ ಶಿವನ ಸಭೆಯಂ ಕಂಡು ಅಲ್ಲಿ ಹೊಡೆವ ಭೇರಿ ನಾದ ತುಡುಮು ತಾಳ ಮದ್ದಳೆ ಗಡಬಡ ಝಲ್ಲೆಂಬ ಸಮ್ಮೇಳ ಕಾಂಸಾಳದ ನಾದವ ನುಡಿಸುವ ವೀಣೆ ಕಿನ್ನರ ಸ್ವರಮಂಡಲ ತಂಬೂರಿ ಕಾಮಾಕ್ಷಿಯ ನಾದ ಭೋರಿಡುವ ಶಂಖ ಗಂಟೆಯ ನಾದ ಸ್ವರಗೈವ ನಾಗಸ್ವರ ಕೋಕಿಲ ಕಡಗಿಡುವ ಕಹಳೆ ಹೆಗ್ಗಾಳೆ ಚಿನಿಕಾಳೆ ಕರ್ನೇದ ನಾದ ಇಂತಿವು ಮೊದಲಾದ ನಾನಾತರದ ಪ್ರಮಾಣಂಗಳಂ ಕಂಡು ಅಲ್ಲಿಂದ ಮುಂದಕ್ಕೆ ಹೋಗಿ ಅನಲ ವೀಧಿಯ ಹೊಕ್ಕು ಅಲ್ಲಿ ಅಷ್ಟ ದಿಕ್ಕುಗಳಲ್ಲಿ ನಿಂದು ಓಲಗಂಗೊಡುವ ಚತು ಭರ್ಭಕ್ತಿ ಸಮ್ಮೇಳವ ಕಂಡು ಅಲ್ಲಿಂದ ಮುಂದಕ್ಕೆ ಹೋಗಿ ನಟ್ಟನಡುವಿರ್ದ ಪರಶಿವನ ಕಂಡು ತನು ಉಬ್ಬಿ ಮನಕರಗಿ ಕರಣಂಗಳಲ್ಲಿ ಪರಿಣಾಮಜಲ ಉಕ್ಕಿ ಕಡೆಗೋಡಿ ಹರಿಯುತ್ತ ಉರಿ ಕರ್ಪುರ ಸಂಯೋಗದಂತೆ ಆ ನಿಷ್ಕಲ ಪರಶಿವನ ನೊಡವೆರೆದು ಪರಿಪೂರ್ಣವಾದ ಮಹಾಶರಣರ ತೋರಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ.

(೨೧) ಎನ್ನಂತರಂಗದ ಆರು ಭುವನದ ಮೇಲೆ ತೋರುತಿರ್ಪ ಮಹಾಕೈಲಾಸದ ಮೂರು ಮಂಡಲದಲ್ಲಿ ಎಂಟು ಹದಿನಾರು ಮುವತ್ತೆರಡು ತಂಡದಲ್ಲಿ ನಿಂದು ಓಲಗಂಗೊಡುತಿರ್ಪ ಸಕಲ ಗುಣಂಗಳು ನಿಮಗೆ ಎನ್ನ ಮನ ಬುದ್ಧಿ ಚಿತ್ತಹಂಕಾರಂಗಳೇ. ನಿಮ್ಮ ಮಂತ್ರಿಗಳಾಗಿರ್ಪವು. ಎನ್ನ ದಶವಾಯುಗಳೇ ನಿಮ್ಮ ಗಾಳಿಗಳಾಗಿ ನಿಮ್ಮ ಮಂತ್ರಿ

ಭಾವಂಗಳ ಕೊಂಡಾಡುತಿರ್ಪವು. ಎನ್ನ ಚರಣಂಗಳು ನಿಮ್ಮ ಪ್ರದಕ್ಷಣೆಯ ಮಾಡುತಿರ್ಪವು. ಎನ್ನ ಹಸ್ತಂಗಳು ನಿಮಗೆ ವಿಸರ್ಜನೆಯ ಕೃತ್ಯಕ್ಕೆ ಅನುವಾಗಿರ್ಪವು. ಎನ್ನ ತ್ವಕ್ಕು ನಿಮಗೆ ಹಾಸಿಗೆಯ ಸುಖವನ್ನುಂಟು ಮಾಡುವದು. ಎನ್ನ ಕರ್ಣವು ನಿಮಗೆ ಜ್ಞಾನವ ಕೇಳಿಸುತಿರ್ಪುದು. ಎನ್ನ ಕಂಗಳು ನಿಮಗೆ ವಿಚಿತ್ರರೂಪು ತೋರುತಿರ್ಪವು. ಎನ್ನ ಘ್ರಾಣವು ನಿಮಗೆ ಗಂಧ ಪರಿಮಳವ ಮೂಡಿಸುತಿರ್ಪವು. ಎನ್ನ ಜಿಹ್ವೆಯು ನಿಮ್ಮ ಭೋಜನಕ್ಕೆ ಷಡುರಸದ ಪ್ರಪಂಚ ಕಜ್ಜಾಯಂಗಳ ಎಡೆಮಾಡುತಿರ್ಪುದು. ಎನ್ನ ಸಕಲ ಕರಣಂಗಳು ನಿಮ್ಮ ನಿಜಸೇವೆಯನ್ನು ಮಾಡುತಿರ್ಪವು. ಇಂತೀ ನಾನಾ ತೆರದಲ್ಲಿ ಆಗುವ ನಿಮ್ಮ ಓಲಗದ ಆಜ್ಞವಣೆಯಂ ಕೊಂಡು ಹೋದದು ಬಂದದು. ಬರಿದೆ ಸಂಪಿಗೆಯ ಪುಷ್ಪಕ್ಕೆರಗಿದ ಭ್ರಮರನಂತೆ ನಿಮ್ಮೊಳಗೆ ಪರವಶನಾಗಿರ್ದೆನಯ್ಯ ಅಖಂಡೇಶ್ವರಾ

(೨೨) ಆಯುತವಾಯಿತ್ತು ಅನುಭಾವ. ಸ್ವಾಯುತವಾಯಿತ್ತು ಶಿವಜ್ಞಾನ. ಸಮಾಧಾನವಾಯಿತ್ತು ಸದಾಚಾರ. ಇಂತೀ ತ್ರಿವಿಧ ಏಕಾರ್ಥವಾಗಿ ಅರಿವಿನ ಹೃದಯ ಕಣ್ದೆರೆದು ಅನಂತ ಲೋಕಾಲೋಕದ ಅಸಂಖ್ಯಾತ ಮಹಾಗಣಂಗಳೆಲ್ಲರು ಲಿಂಗಭಾವದಲ್ಲಿ ಭರಿತರಾಗಿ ಗಗನ ಸಿದ್ಧಾಂತದಲ್ಲಿ ಉಪದೇಶಕ್ಕೆ ಬಂದು ಭಕ್ತಿ ರಾಜ್ಯವನೆ ಹೊಕ್ಕು ನಿಜಲಿಂಗ ಸುಕ್ಷೇತ್ರವನೆ ಕೊಂಡು ಅಮೃತ ಸರೋವರದೊಳಗಣ ವಿವೇಕವೃಕ್ಷ ಪಲ್ಲವಿಸಲು ವಿರಕ್ತಿಯೆಂಬ ಪುಷ್ಪವಿಕಸಿತವಾಗಲು ಪರಮಾನಂದದ ಮಠದೊಳಗೆ ಪರಿಣಾಮ ಪಶ್ಚಿಮ ಜ್ಯೋತಿಯ ಬೆಳಗಿನೊಳಗೆ ಹರುಷದ ಸಿಂಹಾಸನವನಿಕ್ಕಿ ಪ್ರಾಣಲಿಂಗ ಮೂರ್ತಿಗೊಂಡಿರಲು ದಕ್ಷಿಣವ ದಾಂಟಿ ಉತ್ತರಾಬ್ಧಿಯಲ್ಲಿ ನಿಂದು ಅಖಂಡ ಪರಿಪೂರ್ಣ ಪೂಜೆಯ ಮಾಡುವವರಿಗೆ ನಮೋ ನಮೋ ಎಂಬೆ ಗುಹೇಶ್ವರಾ.

( ೨೩ ) ಎನ್ನ ರೇಚಕ ಪೂರಕ ಕುಂಭಕವೆಲ್ಲವು ಶಿವಮಂತ್ರಮಯವಾಗಿ ಸಂಚರಿಸುತಿಪ್ಪವು ನೋಡಾ. ಎನ್ನ ಪೂರಕವೇ ಓಂ ಎಂಬ ಪ್ರಣವಸ್ವರೂಪವಾಗಿಪ್ಪುದು. ಎನ್ನ ರೇಚಕವೇ ' ನಮಃ ಶಿವಾಯ ನಮಃ' ಎನುತಿಪ್ಪುದು ನೋಡಾ. ಎನ್ನ ಕುಂಭಕವೇ ಪರಶಕ್ತಿಮಯವಾಗಿ ೯೦

ಜ್ಯೋತಿ ಸ್ವರೂಪಾಗಿ ಪರಮ ಚಿದ್ಬ್ರಾಂಡ ಸ್ಥಾನವಾಗಿಪ್ಪುದು ನೋಡಾ. ಎನ್ನ ರೇಚಕ ಪೂರಕ ಕುಂಭಕ ಸ್ವರೂಪವಪ್ಪ ಶಿವ ಮಂತ್ರವೇ ಶಿವಲಿಂಗ ಸ್ವರೂಪವಾಗಿ ಎನ್ನ ಕರಸ್ಥಲದಲ್ಲಿ ಕರತಲಾಮಲಕವಾಗಿ ಕಾಣಲ್ಪಟ್ಟಿತಯ್ಯಾ. ಆ ಕರಸ್ಥಲ ಲಿಂಗವ ಕಂಗಳು ತುಂಬನೋಡಿ ಮನಮುಟ್ಟಿ ನೆನೆದು ಸಂದಿಲ್ಲದೆ ಇಷ್ಟಲಿಂಗದಲ್ಲಿ ಭಾವ ಬಲಿದು ಲಿಂಗವನಪ್ಪಿ ಅಗಲದೆ ಲಿಂಗದಲ್ಲಿ ಸದಾ ಸನ್ನಿಹಿತನಾಗಿರ್ದು 'ಶಿವ ಶಿವ' 'ಹರ ಹರ' ಎನುತಿರ್ದೆನಯ್ಯಾ. ನಿಮ್ಮ ನೆನಹಿಂದೆ ನಿಮ್ಮ ನೆನಹುತಿರ್ದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

(೨೪) ತನುವಿನ ಗುಣಂಗಳ ತರಿದೊಟ್ಟಿ ಮನದ ಮಾಯಾ ವಿಕಾರದ ಬಾಯ ಟೊಣೆದು ಕಂಗಳ ಕತ್ತಲೆಯ ಕೆಡಿಸಿ ಎಡ ಬಲಂಗಳ ತಡಕದೆ ನಡುಮಧ್ಯ ಮಾರ್ಗವಿಡಿದು ಸುಷುಮ್ನಗಿರಿಯನಡರಿ ಕಡೆಮೊದಲಿಲ್ಲದ ಬೆಳಗಿನೊಳಡಗಿ ಬೆಳಗುತಿರ್ದೆ ನಾನು ಪರಶಿವಯೋಗಿಯಾದೆನಯ್ಯಾ ಅಖಂಡೇಶ್ವರಾ.

(೨೫) ಅಯ್ಯಾ ನೀಲಮಣಿ ಮಧ್ಯ ಸ್ಥಾನದಲ್ಲಿ ಕಾರಮೇಘದೊಳಗಿನ ಮಿಂಚಿನ ಪ್ರಕಾಶವಾಗಿ ಚಿದಾಕಾಶ ಸ್ವರೂಪದಿಂದ ಪೀತ ವರ್ಣ ಮೊದಲಾಗಿ ಅನಂತ ವರ್ಣ ಸ್ವರೂಪವಾಗಿ ಅತ್ಯಂತವಾದ ಅಣುರೂಪನಾಗಿ ಬದವಣೆಯ ಮುಳ್ಳಿನಹಾಗೆ ಅನಂತಪ್ರಕಾರದಿಂದ ಕಾಣಲ್ಪಡುವದು. ನಿಜಶಿವಯೋಗ ಲಿಂಗಧ್ಯಾನಿಗಳಿಗೆ ಅನಾದಿ ಮೂಲ ಪ್ರಣಮ ಸ್ವರೂಪದಿಂದ ಮುಖ ಕಮಲದ ಮೇಲೆ ಕಾಣಲ್ಪಡುವದು ನೋಡಾ. ಅದೆಂತೆಂದೊಡೆ ಮುಖ ಮಧ್ಯದಲ್ಲಿ ನೇತ್ರ, ನೇತ್ರ ಮಧ್ಯದಲ್ಲಿ ಮಾನಸ್ಸ, ಮನೋಮಧ್ಯದಲ್ಲಿ ತಾನೆ. ತಾನಲ್ಲದೆ ಮತ್ತೊಂದು ಸಾಧಕವಿಲ್ಲದದು ನಿಜತಾರಕ ಬ್ರಹ್ಮ ಶಾಂಭವಮೂರ್ತಿ ನೋಡಾ ಅದಕೆ ಹೆಸರ ನಿರೂಪ ಉಂಟು.

**ಸಾಕ್ಷಿ:**—ರವಿ ಮಧ್ಯಸ್ತಥಾ ಇಷ್ಟಂ ಚಂದ್ರ ಮಧ್ಯಂತು ಪ್ರಾಣಕಂ॥ ಅಗ್ನಿ ಮಧ್ಯಸ್ತಥಾ ಭಾವಂ ಇತ್ಯೇತೆ ಶಂಭು ರೂಪಕಂ॥ ಇಂತು ನಿಜ ತಾರಕ ಬ್ರಹ್ಮ ಶಾಂಭವ ಮೂರ್ತಿಗೆ ಮೂರ್ತಿಗೊಂಡಿರ್ಪುದು ನೋಡಾ

ಮಹೇಶ್ವರ ಲಿಂಗದ ಹೃತ್ಕಮಲ ಮಧ್ಯದಲ್ಲಿ ಸಿದ್ಧರಾಮಯ್ಯ ಎಂದು ಇಂತು ಪ್ರಭುಸ್ವಾಮಿಗಳು ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

(೨೬) ಆರಾಧಾರದ ಸಿಚ್ಚಣಿಕೆಯನೇರಿ ನೋಡಲು ಮಂದರ ಗಿರಿ ಎಂಬ ಮಹಾಪರ್ವತ ಕಾಣಬಹುದು. ಆ ಪರ್ವತದ ತುಟ್ಟ ತುದಿಯನೇರಿ ನೋಡಲು ಮಹಾದಾಕಾಶ ಮಂಟಪ ಉಂಟು. ಆ ಮಂಟಪವ ಹೊಕ್ಕೆಹೆನೆಂದು ವಿಚಾರಿಸಿನೋಡಲು ಅಲ್ಲೊಂದು ಸೂಕ್ಷ್ಮದ್ವಾರ ಉಂಟು. ಆ ಸೂಕ್ಷ್ಮದ್ವಾರ ಕವಾಟವ ತೆಗೆದು ನೋಡಲು ಅಲ್ಲಿ ನಿರುಪಾಧಿಕ ಜ್ಯೋತಿ ಬೆಳಗುತ್ತಿಪ್ಪುದು. ಆ ಬೆಳಗಿನೊಳಗೆ ಅಚಳನಾಗಿ ನಿಂದ ಪರಿಪೂರ್ಣ ಪೂಜೆಯಾಗಿ ತನ್ನನೇ ನಿರಾಳ ಲಿಂಗಕ್ಕೆ ಪೂಜೆಯ ಮಾಡ್ವ ತನೇ ಪರಮ ನಿರ್ವಾಣಿಯಯ್ಯ ನಿಜಗುರು ಸ್ವತಂತ್ರ ಸಿದ ಲಿಂಗೇಶ್ವರಾ.

(೨೭) ಅಯ್ಯಾ ಇನ್ನು ಹಠಯೋಗವ ಮರೆದು ಶಿವಯೋಗದಲ್ಲಿ ನಿಂತ ಭೇದವೆಂತೆಂದೊಡೆ, ಆ ನಿಲುಕಡೆಯ ಶ್ರೀಗುರುಕಟಾಕ್ಷೆಯಿಂದ ನಿರೂಪಿಸಿಹೆವು ಕೇಳಯ್ಯ. ವರಕುಮಾರ ದೇಶಿಕೋತ್ತಮನೆ ವಾಮಭಾಗದ ಚಂದ್ರನಾಳ, ಚಂದ್ರನೇತ್ರ, ವಾಮ ಕರ್ಣದ್ವಾರಂಗಳು ಮೂರು ಈಡಾನಾಡಿ ಎನಿಸುವುದಯ. ದಕ್ಷಿಣಭಾಗದ ಸೂರ್ಯನಾಳ ಸೂರ್ಯನೇತ್ರ ದಕ್ಷಿಣ ಕರ್ಣದ್ವಾರಂಗಳು ಮೂರು ಪಿಂಗಳನಾಡಿ ಎನಿಸುವುದಯ್ಯ. ಅಧೋದ್ವಾರ, ಗುಹ್ಯದ್ವಾರ, ಜಿಹ್ವಾದ್ವಾರ, ಇವು ಮೂರು ಸುಷುಮ್ನನಾಡಿ ಎನಿಸುವುದಯ್ಯ. ಮಣಿಪೂರಕ ನಾಭಿ ವಿಶುದ್ಧಿನಾಭಿ ಬ್ರಹ್ಮನಾಭಿ ಇವು ಮೂರು ಇಪ್ಪತ್ತೆರಡು ಸಾವಿರ ನಾಡಿಗಳಿಗೆ ಮೂಲ ಸೂತ್ರವಾದ ಮಧ್ಯನಾಡಿ ಎನಿಸುವುದಯ್ಯ. ಇಂತೀ ದ್ವಾದಶ ದ್ವಾರಂಗಳಲ್ಲಿ ಚರಿಸುವ ಮನ್ಮಥವಿಕಾರವಂ ಗೂರೂಪಾವಸ್ಥೆಯಿಂದ ಹಿಂದುಮಾಡಿ ತನ್ನ ಸತ್ಯಮೇವುಂಡಾಗಿ ತನ್ನ ನಡೆನುಡಿಗಳ ತನ್ನ ತಾನೇ ವಿಚಾರಿಸಿ ಸದ್ಗುರು ಲಿಂಗ ಜಂಗಮದಿಂದ ಶಿವದೀಕ್ಷೆಪಡೆದು ಲಿಂಗಾಂಗ ಸಂಬಂಧಿಯಾಗಿ ಆ ಲಿಂಗ ಚೈತನ್ಯ ಸ್ವರೂಪವಾದ ಪಾದೋದಕ ಪ್ರಸಾದ ಮಂತ್ರದಿಂದ ಆ ತ್ರಿವಿಧನಾಡಿಗಳು ಮೊದಲಾಗಿ ದ್ವಾದಶನಾಡಿಗಳೇ ಕಡೆ

ಯಾವ ಸಮಸ್ತನಾಡಿಗಳು ಪರಿತ್ರಸ್ವರೂಪವಾಗಿ ಸರ್ವಾವಸ್ಥೆಯಲ್ಲಿ ಚಿದ್ಘ
ನಮಹಾಲಿಂಗವ ಅಷ್ಟವಿಧಾರ್ಚನೆ ಷೋಡಶೋಪಚಾರವನೊಡಗೂಡಿ
ಪರಿಪರಿಯಿಂದರ್ಚಿಸಿ ಆಚಾರಭ್ರಷ್ಟರ ತ್ರಿಕರಣಗಳಿಂವೆ ಸೋಂಕದೆ ಅಂಗ
ಕರಣಗಳೆಲ್ಲ ಲಿಂಗಕರಣಂಗಳಾಗಿ ಸತ್‌ಕ್ರಿಯಾಜ್ಞಾನಾನಂದದೇ ಪ್ರಭಾ
ವಿಸಿ ಶ್ರೀಗುರುಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ
ಮಂತ್ರಸದಾಚಾರ ಸದ್ಭಕ್ತಿ ಸಕ್ಕ್ರಿಯಾ ಸವ್ಯಜ್ಞಾನ ಸನ್ವರ್ತನೆ ಎಂಬ
ಚಿದೈಶ್ವರ್ಯದಲ್ಲಿ ಸಂತೃಪ್ತರಾಗಿ ನಿಂದನಿಲು ಕಡೆಯಲ್ಲಿ ಪೂರ್ಣಸ್ವರೂಪ
ನಿಜ ಶಿವಯೋಗಿಗಳು ನಿಮ್ಮ ಶರಣರು ನೋಡಾ ಸಂಗನಬಸವೇಶ್ವರಾ.

# ಪಂಚ ಧಾರಣೆಗಳು

## ಅಗ್ನಿ ಧಾರಣೆ

ಮೂಲ ಜ್ಯೋತಿಯನೆಬ್ಬಿಸಿ ಸುಷುಮ್ನನಾಳದ ಬಟ್ಟೆಯ ತುದಿಯ
ಡರಿ ಸಹಸ್ರದಳ ಮಂಟಪವ ಹಾಯ್ದು ಆ ಜ್ಯೋತಿಯೊಳು ಪರಿಣಾ
ಮಿಸುತ್ತಿರ್ದನೋಡಾ. ಅಪ್ರಮಾಣ ಕೂಡಲ ಸಂಗಮದೇವಾ.

ಕಾಲಾಗ್ನಿಯನೆಬ್ಬಿಸಿ ಕಮಲನಾಳದ ತುದಿಯನಡರಿ ಕರ್ಮವ
ಸುಡುತ್ತ ಮಹಾ ಜ್ಯೋತಿಯ ಪ್ರಭೆಯಲ್ಲಿ ಬಯಲಾದ ಕಾಣಾ ಅಪ್ರ
ಮಾಣ ಕೂಡಲ ಸಂಗಮದೇವಾ.

ಮಹಾ ವಾಯುವಂ ಪಿಡಿದು ಮೂಲ ಗುಂಡಿಗೆ ಒಳಗಣ ಬಹ
ಳಾಗ್ನಿ ಜ್ವಾಲೆಯನೆಬ್ಬಿಸಿ ಮೇಲಣ ಬಯಲ ಬಾಗಿಲಪ ತೆಗೆದು ಹೊಕ್ಕು
ಮಹಾ ಜ್ಯೋತಿಯಲ್ಲಿ ಬಯಲಾದ ಕಾಣಾ ಅಪ್ರಮಾಣ ಕೂಡಲ
ಸಂಗಮ ದೇವಾ.

ಅರಿವಿನೊಳಗೆ ಅರಿವ ತುಂಬಿದರೆ ಮನೆಯ ಹೊಗುವದಕ್ಕೆ ಮಹ
ಬಲ ನೋಡಾ. ನಾಸಿಕಾಗ್ರದ ಮೇಲೆ ನಯನಾಂಬುಧಿಯ ತುಂಬಿ
ಜ್ವಾಲೆ ಸುಷುಮ್ನ ನಾಳದ ಬಟ್ಟೆಯ ತುದಿಯನಡರಿ ಬ್ರಹ್ಮರಂಧ್ರವ
ಮುಟ್ಟಿಸಿ ಮೂಲಾಧಾರ ಮಂಡಲ ಶ್ವಾಸವ ಹಿಡಿದು ಹೊರಡಲೀ
ಯದೆ ಸಾಧಿಸುವ ಯೋಗಿಗಳಿಗೆ ಮೇಲೆ ಕೊಡನುಕ್ಕಿತು ನೋಡಾ.
ಅಪ್ರಮಾಣ ಕೂಡಲಸಂಗಮದೇವಾ.

ಮೂಲದ್ವಾರವನೊತ್ತಿ ಮೂಲಾಗ್ನಿಯನೆಬ್ಬಿಸಿ ಮೂಲಾಕ್ಷರವ
ಪ್ರಣತೆಯ ಮಾಡಿ ಭಕ್ತಿ ಎಂಬ ಬತ್ತಿಯ ತೀವಿ ಅಮೃತವೆಂಬ ತುಪ್ಪವ
ನೆರೆದು ಪರಮಾನಂದವೆಂಬ ಜ್ಯೋತಿಯ ಮುಟ್ಟಿಸಿ ಆ ಪರಮಾನಂದದ
ಬೆಳಗಿನೊಳು ಓಲಾಡುತಿರ್ದನು ನೋಡಾ ಅಪ್ರಮಾಣ ಕೂಡಲ
ಸಂಗಮ ದೇವಾ.

## ನಾಡಿ ಧಾರಣೆ

ಎಪ್ಪತ್ತೆರಡು ನಾಡಿಗಳೊಳು ಮೂವತ್ತೆರಡು ನಾಡಿಯೇ ಮುಖ್ಯವಾಗಿಹುದು. ಆ ಮೂವತ್ತೆರಡು ನಾಡಿಗಳೊಳು ಚತುರ್ದಶ ನಾಡಿಯೇ ಪ್ರಧಾನ ನಾಡಿಗಳಾಗಿಹುದು. ಆ ಚತುರ್ದಶ ನಾಡಿಗಳೊಳು ಮೂರು ನಾಡಿಯೇ ಮುಖ್ಯವಾಗಿಹುದು. ಆ ಮೂರು ನಾಡಿಗಳೊಳು ಒಂದು ನಾಡಿಯೇ ಮುಖ್ಯವಾಗಿಹುದು. ಆ ಒಂದು ನಾಡಿಯನು ಯೋಗಿಗಳು ಬ್ರಹ್ಮನಾಡಿ ಎಂದು ಹೇಳುವರು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಆ ಒಂದು ನಾಡಿಯು ಮೂಲಾಧಾರ ಮೊದಲಾಗಿ ಬ್ರಹ್ಮರಂಧ್ರ ಕಡೆ ನಿಲವಿನ ಹಾಂಗೆ ಕೆಳಗು ಮೇಲು ಬಂಧಿಸಿಕೊಂಡಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಕಾಲು ಕೈ ನಡುಗಳೆಲ್ಲವನು ತಾವರೆಯ ನೂಲಿನ ಹಾಂಗೆ ಎಂಬತ್ತು ನಾಲ್ಕು ನೂರ ಸಾವಿರ ಸಂದುಗಳ ಬಂಧಿಸಿಕೊಂಡಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಸೂರ್ಯ ಕಿರಣಗಳು ಹಾಂಗೆ ಸರ್ವಾಂಗವೆಲ್ಲವನು ಭೇದಿಸಿಕೊಂಡಿಹುದು. ಆಧಾರಚಕ್ರಂಗಳೊರನು ಹಾಯ್ದು ಬ್ರಹ್ಮ ರಂಧ್ರನ ಮುಟ್ಟಿ ನಾದ ಬಿಂದುಗಳಿಗೆ ಆಶ್ರಯವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಅಗ್ನಿ ಮಂಡಲ ಆದಿತ್ಯ ಮಂಡಲ ಚಂದ್ರ ಮಂಡಲವೆಂಬ ಮಂಡಲ ತ್ರಯಂಗಳ ಹೋದಿ ಬ್ರಹ್ಮ ಚಕ್ರ ಶಿಖಾಚಕ್ರವ ಹಾಯ್ದು ಆ ಪಶ್ಚಿಮ ಚಕ್ರವ ಮುಟ್ಟಿ ಏಕ ನಾಡಿಯಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ನಾಡಿಗಳ ಬೆರಸಿ ಹೋಗಿ ಹೊಕ್ಕು ಮಹಾ ಜ್ಯೋತಿ ಪ್ರಕಾಶವ ಕಾಬುದೇ ಅರಿವು ಕಾಣಾ ಅಪ್ರಮಾಣ ಕೂಡಲ ಸಂಗಮ ದೇವಾ.

ಇವರ ಅಧಿದೈವ ಪಿನಾಕೀಶ ಖಡ್ಗೀಶ, ಶ್ವೇತ, ಭೃಂಗೀಶರೆಂಬ ನಾಲ್ವರು ರುದ್ರರು. ಈ ರುದ್ರರು ಶಕ್ತಿಯರಾದ ವಾರುಣಿ ವಾಯು ವಿರಕ್ತಾವಧಾರಿಣಿ ಸಹಜೆ ಎಂಬವರು ನಾಲ್ವರು ಶಕ್ತಿಯರು ಸಮೇತವಾಗಿ ಆ ನಾಲ್ಕು ದಳಾಕ್ಷರಂಗಳೊಳಗಿರುತಿಹರು.

ಮೇಲೆ ಸ್ವಾಧಿಷ್ಠಾನ ಚಕ್ರದಲ್ಲಿರುವ ನೀಲ ವರ್ಣಕಮಲದ ಆರು ದಳಂಗಳೊಳಗಿರುವ ಬ. ಭ. ಮ. ಯ. ರ. ಲ. ಎಂಬುವ ಆರು ಪ್ರಣ ವಂಗಳಿಗೆ ಅಧಿದೈವ ಶಿಖಿ ಸಕಲಾಂಡ ದ್ವಿಲಾಂಡ ಮಹಕಾಲ ವಾಲ ಭುಜಗೇಶರೆಂಬ ಷಡುರುದ್ರರು. ವಾಙ್ಮಯ, ಜೀಯೆ ಸುಮುಖಿ ಈಶ್ವರೀ ರೇವತಿ ಮಾಧವಿಯರೆಂಬ ಷಡುಶಕ್ತಿಯರು ಸಮೇತವಾಗಿ ಆರು ದಳಾ ಕ್ಷರಂಗಳಲ್ಲಿ ಇರುತಿಹರು.

ಆಮೇಲೆ ಮಣಿಪೂರಕ ಚಕ್ರದಲ್ಲಿರುವ ಕುಂಕುಮ ವರ್ಣದ ಕಮ ಲದ ದಶದಳಂಗಳಲ್ಲಿರುವ ಡ ಢ ಣ ತ ಥ ದ ಧ ನ ಪ ಫ ಎಂಬ ದಶಾ ಕ್ಷರಂಗಳು ಇವರ ಅಧಿದೈವ ದಾರುಕ, ಅರ್ಧನಾರೀಶ್ವರ, ಉಮಾಕಾಂತ, ಆಷಾಡಿ, ದಂಡಿ, ಅತ್ರಿ, ಮೀನ ಮೇಷ ಲೋಹಿತ ಶಿಖಿಯೆಂಬ ಹತ್ತು ರುದ್ರರು. ವಿರಜೆ ಕಲೋದರಿ ಕೂತನಿ ಭದ್ರಕಾಳಿ ಯೋಗಿನಿ ಶಂಕಿನಿ ಘರ್ಜನಿ ಕಾಳರಾತ್ರಿ ಕುರ್ದನಿ ಕಪರ್ದಿನಿಯರೆಂಬ ದಶಶಕ್ತಿಯರು ಸಮೇ ತವಾಗಿ ಆ ದಶಾಕ್ಷರಂಗಳಲ್ಲಿರುತ್ತಿಹರು.

ಅದರ ಮೇಲೆ ಇರುವ ಅನಾಹತ ಚಕ್ರದಲ್ಲಿ ಇರುವ ಹರಿತ ವರ್ಣ ಕಮಲದ ಹನ್ನೆರಡು ದಳಂಗಳೊಳಗಿರುವ ಕ ಖ ಗ ಘ ಙ ಚ ಛ ಜ ಝ ಞ ಟ ಠ ಎಂಬ ದ್ವಾದಶ ಪ್ರಣವಂಗಳು ಇವರ ಅಧಿದೈವ ಕ್ರೋಧೀಶ, ಚಂಡೇಶ, ಪಂಚಾಂತಕ, ಶಿವೋತ್ತಮ ಏಕ ರುದ್ರ, ಕೂರ್ಮ, ಏಕ ನೇತ್ರ, ಚತುರಾನನ, ಅಗಜೇಶ, ಸರ್ವೇಶ, ಸೋಮೇಶ, ಲಾಂಗುಲಿ ಎಂಬ ದ್ವಾದಶ ರುದ್ರರು. ಮಹಾಕಾಳಿ ಸರಸ್ವತಿ ಗೌರಿ ಮಂತ್ರಶಕ್ತಿ ಆತ್ಮಶಕ್ತಿ ಭೂತಮಾತೆ ಲಂಬೋದರಿ ದ್ರಾವಿಣಿ ನಗರಿ ಖೇಚರಿ ಮಂಜರಿ ರೂಪಿಣಿಯರೆಂಬ ಹನ್ನೆರಡು ಶಕ್ತಿಯರು ಸಮೇತವಾಗಿ ಆ ದ್ವಾದಶ ದಳಾ ಕ್ಷರಂಗಳಲ್ಲಿಹರು.

ಮತ್ತದರಿಂ ಮೇಲೆ ವಿಶುದ್ಧಿ ಚಕ್ರದಲ್ಲಿರುವ ಸ್ಫಟಿಕ ವರ್ಣದ ಕಮಲದ ಹದಿನಾರು ದಳಂಗಳಲ್ಲಿ ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ಷೋಡಶಾಕ್ಷರಂಗಳು, ಇವರ ಅಧಿದೈವ ಶ್ರೀಕಂಠ ಅನಂತ ಸೂಕ್ಷ್ಮ ತ್ರಿಮೂರ್ತಿ ಅಮರೇಶ ಅರ್ಘೀಶ ಭಾರಭೂತಿ ಅದಿಲೇಶ ಸ್ಥಾಣುಕ ಹರ ಝುಂಟೀಶ ಜಾತುಕ ಸದ್ಯೋಜಾತ ಅನುಗ್ರಹೇಶ್ವರ ಅಕ್ರೂರ ಮಹಾಸೇನರೆಂಬ ಹದಿನಾರು ರುದ್ರರು ಪೂರ್ಣೋದರಿ ವಿರಜೆ ಶಾಲ್ಮಲಿ ಲೋಲಾಕ್ಷಿ ವರ್ತುಲಾಕ್ಷಿ ದೀರ್ಘಘ್ರಾಣೆ ದೀರ್ಘ ಮುಖಿ ಗೋಮುಖಿ ದೀರ್ಘ ಜಿಹ್ವೆ ಕುಂಭೋದರಿ ಊರ್ಧ್ವಕೇಶಿ ವಿಕೃತಮುಖಿ ಜ್ವಾಲಾಮುಖಿ ಉಲ್ಕಾಮುಖಿ ಶ್ರೀಮುಖಿ ವಿದ್ಯಾಮುಖಿಯರೆಂಬ ಷೋಡಶ ಶಕ್ತಿಯರು ಸಮೇತವಾಗಿ ಆ ಷೋಡಶಾಕ್ಷರಂಗಳೊಳಗಿಹರು.

ಆಮೇಲೆ ಆಜ್ಞಾ ಚಕ್ರದಲ್ಲಿರುವ ಮಾಣಿಕ್ಯ ವರ್ಣದ ಕಮಲದ ದ್ವಿದಳದಲ್ಲಿರುವ ಹಂ ಕ್ಷಂ ಎಂಬೆರಡು ಪ್ರಣಮಂಗಳು. ಇವರ ಅಧಿದೈವ ಶಿವ ಸಂವರ್ತಕವೆಂಬೀರ್ವರು ರುದ್ರರು ವ್ಯಾಸಿನಿ, ಮಾಯಾವ್ವಿತೆಯ್ಯ ರೆಂಬ ದ್ವಿಶಕ್ತಿಯರು ಸಮೇತವಾಗಿ ದ್ವಿದಳಾಕ್ಷರಂಗಳಲ್ಲಿಹರು.

ಮತ್ತಂ ಬ್ರಹ್ಮರಂಧ್ರ ಚಕ್ರದಲ್ಲಿಯು ಮರೀಚಿಕ ವರ್ಣದ ಕಮಲದ ಸಾವಿರದ ಸೂರೈದು ದಳಂಗಳಲ್ಲಿರುವ ಳಕಾರ ಶೂನ್ಯ ಕಕಾರಾದಿ ಕ್ಷಕಾರಾಂತ್ಯಮಾದ ೩೪ ವ್ಯಂಜನಾಕ್ಷರಂಗಳು ಅಕಾರಾದಿ ಅಃಕಾರಾಂತ್ಯಮಾದ ೧೬ ಸ್ವರಾಕ್ಷರಂಗಳು ಹದಿನಾರು ಉಭಯಂ ಗೂಡಿ ಐವತ್ತಕ್ಷರಂಗಳು ಆ ಸಾವಿರದ ನೂರು ದಳಂಗಳಲ್ಲಿ ಲೋಮ ವಿಲೋಮದಿಂದಿರುತಿಹವು.

ಐದು ದಳಂಗಳಲ್ಲಿ ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಎಂಬೈದು ಅಕ್ಷರಂಗಳಿಹವು. ಅದರ ಮಧ್ಯದಲ್ಲಿರುವ ನಿಃಕಲ ಲಿಂಗದ ಮೂರು ದಿಕ್ಕಿನಲ್ಲಿ ಮೂರು ಮಂಡಲಾಕಾರ ಆ ಮೂರು ಮಂಡಲಂಗಳೊಳಗೆ ಅಕಾರ ಉಕಾರ ಮಕಾರಗಳಿರುತಿಹವು.

ಶಿಖಾಚಕ್ರದಲ್ಲಿರುವ ಪಚ್ಚ ವರ್ಣದ ಕಮಲದ ಮೂರು ದಳಂಗಳಲ್ಲಿ ಅ ಉ ಮ ಎಂಬುವ ಮೂರು ಪ್ರಣಮಂಗಳಿರುತಿಹವು.

ಪಶ್ಚಿಮ ಚಕ್ರನಲ್ಲಿಯ ವಜ್ರ ವರ್ಣದ ಏಕ ದಳದಲ್ಲಿ ಅನುಸ್ವರವಾದಂಥ ದರ್ಪಣಾಕಾರದ ಬಿಂದು ಪ್ರಣಮ ಒಂದು ಇರುತ್ತಿಹುದು.

ಈ ನವಚಕ್ರಂಗಳ ನವ ವರ್ಣದ ನವ ಕಮಲಂಗಳ ಸಾವಿರದ ನೂರ್ತೈವತ್ತೊಂಭತ್ತು ದಳಂಗಳಲ್ಲಿ ಸಾವಿರದ ನೂರ್ತೈವತ್ತೊಂಭತ್ತು ಪ್ರಣಮಂಗಳಿರುತಿಹವು. ಎಂಬುವದೀಗ ನವವಿಧದಿ ಬಳಸಿರ್ಕೊಂಡಿರ್ಪ ಮಂತ್ರಾಕ್ಷರದ ಅನಯವಾಗಿರುತಿರ್ಪ ಅಧಿದೈವ ಶಕ್ತಿಯರು ಎಂಬ ಶಬ್ದಕ್ಕರ್ಥ.

ಇಂತಿವುಗಳ ಸುವಿವೇಕವರಿದು ಇಂತಪ್ಪ ಲೇಸಾದ ಲಿಂಗಾನುಭಾವವನರಿದು ನವಲಿಂಗಾರ್ಚನೆಯ ಮಾಳ್ಪವನೇ ಈ ನವವಿಧ ಲಿಂಗಗಳನು ಹಿಂದೆ ಹೇಳಲ್ಪಟ್ಟ ಕ್ರಮಗಳಿಂದಂತರಂಗದಲ್ಲಿಯು ಮಾನಸದಿಂದರ್ಚಿಸುವಂಥ ಶರಣನೇ ಮಂತ್ರಾತ್ಮನಹನು. ಷಡಕ್ಷರ ಮಂತ್ರ ಸ್ವರೂಪನೇ ತಾನಾಗುವನೆಂಬರ್ಥ ||೧೯||

---

**ಪದ:**—ಲಿಂಗಶ್ರೋತ್ರದೊಳಿರ್ದು ಕೇಳಿಕೆಯ ಶಬ್ದಗಳ | ನಂಗೈಸುವೇಂ ಶೇಷಲಿಂಗ ಪ್ರಸಾದಮಂ | ಲಿಂಗ ಸರ್ವಾಂಗದೊಳು ಬಂದು ಸೋಂಕುತ್ತಿರಲು ಮಂಗಳ ಪ್ರಸಾದವೆನಗೆ || ಲಿಂಗ ನೇತ್ರದಿ ಪೊಕ್ಕು ನೋಡುತಿರೆ ರೂಪುಗಳ | ಸಾಂಗವಾಗಿಯೆ ಯನಗೆ ಶುದ್ಧ ಪ್ರಸಾದವದು| ಲಿಂಗ ಜಿಹ್ವೆಯೊಳು ರುಚಿಸುತ್ತಿರಲುವದು ತಾನೆ ಹಿಂಗದಿಹ ಸಿದ್ಧಶೇಷಾ

**ಟೀಕು:**— ಲಿಂಗ ಓಂಕಾರ ಮಂತ್ರ ಮೂರ್ತಿಯಾದ ಮಹಾಲಿಂಗವೇ ಶ್ರೋತ್ರದೊಳಿದ್ದು ಕರ್ಣಯುಗಳದಲ್ಲಿ ಯಕಾರ ಮಂತ್ರ

ಮೂರ್ತಿಯಾಗಿ ಪ್ರಸಾದಲಿಂಗವೆಂಬ ನಾಮದಿಂದಿರುತಿರ್ದು ಕೇಳಿಕೆಯು ಶಬ್ದಗಳ ಕುಶಬ್ದ ಸುಶಬ್ದವೆಂಬೆರಡು ಶಬ್ದಂಗಳ ಕೇಳಿಕೆಯ ಸಂಗ್ಯೆಸುವೇಂ ಶೇಷಲಿಂಗ ಪ್ರಸಾದಮುಂ ಆ ಪ್ರಸಾದಲಿಂಗಕ್ಕೆ ಕರ್ಣದ್ವಾರವೆಂಬ ಈಶಾನ್ಯ ಮುಖವಲ್ಲಿ ಶಬ್ದ ಪ್ರಸಾದವನರ್ಪಿಸಿ ಅರ್ಪಿತವಾದ ಲಿಂಗಪ್ರಸಾದವನು ಆ ಶರಣನು ಸ್ವೀಕರಿಸುತಿಹನೆಂಬರ್ಥ. ಲಿಂಗ ಮತ್ತಾ ಮಹಾಲಿಂಗವೇ ಸರ್ವಾಂಗದೊಳು ನಿಂದು ಪಾದಾದಿ ಮಸ್ತಕಾಂತ್ಯವಾದ ಸರ್ವಾಂಗದ ತ್ವಕ್ಕಿನಲ್ಲಿ ಇರ್ದು ಸೋಂಕುತ್ತಿರಲು ತ್ವಗೀಂದ್ರಿಯವೆಂಬ ತತ್ಪುರುಷ ಮುಖದಲ್ಲಿ ವಕಾರ ಮಂತ್ರ ಮೂರ್ತಿ ಜಂಗಮಲಿಂಗವೆಂಬ ನಾಮದಿ.. ಮೃದು ಕಠಿಣ ಶೀತೋಷ್ಣವೆಂಬ ನಾಲ್ಕು ತೆರದ ಸ್ಪರ್ಶಸಂಗ್ಯೆಯುಕ್ತಿ ರಲು ಮಂಗಳ ಪ್ರಸಾದವೆನಗೆ ಇಹದ ಜನನ ಮರಣಂಗಳೆಂಬ ಅಬು ಭಮಂ ಕಳೆದು ಸುಲಭ ಶೋಭನವೆಂಬ ಪರಮ ಪದವಿಯು ಕೊಡು ವಂಥ ಆ ಜಂಗಮ ಲಿಂಗ ಸ್ಪರ್ಶನ ಪ್ರಸಾದವು ಪ್ರಾಣಲಿಂಗಿಯಾದವನಗೆ ಸಾಧ್ಯವಾಯಿತ್ತು. ಲಿಂಗ ಆ ಮಹಾಲಿಂಗವೇ ನೇತ್ರದಿ ಪೊಕ್ಕು ನಯ ನೇಂದ್ರಿಯವೆಂಬ ಅಘೋರ ಮುಖದಲ್ಲಿ ಶಿಕಾರ ಮಂತ್ರ ಮೂರ್ತಿ ಶಿವ ಲಿಂಗವೆಂಬ ನಾಮದಿಂದಾಹ್ವಾನಿಸಿಕೊಂಡು ನೋಡುತಿರೆ ರೂಪುಗಳ ಸಮಸ್ತ ದೃಗ್ಗೋಚರ ಪದಾರ್ಥವನು ನಿರೀಕ್ಷಣೆಯು ಮಾಡುತ್ತಿರಲು ಸಾಂಗವಾಗಿಯೇ ಎನಗೆ ಪಾತ್ರವಾಗಿಯೆ ಪ್ರಸಾದಿಯಾದ ನನಗೆ ಶುದ್ಧ ಪ್ರಸಾದವನು ಆ ಶಿವಲಿಂಗದ ನಾನಾ ರೂಪು ಪ್ರಸಾದವು ಶುದ್ಧಪ್ರಸಾ ದವಾಗಿ ಅಂಗಗೊಂಡಿತ್ತು. ಲಿಂಗ ಆ ಮಹಾಲಿಂಗವೇ ಜಿಹ್ವೆಯೊಳು ವಾಮದೇವ ಮುಖವೆಂಬ ರಸನೆಯಲ್ಲಿ ಮಕಾರ ಮಂತ್ರಮೂರ್ತಿ ಗುರು ಲಿಂಗವೆಂಬ ನಾಮದಿಂದ ರುಚಿಸುತ್ತಿರಲು ಷಡುರಸಂಗಳನು ಸ್ವೀಕರಿಸು ತ್ತಿರಲು ಅದು ತಾನೇ ಆ ರಸ ಪದಾರ್ಥವು ತಾನೇ ಹಿಂಗದಿಹ ಸಿದ್ಧಶೇಷ ಆವಾಗಲು ಬಿಡುಗಡೆ ಇಲ್ಲದಿರುವ ಮಹೇಶ್ವರಂಗೆ ಸಿದ್ಧ ಪ್ರಸಾದವೆನಿ ತ್ತಿಹುದು.

ಇದಕ್ಕೆ ಸಾಕ್ಷಿ ಶ್ಲೋಃ - ಲಿಂಗ ಹಸ್ತೋಪಿ ಸ್ಪರ್ಶಂಚ । ಲಿಂಗ ದೃಷ್ಟಿ ನಿರೀಕ್ಷಣಂ ॥ ಲಿಂಗ ಜಿಹ್ವಾ ರಸಸ್ವಾದ । ಮಾಘ್ರಾಣಂ ಲಿಂಗನಾಸಿಕ ॥ ಶ್ರವಣಂ ಲಿಂಗ ಕರ್ಣಶ್ಚ ಲಿಂಗೇನ ಸಹವರ್ತಿನಾಂ ॥ ೧ ॥

ತಾತ್ಪರ್ಯ :— ಲಿಂಗದ ನಯನದಿಂದ ನೋಡುತ್ತಿಹನು. ಲಿಂಗದ ಹಸ್ತದಿಂದ ಮುಟ್ಟುತ್ತಿಹನು. ಲಿಂಗದ ಕರ್ಣದಿಂದ ಕೇಳುತ್ತಿಹನು. ಲಿಂಗದ ಜಿಹ್ವೆಯಿಂದ ರುಚಿಸುತ್ತಿಹನು. ಲಿಂಗ ಚೇಷ್ಟಿಸುತ್ತಿರಲು ಚೇಷ್ಟಿಸುತ್ತಿಹನು ಎನಗೆ ಸ್ವತಂತ್ರವಾಗಿ ಎಲ್ಲವು ಲಿಂಗ ಸ್ವಾತಂತ್ರ್ಯವೆಂದರ್ಥ ॥ ೨೦ ॥

---

ಪದಃ— ಲಿಂಗ ಘ್ರಾಣದೊಳು ಗವ ಗವಿಸಿ ಗಂಧಂಗಳಿಂಗಿತವ ನರಿದು ವಾಸಿಸೆ । ಲಿಂಗೋಚ್ಛಿಷ್ಟಮಂ ಲಿಂಗವದನದಿ ಕೊಂಬ ಲಿಂಗ ನುಡಿಯಲು ನುಡಿವೆ ಲಿಂಗ ಮನದೊಳು ಗೌಪ್ಯದಿಂ ॥ ಹಿಂಗದಿರುತಿರಲು ಲಿಂಗವೆಯವಾಗಿ । ಯಾಮನವು ಅಂಗ ಲಿಂಗವು ಮನವು ಎಂಬ ಭೇದವ ನಳಿದು । ಅಂಗವೆಲ್ಲವು ಲಿಂಗಮಯವಾಗಿ ಮನವೆಲ್ಲ ಲಿಂಗ ಪ್ರಸಿದ್ಧ ವಾಯ್ತು ॥

ಟೀಕೆಃ ಲಿಂಗ ಆ ಮಹಾಲಿಂಗವೇ ಘ್ರಾಣದೊಳು ಗವಗವಿಸಿ ಸದ್ಯೋಜಾತ ಮುಖವೆಂಬ ಘ್ರಾಣೇಂದ್ರಿಯದಲ್ಲಿ ನಕಾರ ಮಂತ್ರ ಮೂರ್ತಿ ಆಚಾರಲಿಂಗವೆಂಬ ನಾಮದಿಂದ ತುಂಬಿಕೊಂಡು ಗಂಧಗಳ ಸುಗಂಧ ದುರ್ಗಂಧವೆಂಬ ಗಂಧ ಭೇದಗಳ ಇಂಗಿತವನರಿದು ಕರಣಂಗಳು ಗಡಿಸುವ ಗಂಧವೇ ಅನರ್ಪಿತವು. ಮನಕ್ಕೆ ಇಂಪಾದ ಸುಗಂಧವೇ ಲಿಂಗಾರ್ಪಿತಕ್ಕೆ ಸಲುವುದೆಂದರಿದು ಘ್ರಾಣಿಸಲು ಅದು ಲಿಂಗಾರ್ಪಿತವೆನಿಸುವದು. ಅಂತಪ್ಪ ಗಂಧ ಪದಾರ್ಥವನು ವಾಸಿಸೆ ಆ ಲಿಂಗ ಘ್ರಾಣಿಸಿದಾಚಾರ ಲಿಂಗದ ಗಂಧ ಪ್ರಸಾದವನ್ನು ಲಿಂಗವದನದಿ ಕೊಂಬ ಆ ಆಚಾರ ಲಿಂಗ ಮುಖವೆನಿಸುವ ಘ್ರಾಣೇಂದ್ರಿಯದಿಂದೆ ಆ ಭಕ್ತ ಸುಗಂಧ ಪ್ರಸಾದವನು ಭೋಗಿಸುತ್ತಿಹನು ಲಿಂಗ ಆ ಮಹಾ ಲಿಂಗವೆ ನುಡಿಯಲು ನುಡಿಯೆ ದೇವಾಲಯದ ಗರ್ಭಗುಡಿಯೊಳಗೆ ಮಾತನಾಡಿದರೆ ಆ ದೇವಾಲಯ ಮಾತನಾಡಿದ ಹಾಗೆ ದೇಹ ಮಧ್ಯದಲ್ಲಿ ಲಿಂಗವಿರ್ದು ಆ ಲಿಂಗವು ನುಡಿದಂತೆ ಆನು ನುಡಿವೆನು. ಲಿಂಗ ಆ ಮಹಾಲಿಂಗವೇ ಮನ

ದೊಳು ಗೌಪ್ಯದಿಂ ಸರ್ವ ವ್ಯಾಪಾರಂಗಳನು ಅಂತರಂಗದಲ್ಲಿ ನೆನೆವ ಮನದೊಳಗೆ ಲಿಂಗವು ಅಡಗಿಕೊಂಡಿರ್ದು ಹಿಂಗದಿರುತಿರಲು ಆ ಮನ ದೊಳಗೆ ಲಿಂಗವು ನಿಮಿಷಾರ್ಧವಗಲದಿರುತಿರಲಾಗಿ ಲಿಂಗವೆಯಾಗಿಯಾ ಮನವು ಇಂತು ಲಿಂಗವನೊಳಕೊಂಡು ನೆನೆವ ಮನವು ತಾನೇ ಪರ ಬ್ರಹ್ಮ ಸ್ವರೂಪವಾಗಿ ಅಂಗ ದೇಹವು ಲಿಂಗ ಬ್ರಹ್ಮವು ಮನವು ಮನ ವೆಂಬ ಭೇದವನಳಿದು ದೇಹ ಬೇರೆ ಲಿಂಗ ಬೇರೆ ಮನ ಬೇರೆ ಎಂಬ ಭೇದವನಳಿದು ಅಂಗವೆಲ್ಲವು ಲಿಂಗಮಯವಾಗಿ ಆ ಶರಣನ ದೇಹವೆಲ್ಲವು ಇಷ್ಟಲಿಂಗವಾಗಿ ಮನವೆಲ್ಲ ಮನಸ್ಸೆಂಬುದೆಲ್ಲ ಲಿಂಗ ಪ್ರಸಿದ್ಧವಾಯಿತ್ತು. ಆ ಮಹಾ ಬ್ರಹ್ಮದ ಪ್ರಸಿದ್ಧ ಪ್ರಸಾದವಾಯಿತ್ತು ಎಂಬರ್ಥ

**ಸಾಕ್ಷಿ:**— ಶ್ಲೋ ॥ ರೂಪಂ ಶುದ್ಧ ಸಮಾಖ್ಯಾತಂ । ರುಚೀನಾಂ ಸಿದ್ಧ ಸಂಜ್ಞಕಂ । ತನುಮೀಶಾರ್ಪಣಃ ಶಂಭುಃ । ಪ್ರಸೀದಂತು ಪ್ರಸಾ ದಕಂ ॥

**ತಾತ್ಪರ್ಯ:**— ನಯನದಿಂದ ನೋಡಿದ ರೂಪು ಪದಾರ್ಥ ವೆಲ್ಲವು ಶಿವಲಿಂಗದ ಶುದ್ಧ ಪ್ರಸಾದವು. ಜಿಹ್ವೆಯಿಂದ ರುಚಿಸುವ ರಸಪ ದಾರ್ಥವೆಲ್ಲವು ಗುರುಲಿಂಗದ ಪ್ರಸಾದವು. ತನ್ನ ಮನಸ್ಸಿಗೆ ಸಾಕಾದ ತೃಪ್ತಿಯೇ ಮಹಲಿಂಗದ ಪ್ರಸಿದ್ಧ ಪ್ರಸಾದವೆಂದರ್ಥ

**ಶ್ಲೋ:**— ಲಿಂಗ ಘ್ರಾಣಂತು ಘ್ರಾಣಸ್ಯ । ಲಿಂಗಸ್ಯ ವದನೇ ಸಹ ॥ ಲಿಂಗ ಮನೋಗತೋ ವಾಪಿ । ಇತ್ಯೈತೆ ಸಹ ಭೋಜನಂ

**ತಾತ್ಪರ್ಯ:**— ಲಿಂಗ ನಾಸಿಕದಿಂದಲೇ ವಾಸಿಸುತ್ತಿಹೆನು. ಲಿಂಗ ನುಡಿವಡೆ ನುಡಿಯುತ್ತಿಹೆನು. ಲಿಂಗವು ಗ್ರಹಿಸಿದೊಡೆ ಗ್ರಹಿಸುತ್ತಿಹೆನು ಇದೀಗ ಆ ಲಿಂಗಕ್ಕೂ ಶರಣಂಗೂ ಒಂದೇ ಅರ್ಪಿತವೆಂದು ತಾತ್ಪರ್ಯ ॥ ೨೭ ॥

ಪದಃ— ಲಕ್ಷವಿಟ್ಟೀಕ್ಷಿಸುತ ಅಕ್ಷರೈವತ್ತಾರು । ಆಕ್ಷೇಪಂ ಬಿಡದೆ ನಿಟಿಲಾಕ್ಷಗಳೆಂದರಿದು । ಕುಕ್ಷಿಯೊಳಗಿರುವ ಷಡುಚಕ್ರ ಕರ್ಣಿಕೆಯ ದಳದ । ನಿಕ್ಷೇಪವಿದೆಂದರಿವುದೂ ॥ ಮೋಕ್ಷ ಸಾಧಕ ಪರಬ್ರಹ್ಮ ರಂಧ್ರದೊಳಿರ್ಪ ಅಕ್ಷರವು ಮೂರು ಶತ ಸಹಸ್ರವು ಪರಿಯೊಳ್ । ನಾಲ್ಕು ಅಕ್ಷರವು ಪಶ್ಚಿಮದಿ ಉಭಯವರ್ಣವಿನೊಳೊಂದು ಸಾಕ್ಷಾತ್ಪರ ಬ್ರಹ್ಮವು ॥

ಟೀಕುಃ— ಲಕ್ಷ್ಯವಿಟ್ಟು ಆಧಾರಾದಿ ಅಣುವಾಂತ್ಯವಾದ ದಶ ಚಕ್ರಂಗಳನು ಕುರುಹಿಟ್ಟುಕೊಂಡು ಈಕ್ಷಿಸುತ ಆಯಾಯ ಚಕ್ರಂಗಳಲ್ಲಿರುವ ಕಮಲ ದಳಂಗಳಾ ದಳ ಪ್ರಣವಂಗಳಾ ಕಿಂಜಲ್ಕದ ಗರ್ಭ ಗೃಹಂಗಳಲ್ಲಿರುವ ಬೀಜ ಪ್ರಣವಂಗಳ ಅವುಗಳ ವರ್ಣಗಳ ಆಯಾಯ ಲಿಂಗ ಪ್ರಕಾಶಂಗಳ ಸುಚಿತ್ತಾದಿ ಹಸ್ತಂಗಳಲ್ಲಿ ಷಡಕ್ಷರ ಮಂತ್ರ ಸ್ಮರಣೆಯಿಂದೆ ಆಯಾಯ ಮೂಲ ಮಂತ್ರಂಗಳಿಂ ಆ ಲಿಂಗಗಳರ್ಚನೆಯಂ ಮಾಡಿ ಗಂಧಾದಿ ಷಟ್ಪದಾರ್ಥಂಗಳನು ಷಡ್ವಿಧ ಭಕ್ತಿಯಿಂದರ್ಪಿಸಿ ಅಂತರಂಗದ ಚಿದ್ವ್ಯಕ್ತಿನಿಂದಾಯಾಯ ಲಿಂಗಗಳ ಚಿದ್ ಬೆಳಗನು ನೋಡುತ್ತ ಅಕ್ಷರೈವತ್ತಾರು ಳಕಾರ ಶೂನ್ಯವಾಗಿ ಕಕಾರಾದಿ ಅಃಕಾರಾಂತ್ಯವಾದ ಐವತ್ತಕ್ಷರಂಗಳು ಬೀಜ ಪ್ರಣವುವೆನಿಸುವ ಓಂಕಾರಾದಿ ನಮಃಶಿವಾಯ ಯೆಂಬ ಷಡಕ್ಷರಂಗಳು ಕೂಡಿ ಐವತ್ತಾರು ಪ್ರಣವುಗಳು ಆಕ್ಷೇಪಂ ಬಿಡದೆ ಈ ಐವತ್ತಾರು ಪ್ರಣವಂಗಳೇ ಅಕ್ಷರ ಮಂತ್ರ ಮೂರ್ತಿ ಎಂಬಲ್ಲಿ ಸಂದೇಹಂ ಬಿಡದೆ ನಿಟಿಲಾಕ್ಷಗಳೆಂದರಿದು ಹಣೆಯಲ್ಲಿ ಉರಿಗಣ್ಣುಳ್ಳ ಪರಶಿವ ಲಿಂಗ ಸ್ವರೂಪವಾದ ಅಕ್ಷರ ಮಂತ್ರಗಳೆಂದು ತಿಳಿದು ಕುಕ್ಷಿಯೊಳಗಿರುವ ಅಂತರಂಗದೊಳಗಿರುವ ಷಡುಚಕ್ರ ಆಧಾರಾದಿ ಆಜ್ಞಾಂತ್ಯ ಮಾದ ಷಡುಚಕ್ರ ಕರ್ಣಿಕೆ ದಳದ ಆರು ಚಕ್ರ ದಳದ ಐವತ್ತಕ್ಷರ ಸಹವಾಗಿ ಐವತ್ತಾರು ಪ್ರಣವಂಗಳು ನಿಕ್ಷೇಪವಿದೆಂದರಿವುದು ಆ ಷಡು ಕಮಲಂಗಳ ದಳ ಕರ್ಣಿಕೆಗಳಲ್ಲಿ ಗೌಪ್ಯವಾಗಿರ್ಪವೆಂಬುದನು ಚನ್ನಾಗಿ ತಿಳಿಯತಕ್ಕದ್ದು. ಮೋಕ್ಷ ಸಾಧಕ ಇಹದ ಫಲ. ಪರದ ಭೋಗಾದಿಗಳನ್ನು ನಿರಾಕರಿಸಿ ಮೇಲಾದ ಪರ ಬ್ರಹ್ಮದಲ್ಲಿ ಸಮರಸವಾಗುವಂಥ ಕರಣನು ಪರ ಆರು ಚಕ್ರಂಗಳಿಗೆ ಮೇಲಾದಂಥ ಬ್ರಹ್ಮರಂಧ್ರದೊಳಿರುತಿರ್ಪ ಪರಬ್ರಹ್ಮವೆನಿಸುವ ಉನ್ಮನಿಯ ಸ್ಥಾನದೊಳಗಿರುವಂಥ ಅಕ್ಷರವು ಮೂರೇ ಳ ಸಾವಿರದ ಐನೂರೈದು ದಳಂಗಳುಳ್ಳ ಕಮಲ ಕರ್ಣಿಕೆಯಲ್ಲಿ ಬೀಜಾಯ

ಪ್ರಣವು ಒಂದು ಐದು ದಳಂಗಳಲ್ಲಿ ಐದು ಪ್ರಣವುಂಗಳು ಮಂಡಲ ತ್ರಯಂಗಳಲ್ಲಿ ಮೂರು ಪ್ರಣವುಂಗಳು ಸಹವಾಗಿ ಒಂಬತ್ತು ಪ್ರಣವುಂಗಳು ಶತ ನೂರು ಸಹಸ್ರವು ಹತ್ತುನೂರು ಅಂತು ಸಾವಿರದನೂರು ಪ್ರಣವುಂಗಳು ಪರಿಯೊಳ್ ನಾಲ್ಕು ಆ ಬ್ರಹ್ಮ ಚಕ್ರಕ್ಕೆ ಉಪಸ್ಥಾನವೆನಿಸುವ ಶಿಖಾ ಚಕ್ರದಲ್ಲಿಯು ಕಯುಲದ ತ್ರಿದಳಂಗಳಲ್ಲಿರುವ ಅ ಉ ಮಾಕ್ಷರವೆಂಬಿವು ಮೂರು ಕರ್ಣಿಕೆಯಲ್ಲಿರುವ ಕ್ಷಕಾರ ಪ್ರಣವು ಒಂದುಗೂಡಿ ನಾಲ್ಕು ಪ್ರಣವುಂಗಳು ಅಕ್ಷರವು ಪಶ್ಚಿಮಾದಿ ಮತ್ತೆ ಪಶ್ಚಿಮ ಚಕ್ರದಲ್ಲಿ ಉಭಯು ಅಲ್ಲಿಯು ಏಕದಳದಲ್ಲಿ ಒಂದು ಪ್ರಣವು ಒಂದು ಕರ್ಣಿಕೆಯಲ್ಲಿ ವ್ಯಂಜನ ಹಕಾರ ಪ್ರಣವು ಒಂದು ಸಹವಾಗಿ ಎರಡು ಪ್ರಣವುಂಗಳು ಅಣುವಿನೊಳೊಂದು ಆ ನವ ಚಕ್ರಂಗಳಿಗತೀತವಾದ ಅಣುಚಕ್ರವೆಂಬತಿ ಸೂಕ್ಷ್ಮ ಚಕ್ರದಲ್ಲಿ ಅನಾಚ್ಯಸ್ವರೂಪವಾದ ವ್ಯಂಜನ ರಹಿತ ಹಕಾರ ಪ್ರಣವು ಒಂದು ಸಾಕ್ಷಾತ್ಪರ ಬ್ರಹ್ಮವು ಈ ದಶಚಕ್ರಂಗಳೊಳಗಿರುವ ಕಮಲ ಕರ್ಣಿಕೆಯು ಬೀಜ ಪ್ರಣವುಂಗಳು ೧೦ ಆ ಚಕ್ರಗಳ ದಳ ಪ್ರಣವು ಸಾವಿರದ ನೂರಾ ಅರವತ್ತೆರಡು ಸಹವಾಗಿ ಸಾವಿರದ ನೂರೆಪ್ಪತ್ತೆರಡು ಪ್ರಣವುಂಗಳು ಪ್ರತ್ಯಕ್ಷ ಪರಬ್ರಹ್ಮ ಸ್ವರೂಪವೆಂದು ತಿಳಿದು ಮಾನಸದಲ್ಲಿ ಸ್ಮರಿಸಿ ಪೂಜಿಸಬೇಕೆಂಬುದು ತಾತ್ಪರ್ಯ ॥ ೨೨ ॥

---

**ಪದಃ—** ಬ್ರಹ್ಮ ರಂಧ್ರದಲ್ಲಿ ಬಾಲವನಿಟ್ಟು । ಷಡು ವರ್ಮವನು ತಿಳಿಯದೆ ಯಥೋ ದ್ವಾರನಲಿ ಪರಶಿವ । ನೆವಿಕ್ಕಿಕೊಂಡಿರುವರಿದು । ಲೌಕಿಕಗೆ ಸಹಜ ಧರ್ಮ ಸ್ವರೂಪರೆನಿಪಾ ॥ ನಿರ್ಮಲ ಚಿದಾತ್ಮ ಶಿವ ಶರಣನೂರ್ಧ್ವಕೆ ಶಿರವ । ಸುಮ್ಮಾನದಿಂದೆತ್ತಿ ಷಡು ಬ್ರಹ್ಮವೆಜಿಸುತ್ತ । ಬ್ರಹ್ಮ ರಂಧ್ರದಲ್ಲಿ ಮೊಗವಿಟ್ಟು । ಕುಂಡಲಿ ಉಪರಿಲಿಂಗಗಳನರಿವುತಿಹುದು ॥

**ಟೀಕುಃ—** ಬ್ರಹ್ಮರಂಧ್ರದಲ್ಲಿ ನೆತ್ತಿ ಸ್ಥಾನದಲ್ಲಿರುವ ಅಜರಂಧ್ರ ದ್ವಾರದಲ್ಲಿ ಬಾಲವನಿಟ್ಟು ಜೀವನೆಂಬ ಕುಂಡಲಿಯು ಸರ್ಪನು ಆ ರಂಧ್ರ

# ಚಂದಾದಾರರಿಗೆ ಸೂಚನೆ

[illegible]ವರೆಗೆ ಚಂದಾ ಅವಧಿಯು ಮುಗಿದ ಬಳಿಕ ಮುಂದಿನ ಸಂಚಿಕೆ [illegible] ಚಂದಾದಾರರಿಗೆ ವ್ಹಿ, ಪಿ. ಮಾಡುವ ಪದ್ಧತಿಯು ಇದ್ದಿತು. ಆದರೆ [illegible] ಆಫೀಸಿನ ಹೊಸ ನಿಯಮದ ಪ್ರಕಾರ ಇನ್ನು ಮೇಲೆ ಈ ಪದ್ಧತಿಯು [illegible]ಡುವದು. ಚಂದಾ ಅವಧಿಯು ಯಾವ ಸಂಚಿಕೆಗೆ ಮುಗಿಯುವದೆಂ[illegible] ನಾವು ಮೊದಲು ತಿಳಿಸುವೆವು. ತಿಳಿಸಿದ ಕೂಡಲೆ ಚಂದಾದಾ[illegible] ತಾವಾಗಿಯೇ ಚಂದಾಹಣವನ್ನು ಮನಿಆರ್ಡರ ಮಾಡಿ ನಮ್ಮ ಕಡೆಗೆ [illegible]ಬೇಕು. ಇಲ್ಲದಿದ್ದರೆ ವ್ಹಿ. ಪಿ. ಮೂಲಕ ಕಳಿಸಲು ಸೂಚನಾ ಪತ್ರ [illegible] ನಮಗೆ ಅವರು ಬರೆಯಬೇಕು. ಇಂಥ ಪತ್ರವನ್ನು ಪೋಸ್ಟಿನ ಆಧಿ[illegible] ನೋಡಿಕೊಂಡು ಆ ಮೇಲೆ ವ್ಹಿ. ಪಿ. ಸ್ವೀಕರಿಸುವರು. ಆದ್ದ[illegible] ಚಂದಾದಾರರು ಚಂದಾ ಅವಧಿಯು ಮುಗಿಯುವದರೊಳಗಾಗಿ ತಾವಾ[illegible] ಚಂದಾ ಹಣವನ್ನು ಮನಿಆರ್ಡರ ಮಾಡಿದಲ್ಲಿ ಎಲ್ಲರಿಗೂ ಅನುಕೂಲ[illegible]. ಇದರಿಂದ ಚಂದಾದಾರರಿಗೆ ವ್ಹಿ. ಪಿ. ಖರ್ಚು ಉಳಿಯುವದು.

ತಮ್ಮ ವಿಧೇಯ

**ಮ್ಯಾನೇಜರ ಶಿವಾನುಭವ**

# ವಚನಶಾಸ್ತ್ರಸಾರ ಗ್ರಂಥಗಳು.

(ರಾ। ಸಾ। **ಪಿ. ಜಿ. ಹಳಕಟ್ಟಿ** ಇವರಿಂದ ವಿರಚಿತವಾದವುಗಳು.)

(೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ — ೨—೮—೦

(೨) ,, ,, ಉತ್ತರಾರ್ಧ — ೧—೧೨—೦

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

(೩) ವಚನಶಾಸ್ತ್ರಸಾರ ಭಾಗ ೨ — ೪—೮—೦

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

(೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ — ೨—೪—೦

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಅಷ್ಟಾವರಣಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರುಲಿಂಗ, ಜಂಗಮ, ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯು ೧೧ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ಕೊಂಡಲ್ಲಿ ಅವುಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ರೂಪಾಯಿಗಳಿಗೆ ದೊರೆಯುವವು. ಟಪಾಲಖರ್ಚು ಪ್ರತ್ಯೇಕ.

ದೊರೆಯುವ ಸ್ಥಳ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

ವಿಜಾಪುರ

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲಿ ಬುರುಜ ಓಣಿಯಲ್ಲಿರುವ ತಮ್ಮ ೧೬೨೦(ಅ) ಮನೆಯಲ್ಲಿ ಪ್ರಸಿದ್ಧಿಸಿದರು.

R. N. B. 2554

ಶ್ರೀ

# ಶಿವಾನುಭವ

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೫ ] ಜನವರಿ ೧೯೪೧. [ ಸಂಚಿಕೆ ೪

## ವಿಷಯಾನುಕ್ರಮಣಿಕೆ.

ಆದರೆ ಇವುಗಳನ್ನು ಅನ್ನುವ ಸೌಕರ್ಯಕ್ಕೋಸ್ಕರ ಭಕ್ತನೊಳಗಣ ಭಕ್ತ, ಭಕ್ತನೊಳಗಣ ಮಹೇಶ್ವರ, ಎಂದು ಆರಂಭವಾಗಿ ಭಕ್ತನೊಳಗಣ ಐಕ್ಯ ಈ ವರೆಗೆ ೬ ಪ್ರಕಾರವಾಗಿ ಹೇಳುವದುಂಟು. ಇವುಗಳಮುಂದೆ ಮಹೇಶನೊಳಗಣ ಮಹೇಶ, ಆ ಮೇಲೆ ಮಹೇಶನೊಳಗಣ ಭಕ್ತ, ಎಂದು ಮೊದಲಾಗಿ, ಮಹೇಶನೊಳಗಣ ಷಡ್ವಿಧಗಳಿವೆ. ಆ ಮೇಲೆ ಪ್ರಸಾದಿಯೊಳಗಣ ಪ್ರಸಾದಿ, ಆ ಮೇಲೆ ಪ್ರಸಾದಿಯೊಳಗಣ ಭಕ್ತ, ಈ ಪ್ರಕಾರ ಪ್ರಸಾದಿ ಸ್ಥಲದೊಳಗಣ ಷಡ್ವಿಧಗಳು, ಹೀಗೆಯೇ ಮುಂದಿನ ಸ್ಥಲಗಳೊಳಗಿನ ಷಡ್ವಿಧಗಳನ್ನು ಹೇಳುತ್ತ ಕಡೆಗೆ ಆರನೆಯದಾದ ಐಕ್ಯನೊಳಗಣ ಐಕ್ಯ, ಆ ಮೇಲೆ ಐಕ್ಯನೊಳಗಣ ಭಕ್ತ, ಹೀಗೆ ಇವರ ಷಡ್ವಿಧಗಳನ್ನು ಹೇಳುವರು. ಆ ಮೇಲೆ ಕಡೆಗೆ ಐಕ್ಯನೊಳಗಣ ಶರಣ ಈ ಸ್ಥಿತಿಗೆ ಬರುತ್ತಾನೆ. ಇದು ಸೂಕ್ಷ್ಮಶರೀರದ ಪೂರ್ಣತೆಯು. ಈ ಸ್ಥಿತಿಯ ಮುಂದೆ ಈತನು ಕಾರಣ ಶರೀರದಲ್ಲಿ ಹೋಗುತ್ತಾನೆ. ಈ ಕಾರಣ ಶರೀರದಲ್ಲಿ ಅವನಿಗೆ ೨೧೬ ಅನುಭವಗಳು ಉಂಟಾಗುತ್ತವೆ. ಈ ಪ್ರಕಾರ ೩೬ ಅಂಗಸ್ಥಳಗಳ ೨ನೇ ವಿಧಗಳಿರುತ್ತವೆ.

ಹಿಂದೆ ನಾವು ವಿವರಿಸಿದ ಮೂವತ್ತಾರು ಅಂಗಸ್ಥಲಗಳು (೧ನೇ ವಿಧ) — ನಂಬರು ೭೭, ಇವರಲ್ಲಿಯು ಅನೇಕ ವಿಶಿಷ್ಟ ಶಬ್ದಗಳನ್ನು ಸ್ಮರಣೆಯಲ್ಲಿಟ್ಟುಕೊಳ್ಳುವದು ದುಸ್ತರವು. ಆದ್ದರಿಂದ ಈ ೨ನೇ ವಿಧದೊಳಗಿನ ಶಬ್ದಗಳನ್ನು ಉಪಯೋಗಿಸುವ ವಾಡಿಕೆಯುಂಟು. ಆದರೆ ಈ ಎರಡೂ ವಿಧಗಳ ಅರ್ಥದಲ್ಲಿ ಭಿನ್ನತೆಯು ಇರುವದಿಲ್ಲ.

(೮೫) ಅಂಗಸ್ಥಲಗಳು ೩೬, ಲಿಂಗಸ್ಥಲಗಳು ೩೬, ಇವುಗಳ ಸಮ್ಮೇಳನ:— ಭಕ್ತ, ಮಹೇಶ್ವರ, ಪ್ರಸಾದಿ ಮೊದಲಾದ ೬ ಸ್ಥಲಗಳಿಗನುಸಾರವಾಗಿ ಷಟ್‌ಚಕ್ರಗಳಿರುತ್ತವಷ್ಟೇ. ಹಾಗೆಯೇ ಆ ಪ್ರತಿಯೊಂದು ಚಕ್ರದಲ್ಲಿ ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ ಮೊದಲಾದ ಲಿಂಗಗಳಿರುತ್ತವೆ. ಅವು ಪರಸ್ಪರ ಮಿಶ್ರ ಆಗಿ ೩೬ ಆಗುವವು. ಆಗ ಈ ಮೂವತ್ತಾರು ಸ್ಥಲಗಳಲ್ಲಿ ಶ್ರದ್ಧಾದಿ ಭಕ್ತಿಗಳೂ, ಆಚಾರಾದಿ ಲಿಂಗಗಳೂ ಕೂಡ ಮಿಶ್ರ ಆಗಿ ೩೬, ಆಗುತ್ತವೆ. ಉದಾ— ಭಕ್ತಿಯು, ಶ್ರದ್ಧಾಭಕ್ತಿಯೊಳಗಣ ನಿಷ್ಠೆ, ಶ್ರದ್ಧಾ ಭಕ್ತಿಯೊಳಗಣ ಅವಧಾನ ಹೀಗೆ ಒಂದೊಂದು ಭಕ್ತಿಯಲ್ಲಿ ಆರಾರಾಗಿ, ಒಟ್ಟು ೩೬ ಭಕ್ತಿಗಳಾಗುತ್ತವೆ. ಈ ೩೬ ಭಕ್ತಿಗಳು ಮಿಶ್ರಲಿಂಗಗಳೊಡನೆ ಅನುಕ್ರಮವಾಗಿ ಸಂಬಂಧಿಸುತ್ತವೆ. ಈ

ಮಿಶ್ರಲಿಂಗಗಳೂ ೩೬ ಇರುತ್ತವೆ. ಇವು ಕೂಡುವ ವಿಧವು ಹೇಗೆಂದರೆ, ಶ್ರದ್ಧಾ ಭಕ್ತಿಯೊಳಗಣ ಶ್ರದ್ಧಾಭಕ್ತಿಯು ಆಚಾರಲಿಂಗದೊಳಗಣ ಆಚಾರಲಿಂಗದೊಳಗೆ ಕೂಡುತ್ತದೆ. ಹೀಗೆ ಕೂಡುತ್ತ ಕಡೆಗೆ ಶ್ರದ್ಧಾ ಭಕ್ತಿಯೊಳಗಣ ಸಾಮರಸ್ಯ ಭಕ್ತಿಯು ಆಚಾರಲಿಂಗದೊಳಗಣ ಮಹಾಲಿಂಗವೊಳಗೆ ಕೂಡುತ್ತದೆ. ಈ ಪ್ರಕಾರ ೩೬ ಅಂಗಗಳು ೩೬ ಭಕ್ತಿಗಳ ಮೂಲಕ ೩೬ ಲಿಂಗಗಳಲ್ಲಿ ಬೆರೆಯುತ್ತವೆ. ಈ ೩೬ ಲಿಂಗಗಳ ಪ್ರಕಾಶವು ೩೬ ಭಕ್ತಿಗಳ ಪ್ರಕಾಶದಲ್ಲಿ ಬೆರೆಯಲು ಈ ಪ್ರಕಾಶವು ಸರ್ವಾಂಗವನ್ನು ವೇಧಿಸುತ್ತದೆ. ಹೀಗೆ ವೇಧಿಸಲು ಅದು ತನುತ್ರಯುಗಳನ್ನೂ ಆರು ಇಂದ್ರಿಯಗಳನ್ನೂ ೩೬ ತತ್ವಗಳನ್ನೂ ವ್ಯಾಪಿಸುತ್ತದೆ. ಹೀಗೆ ವ್ಯಾಪಿಸಲು ಆ ಅಂಗಗಳೆಲ್ಲ ಐಕ್ಯಸ್ಥಿತಿಯನ್ನು ಹೊಂದುತ್ತವೆ. ಅಂದರೆ ಅಂಗಗಳೆಲ್ಲ ಪರಿಪೂರ್ಣತೆಯನ್ನು ಹೊಂದುತ್ತವೆ

(೮೬) ಷಡ್ಲಿಂಗ ಸಾಧನೆ (೧ನೇ ವಿಧ):— ಲಿಂಗ ಸಾಧನೆಯಲ್ಲಿ ೬ ತರಗತಿಗಳಿವೆ. ಈ ತರಗತಿಗಳು ಷಟ್‌ಸ್ಥಲಕ್ಕೆ ಅನುಸಾರವಾಗಿ ಇವೆ. ಅವು ಮೋಹೀ, ಭಕ್ತ, ವೀರ, ಪ್ರಾಣೀ, ಪ್ರಸಾದೀ, ತೃಪ್ತಿ ಎಂದಿರುತ್ತವೆ. ಲಿಂಗದಲ್ಲಿ ಮೊದಲು ಮೋಹಿಸತಕ್ಕದ್ದು. ಇದು ಮೋಹೀ ಸ್ಥಿತಿಯು. ಆ ಮೇಲೆ ಅದರಲ್ಲಿ ವಿಶ್ವಾಸವುಳ್ಳವನಾಗತಕ್ಕದ್ದು. ಆಗ ಭಕ್ತನೆನಿಸಿಕೊಳ್ಳುವನು. ಈ ವಿಶ್ವಾಸದಿಂದ ದೃಢಭಾವವು ಅವನಲ್ಲಿ ನೆಲೆಗೊಳ್ಳುವದು. ಆಗ ಅವನು ವೀರನೆನಿಸಿಕೊಳ್ಳುವನು. ಈ ದೃಢ ಭಾವದಿಂದ ಲಿಂಗದ ಶಕ್ತಿಯೇ ಅವನ ಪ್ರಾಣವಾಗುವದು. ಆಗ ಅವನು ಪ್ರಾಣೀ ಎಂದೆನಿಸಿಕೊಳ್ಳುವನು. ಆಮೇಲೆ ಅವನು ಲಿಂಗದ ಪ್ರಸಾದದಲ್ಲಿಯೇ ತಲ್ಲೀನನಾಗುವನು. ಆಗ ಅವನು ಪ್ರಸಾದಿ ಎನಿಸಿಕೊಳ್ಳುವನು. ಹೀಗೆ ತಲ್ಲೀನನಾಗಿ ಆದರಲ್ಲಿಯೇ ಆನಂದಬಡುವನು. ಆಗ ಅವನು ತೃಪ್ತಿಸ್ಥಿತಿಗೆ ಬರುವನು. ಇದು ಕಡೆಯದು. ಹೀಗೆ ಆಚಾರ ಲಿಂಗದಲ್ಲಿ ಆಚಾರಲಿಂಗ ಮೋಹೀ, ಆಚಾರಲಿಂಗ ಭಕ್ತ ಎಂದು ಮೊದಲಾಗಿ ಕಡೆಗೆ ಆಚಾರಲಿಂಗತೃಪ್ತಿ ಹೀಗೆ ೬ ವಿಭೇದಗಳಾಗುವವು. ಮುಂದೆ ಹಾಗೆಯೇ ಗುರುಲಿಂಗ ಮೋಹೀ, ಗುರುಲಿಂಗ ಭಕ್ತ, ಗುರುಲಿಂಗವೀರ ಮೊದಲಾಗಿ ಗುರುಲಿಂಗದ ಆರು ವಿಭೇದಗಳು, ಕಡೆಗೆ ಮಹಾಲಿಂಗ ಮೋಹೀ, ಮಹಾಲಿಂಗ ಭಕ್ತ ಮೊದಲಾಗಿ ಆರು ಮಹಾಲಿಂಗದ ವಿಭೇದಗಳು, ಹೀಗೆ ಒಟ್ಟು ೩೬ ವಿಧಗಳಾಗುತ್ತವೆ. ಕಡೆಗೆ ಮಹಾಲಿಂಗ ತೃಪ್ತಿಯು ಉಂಟಾಗುತ್ತದೆ.

(೮೭) ಷಟ್‌ಸ್ಥಲ ಸಾಧನೆ (೨ನೇ ವಿಧ):— ಕೆಲವು ವಚನಕಾರರು ಮೇಲಿನ ತಗರತಿಗಳನ್ನೇ ಶಬ್ದಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿ ಹೇಳುವದುಂಟು. ಅವು ಮೋಹೀ, ಭಕ್ತ, ಪೂಜಕ, ವೀರ, ಪ್ರಸಾದಿ, ಪ್ರಾಣೀ ಎಂದಿರುತ್ತವೆ. ಅಂದರೆ ಮೊದಲು ಮೋಹಿಸತಕ್ಕದ್ದು. ಹೀಗೆ ಮೋಹಿಸಿದ ಬಳಿಕ ಅವನು ಆ ಲಿಂಗದಲ್ಲಿ ಭಕ್ತಿಭಾವಪೂರಿತನಾಗುವನು. ಆಗ ಅವನು ಭಕ್ತನಾಗುವನು. ಆಮೇಲೆ ಅವನಲ್ಲಿ ಲಿಂಗದ ಆಚರಣೆಯು ತಲೆದೋರುವದು. ಇದು ಪೂಜಕ ಸ್ಥಿತಿಯು. ಆಮೇಲೆ ವಿಶ್ವಾಸವು ಬಲಿತಲ್ಲಿ ಎಂಥ ಎಡರುಗಳು ಬಂದರೂ ಅವುಗಳನ್ನು ಎದುರಿಸಲು ಸಿದ್ಧನಾಗುವನು. ಇದು ವೀರ ಸ್ಥಿತಿಯು. ಆಗ ಅವನು ಲಿಂಗದ ಅನುಭವವನ್ನು ಹೊಂದಿ ಅದರ ಸುಪರಿಣಾಮದಲ್ಲಿ ಆನಂದಿಸಹತ್ತುವನು. ಇದು ಪ್ರಸಾದಿಯ ಸ್ಥಿತಿಯು. ಆಮೇಲೆ ಅವನು ಆ ಲಿಂಗವೇ ಪ್ರಾಣವಾಗಿ ವ್ಯವಹರಿಸುತ್ತಾನೆ. ಆಗ ಅವನು ಲಿಂಗ ಪ್ರಾಣಿ ಎಂದೆನಿಸಿಕೊಳ್ಳುವನು. ಇದು ಕಡೆಯ ಸ್ಥಿತಿಯು. ಕೆಲವು ವಚನಕಾರರು ಹೀಗೆ ಷಟ್‌ಸ್ಥಲ ಸಾಧನೆಯ ವಿವರಗಳನ್ನು ಬೇರೆ ಶಬ್ದಗಳಿಂದ ಹೇಳುತ್ತಾರೆ. ಇವು ಕೂಡ ಮೊದಲಿನಂತೆಯೇ ೩೬ ವಿಧವಾಗಿರುವವು.

(೮೮) ೨೧೬ ಸ್ಥಲಗಳು:— ೩೬ ಸ್ಥಲಗಳ ತರುವಾಯ ಮತ್ತೊಂದು ಸ್ಥಿತಿಯು ತಲೆದೋರುತ್ತದೆ ಈ ೩೬ ಸ್ಥಲಗಳಲ್ಲಿಯ ಪ್ರತಿಯೊಂದು ಸ್ಥಲದಲ್ಲಿ ಪುನಃ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ೬ ವಿಭಾಗಗಳಾಗಿ ಒಟ್ಟು ೨೧೬ (೩೬×೬) ಸ್ಥಲಗಳಾಗುತ್ತವೆ. ಮನುಷ್ಯನ ಪ್ರಗತಿಯಲ್ಲಿ ಇವು ಕಡೆಯ ಸ್ಥಲಗಳು. ಇವು ಕಾರಣಶರೀರಕ್ಕೆ ಸಂಬಂಧಪಡುತ್ತವೆ. ಇದು ಕಾರಣಶರೀರದ ಪಕ್ವ ಸ್ಥಿತಿಯು. ಉದಾಃ—ಭಕ್ತಾದಿ ಸ್ಥಲಗಳು ಮೊದಲು ಸ್ಥೂಲಶರೀರಕ್ಕೆ ಸಂಬಂಧಿಸುತ್ತವೆ. ಆಗ ಒಟ್ಟು ಸ್ಥಲಗಳು ಆರಾಗುವವು. ಮುಂದೆ ಭಕ್ತನೊಳಗಣ ಭಕ್ತಸ್ಥಲವು ಉಂಟಾಗುತ್ತದೆ. ಭಕ್ತನೊಳಗಣ ಭಕ್ತಸ್ಥಲವು ಸೂಕ್ಷ್ಮಶರೀರಕ್ಕೆ ಸಂಬಂಧಿಸುತ್ತದೆ. ಇದೇ ರೀತಿ ಉಳಿದ ಸ್ಥಲಗಳೊಡನೆ ಭಕ್ತಸ್ಥಲಗಳು ೩೬ ಆಗುತ್ತವೆ. ಇದರಮುಂದೆ ಭಕ್ತನೊಳಗಣ ಭಕ್ತನೊಳಗಣ ಭಕ್ತಸ್ಥಲವು ಉಂಟಾಗುತ್ತದೆ. ಇದು ಕಾರಣಶರೀರಕ್ಕೆಸಂಬಂಧಿಸಿದುದು. ಆಗ ಇದೇರೀತಿ ಒಟ್ಟು ಸ್ಥಲಗಳು ೨೧೬ ಆಗುತ್ತವೆ. ಹೀಗೆ ಸ್ಥೂಲಶರೀರಕ್ಕೆ ೬ ಸ್ಥಲಗಳು, ಸೂಕ್ಷ್ಮಶರೀರಕ್ಕೆ ೩೬ ಸ್ಥಲಗಳು, ಮತ್ತು ಕಾರಣಶರೀರಕ್ಕೆ ೨೧೬ ಸ್ಥಲಗಳು ಸಂಬಂಧಿಸುತ್ತವೆ.

ಈ ವಿಷಯವನ್ನು ವಿವೇಚಿಸಿದಲ್ಲಿ ತೋರುವದೇನೆಂದರೆ, ಭಕ್ತನೊಳಗಣ ಭಕ್ತಸ್ಥಲವು ಸೂಕ್ಷ್ಮಶರೀರಕ್ಕೆ ಸಂಬಂಧಪಡುತ್ತಿದೆ. ಹೀಗೆ ಅದು ಸಂಬಂಧಪಡಲು ಅದರ ಆರುವಿಧ ಪರಿಣಾಮಗಳು ಕಾರಣ ಶರೀರವನ್ನು ಪ್ರವೇಶಿಸುವಲ್ಲಿ ಅವು ಪುನಃ ಆರುಸ್ಥಲಗಳಿಗೆ ಸಂಬಂಧಪಡುವದರಿಂದ ಈ ಒಂದು ಭಕ್ತಸ್ಥಲಕ್ಕೆ ಕಾರಣ ಶರೀರದಲ್ಲಿ ೩೬ ಸ್ಥಲಗಳಾಗುತ್ತವೆ. ಇದರಿಂದ ಅಲ್ಲಿ ಭಕ್ತನ ಭಕ್ತನ ಭಕ್ತ ಭಕ್ತನ ಭಕ್ತನ ಮಹೇಶ, ಭಕ್ತನ ಭಕ್ತನ ಪ್ರಸಾದಿ, ಭಕ್ತನ ಭಕ್ತನ ಪ್ರಾಣಲಿಂಗಿ, ಭಕ್ತನ ಭಕ್ತನ ಶರಣ, ಭಕ್ತನ ಭಕ್ತನ ಐಕ್ಯ ಎಂದು ಆಗುವವು. ಆಮೇಲೆ ಭಕ್ತನ ಮಹೇಶನ ಭಕ್ತ, ಭಕ್ತನ ಮಹೇಶನ ಮಹೇಶ, ಹೀಗೆ ೬ ವಿಧಗಳಾಗುವವು. ಹೀಗೆ ಎಲ್ಲ ಸ್ಥಲಗಳಲ್ಲಿ ಕೂಡಿ, ಭಕ್ತಸ್ಥಲದಲ್ಲಿ ಒಟ್ಟು ೩೬ ವಿಧಗಳಾಗುವವು. ಹೀಗೆ ಆದದ್ದೇ ಭಕ್ತಸ್ಥಲದ ಪೂರ್ಣತೆಯ ಸ್ಥಿತಿಯು. ಆಗ ಅದು ಕಾರಣಶರೀರವನ್ನು ಪ್ರವೇಶಿಸುವದು. ಅದರಂತೆಯೇ ಮಹೇಶ್ವರ ಸ್ಥಲದಲ್ಲಿ ೩೬, ಪ್ರಾಣಲಿಂಗಿ ಸ್ಥಲದಲ್ಲಿ ೩೬, ಶರಣಸ್ಥಲದಲ್ಲಿ ೩೬, ಐಕ್ಯಸ್ಥಲದಲ್ಲಿ ೩೬ ಆಗುತ್ತವೆ. ಇವೆಲ್ಲವು ಕೂಡಿ ೨೧೬ ಆಗುತ್ತವೆ. ಆಗ ಎಲ್ಲ ಸ್ಥಲಗಳ ಪೂರ್ಣತೆಯು ಉಂಟಾಗುತ್ತದೆ. ಇದರಿಂದ ಮನುಷ್ಯನ ಸರ್ವಾವಯವಗಳಲ್ಲಿ, ಶಕ್ತಿಗಳಲ್ಲಿ, ಇಂದ್ರಿಯಗಳಲ್ಲಿ, ಎಲ್ಲ ಸ್ಥಲಗಳ ವಿಕಾಸವು ಉಂಟಾಗುತ್ತದೆ. ಇದೇ ಅವನ ಪೂರ್ಣತೆಯು.

ಕ್ರಿಯೆಯು ಮೊದಲು ಸ್ಥೂಲ ಸೂಕ್ಷ್ಮ ಶರೀರಗಳಲ್ಲಿ ಬೇರೆ ಬೇರೆ ಸ್ವರೂಪದ್ದಾಗಿ ಗೋಚರವಾಗುತ್ತದೆ. ಆದರೆ ಕಡೆಗೆ ಈ ಕ್ರಿಯೆಯ ಪರಿಣಾಮಗಳು ಕಾರಣ ಶರೀರದಲ್ಲಿ ಒಡಮೂಡುತ್ತವೆ. ಆಗ ಕಾರಣ ಶರೀರವು ಈ ಅನುಭವಗಳನ್ನು ಕಾದಿಡುತ್ತದೆ. ಅದು ಅನುಭವಗಳನು ಸಂಗ್ರಹಿಸುವ ಒಂದು ಕೊಟ್ಟಡಿ ಎಂದು ತಿಳಿಯಬೇಕು. ಜಗತ್ತಿನಲ್ಲಿ ಮನುಷ್ಯನು ಮಾಡುವ ಪ್ರತಿಯೊಂದು ಕಾರ್ಯದ ಪರಿಣಾಮವು ಈ ಕೊಟ್ಟಡಿಯಲ್ಲಿ ಸಂಗ್ರಹಿಸಲ್ಪಡುತ್ತಿದೆ. ಮತ್ತು ಹೀಗೆ ಸಂಗ್ರಹವಾದ ಅನುಭವವನ್ನು ಮನುಷ್ಯನು ತನಗೆ ಅವಶ್ಯ ಬಿದ್ದಾಗ್ಗೆ ಹೊರಪಡಿಸಿಕೊಂಡು ಅದನ್ನು ಉಪಯೋಗಿಸುತ್ತಾನೆ. ಆದ್ದರಿಂದ ಈ ಸಂಗ್ರಹವು ಯಾವಾಗಲೂ ಒಳ್ಳೇ ವಿಷಯಗಳಿಂದ ತುಂಬಿರಬೇಕು. ಇಂಥ ಸಂಗ್ರಹ ಮಾಡುವ ರೀತಿಯನ್ನು ಷಟ್‌ಸ್ಥಲ ಶಾಸ್ತ್ರವು ಹೇಳುತ್ತಿದೆ. ಈ ರೀತಿಯಂತೆ ನಡೆದರೆ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳ ವ್ಯಾಪಾರಗಳು ಸರಾಗವಾಗಿ ನಡೆಯುತ್ತವೆ.

ಹೀಗೆ ಸರಾಗವಾಗಿ ನಡಿದರೆ ಆರು ಸ್ಥಲಗಳ ಮೂಲಕ ಅನು ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಮನುಷ್ಯನಲ್ಲಿ ಪ್ರಕಟವಾಗುತ್ತವೆ.

ಭಾವಲಿಂಗಕ್ಕೆ ಜ್ಞಾನಲಿಂಗ, ಸುಜ್ಞಾನಲಿಂಗ, ತೃಪ್ತಿಲಿಂಗ ಎಂಬ ಬೇರೆ ಹೆಸರುಗಳೂ ಉಂಟು.

ಕಾರಣ ಶರೀರದಲ್ಲಿ ಕ್ರಿಯಾದಿಗಳಿಲ್ಲ. ಈ ಕ್ರಿಯೆಗಳು ಸ್ಥೂಲ, ಸೂಕ್ಷ್ಮ ಶರೀರಗಳಲ್ಲಿ ಮಾತ್ರ ಗೋಚರವಾಗುತ್ತವೆ. ಆದರೆ ಇವುಗಳ ಪರಿಣಾಮಗಳು ಕಾರಣ ಶರೀರದಲ್ಲಿ ಮಾತ್ರ ಕಾದಿಡಲ್ಪಡುತ್ತವೆ. ಈ ಪರಿಣಾಮಗಳಿಗೆ ತೃಪ್ತಿಗಳೆಂತಲೂ ವಚನಕಾರರು ಹೇಳುತ್ತಾರೆ. ಈ ತೃಪ್ತಿರೂಪಾದ ೨೧೬ ಸ್ಥಲಗಳ ವ್ಯಾಖ್ಯೆಗಳನ್ನು ಹೇಳಲಿಕ್ಕೆ ಬರಲಾರದು. ಆದ್ದರಿಂದ ವಚನಕಾರರು ಅವುಗಳ ನಿರ್ದೇಶವನ್ನು ಮಾತ್ರ ತಮ್ಮ ವಚನಗಳಲ್ಲಿ ಮಾಡುತ್ತಾರೆ. ಯಾಕೆಂದರೆ ಈ ೨೧೬ ಸ್ಥಲಗಳು ಅನುಭವದಿಂದ ಮಾತ್ರ ತಿಳಿಯತಕ್ಕವುಗಳು.

ಮನುಷ್ಯನು ಜಗತ್ತಿನಲ್ಲಿ ಪ್ರತಿಕ್ಷಣ ನಾನಾವಿಧ ಅಸಂಖ್ಯ ಪದಾರ್ಥಗಳಿಗೆ ಸಂಬಂಧಪಡುತ್ತಾನೆ. ಅದರಂತೆ ಅವುಗಳ ಅವನ ಅನುಭವಗಳು ಅಸಂಖ್ಯಾತವಾಗಿರುತ್ತವೆ. ಅವೆಲ್ಲವೂ ಕಾರಣಶರೀರದಲ್ಲಿ ಒಡಮೂಡುತ್ತವೆ. ಆದರೆ ಈ ಕ್ರಿಯೆಗಳೆಲ್ಲವು ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಸ್ಥೂಲಶರೀರದಲ್ಲಿ ೬ ವರ್ಗಗಳಲ್ಲಿ ಮಾತ್ರ ಬೀಳುತ್ತವೆ. ಮುಂದೆ ಇವುಗಳು ಸೂಕ್ಷ್ಮ ಶರೀರದಲ್ಲಿ ೩೬ ವರ್ಗಗಳಲ್ಲಿ ಬೀಳುತ್ತವೆ. ಮತ್ತು ಕಾರಣ ಶರೀರದಲ್ಲಿ ೨೧೬ ವರ್ಗಗಳಲ್ಲಿ ಬೀಳುತ್ತವೆ.

ಹೀಗೆ ಮನುಷ್ಯಪ್ರಾಣಿಯ ಕ್ರಿಯೆಗಳು ಮುಖ್ಯವಾಗಿ ಆರು ವಿಧವಾಗಿದ್ದರೂ ವ್ಯಕ್ತಿಯು ಸ್ವಭಾವತಃ ಒಂದೇ ಸ್ಥಲದ ಗುಣಗಳನ್ನು ವಿಶೇಷವಾಗಿ ಹೊಂದಿರುವದು ಕಂಡುಬರುತ್ತದೆ. ಉದಾ:— ಒಬ್ಬನು ಭಕ್ತಸ್ಥಲದವನಿರಬಹುದು, ಇನ್ನೊಬ್ಬನು ಮಹೇಶ್ವರ ಸ್ಥಲದವನಿರಬಹುದು, ಮಗದೊಬ್ಬನು ಪ್ರಾಣಲಿಂಗಿ ಸ್ಥಲದವನಿರಬಹುದು. ಹೀಗಿರುವದು ಅವರವರ ಸ್ವಭಾವದ ಹುಟ್ಟುಗುಣ. ಆದರೂ ಅವರವರ ಸ್ವಭಾವದ ಪೂರ್ಣ ವಿಕಾಸವು ಉಳಿದ ಸ್ಥಲಗಳ ಪರಿಚಯದ ಮೇಲೆ ಅವಲಂಬಿಸುತ್ತದೆ. ಆದ್ದರಿಂದ ಭಕ್ತಸ್ಥಲದವನು ಶರಣಸ್ಥಲದ ಅರಿವನ್ನು ಹೊಂದಲೇಬೇಕು.

ಅವನು ಭಕ್ತಸ್ಥಲವಲ್ಲಿಯೇ ಯಾವಾಗಲೂ ಉಳಿಯಬಾರದು. ಹಾಗೆಯೇ ಶರಣಸ್ಥಲಕ್ಕೆ ಸ್ವಾಭಾವಿಕವಾಗಿ ಒಲವುಳ್ಳವನು ಬೇರೊಬ್ಬನಿರಬಹುದು. ಆದರೆ ಅವನು ಅದೇ ಒಂದು ಸ್ಥಲದಲ್ಲಿಯೇ ಇರಕೂಡದು. ಅವು ಪ್ರಗತಿಯಲ್ಲ. ಅವನು ಭಕ್ತಸ್ಥಲದಲ್ಲಿಯೂ ಕೂಡ ಇರಬೇಕು. ಈ ತರದ ಆಚರಣೆಯಿಂದಲೇ ಮನುಷ್ಯನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಲ್ಲವು ಪೂರ್ಣತೆಯನ್ನು ಹೊಂದುತ್ತವೆ. ಈ ಪೂರ್ಣತೆಯು ೧, ೨, ೩, ೬, ೩೬, ಈ ಸ್ಥಲಗಳ ಆಚರಣೆಯಿಂದ ಉಂಟಾಗುತ್ತಿದೆ. ಇವುಗಳಲ್ಲಿ ಮೊದಲಿನ ೩ ತಾತ್ವಿಕವಾದವು. ಉಳಿದ ೨ ಕ್ರಿಯಾಯುಕ್ತವಾದವು. ಆದ್ದರಿಂದ ವಚನಕಾರರು ೬ ಮತ್ತು ೩೬ ಸ್ಥಲಗಳ ಮೂಲಕ ತಮ್ಮ ಶಾಸ್ತ್ರವನ್ನು ಬೋಧಿಸುತ್ತಾರೆ. ಇವುಗಳಿಗೆ ಮುಂದಿನದಾದ ೨೧೬ ಸ್ಥಲಗಳ ಜ್ಞಾನವನ್ನು ಮನುಷ್ಯನು ತನ್ನ ಅನುಭವದಿಂದಲೇ ಹೊಂದಬೇಕು. ಆದ್ದರಿಂದ ಅವರು ಅವುಗಳನ್ನು ವಿವರಿಸಲಾರರು. ಯಾಕಂದರೆ ೩೬ ಸ್ಥಲಗಳ ಪೂರ್ಣಜ್ಞಾನ ಮತ್ತು ಕ್ರಿಯೆಗಳಿಂದ ೨೧೬ ಸ್ಥಲಗಳ ಅನುಭವವು ಅವನಿಗೆ ಸ್ವಾನುಭವದಿಂದ ಕೂಡಲೇ ಉಂಟಾಗುತ್ತದೆ.

(೮೯) ಸರ್ವಾಂಗಲಿಂಗಿಸ್ಥಲಃ— ಇದು ಮನುಷ್ಯನ ಪರಿಪೂರ್ಣ ಸ್ಥಿತಿಯನ್ನು ತೋರಿಸುತ್ತದೆ. ಮನುಷ್ಯನು ಬೇರೆ ಬೇರೆ ಸ್ಥಲಗಳಲ್ಲಿದ್ದುಕೊಂಡು ತನ್ನ ಶಕ್ತಿಯನ್ನು ವಿಕಾಸಪಡಿಸತಕ್ಕದ್ದಷ್ಟೇ. ಶಕ್ತಿಯು ವಿಕಾಸ ಮಾಡುವದೆಂದರೆ ಲಿಂಗದ ಗುಣಗಳನ್ನು ಒರಮಾಡಿಕೊಳ್ಳುವದೇ ಇರುತ್ತದೆ. ಈ ವಿಕಾಸವು ಅವನ ಮನ, ಇಂದ್ರಿಯ, ಪ್ರಾಣ, ಕರಣಗಳು, ಅರಿವು, ಚೈತನ್ಯ, ಇವುಗಳಲ್ಲೆಲ್ಲ ಉಂಟಾಗಬೇಕು. ಆಗ ಅವನಲ್ಲಿ ಲಿಂಗದ ಗುಣಗಳು ಉಂಟಾಗುತ್ತವೆ. ಇವು ಉಂಟಾದ ಕೂಡಲೆ ಅವನ ಕ್ರಿಯೆಗಳೆಲ್ಲ ಉಚ್ಚ ಸ್ಥಿತಿಯನ್ನು ಹೊಂದುತ್ತವೆ. ಆಗ ಅವನಿಗೆ ತಾನು, ಜಗತ್ತು, ಪರಮಾತ್ಮ, ಇವುಗಳಲ್ಲಿ ಆವ ತರದ ಭೇದಗಳು ಗೋಚರವಾಗುವದಿಲ್ಲ. ಜಗತ್ತೆಲ್ಲ ಲಿಂಗಮಯವಾಗಿ ತೋರಹತ್ತುತ್ತದೆ. ಈ ಸ್ಥಿತಿಯನ್ನು ಹೊಂದಿದಲ್ಲಿ ಅವನು ಜಗತ್ತಿನಲ್ಲಿ ಇದ್ದೂ ಇಲ್ಲದ ಹಾಗೆ ಇರುತ್ತಾನೆ. ಅವನು ನೀರಿನಲ್ಲಿರುವ ತಾವರೆಯಂತೆ ಅಂದರೆ ನೀರಿನಲ್ಲಿ ಇದ್ದರೂ ಕೂಡ ತಾವರೆಗೆ ಆ ನೀರು ಹೇಗೆ ಅಂಟಿಕೊಳ್ಳುವದಿಲ್ಲವೋ ಹಾಗೆ ಅವನು ಇರುವನು. ಈ ಸ್ಥಿತಿಯು ಅವನಿಗೆ ಪ್ರಾಪ್ತವಾಗಲು ಅವನು ಸರ್ವಾಂಗಲಿಂಗಿಸ್ಥಲವನ್ನು ಹೊಂದಿದವನೆಂದು ವಚನಕಾರರು ಹೇಳುವದುಂಟು.

(೯೦) ಷಟ್‌ಸ್ಥಲಶಾಸ್ತ್ರ:— ವಚನಕಾರರು ಮನುಷ್ಯನ ಗುಣಗಳು, ಇಂದ್ರಿಯಗಳು, ಕ್ರಿಯೆ ಮೊದಲಾದವುಗಳಲ್ಲೆಲ್ಲ ಆರು ವಿಭಾಗಗಳನ್ನು ಮಾಡುವದುಂಟು. ಈ ಪ್ರಕಾರ ಮಾಡಿ ಅನುಕ್ರಮವಾಗಿ ಅವುಗಳ ವಿಕಾಸವನ್ನು ಕುರಿತು ವಿವೇಚಿಸುತ್ತಾರೆ. ಹೀಗೆ ಮಾಡಿದ ವಿವೇಚನೆಗೆ ಷಟ್‌ಸ್ಥಲ ಶಾಸ್ತ್ರವೆಂಬ ಹೆಸರು. ಈ ಶಾಸ್ತ್ರದಲ್ಲಿ ಆರು ವಿಭಾಗಗಳಿವೆ. ಒಂದೊಂದು ವಿಭಾಗಕ್ಕೆ ಸ್ಥಲವೆಂಬ ಹೆಸರು. ಈ ಆರು ಸ್ಥಲಗಳಿಗೆಲ್ಲ ಆರು ವಿಶಿಷ್ಟ ಹೆಸರುಗಳಿವೆ. ಅವು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಇರುತ್ತವೆ. ಇವೇ ಷಟ್‌ಸ್ಥಲಗಳೆಂದೆನಿಸಿಕೊಳ್ಳುತ್ತವೆ.

(೯೧) ನಿರಾಮಯ ಷಟ್‌ಸ್ಥಲ:- ಮನುಷ್ಯನು ಆರಂಭದಲ್ಲಿ ಮೇಲೆ ನಂ. ೯೦ ಇದರಲ್ಲಿ ಹೇಳಿದ ಮೇರೆಗೆ ಆರು ಸ್ಥಲಗಳ ಜ್ಞಾನವನ್ನು ಮಾಡಿಕೊಂಡು ಐಕ್ಯಸ್ಥಲವನ್ನು ಹೊಂದಬೇಕು. ಈ ಸ್ಥಲವನ್ನು ಹೊಂದಿದ ಬಳಿಕ ಅವನು ಶೂನ್ಯಸ್ಥಲವನ್ನು ಹೊಂದುವನು. ಈ ಶೂನ್ಯ ಸ್ಥಲದಲ್ಲಿ ಕೆಲವು ತರಗತಿಗಳಿವೆ. ಅವು ಮುಖ್ಯವಾಗಿ ಮೂರು ಇವೆ. ಅವುಗಳಲ್ಲಿ ಮೊದಲನೆಯದು ನಿರಾಮಯ ಎಂಬುದಿದೆ. ಇಲ್ಲಿ ಷಟ್‌ಸ್ಥಲಗಳು ನಿರಾಮಯ ಸ್ವರೂಪವನ್ನು ಹೊಂದುತ್ತವೆ. ಆದ್ದರಿಂದ ಅವುಗಳು ನಿರಾಮಯ ಷಟ್‌ಸ್ಥಲವೆಂದು ಹೇಳಲ್ಪಡುತ್ತವೆ.

(೯೨) ನಿರಂಜನ ಷಟ್‌ಸ್ಥಲ:— ನಿರಾಮಯವಾದ ಬಳಿಕ ನಿರಂಜನವೆಂಬುದಿದೆ. ಇಲ್ಲಿ ಷಟ್‌ಸ್ಥಲವು ನಿರಂಜನಷಟ್‌ಸ್ಥಲವೆಂದೆನಿಸಿಕೊಳ್ಳುತ್ತಿದೆ.

(೯೩) ನಿರಂಜನಾತೀತ ಷಟ್‌ಸ್ಥಲ:— ಯಾವ ಷಟ್‌ಸ್ಥಲವು ಮೇಲೆ ಹೇಳಿದ ನಿರಂಜನಕ್ಕತೀತವಾಗಿರುತ್ತದೆಯೋ ಅದೇ ನಿರಂಜನಾತೀತ ಷಟ್‌ಸ್ಥಲವೆಂದು ಹೇಳಲ್ಪಡುತ್ತಿದೆ.

ಇವರ ತರುವಾಯ ಬಯಲು ಅಥವಾ ನಿರವಯ ಎಂಬ ಸ್ಥಿತಿಯು ಪ್ರಾಪ್ತವಾಗುತ್ತದೆ. ನೀರು ನೀರು ಬೆರೆದಂತೆ ಮನುಷ್ಯನು ಪರಮಾತ್ಮನಲ್ಲಿ ಆಗ ಬೆರೆದು ಹೋಗುತ್ತಾನೆ. ಅದೇ ಮನುಷ್ಯನ ಅಂತಿಮ ಸ್ಥಿತಿಯು.

(೯೪) ನಿವೃತ್ತಿ— ಮನುಷ್ಯನಿಗೆ ಸಂಪೂರ್ಣ ವಿಕಾಸಾವಸ್ಥೆಯು ಪ್ರಾಪ್ತವಾದ ಬಳಿಕ ಅವನ ಗುಣಗಳು, ಶಕ್ತಿಗಳು, ಚೈತನ್ಯಗಳು ಇವೇ

ಹಸ್ತವ ಮುಗಿವುತ-ವಿಸ್ತರಿಸಿದ ಶರಣರ ।
ಚಿತ್ತಜ ವೈರಿ ಬಸವೇಶ ನುಡಿಗೇಳಿ ।
ಕರ್ತ ಹರಳಯ್ಯ ನುಡಿದನು ॥೭೧॥

ಮೃಡನವತಾರದ - ಒಡೆಯ ಬಸವಣ್ಣ ನಿಮ್ಮ ।
ಅಡಿಗೊಂದು ಜೋಡು ಚರಣವ ತಂದೆನು ।
ಪಡೆವೆನು ಫಲವ ಎನುತಲಿ ॥೭೨॥

ಸಾಕು ಶರಣರಿಗೇಕೆ-ಇಷ್ಟೊಂದು ನುಡಿಗಳು ।
ನಾಲ್ಕು ಯುಗದಲ್ಲಿ ತಿರುಗಿದರೆ ಇಂದಿನ ದಿನಕೆ ।
ಬೇಕೆಮಗೆ ನಿನ್ನ ಕರುಣವು ॥೭೩॥

ಮುಂದಣ ಕಥನಕೆ-ಇಂದಿನ ದರುಶನವು ।
ವಂದನೆಯ ಕೊಳ್ಳಿ ಇದರಿಂದ ನಾನೊಮ್ಮೆ ।
ನಂದಿಶಂಕರಗೆ ಶರಣೆಂಬೆ ॥೭೪॥

ಶರಣು ಶರಣಾರ್ಥಿ-ಶರಣು ನಿಮ್ಮಡಿಗಳಿಗೆ ।
ಕರುಣ ನಮ್ಮಲ್ಲಿರಬೇಕು ಹರಳಯ್ಯ ।
ನಿರುಪಮ ಚಿತ್ತೈಸು ಬಸವಯ್ಯ ॥೭೫॥

ಚಂದದಿಂದಲಿ-ಚಮ್ಮಾವುಗೆಯ ತಕ್ಕೊಂಡು ।
ಆನಂದದಿಂದಲಿ ನಡೆದಾಡೆ ನೀಲಮ್ಮ ।
ಮುಂದೆ ಹರಳಯ್ಯನ ಕಳುಹಲು ॥೭೬॥

ಶರಣಬಸವೇಶನು–ಕರುಣಿ ನೀಲಮ್ಮನು ।
ಹರುಷದಿ ಹರಳಯ್ಯನ ಕಳುಹುವ ಸಮಯದಿ ।
ವಿರಚಿಸುವೆ ಮುಂದೆ ಕಥನವ ॥೭೭॥

ಒಂದನೆ ಪ್ರಥಮದ–ಸಂಧಿ ಇಲ್ಲಿಗೆ ಮುಗಿಯೆ ।
ಚಂದ್ರಶೇಖರನ ಶರಣರಿಗೆ ಮತ್ತಿನ್ನು ।
ಮುಂದೆ ಮೆಯ್ಯಿಕ್ಕಿ ನಮಿಸುವೆನು ॥೭೮॥

## ೨ ನೆಯ ಸಂಧಿ.

ಮುಂದಣ ಕಥೆಯನಾ-ನಂದದಿ ಕೇಳ್ವುದು ।
ಇಂದು ಶರಣರ ಕಥನವ ಮದುವೆಯಾ ।
ನಂದದಿ ಕೇಳೀ ಶರಣರು ॥೧॥

ಪಟ್ಟಾವಳಿ ಸೀರೆಯಲ್ಲಿ-ಕಟ್ಟಿ ಚವಮ್ಯಾವುಗೆಯ ।
ಕೊಟ್ಟು ಕಳುಹುವ ಸಮಯದಿ ಮಧುವರಸ ।
ನೆಟ್ಟನೆ ತಾನು ನಡೆತಂದ ॥೨॥

ಹನ್ನೆರಡು ಸಾವಿರ-ಚೆನ್ನಕರಣಿಕರಿಗೆ ।
ಮಾನ್ಯ ಗಜಸಿಂಹ ಮಧುವರಸ ಊಟಕೆ ॥
ತನ್ನರಮನೆಗೆ ಬರುತಿರ್ದ ॥೩॥

ಬರುತ ಕಂಡನು ಶಿವ-ಶರಣ ಹರಳಯ್ಯನ ।
ಇರವ ದಿಟ್ಟಿಸಿ ನೋಡುತಲಿ ತಾ ತನ್ನ ॥
ಚರರ ಕೆಯ್ಯಿಂದ ನಿಲಿಸಿದ ॥೪॥

ಎಲ್ಲಿಗೆ ಹೋಗಿದ್ದೆ-ಹಳ್ಳಯ್ಯನೀನುಸುರು ।
ಬಲ್ಲಿದ ಧೊರೆತನದಿ ಕೇಳಲು ಬಸವಣ್ಣ ।
ನಲ್ಲಿಗೆ ಹೋಗಿಯೆ ಬಂದೆನು ॥೫॥

ಬಸವನಲ್ಲಿಗೆ ಹೋಗಿ-ಬರುವ ಕಾರಣವೇನು ।
ಕೃಷಿಯುವ (?) ಹೇಳು ಎನುತಲಿ ॥
ಬೆಸಗೊಂಡ ನಿಂತೆಂದು ನುಡಿದನು ॥೬॥

ನಮ್ಮ ಕಾಯಕವನು-ಹಮ್ಮೈಸಿ ಕೊಂಡೊಯ್ದು ।
ಧರ್ಮಸ್ವರೂಪ ಬಸವಣ್ಣ ಮೆಟ್ಟದೆ ॥
ಚವಮ್ಯಾವುಗೆಯ ಕಳುಹಿದನೆನೆ ॥೭॥

ತಂದುದ ಕಳುಹುವ-ಇಂದಿನ ಮತವಲ್ಲ ।
ಎಂದ ಆ ಹಾರುವ ಮಧುವರಸ ತಾನಾಗ ॥
ನಿಂದು ಮೆಟ್ಟುವೆನೆನುತಲಿ ॥೮॥

ನಿನಗೆ ಮೆಟ್ಟಿಸಲೆನ್ನ-ಮನಕೆ ನಿರ್ಮಳವಿಲ್ಲ ।
ಘನ ಮಹಾ ಶರಣ ಬಸವಣ್ಣಗೆ ತಂದುದ ॥
ಅನುಕೂಲವಲ್ಲ ಭವಿ ನೀನು ॥೯॥

ಆರಾದೊಡೇನು ಕಾರಣವುಳ್ಳ ಕಾಯಕ ।
ಮಾರುಕೊಂಡವರು ಚರಣವ ಮೆಟ್ಟಲು ॥
ಬಾರದೆ ಹೇಳು ಹರಳಯ್ಯ ॥೧೦॥

ಕರುಣ ಸಾಗರ ಶಿವ-ಶರಣ ಬಸವಗೆ ತಂದ ।
ಚರಣಕ್ಕೆ ಬದ್ಧಭವಿ ನೀನು ಮೆಟ್ಟಿದರೆ ॥
ಹರಣ ಉಳಿಯದು ಮಧುವಯ್ಯ ॥೧೧॥

ಎಂದ ಮಾತಿಗೆ ಕೋಪ-ದಿಂದಲಿ ಮಧುವರಸ ।
ಬಂದುದು ಬರಲಿ ಎನುತಲೆ ಕೋಪದಿ ॥
ತಂದವನ ಕೈಸೆಳೆ ಕೊಂಡ ॥೧೨॥

ಶಿವನೆ ಬಲ್ಲನು ಬದ್ಧ-ಭವಿಗೆ ನಾ ಮನ ಒಪ್ಪೆ ।
ಇವ ನಾನು ಕೊಟ್ಟವನಲ್ಲ ಹರಳಯ್ಯ ॥
ಅವಧಾನಿ ಮನೆಗೆ ನಡೆದನು ॥೧೩॥

ಶರಳ ಮಧುವರಸನು-ದುರುಳತನದಿ ಮೆಟ್ಟೆ ।
ಬೆರಳು ಸರ್ವಾಂಗವಳಿಯುಲು ಅದ ಕೇಳಿ ।
ಹರಹರಾ ಎಂದ ಬಸವಣ್ಣ ॥೧೪॥

ಕರುಣಿ ಬಸವೇಶನ-ತರುಣಿ ಆಡಿದಳೊಂದು ॥
ಹರಣದ ಹದನನರಿಯರು ಶರಣರು ॥
ತಂದ ಚರಣದ ಫಲವನದನುಣ್ಣಿ ॥೧೫॥

ಇತ್ತ ಚಿತೆಯುರಿಯಿಂದೆ-ಮತ್ತೆ ಚರ್ಮವ ಸುಲಿಯೆ ।
ಹೆತ್ತ ತಾಯಿ ಕಡು ಮರುಗಿದಳು ಮಗನಿಗೆ ।
ಎತ್ತಣ ವಿಧಿಯೋ ಎನುತಲಿ ॥೧೬॥

ಅಂದಾರು ತಿಂಗಳು-ಅಂದವಳಿದಿರಲು ।
ಮುಂದೆ ಪವಾಡ ಮೆರೆಯುಲು ಆ ದಿನಕೆ ।
ತಂದಿಟ್ಟರೊಂದು ಕಥನವಾ ॥೧೭॥

ಮಜ್ಜನ ಮಾಡೆಂದು-ಅಜ್ಜಿ ಹೇಳಿದಳೊಂದು।
ಹೆಜ್ಜೆಯನಿಟ್ಟು ನಡೆದನು ಮಧುವರಸ ।
ಮಜ್ಜನ ಮಾಡಲನುವಾದ ॥೧೮॥

ತನ್ನ ರಾಣಿಯರೀರ್ವರು-ಎಣ್ಣೆಯು ಸೂಡಲು ।
ಸಣ್ಣಾಗಿ ನಖವ ಅಲುಗುತಲಿ ಮಧುವರಸ ।
ಎಣ್ಣೆ ಮಜ್ಜನಕೆ ಅನುವಾದ ॥೧೯॥

ಕೊಪ್ಪರಿಗೆ ಅಗ್ಗಣಿ-ಯುಕ್ಕುತ ಕಾಯ್ದಿರೆ ।
ಮತ್ತ ಮೂನೀರು ಬೆರೆಯಲು ।
ಮನೆಯಲಿನೀರಿಲ್ಲದಿರಲು ಆಗ ॥೨೦॥

ಓಡುತಳಿವುತ-ಗೌಡಿ ಬೇಗನೆಬಂದು ।
ಸಿವುಡನು ಬೇಗದೆ ಕೊಡನ ತಕ್ಕೊಂಡು ।
ಗೌಡಿ ಬೇಗನೆ ನಡೆದಳು ॥೨೧॥

ಬಾಗಿಲು ಗಾವುಲು-ನಾಗಭೂಷಣ ಶಿವನು ।
ಆಗಿನದೊಂದು ಕಥನವ ಕತ್ತಲೆ ಮಂಜು ।
ಆಗ ಬೇಗದಲಿ ಮುಸುಕಿತ್ತು ॥೨೨॥

ಬರಿಗೊಡನೊಯ್ದರೆ-ತರಿವರು ಕಿವಿಮೂಗ ।
ಉರದ ಸಂಗಯ್ಯನನೀಗ ಉದಕದ ।
ಹರಿವ ತೋರೆಂದು ನಮಿಸಿದಳು ॥೨೩॥

ಸಣ್ಣ ಮಳೆಯುದರಲು-ಕಣ್ಣೆ ಕಾವಳಗೈದು ।
ಹೆಣ್ಣು ಬೇಗದಲಿ ನಡೆದಳು ಬಚ್ಚಲ ಉದಕ ।
ಎಣ್ಣೆಗಳಂತೆ ತಿಳಿದಿರೆ ॥೨೪॥

ಹೊತ್ತು ಹೋಯಿತ್ತೆಂದು-ತೊತ್ತು ಬೇಗನೆ ಬಂದು ।
ಮತ್ತೆ ಹರಳಯ್ಯನ ಮನೆಯಲ್ಲಿ ಬಾಗಿಲ ಬಳಿಯು ।
ಬಚ್ಚಲುದಕವನು ಮೊಗೆದಳು ॥೨೫॥

ಧಡಧಡಿಸಿ ನಡೆದಳು-ಕೊಡನ ಬೇಗನೆ ಹೊತ್ತು ।
ಒಡೆಯ ಕೋಪಿಸುವನೆನುತಲಿ ಕೊಪ್ಪರಿಗೆಯೊಳು ।
ಕೆಡಹಿದಳು ತಂದ ಉದಕವ ॥೨೬॥

ರಂಭೆಯರಿಬ್ಬರು-ತಂಬಿಗೆಯ ತಕ್ಕೊಂಡು ।
ತುಂಬಿ ಉದಕವನೆರೆಯಲು ಅವನ ಭವ ।
ಹಿಂಗಿತು ಪದವ ನಡಿಸುವೆ ॥೨೭॥

ಅತಿ ಚೋದ್ಯವಾಯಿತು-ಅತಿ ಚಿತ್ರವಾಯಿತು ।
ಮಿತ್ರರಿಬ್ಬರ ಮುಖ ನೋಡಿ ಎನ್ನಂಗ ।
ಸುಚಿತ್ತ ಪರಿಯೆಂತು ॥೨೮॥

ಕರೆಯಿಸೊ ಗೌಡಿಯು-ಒರಸಿಕೊಂಡನು ಮುಖವ ।
ತರಿಸಿದಿರೆಲ್ಲಿ ಉದಕವ ಎಂದೆನುತ ।
ಹರುಷದಿಂದವನು ಬೆಸಗೊಂಡ ॥೨೯॥

ಕರಸಿದಿರು ಗೌಡಿಯು-ಧೊರೆಯು ಕಟ್ಟಿದಿರಿಗೆ ।
ಕರ ಪಾದ ನಡುಗೆ ನಯನದಿಯುಗ್ಗಣಿ ಬಾಯು ।
ಬಿರಿವುತ ಬಿಕ್ಕಿ ಬೆದರುತ ॥೩೦॥

ಎಲ್ಲಿ ತಂದುದಕವ-ಕೊಲ್ಲೆ ಬಡಿಯೆ ನಿನ್ನ ।
ಎಲ್ಲವ ಹೇಳು ಎಂದೆನುತ ಗೌಡಿಗೆ ।
ಗಲ್ಲವ ಪಿಡಿದು ಬೆಸಗೊಂಡ ॥೩೧॥

ಕಲ್ಯಾಣದೊಳಗುಳ್ಳ-ಎಲ್ಲ ಪುರಾತರಿಗೆ ।
ಬಲ್ಲಿದರವರು ಶರಣರು ಹರಳೈಗಳು ।
ಅಲ್ಲಿ ಉದಕವ ಮೊಗೆದೆನು ॥೩೨॥

ಅರ್ಚನೆವಂತರು-ನಿಚ್ಚ ಲಿಂಗೈಕ್ಯರು ।
ಸುಚಿತ್ತವುಳ್ಳ ಶರಣರು ಹರಳೈಗಳ ।
ಬಚ್ಚಲ ಉದಕವ ಮೊಗೆದೆನು ॥೩೩॥

ಪಟ್ಟಾವಳಿ ಸೀರೆಯು-ಕೊಟ್ಟನು ಗೌಡಿಗೆ ।
ಕೆಟ್ಟಂಗವೆನ್ನ ಉಳುಹಿದೆ ನಾ ನಿನ್ನ ।
ಹೊಟ್ಟೆಲಿ ಬಂದ ಶಿಸುವೆಂದ ॥೩೪॥

ನೇವುರ ಅಂದುಗೆ-ಪಾಯ್ವಟ್ಟ ಪದಕವು ।
ಗವುಳಿ ಸರದ ಹಿರಿಯೋಲೆಯಾಭರಣವು ।
ತಾಯಿ ನಿನಗೆಂದು ಕೊಡಿಸಿದ ॥೩೫॥

ಶರಣ ಪತಿಗಳಿಗೆಲ್ಲ-ಪರಿಣತನಾಯಕ ।
ಹರನವತಾರ ನಿಜಭಕ್ತ ಹರಳಯ್ಯಗೆ ।
ಶರಣು ಮಾಡುವೆನು ಚರಣಕೆ ॥೩೬॥

ತೊಡುವ ತೊಡಿಗೆಯನು-ಮಡದಿಯಾಭರಣವ ।
ಮುಡುಪಗಟ್ಟಿಸಿ ಉಡುಗೊರೆಯ ಹರಳಯ್ಯಗೆ ।
ಕ-ಡಬೇಕು ನಾವು ಅವರಿಗೆ ॥೩೭॥

ಕಟ್ಟಿದರೇನು-ಕೊಟ್ಟು ಕಳುಹಿದರೇನು ।
ಮುಟ್ಟುವರಲ್ಲ ಪರಸೊಮ್ಮನೆಂದಳು ತಾ ।
ಕೊಟ್ಟಳುತ್ತರವ ಮಹಾದೇವಿ ॥೩೮॥

ಒಡವೆ ವಸ್ತುಗಳನು-ಕಡಗ ಕಂಠ ಮಾಲೆ ।
ಎಡೆ ನೀಲ ಪಚ್ಚ ರತ್ನವ ಕೊಟ್ಟರೆ ।
ಹಿಡಿವರಲ್ಲ ಪರಸೊಮ್ಮ ॥೩೯॥

ಪೊಡವಿ ಪೊಲ್ಲುಡಿಸಲು-ಹೆಡೆಫಣಿಯುಡುಗಲು ।
ಪಡುವಲ ರವಿಯುದಯಿಸಲು ಭಕ್ತರು ।
ಹಿಡಿವರಲ್ಲ ಪರಸೊಮ್ಮ ॥೪೦॥

ಅಡಿಗಡಿಗೆ ವಂದಿಸುವೆ-ನಡೆವೆ ನಾನಲ್ಲಿಗೆ ।
ಕುಡುವೆನು ನನ್ನ ಮಗಳನು ಎಂದೆನುತ ।
ನುಡಿದನು ಮಧುವರಸ ಮುದದಿಂದ ॥೪೧॥

ಅಂಗದ ಮೇಲೆ ಶಿವ-ಲಿಂಗವಿಲ್ಲದವರ ।
ಅಂಗಣ ಹೊಗಲುಗುಡರಯ್ಯ ಎಂದೆನುತ ।
ಹಿಂಗದೆ ಮಧುವರಸಗೆ ನುಡಿದಳು ॥೪೨॥

ಅಂಗದ ಮೇಲೆ ಶಿವ-ಲಿಂಗವು ನಿನಗಿಲ್ಲ ।
ಗಂಗೆಯ ತಂದ ಪರಿ ಹೇಗೆ ಎನುತಲಿ ।
ಹಿಂಗದೆ ಮಧುವರಸ ಬೆಸಗೊಂಡ ॥೪೩॥

ಅಂಗದ ಭವವೆಲ್ಲ-ಹಿಂಗಿತು ನಿನ್ನಿಂದ ।
ಲಿಂಗವ ಕೊಡು ತನಗೆಂದು ಮಹಾದೇವಿಯ ॥
ಅಂಘ್ರಿಯ ಹಿಡಿದು ನಮಿಸಿದ ॥೪೪॥

ಕಟ್ಟಿದರೆ ಲಿಂಗವ-ನೆಟ್ಟನೆ ನಿಮ್ಮವರು ।
ಕೆಟ್ಟನು ತಮ್ಮ ಕುಲಕೆಂದು ವಿಪ್ರರು ।
ಮುಟ್ಟರು ನಿನ್ನ ಮಧುವರಸ ॥೪೫॥

ಸುಡುವೆ ಹಾರುವ ಕುಲವ-ಕೆಡುವೆ ನಾನೀ ಕ್ಷಣ ।
ಕೊಡು ನನಗಿಷ್ಟಲಿಂಗವನು ಮಹಾದೇವಿ ॥
ಅಡಿಗಳಿಗಾಗ ವಂದಿಸಿದ ॥೪೬॥

ಬಂಧು ಬಳಗವ ಬಿಟ್ಟು-ಇಂದು ಧರಿಸಿ ಲಿಂಗವ ।
ನಿಂದಿಸುವರು ಜನರೆಲ್ಲ ನಿಮ್ಮಯ ।
ತಂದೆ ತಾಯಿಗಳುಹೆಂದು ॥೪೭॥

ನಡೆಪೋಗು ಅಲ್ಲಿಗೆ-ಜಡೆಯ ಜಂಗಮಲಿಂಗ ।
ಕೊಡುವರು ಲಿಂಗವನವರು ಎಂದೆನುತ ।
ನುಡಿದಳುತ್ತರವ ಮಹಾದೇವಿ ॥೪೮॥

ಅಂಗ ಶೋಭನ ಗವಿ-ಲಿಂಗ ಶೋಭನ ಗವಿ ।
ಜಂಗಮವಿರುವ ಮಠಕಾಗಿ ಮಹಾದೇವಿ ।
ಹಿಂಗದೆ ಮಧುವರಸನೊಡಗೊಂಡು ॥೪೯॥

ಮದಗಜಗಮನೆಯರು-ಮದಕೋಕಿಳ ಧ್ವನಿಯವರು ।
ಮದ ಜೀವರುಳ್ಳ ಸ್ತ್ರೀಯರು ನೆರೆದರು ।
ಒದಗಿ ಮಧುವರಸನೊಡಗೂಡಿ ॥೫೦॥

ಈಶ ಲಾವಣ್ಯ ವಿ-ಶೇಷದ ಶೃಂಗಾರ ।
ಈಶನ ಶರಣರಿವಂತೆ ನಡೆದರು ।
ಈ ಶಿವಭಕ್ತರೊಡಗೂಡಿ ॥೫೧॥

ಬಂದಳು ಮಹಾದೇವಿ–ನಿಂದು ಮಹತ್ತಿಗೆ ।
ವಂದನೆ ಮಾಡಿ ನುಡಿದಳು ಮಧುವರಸಗೆ ।
ಇಂದು ದೀಕ್ಷೆಯ ಕೊಡು ಸ್ವಾಮಿ ॥೫೨॥

ಎಂದ ಮಾತನು ಕೇಳಿ-ಇಂದುಧರನ ರೂಪು ।
ಸಂದ ಪ್ರಮಥರ ಬೆಸಗೊಂಡ ಮಹಾದೇವಿ ।
ಸಂದ ದೀಕ್ಷೆಯ ಪರಿಯೆಂತು ॥೫೩॥

ವಿಪ್ರ ಕುಲದಲಿವ-ತಪ್ಪದೆ ತಾ ಬಂದು ।
ತಪ್ಪ ರಕ್ಷೆಗಳ ಕತದಿಂದ ಇವನಂಗವು ।
ಪಳಿದು ಬಹಳ ಬಳಲಿದ ॥೫೪॥

ನೆಟ್ಟನೆ ಕರಮುಗಿದು-ಸಾಷ್ಟಾಂಗವೆರಗಿದ ।
ಖಟ್ವಾಂಗಧರನೆ ಕೃಪೆಯಾಗು ಇಂದೆನಗೆ ।
ಇಷ್ಟಲಿಂಗವ ಕೊಡು ಸ್ವಾಮಿ ||೫೫||

ಅಂದವಾಯಿತು ನೀ-ನಿಂದು ನುಡಿದ ನುಡಿ ।
ಚಂದ್ರಶೇಖರ ನಸುನಗುತ ಮತ್ತೆಂದ ॥
ತಂದಿರಿಸಿ ಪುಷ್ಪಫಲಗಳನು ||೫೬||

ನಿಂಬೆ ನೇರಿಲೆ ದಾ-ಳಿಂಬ ರುದ್ರಾಕ್ಷಿಯು ।
ತುಂಬಿದ ಮಾವು ನಾರಂಗಡಿಕೆಗೊನೆ ।
ಸಂಭ್ರಮದಿಂದೆ ಅನುಮಾಡಿ ||೫೭||

ಹತ್ತುಸಾವಿರ ಮಲ್ಲಿ-ತ್ರೆತ್ತಿಸಿ ವಿಸ್ತರದಿ ।
ಮತ್ತೆ ಮುಲಕಿನ ಮಕರಗಳು ತೋರಣದಿ ।
ಕೆತ್ತಿ ಗುರುರಾಯ ಅನುವಾದ ||೫೮||

ಪಟ್ಟೆ ಪಟ್ಟಾವಳಿ-ಕಟ್ಟುವಣ್ಣದ ಸೀರೆ ।
ಕಟ್ಟಿದರಲ್ಲಿ ಎಸೆದವು ಕೈಲಾಸದ ।
ದೃಷ್ಟ ಸಿಂಹಾಸನದಂತೆ ||೫೯||

ಮುತ್ತಿನ ಗುಚ್ಛವು-ತೆತ್ತಿಸಿದ ಗದ್ದುಗೆಗೆ ।
ಮತ್ತೆ ನವರತ್ನ ಎಡೆಯೆಡೆಗೆ ಇಕ್ಕಿದ ।
ಮುತ್ತಿನ ಗದ್ದುಗೆಯನುವಾಗೆ ||೬೦||

ಇಷ್ಟು ಮಾದಲ ನಿಂಬೆ-ದ್ರಾಕ್ಷೆ ದಾಳಿಂಬವು ।
ಈಕ್ಷಿಸುವರಿಗೆ ಅನುವಾಗಿ ಮೇಲ್ಕಟ್ಟು ।
ಅಕ್ಷಮಾರನ ಕೃಪೆಯಿಂದ ||೬೧||

ಸಾಧಿಸಿ ಸುವರ್ಣದಿ-ವೇಧಿಸಿದ ಗದ್ದುಗೆಗೆ ।
ಮಾದೇವರೊಡೆಯ ಪ್ರಭುವೆಂಬ ಗುರುವೆಸೆದು ।
ಸಾಧುಸಜ್ಜನರ ಸಮಯದಲಿ ||೬೨||

ಪಾದಾರ್ಚನೆಯ ಮಾಡಿ-ಪಾದೋದಕವ ಕೊಂಡು ।
ಪಾದಪೂಜೆಗಳ ಅನುಮಾಡಿ ಶುದ್ಧ ಪ್ರ ।
ಸಾದವ ಲಿಂಗಕೆಡೆಮಾಡಿ ||೬೩||

# ಶಿವಾನುಭವ


| ವರ್ಷ ೨೫ | ನವ್ಹಂಬರ ೧೯೫೧ | ಸಂಚಿಕೆ ೧೧ |
|---|---|---|


## ಮೋಳಿಗೆಯ ಮಾರಯ್ಯನ ಉಲಿವು ನಿಲುವುಗಳು.


(ಲೇಖಕರು:— ಸಿ. ನಾ. ಮಹಾಂತಣ್ಣವರ-ಹೂನೂರ,
ತಾ॥ ಜಮಖಂಡಿ.)


ಸಂಸಾರಸಾಗರದೊಳು ತೊಳಲಿ ಬಳಲುವ ಮಾನವನು ಎಷ್ಟು ಜಾಣನಿದ್ದರೂ ಪಂಡಿತನೆನಿಸಿದರೂ ಸಂಸಾರದ ಜಳದ ಸೆರಗು ಹರಿದು, ಹರಿಯದ ಹರುಷವ ಹೊಂದುವದು ಬಹು ಕಷ್ಟ. ಮಾಯಾಜಾಲದ ಬಲಿಯು ಅರಸನಿರಲಿ ಆಳಾಗಿರಲಿ, ಬಡವನಿರಲಿ, ಬಲ್ಲಿದನಿರಲಿ, ಹೆಂಗಸಿರಲಿ, ಗಂಡಸಿರಲಿ, ತರುಣನಿರಲಿ ವೃದ್ಧನಿರಲಿ, ಕುಶಲನಿರಲಿ ಮಾಸಕನಿರಲಿ, ಯಾರೇ ಇರಲಿ. ಅವರನ್ನು ತೊಡಕುಹಾಕಿ ಹಿಂಡಿಹಿಚುಕುವದನ್ನು ಎಂದೂ ಬಿಡದು. ಇಂಥ ಪಶು-ಪಾಶವನ್ನು ಹರಿದೊಗೆಯಲು, ವಿಶ್ವದಲ್ಲಿ ಅನೇಕ ಮತಪಂಥಗಳೂ ಧರ್ಮಗಳೂ ಧೃತಿಗುಂದಿ, ದೃಢವಾದ ಮಾರ್ಗವನ್ನು ಹೊಂದದೆ ನಿಂದ ನಿಲವುಗಳು ಎಂದೆಂದಿಗೂ ತೋರಿಬಂದಿವೆ; ಈಗಲೂ ತೋರುತ್ತಲಿವೆ. ಈ ಭವಬಂಧನವನ್ನು ಹರಿದು, ವಿಶ್ವದ ನಿಜತತ್ವವನ್ನು ತಿಳಿದು, ನಿಜಸುಖಾನಂದದೊಳು ಇರುವದಕ್ಕಾಗಿ ಎಷ್ಟೋ ಮನುಮುನಿಗಳು ತಮ್ಮ ತಮ್ಮ ಇಡೀ ಆಯುಷ್ಯವನ್ನೇ ಹಾಳು ಮಾಡಿಕೊಂಡಿದ್ದಾರೆ. ಇಷ್ಟೇ ಅಲ್ಲ! ತಮ್ಮ ತಮ್ಮ ಅನುಭವಾಚಾರಗಳನ್ನು ಬರೆದಿಟ್ಟಿದ್ದಾರೆ. ಅವುಗಳ ಸಂಖ್ಯೆಯು ಅಮಿತವಾಗಿದೆ. ವೇದಗಳ ನಾದವೂ, ಆಗಮಗಳ ಸಂಪ್ರದಾಯವೂ ಶ್ರುತಿಗಳ ಅರಿವುಮರಿವುಗಳೂ, ನೇತಿಗಳೆದ ವೇದಾಂತವೂ, ವಾದದಲ್ಲಿ ಓದುಗ

ಲಿತು ಸಂಸಾರ ಬಾಧೆಯು ನೀಗಲು ಅತಿ ಅಶಕ್ತವಾಗಿ ನಿಂತಿವೆ. ಇಂಥ ಹೋರಾಟದೊಳಗೆ ಶೈವಪ್ರಭೇದವಾದ ವೀರಶೈವಮತ ಬಂಟನು, ಮಾಯೆಯನ್ನು ಹಿಡಿದು ಮಾಯೆಯ ನೋವು ಆಗದಂತೆ ಸಾಯುವ ಸನ್ಮಾರ್ಗವನ್ನು ಗೊತ್ತುಹಚ್ಚಿ, ಶಿವಭಕ್ತರಾಗಿ ಶಿವಶಕ್ತಿಯುತರಾಗಿ, ಇತರ ಯೋಗಿಗಳಿಗಸಾಧ್ಯವಾದ ಪರಮಶಿವಯೋಗದೊಳು ನಿಂದ. ಶಿವೈಕ್ಯರಾಗ ಶಿವಶರಣರ ಸಂಖ್ಯೆಯು ಅಸಾಧಾರಣವಾಗಿ ಬೆಳೆದ ಬಸವನ ಬಳಗವನ್ನು ಮನದಂದರೆ ಮಾನವನಿಗೆ ಮಹಾಶ್ಚರ್ಯವಾಗದೆ ಇರದು. ಇಂಥ ಮಹಾಶರಣರ ಮಾಲಿಕೆಯ ಮಣಿಯಾದ ಮೋಳಿಗೆಯ ಮಾರಯ್ಯನ ಜೀವನದ ಜೊತೆಯು ಶಿವಾನುಭವಿಗಳ ಭಾವದೊಳು ಬಾಳಿ ಬದುಕಿಸದೆ ಇರದು.

ಮುಖಕ್ಕೆ ಮೂಗೇ ಮೇಲೆನಿಸುವಂತೆ ಭರತಖಂಡದಲ್ಲಿ ಬೇರೆ ಬೇರೆ ನಾಮವನಾಂತ ದೇಶಂಗಳೊಳು, ಮುಖ್ಯವೆಂದೆನಿಸುವ ಕಾಶ್ಮೀರದೇಶ. ಆ ದೇಶದ ಪ್ರಾಂತದೊಳು ಮುಂದರಿದ ಸಮಾಲಾಖುವೆಂಬ ಸಮೃದ್ಧಿಯ ಸಾಮ್ರಾಜ್ಯ. ಆ ಸಾಮ್ರಾಜ್ಯದ ಮುಖವೆಂದೆನಿಸುವ ಮಾಂಡವ್ಯಪುರವೆಂಬ ರಾಜಧಾನಿ. ಆ ರಾಜ್ಯದೊಳು ಧರ್ಮ, ಆಚಾರ, ಅನುಭವಗಳಿಂದ ರಾರಾಜಿಸುವ ಭಾಳಲೋಚನನೆಂಬ ಮಹಾರಾಜ. ಆತನಾಳಿದ ಕಾಲ ಹನ್ನೆರಡನೆಯ ಶತಮಾನ. ಆ ಕಾಲಕ್ಕೆ ಶೈವ, ವೀರಶೈವ ಮತಗಳ ಅವನತಿಯನ್ನು ಬಗೆಯಲು ಬೌದ್ಧ ಚಾರ್ವಾಕ ಮತಗಳ ಏರಾಟ. ಈ ಏರಾಟಗಳನ್ನು ಭಾರತದ ಮುಖವಾದ ತನ್ನ ಸಾಮ್ರಾಜ್ಯದಲ್ಲಿ ಸ್ವಾಗತಿಸಬಾರದೆಂಬ ಮಹಾರಾಜನ ಅಭಿಮಾನ. ಅದಕ್ಕೆ ಭಾಳಲೋಚನನು ಭವಹರನನ್ನು ಕುರಿತು ಭಯಂಕರವಾದ ತಪವನ್ನು ನಡೆಯಿಸಿದ ಯತ್ನ. ಈ ಯತ್ನದ ಅರುಹು ಪುರಹರನಿಗುಂಟಾಗಿ ಆತನ ಭಕ್ತಿಗೆ ಮೆಚ್ಚಿ, ತನ್ನೊಳು ಮನ್ನಣೆಯ ಮಹಾಗಣಂಗಳೊಳು ಸುಖಮುಯನೆಂಬ ಗಣನಾಥನನ್ನು ಕರೆದು– "ನೀನು ಮೃತ್ಯುಲೋಕದೊಳವತರಿಸಿ ಮಾಂಡವ್ಯಪುರದ ಮಹಾರಾಜನಿಗೆ ಮಗನೆನಿಸಿ, ಶಿವಭಕ್ತಿಯನ್ನು ಬೆಳೆಯಿಸಿ, ವೀರಶೈವವನ್ನು ವಿಸ್ತರಿಸಿ, ಪರವಾದಿಗಳನ್ನು ಜಯಿಸಿ, ರಾಜಯೋಗಿಯೆನಿಸಿ, ರಾಜತೇಜದ ಭೋಗದೊಳು ಕೆಲಕಾಲವಿದ್ದು, ಆ ರಾಜತೇಜವನ್ನೇ ತ್ಯಜಿಸಿ, ಕಾಶ್ಮೀರದಿಂದ ಕಲ್ಯಾಣಕ್ಕೆ ಹೋಗಿ, ಶಿವಶರಣರ ಸಂಗದೊಳಿದ್ದು, ಸತ್ಕಾಯಕವನೆ ಮಾಡಿ ಸದಾಚಾರಿಯಾಗಿ ಶುದ್ಧ ಶಿವಾಚಾರ

ವನ್ನೇ ಬೀರಿ, ಬರಬೇಕೆಂದು ವರಪ್ರದಾನಂಗೆಯ್ಯಲು” ಆ ಸುಖಮಯನು ಭೂಲೋಕಕ್ಕಿಳಿದ ಮಹಾದೇವರಾಜನೆಂಬ ಹೆಸರಿನ ರಾಜಪುತ್ರನೇ ಭಾಳ ಲೋಚನನ ಮಗನು.

ಭಾಳಲೋಚನನ ಸವಾಲಕ್ಷವೆಂಬ ಸಾಮ್ರಾಜ್ಯದೊಳು ಶಿವಾಲಯ ವಿಲ್ಲದ ಊರಿಲ್ಲ. ಶಿವಭಕ್ತರಿಲ್ಲದ ಮನೆಯಿಲ್ಲ. ಅಸತ್ಯ, ಹಿಂಸೆ, ಅಪ್ರಾ ಮಾಣಿಕತೆ, ಕಳವು, ಹಾದರ ಮೊದಲಾದ ಅನಾಚಾರದ ಶಬ್ದ ಸಂಕು ಳವಿಲ್ಲ. ಅಲ್ಲಿ ಶಿವಭಕ್ತಿ, ಶಿವಪೂಜೆ, ಶಿವಾಚಾರ, ಶಿವಧ್ಯಾನ, ಶಿವ ಜ್ಞಾನಗಳು ರಾಜಪ್ರಜೆಗಳೊಳು ಸಂದಿಲ್ಲದೆ ಬಂಧಿಸಿ ಶಿವಭಾವವನ್ನು ವ್ಯಕ್ತ ಗೊಳಿಸುತ್ತಿದ್ದವು. ಇಂಥ ರಾಜ್ಯದ ರಾಜಧಾನಿಯಾದ ಸೌಧಾ ನದೀ ತೀರದ ಮಾಂಡವ್ಯಪುರ ಪ್ರಾಂತದೊಳು ಸರ್ವಧಾನ್ಯಗಳ ಬೆಳಸು, ಸರ್ವ ಪ್ರಾಣಿಗಳಾವಾಸವಾದ, ಈಗಿನ ಮುಂಬಯಿಯ ರಾಣೀಬಗೀಚವನ್ನು ಹೀಯಾಳಿಸುವ ವಿಶ್ವಪ್ರದರ್ಶನವೂ, ಆ ಪ್ರದರ್ಶನಕ್ಕೆ ತಕ್ಕ ವನಶೋ ಭೆಯೂ, ಆ ವನಕ್ಕೆ ತಕ್ಕ ಹೂಗಿಡಗಳೂ ಫಲವೃಕ್ಷಗಳೂ ಪರಿಪರಿಯ ಬಣ್ಣದ ಪಕ್ಷಿವೃಂದವೂ ವಿಧವಿಧದ ಪಶುಜಾತಿಗಳೂ ಕೊಡಹಾಲುಗರೆವ ಗುಜರಾಥ ಪ್ರಾಂತದಂಥ ಎಮ್ಮೆ ಆಕಳುಗಳೂ, ನೋಡತಕ್ಕಂಥ ಎತ್ತು ಗಳೂ ಶೋಭಿಸುತ್ತಿದ್ದದ್ದಲ್ಲದೆ, ಮೇಲೆತ್ತರದ ಆಳುಗಳು ಈಗಿನ ಅಫ ಗಾಣ ಜಾತಿಯನ್ನು ಅಲ್ಲಗಳೆಯುತ್ತಿದ್ದವು. ಆ ರಾಜಧಾನಿಗೆ ಏಳುಸುತ್ತಿನ ಕೋಟೆ, ಆ ಕೋಟೆಯ ಮಧ್ಯದಲ್ಲಿ ಅರಮನೆ, ಪ್ರತಿಯೊಂದು ಕೋಟೆಯ ಸುತ್ತಲು ಕೊತ್ತಳುಗಳು, ಅಲ್ಲಿ ಸದಾಸನ್ನದ್ಧವಾದ ಸಂರಕ್ಷಕದಂಡು, ಹಾಗು ಆಯಾ ಕೋಟೆಗಳಲ್ಲಿ ಶಿವಾಲಯಗಳು, ಆ ಶಿವಾಲಯಗಳ ಸಮೀ ಪದಲ್ಲಿ ರಾಜಬಳಗಗಳ ಮನೋಹರವಾದ ಇಮಾರತುಗಳು. ತೀರ ಹೊರ ಕೋಟೆಯಲ್ಲಿ ವ್ಯಾಪಾರ, ಕಲಾಕೌಶಲ್ಯ, ಒಕ್ಕಲತನ ಮುಂತಾದ ಉದ್ಯೋಗಿ ಗಳ ಗೃಹಗಳು ಅಂದಚಂದಾಗಿದ್ದು, ಪ್ರೇಕ್ಷಕರನ್ನು ಪರಮಾಶ್ಚರ್ಯ ಗೊಳಿಸುತ್ತಿದ್ದವು.

ಇಂಥ ಸಾನಂದಾಶ್ಚರ್ಯಮಯವಾದ, ಶಿವಸಾಲೋಕ್ಯವನ್ನನುಕರಿ ಸುವ ಸಾಮ್ರಾಜ್ಯಾಧಿಪತಿಯ ಸುಕುಮಾರನು ದೇವಲೋಕದಿಂದ ಭೂಲೋ ಕಕ್ಕಿಳಿದು ಶೈಶವಕೌಮಾರಾವಸ್ಥೆಗಳನತಿಗಳೆದು ತಾರುಣ್ಯಾವಸ್ಥೆಯೊಳು ಕಾಲಿಡಲು ಕಾತರಿಸಿದಾಗ, ನೀತಿನಿಧಾನನಾಗಿ ಸುಗುಣಗಳ ಮಣಿಯಾಗಿ

ವಿದ್ಯಾವಿಭೂಷಿತನಾಗಿ, ವಜ್ರದೇಹಿಯಾಗಿ ಅಂತಃಕರಣರಸಭರಿತನಾದ ದಯಾಸಮುದ್ರನಾಗಿ, ವೀರವಿಕ್ರಮನೂ ಮೇದಿನಿಯ ಧೀರಪುರುಷನೂ ಶಾಂತಸಮುದ್ರಿತನೂ ರಾಜ್ಯಪರಿಪಾಲನೆಗೆ ತಕ್ಕವನೂ ಆಗಿ, ತಂದೆಯಿಂದ ಆ ಪುಣ್ಯಭೂಮಿಯ ಸಾಮ್ರಾಜ್ಯಾಧಿಕಾರವನ್ನು ಸ್ವೀಕರಿಸಿ ತಂದೆಯ ಆಶೀರ್ವಾದದಿಂದ ಗಂಗಾದೇವಿಯನ್ನು ಮಂಗಲಮಯವಾದ ಮಹಾರಾಣಿಯನ್ನು ಮಾಡಿಕೊಂಡದ್ದಲ್ಲದೆ, ಆ ರಾಜತೇಜ, ಆ ರಾಜಭೋಗ, ಆ ರಾಜಭಾಗ್ಯವನ್ನು ಮತ್ತಿಷ್ಟು ಮುಂದರಿಸುವ ಕಡುಬಲಗೊಂಡ ಕಂದರ್ಪನ ದರ್ಪಕ್ಕೆ ಮಾಣದ ಕಾಣಿಕೆಗೊಡಲು ಅಣಿಯಾದ ಏಳುನೂರು ಸೌಭಾಗ್ಯವತಿಯರಾದ ಕಡುಬೆಡಗಿನ ರಾಣಿಯರಿರುವದು ಆ ರಾಜಪುತ್ರನಿಗೆ ಅರಿದಲ್ಲ. ಆತನ ರಾಜ್ಯವಾಳುವ ರೀತಿನೀತಿ ಸಾಮದಂಡಾದಿ ಚತುರೋಪಾಯಗಳನ್ನು ಬಲ್ಲ ಮಂತ್ರಿಮಂಡಳಗಳಿಂದಲೂ, ಮಹಾಶಕ್ತಿಯುತರಾದ ಚತುರಂಗ ಬಲಸಮೇತವಾದ ಸೈನ್ಯಾಧಿಕಾರಿಗಳಿಂದಲೂ, ಮಹಾಮಂಡಲೇಶ್ವರರಿಂದಲೂ, ಮಂಡಲ, ಪರಗಣೆ ಗ್ರಾಮಾಧಿಕಾರಿಗಳಿಂದಲೂ ಶೋಭಿಸುವ ಸಾಮ್ರಾಜ್ಯವು ವಿಶ್ವದೊಳು ವಿರಾಜಮಾನವಾಗಿತ್ತು.

ನೀತಿಯಿಂದ ಚಾಣಕ್ಯ, ಸತ್ಯದಿಂದ ಹರಿಶ್ಚಂದ್ರ, ಶೂರತನದಿಂದ ಬಲಭದ್ರ, ಭಕ್ತಿಯಿಂದ ಅರ್ಜುನ, ದಾನದಿಂದ ಕರ್ಣ, ರಾಜ್ಯದಿಂದ ರಾಮರಾಜ್ಯವೆನಿಸಿದ ಆ ನಾಡು ಸೌಖ್ಯದ ಬೀಡಾಗಿತ್ತು. ಮಹಾದೇವ ಭೂಪಾಲನು ಕೃಷ್ಣನಂತೆ ತನ್ನ ಏಳುನೂರು ರಾಣಿಯರಿಗೆ ರಮಣನಾಗಿ, ಗಂಗಾದೇವಿ ಮಹಾರಾಣಿಗೆ ಮಹಾರಾಜನಾಗಿ, ಕೆಲಕಾಲ ಸಂಸಾರ ಸಾಗರದ ಸ್ವರೂಪದಲ್ಲಿರಲು, ಗಂಗಾದೇವಿಯ ಹೊಟ್ಟೆಯಿಂದ ಲಿಂಗರಾಜನೆಂಬ ಸುಕುಮಾರನು ಜನಿಸಿದನು. ಆತನಾದರೂ ರಾಜಸಿಂಹನೆನಿಸಿ ತಂದೆಯಂತೆ ತೇಜೋಮೂರ್ತಿಯಾಗಿ ಸದ್ಗುಣಿಯಾಗಿ ಸುಶೀಲನಾಗಿ ಬಾಳೆಯಂತೆ ಬುರುಬುರು ಬೆಳೆಯಹತ್ತಿದನು. ಆತನ ಯುದ್ಧಕಲೆ ನೀತಿಕಲೆ, ಮುಖಕಳೆಗಳು ರಾಜತೇಜದಿಂದ ಬೆಳಗಹತ್ತಿದವು. ತಂದೆಯು ಅನುದಿನದೊಳು ಆಚರಿಸುವ ಕ್ರಿಯಾಜ್ಞಾನಾಚಾರಗಳನ್ನು ಅನುಸರಿಸಹತ್ತಿದನು. ಅರಸನು ಹೆಂಡರ ಮಕ್ಕಳ ರಾಜಭೋಗದೊಳು ವೇಳೆಗಳೆಯದೆ ಕುಟುಂಬಸಹ, ತನ್ನ ಗುರುವಿನಿಂದ ವೀರಶೈವ ತ್ರಿವಿಧ ದೀಕ್ಷಾಬದ್ಧನಾಗಿ ತತ್ವಸಂತತಿಯ ವಿವರಿಸಿ ನೋಡುತ್ತ ತನುಮನ ಭಾವದೊಳು ಇಷ್ಟ

ಪ್ರಾಣ ಭಾವಲಿಂಗಾನುಸಂಧಾನಿಯಾಗಿ ಗುರುಲಿಂಗ ಜಂಗಮಾರ್ಚನೆ-ಅರ್ಪಣಗಳನ್ನೂ ಅಂಗಲಿಂಗ ಸಕೀಲುಗಳನ್ನೂ ಅರಿಯುತ, ಭಕ್ತಿಯುತನಾಗಿ ಶಿವದಾಸೋಹಿಯಾಗಿ ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಏಕಲಿಂಗನಿಷ್ಠಾಪರನಾಗಿ "ಶ್ರೀಗುರು ವಚನದಿಂದಧಿಕ ಸುಧೆಯುಂಟೇ?" ಎಂಬ ವಾಕ್ಯಾರ್ಥದ ಅನುಭವಿಯಾದನು. ಹಗಲು ರಾಜ್ಯ ಪರಿಪಾಲನೆಯಲ್ಲಿ ಆಸಕ್ತನಾದರೂ ದಿನಾಲು ಪ್ರತಿಯೊಂದು ಶಿವಾಲಯದಲ್ಲಿ ನಡೆಯುವ ಸಂಜೆಯ ವೇಳೆಯ ಶಿವಪುರಾಣ, ಶಿವಕೀರ್ತನ, ಶಿವಪ್ರವಚನಗಳನ್ನು ಕೇಳಿ ಪಾರಮಾರ್ಥಿಕೋತ್ಸವದೊಳು ಪರಿಪಕ್ವತೆಯನ್ನು ಹೊಂದುತಲಿದ್ದನು.

ಹೀಗಿರಲು ಆ ರಾಜಧಾನಿಯ ಲುಬ್ಧಕನೋರ್ವನ ಸಾಕಿದ ಹಂದಿಯು ತನ್ನ ಆಹಾರಾರ್ಥವಾಗಿ ನದಿಯ ತೀರಗುಂಟ ಸಂಚರಿಸುವಾಗ ಒಬ್ಬನೊಬ್ಬ ಜಂಗಮನು ಸ್ನಾನಾದಿಗಳನ್ನು ತೀರಿಸಿ ಭಕ್ತರಿಂದ ಎತ್ತಿದ ಸತ್ವವುಳ್ಳ ನಿತ್ಯಪ್ರಸಾದವನ್ನು ಲಿಂಗಕ್ಕಿತ್ತು ಶೇಷಪ್ರಸಾದವ ಸ್ವೀಕರಿಸುವಾಗ ಸೂಸಿದ ಅಗುಳವು ಸೌಧಾ ತೀರದಲ್ಲಿ ಬಿದ್ದಿರಲು ಆ ಅಗುಳನ್ನು ಹಂದಿಯು ಗುಳಂಗುಟುಕುಗೈದದ್ದರಿಂದ ಅದು ಪರುಷಾಂಗಿಯಾಯಿತು. ಇದನ್ನು ಕಂಡ ಲುಬ್ಧಕನು ಹಂದಿಗೆ ರೋಗವುಂಟಾಗಿರುವದೆಂದು ಭಾವಿಸಿ, ಅದಕ್ಕೆ ಕಾದಕಬ್ಬಿಣ ಕುರದಿಂದ ಬರೆಕೊಡಲು ಆ ಕುಡವೇ ಕಡವರವಾಯಿತು. ಮತ್ತೆ ಮತ್ತೆ ಬರೆಕೊಡಲು ಅವೂ ಹಾಗೇ ಆಗಹತ್ತಿದವು. ಈ ವಾರ್ತೆಯು ಮಹಾದೇವಭೂಪಾಲನಿಗೆ ಮುಟ್ಟಲು, ಅದನ್ನು ಹಿಡಿತರಿಸಿ ತಾನೂ ಅದಕ್ಕೆ ಕಾದ ಕುಡದಿಂದ ಬರೆಕೊಡಿಸಲು ಆ ಕುಡವೇ ಬಂಗಾರದ ಕುಡವಾಯಿತು. ಹೀಗೆ ಕಾಸಿ ಕಾಸಿ ಬರೆಕೊಡುತ್ತಿರಲು, ಹಂದಿಯು ಹಲ್ಲುಗಿಸಿಯುತ್ತ ಹರಣವನು ಹಾರಿಸಿತು. ಕೂಡಲೆ ಆ ಹಂದಿಯ ಶರೀರದಿಂದ ಒಬ್ಬ ದಿವ್ಯ ಪುರುಷನು ಅವತರಿಸಿ ಮಾತಾಡಲನುವಾದನು. ಭೂಪಾಲನು ಆ ಅವತಾರಿಗೆ ನೀನು ಯಾರು? ನಿನ್ನ ವೃತ್ತಾಂತವೇನೆಂದು ಕೇಳಲು —

"ನಾನು ಕೇತಕಿಯೆಂಬ ಗಂಧರ್ವ" "ರುದ್ರೋಭೂತ್ವಾರುದ್ರಮರ್ಚಯೇತ್" ಎಂಬ ನುಡಿಗನುಸರಿಸಿ ನಡೆವ ರುದ್ರಗಣಾಂಗಳಿಗ "ಜಂಗಮ-ಶೇಷಾನ್ನವನ್ನು ಪರಮಲಿಂಗಕ್ಕೀಯಬಹುದೇ?" ಎಂದು ನಾನು

ನುಡಿದದ್ದಕ್ಕಾಗಿ, ಆ ರುದ್ರಗಣವು ಕಿಡಿಕಿಡಿಯಾಗಿ "ದುರಾತ್ಮಾ, ನೀನು ಹಂದಿಯಾಗಿ ಬಾಳು" ಎಂದು ಶಾಪವನಿತ್ತರು. ನಂತರ ನಾನು ಮಹಾದೇವರನ್ನು ಮೊರೆಹೊಗಲು, ಅವನು ಗಣಂಗಳಿತ್ತ ಶಾಪವು ಸುಳ್ಳಾಗದು. ನೀನು ಭೂಲೋಕದಲ್ಲಿ ಮಾಂಡವ್ಯಪುರದ ಲುಬ್ಧಕನಲ್ಲಿ ಹಂದಿಯಾಗಿ ಹುಟ್ಟಿ, ಬಾಳಿ ಜಂಗಮಶೇಷಾನ್ನವನ್ನು ಭುಂಜಿಸಿದ್ದಾದರೆ ಶಾಪವಿಮೋಚನವಾಗುವದೆಂದು ಅಪ್ಪಣೆಕೊಡಿಸಿದರು" ಎಂದು ಹೇಳಿ ಗಂಧರ್ವನು ಆಕಾಶಮಾರ್ಗಾನುವರ್ತಿಯಾದನು.

ಹಂದಿಯು ದಿವ್ಯದೇಹವನ್ನು ಹೊಂದಿದ ಹೊಲಬನ್ನರಿತ, ಗುರೂಕ್ತಿಯಂತೆ ವೀರಶೈವ ಸಾಧನದಿಂದಿದ್ದ ಭೂಪಾಲನು, ಜಂಗಮಪ್ರಸಾದದ ಮಹಾತ್ಮ್ಯೆಯನ್ನು ಕೇಳಿ ಭಕ್ತಿಪುಳುಕಿತನಾಗಿ, ಗುರುಸೇವೆ ಲಿಂಗಪೂಜೆಗಳೊಡನೆ ಜಂಗಮಾರಾಧನೆಯೂ ಅವರ ಶೇಷಪ್ರಸಾದವೂ ಅತಿ ಮಹತ್ವದ್ದೆಂದು ಮನದಂದು ತನ್ನ ರಾಜ್ಯದೊಳಗಿದ್ದ ಎಲ್ಲ ಜಂಗಮಮೂರ್ತಿಗಳನ್ನು ಕಾಶಿ ಕೇದಾರಕ್ಷೇತ್ರಗಳಲ್ಲಿ ವಾಸಿಸುವಷ್ಟು ಜಂಗಮರನ್ನೂ ಭಕ್ತಿಪೂರ್ವಕ ಬರಮಾಡಿಕೊಂಡು, ದಿನಾಲು ಅವರ ಇಚ್ಛಾಭೋಜನವ ಮಾಡಿಸಿ ಅವರ ಶೇಷಪ್ರಸಾದವನ್ನು ಸಲ್ಲಿಕಲಸುವಾದನು. ಈ ವಾರ್ತೆ ಕೀರ್ತಿಗಳು ಕಡುಬೇಗ ಪೊಡವಿಯನಾವರಿಸಲು, ಹಿಂಡಜಂಗಮವು ಅರಮನೆಯನ್ನು ಅಡರಿತು. ಅಂತು ಆರುಸಾವಿರ ಜಂಗಮವು ಕೂಡಿದ್ದಕ್ಕೆ ಭೂಮಂಡಲೇಶ್ವರನ ಭಕ್ತಿಭಾವವು ಉಕ್ಕಿ ಆನಂದಾಶ್ರುಗಳು ಮಿಕ್ಕಿ ಮಿನುಗಿದವು.

ಅರಸನು ಷಡಕ್ಷರೋಚ್ಚಾರಣೆಯ ಮಂತ್ರಪಠಿಸುತ್ತ ಪ್ರಭಾತಕಾಲದೊಳಿದ್ದು ತನ್ನ ಸ್ಥೂಲಾಂಗದ ಬಾಹ್ಯಾಂತರಾಳಗಳನ್ನು ಶುದ್ಧೀಕರಿಸುವ ಸ್ನಾನಾದಿ ಶಿವಾರ್ಚನೆಗಳನ್ನು ತೀರಿಸಿ, ಎಲ್ಲ ಜಂಗಮರ ಶಿವಪೂಜೆ, ಶಿವಾರ್ಚನೆ, ಶಿವಾರ್ಪಣೆಗಳಿಗೆ ಅನುಕೂಲ ಮಾಡಿಕೊಟ್ಟು ಮುಂಜಾನೆ ೧೦ ಘಂಟೆಯೊಳಗಾಗಿ ಆರುಸಾವಿರ ಜಂಗಮದಾಸೋಹಕ್ಕೆ ಅಣಿಯಾಗಿ ನಿಂತು ಮಣಿಮಣಿದು ಮಹಾರಾಧನೆಗೈದು ಪಾದೋದಕ ಪ್ರಸಾದಗಳನ್ನು ಪಡೆಯುತ್ತ ಆರಾಧನೆಯ ಮುಗಿಸಿ, ಅವರಿಗೆ ತಾಂಬೂಲವಸ್ತ್ರಾಭರಣಂಗಳನ್ನು ಭಕ್ತಿಪುರಸ್ಕರವಾಗಿ ಇತ್ತು, ಅವರ ಆಶೀರ್ವಾದಂಗಳ ಪಡೆದು,

ರಾಜವೇಷಭೂಷಿತನಾಗಿ ರಾಜದರ್ಬಾರಕ್ಕೆ ಹೋಗಿ, ಅಲ್ಲಿ ಅಷ್ಟಪ್ರಧಾನರ ಶಿಷ್ಟಕಾರ್ಯಕಲಾಪಗಳನ್ನು ಕೇಳಿ, ಅವರವರ ಅಧಿಕಾರದಂತೆ ಸಾಮ್ರಾಜ್ಯೋನ್ನತಿಯ ಮಾರ್ಗಗಳನ್ನು ಅನುಸರಿಸಲು ಕಟ್ಟಳೆಗಳ ಮಾಡಿ, ಇನ್ನಿತರ ಭಾಷಾಪಂಡಿತರ ನೃತ್ಯಗಾಯಕರ ಕಲಾಕುಶಲರಾದಿಯಾದ ೬೪ ವಿದ್ಯೆಗಳ ಪ್ರಾವಿಣ್ಯ ಪುರುಷರಿಗೆ ಪಾರಿತೋಷಗಳನ್ನು ಪ್ರವರ್ಧಿಸುತ್ತ, ಸಂತಸಂಗೊಂಡು ದರ್ಬಾರದಿಂದ ಅರಮನೆಗೆ ಐತಂದು, ಮಹಾರಾಣಿಯಿಂದ ಆರುನೂರು ರಾಣಿಯರ ಪ್ರೇಮ ಪಾಶವನ್ನು ಪ್ರವರ್ಧಿಸುತ್ತ, ಅವರೊಡನೆ ಶಿವಸಂಕಥೆಗಳನ್ನು ಶಿವಾಲಯಗಳೊಳು ಕೇಳುತ್ತ, ಹರುಷವ ಬೀರುತ್ತ ಭವಬಂಧನವನ್ನು ಹರಿಯುವ ಪರಿಯನರಿಯುತ್ತ ಇರುತಿರ್ದನು.

ಆ ಭೂಪಾಲನ ನಿರುಪಾಧಿಕ ಜಂಗಮ ಭಕ್ತಿಯು ಬೆಳೆ ಬೆಳೆದು ಆರು ಸಾವಿರ ಜಂಗಮರನ್ನು ತನ್ನ ಪರಾಶಕ್ತಿಯಿಂದ ಅತ್ತಿತ್ತ ಅಗಳಾದ ದಂತೆ ಮಾಡಿತು. "ಭಕ್ತ ಜಂಗಮದ ಸಂದೊಂದಾಗಿ ನಿಂದ ನಿಲವೇ ಭಕ್ತ ಸ್ಥಲದೊಳಗಿನ ಉಭಯಸ್ಥಲ." "ಲಿಂಗಾರ್ಚನೆಯ ಮಾಡುವೆನಯ್ಯ, ಜಂಗಮವು ಮನೆಗೆ ದಯಮಾಡಲೆಂದು" ಎಂಬ ಲೋಕೋಕ್ತಿಯಂತೆ ಭೂಪಾಲನ ಶಿವಪೂಜೆ, ಜಂಗಮಾರಾಧನೆಗಳ ವಾರ್ತೆಯು ಭಾರತದಲ್ಲೆಲ್ಲ ಹಬ್ಬಿತು. ಅದರಂತೆ ಕಲ್ಯಾಣವಾಸಿಯಾದ ಶ್ರೀ ಬಸವೇಶನಿಗೂ ಗೊತ್ತಾಯಿತು. ಶ್ರೀ ಸಂಗಮೇಶ್ವರನ ಕಟ್ಟಪ್ಪಣೆಯಂತೆ ಬಸವಣ್ಣನಿಗೆ ಒಂದು ಲಕ್ಷ ತೊಂಭತ್ತಾರುಸಾವಿರ ಜಂಗಮವು ಬೇಕಿತ್ತು. ಆದರೆ ಅವನಲ್ಲಿ ಒಂದು ಲಕ್ಷ ತೊಂಬತ್ತು ಸಾವಿರ ಗಣಂಗಳು ಮಾತ್ರ ಮಿಲಿತರಾಗಿದ್ದರು. ಇನ್ನು ತನ್ನ ವ್ರತಕ್ಕೆ ಆರು ಸಾವಿರ ಜಂಗಮವು ಕಡಿಮೆಯಾಗಿ ಚಿಂತೆಗೊಳಗಾಗಿದ್ದನು. ಮಹಾದೇವ ಭೂಪಾಲನಲ್ಲಿದ್ದ ಆರು ಸಾವಿರ ಜಂಗಮ ವಾರ್ತೆಯನ್ನು ಕೇಳಿ ಹರುಷಿತನಾಗಿ ನೀಲಾಂಬಿಕೆಯಿಂದ ಬುತ್ತಿಯನ್ನು ಕಟ್ಟಿಸಿ, ತನ್ನ ಮನೋಪರುಷವಾದ ಹಸಿಬೆಯಲ್ಲಿ ಹಾಕಿಸಿ, ಕೋರಿಶೆಟ್ಟಿಯ ರೂಪ ತಾಳಿ, ಕಾಶ್ಮೀರ ದೇಶದ ಮಾಂಡವ್ಯಪುರ ಪ್ರವೇಶ ಮಾಡಿ, ಅಲ್ಲಿದ್ದ ಜಂಗಮರ ಜಾಗ್ರಾವಲರನ್ನು ವಂಚಿಸಿ, ಜಂಗಮ ವೃಂದಸ್ಥಾನಕ್ಕೆ ಬಂದು, ಅವರೊಡನೆ ನಿತ್ಯ ಕ್ರಿಯೆಗಳನ್ನು ಗುಪ್ತವಾಗಿ ತೀರಿಸಿ, ತಾನು ತಂದ ಬುತ್ತಿಯನ್ನು ಬಿಚ್ಚಿ, ಭಾವಪರುಷದಿಂದ ಆರ ಸಾವಿರ ಜಂಗಮ ತೃಪ್ತಿಗೈದು, ತನ್ನ ಬಿನ್ನಾಯಕ್ಕೆ ಅನುಜ್ಞೆಯನ್ನು

ಪಡೆದು, ಆ ಎಲ್ಲ ಜಂಗಮರನ್ನು ಹಸ್ತಪ್ರಸಾದದಿಂದ ಹಸಿಬೆಯೊಳಗಿರಿಸಿ ವಿಧವಿಧದ ವಂಚನೆಗಳಿಂದ ಆ ಕಾವಲುಗಾರರಿಂದ ಜಾರಿ ತನ್ನ ಕಲ್ಯಾಣಕ್ಕೆ ಪಾದಪರುಷದ ಬಲದಿಂದ ಪ್ರವಾಸವನ್ನು ಮುಗಿಸಿ ಬಂದು, ಒಟ್ಟಾದ ಒಂದು ಲಕ್ಷ ತೊಂಭತ್ತಾರುಸಾವಿರ ಜಂಗಮಾರಾಧನೆಯ ಆನಂದದೊಳು ತನ್ನ ಮಹಾಮನೆಯಲ್ಲಿ ಜರಗಿಸುತ, ಜಂಗಮರ ಒಕ್ಕು ಮಿಕ್ಕ ಪ್ರಸಾದ ದೊಳು ಪರಿಪೂರ್ಣತೆಯು ಹೊಂದುತಲಿರ್ದನು.

ಅತ್ತ ಮಹಾದೇವ ಭೂಪಾಲನು, ತನ್ನ ನಿತ್ಯ ಗಣಾರಾಧನೆಯ ಗಣಂಗಳು ಮಾಯವಾದ ನೋವಿನಿಂದ ಸಮುದ್ರವು ಬಿರುಗಾಳಿಯಿಂದ ಅಲ್ಲೋಲಕಲ್ಲೋಲವಾಗುವಂತೆ ಆತನ ತನು-ಮನೋಭಾವಗಳು ಕುದಿದು, ಕೋಪೋದ್ರೇಕದಿಂದ ಶಾಂತಿ ಸಮುದ್ರವು ಬತ್ತಿ, ಹಾ ದೇವಾ! ಹಾ ಗುರು ವೆ; ಹಾ ಲಿಂಗವೆ! ಹಾಯ್ ಜಂಗಮವೆ! ಎಂದು ಒಮ್ಮೆ ದುಃಖಿಸುವನು, ಒಮ್ಮೆ ಸಿಟ್ಟಿನಿಂದ ಸಿಡಿಮಿಡಿಗೊಳ್ಳುವನು. ಅಂತು ಸ್ವಲ್ಪ ಸಮಾಧಾನ ತಾಳಿ ಚಾರರಿಂದ ಜಂಗಮರನ್ನು ಸುತ್ತಲೆಲ್ಲ ಹುಡುಕಿಸಿದನು. ಆದರಿಂದೇನು ಪ್ರಯೋಜನ? ಹುಡುಹುಡುಕಿ ಬೇಸತ್ತು ಚಾರರು ಬಂದು ಬಂದು ನಿಟ್ಟುಸಿರು ಬಿಡುವವರೇ, ಮುಂದೆ ಮಾಡಬೇಕೇನು? ಎಂದು ವಿಚಾರಿಸು ವಷ್ಟರಲ್ಲಿ " ನಗುರೋರಧಿಕಂ ,, ಎಂಬ ವಾಕ್ಯದಂತೆ ತನ್ನ ಕ್ರಿಯಾ ಜ್ಞಾನಗುರುವಿನಿಂದ ಸಮಾಧಾನ ತಾಳಿ, ಅವರಿಂದ ಲಿಂಗಾಂಗ ಸಾಮ ರಸ್ಯದ ಸಂಗತಿಯನ್ನು ಆಲಿಸಿದನು. ಕೆಲದಿನಗಳಲ್ಲಿ ಒಬ್ಬ ಚರಮೂರ್ತಿ ಯಿಂದ ಕಲ್ಯಾಣದ ಬಸವನು ತನ್ನ ಆರು ಸಾವಿರ ಜಂಗಮರನ್ನು ಒಯ್ದ ಸಂಗತಿಯು ತಿಳಿಯಿತು. ಆಗ ಭೂಪಾಲನು ಬಸವನನ್ನು ಕೊಂದು ಆ ಜಂಗಮ ವೃಂದವನ್ನು ಬರಮಾಡಿಕೊಳ್ಳಬೇಕೆಂದು ತನ್ನ ಕಟ್ಟಾಳಾದ ಚಿಕ್ಕ ಚೋರನನ್ನು ಕಲ್ಯಾಣಕ್ಕೆ ಕಳುಹಿದನು. ಆತನು ಕಲ್ಯಾಣ ನಗರದ ಉಪವನಕ್ಕೆ ಹೋಗಿ, ಐದನೇಕಾಯಿಯ ಲಿಂಗವನ್ನೂ ಔಡಲ ಕಾಯಿಯ ರುದ್ರಾಕ್ಷಿಯನ್ನೂ ಧರಿಸಿಕೊಂಡು ಬಸವನ ಮಹಾಮನೆಯನ್ನೇ ಸೇರಿದನು. ಆಗ ಬಸವನು ಸಾಕ್ಷಾತ್ ಸಂಗಮನಾಥನೇ ಲಿಂಗ ಧರಿಸಿ ಕೊಂಡು ಬಂದನೆಂದು ಇದಿರಾಗಿ ಹೊಡೆಗೆಡೆದು ಬೀಳ್ಕೊಂಡು ಒಡಗೊಂಡು ಕರೆತಂದು ಪಾದಾರ್ಚನೆಯ ಮಾಡಿ ಲಿಂಗ ತೃಪ್ತಿಯಂ ಗೈಯಲು ಆಗ ಚಿಕ್ಕ ಚೋರನ ದುರ್ಭಾವ ದೂರಾಗಿ ತನ್ನ ಚೋರಗತ್ತಿಯನ್ನು ನೆಲ

ಕ್ಕಿಟ್ಟು ಪೊಡಮಟ್ಟು ತನ್ನ ಎಲ್ಲ ನಿಜ ವೃತ್ತಾಂತ ಹೇಳಲು, ಬಸವನು ಆತನಿಗೆ ನಿಜಲಿಂಗ ದೀಕ್ಷೆ ಕೊಟ್ಟು ಓಲೆಯ ಕಾಯಕ ಮಾಡ ಹೇಳಿ ಮಹಾಶರಣರ ಆಶ್ರಯದಲ್ಲಿರಲು ಅನುಜ್ಞೆಗೈದನು.

ಅತ್ತ ಮಹಾದೇವ ಭೂಪಾಲನು ಚಿಕ್ಕ ಚೋರನ ಕೃತಿಯು ಕೈಗೂಡಲೆಂದೂ ಬಸವನು ವಸುಧೆಯಿಂದ ಅಸುವನ್ನೇ ಅಲ್ಲಗಳೆದರೆ ಆ ಆರು ಸಾವಿರ ಜಂಗಮರು ಮರಳಿ ಬಂದೇ ಬರುವರೆಂದೂ ಭಾವಿಸಿ, ಆ ಚಿಕ್ಕ ಚೋರನ ಬರುವಿಕೆಯನ್ನೇ ಹಾರೈಸುತಲಿರ್ದನು. ಆದರೆ ಶಿವನ ಲೀಲಾ ವಿಲಾಸದ ಅರುಹು ಅವನಿಗೇಗೆಲ್ಲಿಹದು? ತಾನೂ ಗಣವರನೇ, ಬಸವನೂ ಪ್ರಮಥಾಧೀಶನೇ. ತವಿಬ್ಬರ ಯೋಗದಿಂದ ಕಲ್ಯಾಣದ ಮುಂಬೆಳಗಿನ ಅರುಹು ಆದಿಯಲ್ಲಿ ಹೇಗಾದೀತು? ತನ್ನ ಎಲ್ಲ ಅಂಗಕರಣಗಳೆಲ್ಲ ಲಿಂಗಕರಣಗಳಾದಾಗಲ್ಲವೆ ಮುಂಧೋರಣದ ಕಾಲಜ್ಞಾನದ ಅರಿವು? ಆದರೂ ಆ ಕಾಲಕ್ಕೆ ಆತನ ಆಚರಣೆಯ ಪರಿಪಕ್ವತೆಯು ಸಮೀಪಿಸಿತ್ತೆಂದು ಹೇಳಲು ಅಡ್ಡಿಯಿಲ್ಲ. ದಿನಂಪ್ರತಿ ತನ್ನ ಉದ್ವೇಗದ (ವಿಕಾರದ) ಮನವನ್ನು ತಡೆತಡೆದು, ವೃಢಭಾವ ಪಡೆಪಡೆದು ಎಂದಿನಂತೆ ಸಂಜೆಗೆ ಪುರಾಣ ಪ್ರವಚನಗಳನ್ನು ಕೇಳಿ ಮನನ-ನಿಧಿಧ್ಯಾಸದೊಳಿರುತಿರ್ದನು. ಬಹು ದಿನವಾದರೂ ಚಿಕ್ಕ ಚೋರನು ಬರಲಿಲ್ಲ. ಪುನಃ ಅವನ ನಿಜ ವೃತ್ತಾಂತ ತಿಳಿಯಲು ಚಾರರನ್ನು ಕಲ್ಯಾಣಕ್ಕೆ ಕಳುಹಿದನು. ಅವರು ಅಲ್ಲಿಗೆ ಹೋಗಿ ಬಂದು ನಿಜ ಸಂಗತಿಯನ್ನು ಸಾಂಗಗೊಳಿಸಿದರು. ಅದನ್ನಾಲಿಸಿದ ಅರಸನು ನಿರಾಶನಾಗಿ ಮುಂದಿನ ಮಾರ್ಗ ತೋಚದೆ ಮನಸ್ಸು ಕಲ್ಲಾಗಿ, ನಿಜಪೌರಾಣಿಗೆ ಭೆಟ್ಟಿಯಾಗಿ ತನ್ನ ಉದಾಸೀನತೆಯ ವ್ಯಕ್ತಗೊಳಿಸಲು, ಆತನು ಕಲ್ಯಾಣ ಚರಮೂರ್ತಿಗಳಿಂದ ಕೇಳಿದ ಶ್ರೀ ಬಸವನ ಗುರು ಲಿಂಗ ಜಂಗಮ ಭಕ್ತಿಯನ್ನು ವಿಸ್ತರಿಸಲು ಅರಸನ ಆದರಣೀಯವಾದ ಬಸವನ ಕೆಡಕಿನ ಭಾವ ಬದಲಾಗಿ ಅವನಲ್ಲಿ ಭಕ್ತಿಭಾವವು ಅಂಕುರಿಸಿ, ಬೆಳೆದು ದೊಡ್ಡದಾಗಿ, ತನ್ನ ಸಿರಿಸಂಪತ್ತಿನಲ್ಲಿ ಹೇಯವು ಹೆಚ್ಚಿ, ತಾನೂ ಕಲ್ಯಾಣಕ್ಕೆ ಹೋಗಿ " ಶಿವಶರಣರ ಸಂಗದೊಳೆಂದಿರ್ಪೆನೋ?,, ಎಂದು ಚಿಂತಿಸುತ್ತಿರಲು ಅದೇ ದಿನದ ರಾತ್ರಿ ಈಶನ್ನು ಅರಸನ ಕನಸಿನೊಳು ಬಂದು – " ನೀನು ಚಿಂತೆಗೊಳಗಾಗದಿರು. ಬಸವನನ್ನು ಕಂಡು ಭೂಕೈಲಾಸವೆನಿಸಿದ ಕಲ್ಯಾಣದೊಳು ಕಾಯಕವ ಕೈ

ಕೊಂಡು ನಿಜಲಿಂಗದೊಳು ಬೆರೆ. ನನ್ನ ನಾಮವು ನಿಃಕಲಂಕ ಮಲ್ಲಿಕಾರ್ಜುನನೆಂದು ಹೇಳಿ ಮಾಯವಾದನು ಆಗ ಒಮ್ಮೆಲೇ ಎಚ್ಚತ್ತ ಅರಸನ ಆನಂದಕ್ಕೆ ಪಾರಾವಾರ ಇಲ್ಲದಂತಾಯಿತು ತುಸ ವೇಳೆಯಲ್ಲಿಯೇ ಪ್ರಭಾತಕಾಲದ ಆಗಮನ. ಬಸವಾ! ಬಸವಾ! ಎಂದು ಎದ್ದು, ನಿತ್ಯ ಕ್ರಿಯೆಗಳ ಕಡೆಗಾಣಿಸಿ, ತನ್ನ ಮಗನಾದ ಲಿಂಗರಾಜನಿಗೆ ರಾಜ್ಯದ ಸರ್ವಾಧಿಕಾರವನ್ನಿತ್ತು, ರಾಜಭೂಷಣಗಳನ್ನು ತ್ಯಜಿಸಿ, ಕಲ್ಯಾಣಕ್ಕೆ ಹೊರಡಲು ಕಡುಬೇಗ ತಯಾರಾದನು. ಆ ಮಹಾರಾಣಿ ಗಂಗಾದೇವಿಯು ಅರಸನ ಗುರಿಯನ್ನರಿತು, ತಾನೂ ಮಹಾರಾಣಿಯ ವೇಷ ಭೂಷಣಾಲಂಕಾರಗಳನ್ನು ಬಿಸಾಡಿ, ಭೂಪಾಲನ ಬೆನ್ನು ಹತ್ತಿದಳು. ಆತನು ಅವಳಿಗೆ ಬರಬೇಡೆಂದು ಬೇಕಾದಷ್ಟು ಬುದ್ಧಿವಾದ ಹೇಳಿದರೂ ಪತಿಯ ನೆರಳೋಪಾದಿಯು ಸತಿಯು ಅಗಲುವದೆಲ್ಲಿ? ರಾಜಧಾನಿಯ ಪ್ರಜೆಗಳೆಲ್ಲ ಈ ಸ್ಥಿತಿಯನ್ನು ಕಣ್ಣಾರೆ ಕಂಡು, ಅರಸಾ! ನಮ್ಮ ಗತಿಯೇನೆಂದು ಗೋಳಿಡಲು ನನ್ನಂಗವೇ ಲಿಂಗರಾಜನೆನಿಸಿದ ಯುವರಾಜನು ನನಗಿಂತ ಹೆಚ್ಚು ಸದಯಾಂತಃಕರಣದಿಂದ ರಾಜ್ಯ ಪರಿಪಾಲನೆಯ ಮಾಡುವನೆಂದು ಸಂತೈಸಿ ತಾನು ಕಾಲು ನಡೆಯಿಂದ ರಾಣಿಯೊಡಗೊಂಡು ಪ್ರಯಾಣ ಬೆಳಿಸಿದನು.

ದಂಪತಿಗಳೀರ್ವರೂ ಬಸವನಾಮವನುಚ್ಚರಿಸುತ್ತ ದೇಶದೇಶಂಗಳ ದಾಟುತ್ತ ಸಂತಾಪದಿಂದ ಕಲ್ಯಾಣಪಟ್ಟಣದ ಸಮೀಪವರ್ತಿಗಳಾಗಿ ಸುತ್ತಲಿನ ವನದೇವಿಗೆ ವಂದಿಸಿ ಒಣಗಿದ ಕಟ್ಟಿಗೆಗೂಡಿಸಿ, ಹೊರೆ ಕಟ್ಟಿ ಹೊತ್ತು ಶರಣಂಗಳ ಪಾದಧೂಳಿಯೋಪಾದಿಯಾದ ದಂಪತಿಗಳು ಭೃತ್ಯಾಚಾರದ ಹಿರಿಗೋಲನು ಊರುತ್ತ ಭಯಭಕ್ತಿಯುತರಾಗಿ ಶಿರಬಾಗಿ ಸಾಗುತ್ತ, ಮನದೊಳು ಮಹಾಶರಣರ ಮರೆಯದೆ ಮುಂದವಾಗಿ ಹೆಜ್ಜೆಗಳನು ಚಲ್ಲುತ್ತ, ಶಿವಾನುಭವ ಮಂಟಪದೆಡೆಗೆ ಸಾಗುತ್ತಿರಲು, ಅಲ್ಲಿರ್ದ ಬಸವೇಶ್ವರನಿಗೆ ಅರುಹಾಗಿ ಶರಣರೊಂದಿಗೆ ಹೊರಗೆ ಹೊರಟು ಮುದವೇರಿ ಪುಳಕಂಗೊಂಡು ಹೊರೆಯ ಭಾರಕನಾದ ಮಹಾದೇವರಸನ ದೂರದಿಂದೀಕ್ಷಿಸುತ್ತಿರಲು, ಇದನರಿದ ಭೂಪಾಲನು ಕಟ್ಟಿಗೆಯ ಹೊರೆಯನಿಳುಹಿ ಶರಣಸಹಿತನಾದ ಬಸವನಿಗೆ ಸಾಷ್ಟಾಂಗ ವೆರಗಲು, ಬಸವನು ಬಂದು, ಆತನನ್ನು ಹಿಡಿದೆತ್ತಿ ಅಡಿಗೆರಗಿ ಮುಂದಾಡಿ ಒಡಗೊಂಡು ಅನುಭಾವಮಂಟಪಕ್ಕೆ ಸ್ವಾಗತಿಸಿ

ದಂಪತಿಗಳ ಕಂಡುವಡೆವ ಇಂಪಾದ ಚರಿತ್ರಸಾರವ ಸವಿಗೊಂಡು ಶಿವನ ಲೀಲಾವಿಲಾಸದ ವಿಸ್ತಾರದ ಪರಿಗೆ ಶರಣಂಗಳು ನೆರೆ ವಿಸ್ಮಿತರಾಗಿ ದಂಪತಿಗಳನ್ನು ನೋಟಿಪ ಪಾಪದಿಂದ ನೋಡುತ್ತಿರಲು, ಆಗ ಮಹಾದೇವ ಭೂಪಾಲನು ತನಗೆ ಸತ್ಕಾಯಕವ ಕರುಣಿಸಬೇಕೆನಲು ಆತನ ಲಿಂಗದಿಚ್ಛೆಯಂತೆ ಕಟ್ಟಿಗೆಯ ಕಾಯಕವನ್ನೇ ಕರುಣಿಸಿ, ಮೋಳಿಗೆಯ ಮಾರಯ್ಯನೆಂಬ ಹೆಸರಿಡಲು ಆ ಕಾಯಕವನೇ ಮುಂದುಗೊಂಡು, ತಾನು ತಂದ ಹೊರೆಯನ್ನು ಶರಣಂಗಳ ಭವನಕ್ಕೆ ಸಲ್ಲಿಸಿ, ಆ ಎಲ್ಲ ಶರಣರೊಡನೆ ಆ ದಿನದ ಸುಪ್ರಸಾದವನೇ ಕೈಕೊಂಡು ದಂಪತಿಗಳೀರ್ವರು ಕಲ್ಯಾಣಪುರದ ಹೊರಗಿನದೊಂದು ಗುಡಿಸಲಿನಲ್ಲಿ ವಾಸಿಸಲನುವಾದರು.

ಪ್ರಭಾತ ಕಾಲದೊಳು ಬಸವನಾಮಪೂರ್ವಕ ಶಿವಮಂತ್ರವನುಚ್ಚರಿಸುತ್ತ ಮಾರಯ್ಯನು ಅಡವಿಗೆ ಕಡುಬೇಗ ಹೋಗಿ ನಿಡುವಾದ ಬಲಗೊಂಡ ಹೊರೆ ಮಾಡಿ ತಂದು ಆ ಪುರದ ಕಟ್ಟಿಗೆಯ ವ್ಯಾಪಾರಿಗೆ ಒಕ್ಕಳ ಅಕ್ಕಿಗೆ ಮಾರಿ ಮಹಾರಾಣಿ ಗಂಗಾದೇವಿಯೋ ಮಹಾದೇವಿಯೋ ನಿಸಿರ್ದ ಸತಿಗೆ ಆ ಅಕ್ಕಿಯ ಕೊಡಲು, ಆಕೆಯು ಹಸನಾದ ಗುಡಿಸಲಕ್ಕೆ ಪಶುಪತಿಯು ಆಗಮಿಸನೆಂದೇ ಭಾವಿಸಿ ಪತಿದೇವನ ಪಾದಾರ್ಚನೆಯ ಮಾಡಿ ಪಾದೋದಕವ ಶಿರಃಪ್ರದೇಶಕ್ಕೆ ಮುಡುಗೊಂಡು ಕಡುಸಂಭ್ರಮದಿಂದ ಮೃಡನಿತ್ತ ಅಕ್ಕಿಯ ಅಂಬಲಿಯ ತ್ರಿಕರಣ ಶುದ್ಧಿಯಿಂ ಸಿದ್ಧಿಸಲು. ಮಾರಯ್ಯನು ಜಂಗಮ ಪುಂಗವರ ಕಂಡು ಅವರಿಗೆ ಅನುದಿನ ಬಿನ್ನಾಯದ ಭಸಿತವನು ಸಲ್ಲಿಸಿ ಗುಡಿಸಲಿಗೆ ಒಡಗೊಂಡು ಬಂದು ಅವರ ಸ್ನಾನ ಶಿವಾರ್ಚನೆಗಳಿಗೆ ಅಣಿಮಾಡಿ ತಾನೂ ಶಿವಪೂಜೆ ತೀರಿಸಿ ಅವರ ಪಾದೋದಕ ಶೇಷಪ್ರಸಾದಗಳನ್ನು ದಂಪತಿಗಳು ಸಲ್ಲಿಸುತ್ತಿರಲು ಅಚ್ಚ ಪ್ರಸಾದವಾದ ಅಂಬಲಿಯನುಂಡ ಜಂಗಮರು ಸಂತೋಷ ಭರಿತರಾಗಿ ದಂಪತಿಗಳಿಗಾಶೀರ್ವದಿಸಿ ದಯಮಾಡಿಸುವವರಾಗಿದ್ದರು. ಪ್ರತಿದಿನದುಚಿತ ವೇಳೆಯೊಳೊದಗುವ ಶಿವಾನುಭವ ಮಂಟಪಕ್ಕೆ ಸತಿಪತಿಗಳೀರ್ವರೂ ಹೋಗಹತ್ತಿದರು. ಅಲ್ಲಿ ಅನುಭವಾಮೃತವನ್ನು ಸವಿಸುವದು ಸಂತಸಗೊಳುತ್ತ ಕರಣಹಸಿಗೆ ಷಟಚಕ್ರ, ಪಿಂಡಾಂಡಗಳ ಜ್ಞಾನ, ತತ್ವಜ್ಞಾನಗಳು ವರ್ಧಿಸುತ್ತಿರಲು ಲಿಂಗಸ್ಥಳ ಕುಳಗಳು ತಿಳಿಯುತ್ತ ಲಿಂಗಾಂಗ ಸಾಮರಸ್ಯದ ಸುಖದ ಸಂಭ್ರಮದೊಳೋಲಾಡಲನುವಾದರು.

ನಿಜ ವೀರಶೈವ ಮಾರ್ಗಾನುಯಾಯಿಗಳಾದ ದಂಪತಿಗಳ ನಿಜಾಚರಣೆ, ನಿಜನಿಷ್ಠೆ, ನಿಜಭಕ್ತಿ, ನಿಜಜ್ಞಾನಗಳು ಬೆಳೆ ಬೆಳೆದು ಪರಿಪಕ್ವತೆಗಳನ್ನು ಹೊಂದುತ್ತ ಸತ್ಕಾಯಕದ ಸೊತ್ತು, ಒಕ್ಕುಮಿಕ್ಕ ಪ್ರಸಾದದಲ್ಲಿ ಪ್ರಕಾಶಿಸಿ ಬೇಕಾದಷ್ಟು ಜಂಗಮರು ಗುಡಿಸಲಿನಲ್ಲಿ ಬಂದರೂ ಅಷ್ಟೇ ಸ್ಥಳವು ಹಾಳತವಾಗುತ್ತಿತ್ತು. ತೀದ ಬಿಂದಿಗೆಯೊಳಗಿನ ನೀರು ಭರದಿಂದ ಬೆಳೆಯುತಲಿತ್ತು. ಅಂಬಲಿಯಂತೂ ಅಸದೃಶವಾದ ಮಡಿಕೆಯೊಳು ಎಷ್ಟು ಜನರುಂಡರೂ ತುಂಬಿತುಳುಕುತ್ತಿತ್ತು. ಅಂಬಲಿಯ ರುಚಿಗೆ ಜಂಗಮ ವೃಂದವು ದೀಪಕ್ಕೆ ಪತಂಗಗಳು ಮುತ್ತುವಂತೆ, ಮುಕುರಿದರೂ, ಅದು ಸವೆಯದ ಷಡ್ರಸಾನ್ನವನ್ನು ಹೀಯಾಳಿಸುತ್ತಿತ್ತು. ಅಂಬಲಿಯನ್ನು ಸುರ್ರನೆ ಸುರಿಯುವಾಗ ಜಂಗಮರ ಅಂತರಂಗದ ಅಂಬಲಿಯ ರುಚಿಯ ಆಶೆಯು ಮಿಕ್ಕಿಮೀರಿ ಉಕ್ಕುತ್ತಿತ್ತು. ಸದ್ಭಕ್ತರ ಸದಾಚಾರದ ಪ್ರಭಾವವೇ ಇಂಥ ಹದು. ಆತ್ಮರ ಆಕರ್ಷಿಸಿ ಏಕಾತ್ಮರಂಗೆಯ್ವ ಚಿತ್‌ಪ್ರಕಾಶದ ಬೆಳಗೇ ಪಂಚಪರುಷಗಳೆಂದು ಶಿವಶರಣರ ಸಂದೇಶವು ಅಂದಿಂದಿಗೆ ಶಿಲಾಶಾಸನವಾಗಿದೆ. ಮಾರಯ್ಯನು ಕಾಯಕವೇ ಕೈಲಾಸವೆಂಬ ವಚನ ಸಿದ್ಧಿಯನ್ನು ತನ್ನ ಗುಡಿಸಲಿನಲ್ಲಿಯೇ ನಿಲವಾಗಿ ನಿಲ್ಲಿಸಿ, ಭೂವಲಯದಲ್ಲಿ ಪರಮ ಭಕ್ತನೆಂಬ ಉಲುಹನ್ನು ಉಜ್ವಲಿಸಿ ಆಚಂದ್ರಾರ್ಕವಾಗಿ ತಲೆದೋರುವಂತೆ ಮಾಡಿದ್ದು ವೀರಶೈವ ಸಮಾಜದ ಪುಣ್ಯವೆಂದೇ ಭಾವಿಸಬೇಕು. "ಅಸಿಯಾಗಲಿ ಮಸಿಯಾಗಲಿ ಕೃಷಿಯಾಗಲಿ ವಾಣಿಜ್ಯ ಮುಂತಾದ ಕೃಷಿಯು ಮಾಡುವಾಗ ಪಶುಪತಿಗೆಂದೇ ಪ್ರಮಾಣಿಸಿ, ಭಕ್ತಿ ಎಸಕದಿಂದ ಹಸಿವು ಯಿಲ್ಲದೆ ವಿಷಯವನರಿಯದೆ, ಮಾಡುವ ಭಕ್ತಿಯಲ್ಲಿ ಹುಸಿಯಿಲ್ಲದೆ ಮಾಡುತಿಪ್ಪ ಭಕ್ತನ ಅಂಗಳವೇ ವಾರಣಾಸಿ. ಆತನ ಆಶ್ರಯವೇ ಅವಿಮುಕ್ತ ಕ್ಷೇತ್ರ. ಆತನ ಮುಖವೇ ಮೋಕ್ಷದಾಗರ. ಆತನ ಅಂಗವೇ ಲಿಂಗದ ಬೆಳಗು. ಆತನ ಪಾದವೇ ಪವಿತ್ರದ ಪುಂಜ. ಹೀಗೆ ತ್ರಿಕರಣ ಶುದ್ಧನಾದ ಭಕ್ತನಂತೆ ಒಕ್ಕುದ ಕಾಯ್ದುಕೊಂಡಿಪ್ಪ ಕುಕ್ಕುಟನಂತೆ ಮಾಡಾ: ಇದೇ ನಿಶ್ಚಯ ನಿಃಕಳಂಕ ಮಲ್ಲಿಕಾರ್ಜುನಾ" ಎಂಬ ತನ್ನ ನಡೆಯನ್ನೇ ನುಡಿಯಲ್ಲಿ ಸಡಗರಿಸಿದ ಮಾರಯ್ಯನ ಇರವು ಎಂಥದಿರಬಹುದು?

ಮಾರಯ್ಯನ ಪ್ರತಿಪ್ರಾಣಿಯಾದ ಮಹಾದೇವಿಯ ಮಹದಾಚರಣೆಗಳನ್ನಂತೂ ವರ್ಣಿಸಲಳವಲ್ಲ. ಆಕೆಯ ಜೀವಭಾವ ಭಾವವು ಕಾಶ್ಮೀರ

ರಾಜ್ಯದಲ್ಲಿಯೇ ಕಡಿದು ಹೋಗಿ ಶಿವಭಾವವು ತೋರುತಲಿರ್ದ ಕಲ್ಯಾಣಕ್ಕೆ ಬಂದ ಬಳಿಕ ಶರಣೆಯರ ಕಳೆಯು ಶುಕ್ಲಪಕ್ಷದ ಚಂದ್ರನಂತೆ ಬೆಳೆದು ಹುಣ್ಣಿಮೆಯ ಬೆಳದಿಂಗಳಂತೆ ಶಾಂತಿ ಸಾಮ್ರಾಜ್ಯವನ್ನು ಹೊಂದಿತ್ತು. ಆಕೆಯ ಅನುಭವವು ಮಾರಯ್ಯನ ಇಮ್ಮಡಿಯಾಗಿ ಸನ್ಮಾನಿಯಾಗಿತ್ತು. ಆಕೆಯಲ್ಲಿ ಸರ್ವಚಾರ ಸಂಪತ್ತಿನ ಸ್ಥಲಾಚಾರವೂ ವಸ್ತುನಿರ್ದೇಶವೂ ಲಿಂಗಾಂಗ ಸಾಮರಸ್ಯವೂ ಪಂಚಪರುಷಗಳೂ ಉಂಟಾಗಿ ನವರತ್ನಗಳನ್ನು ಹೀಯಾಳಿಸುವ ವಚನ ರತ್ನಗಳು ಆಕೆಯ ಮುಖದಿಂದ ಹೊರಡಲಾರಂಭಿಸಿದವು. "ಸರ್ವಲಕ್ಷಣದಲ್ಲಿ ಹುಟ್ಟಿ ಸಕಲ ಕ್ರಮಗಳಿದು ಭೋಗಿಸಿ, ಪುಣ್ಯಪಾಪಂಗಳನರಿಯದ, ಶ್ರುತಿ ಸ್ಮೃತಿ ತತ್ವಂಗಳ ತಿಳಿಯದೆ, ಅಗಮ್ಯ ಅಗೋಚರ ಲಿಂಗವನರಿಯದೆ, ವೃಥಾ ವೈಭವಕ್ಕೆ ಕೆಡುತಿದ್ದೆಯಲ್ಲಾ! ಇಂದು ಬಂದ ಕಥನ. ಬಸವೇಶ್ವರನಿಂದ ಬಂದ ಮಥನ ಶುಷ್ಕದ ಕಾಯದ ಯತನ ಎನ್ನ ಸತಿಭಾವದ ಜತನ, ಭಕ್ತಿಸಧನದ ಸೌಖ್ಯಸಂಬಂಧ, ನಿಷ್ಠೆ ದೃಷ್ಟಭಕ್ತಿಜ್ಞಾನ ವೈರಾಗ್ಯ ಇಂತಿವ ಹೊತ್ತಾನೆಯಲ್ಲಾ! ಇಂತೀ ಘಟ, ಬಸವಣ್ಣನ ತಪ್ಪಲಲ್ಲಿ ನಿಶ್ಚಯವಾಗಿಸಿಂದಲ್ಲದೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಕಾಣಬಾರದು, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ||

"ಹೃತ್ಕಮಲ ಮಧ್ಯದಲ್ಲಿಪ್ಪ ಲಿಂಗವ ಸರ್ವಾಂಗದಲ್ಲಿ ವೇಧಿಸಿ, ಪರಿಪೂರ್ಣವಪ್ಪ ಲಿಂಗವ ಅಂತರ್ಮುಖದಿಂದ ಬಾಹ್ಯ ಮುಖಕ್ಕೆ ತಂದು, ಪಂಚಸ್ಥಾನದಲ್ಲಿಪ್ಪ ಲಿಂಗವು ಕರಸ್ಥಲದಲ್ಲಿ ಮೂರ್ತಿಗೊಳ್ಳಲಿಕ್ಕಾಗಿ ಕಂಗಳು ತುಂಬಿ, ಬಾಹ್ಯದೃಷ್ಟಿ ಅರತು, ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ ದೃಕ್ಕಿಂಗೆ ತೋರುವುದೆಲ್ಲವು ಲಿಂಗಮಯವಾಗಿ, ಎನ್ನ ಮುಟ್ಟಿ ಹಿಡಿದಲ್ಲಿ ಪುಷ್ಪಮಯವಾಗಿ, ಜಿಹ್ವೆಯಲ್ಲಿ ತೋರಿದ ಅಪ್ಪು ರಸ ಮುಂತಾದುವೆಲ್ಲವು ಅರ್ಪಿತಮಯವಾಗಿ, ಇಂತಪ್ಪ ವ್ಯವಧಾನಿ ಸರ್ವಾಂಗಲಿಂಗಿಯ ವಿವರ, ಇಷ್ಟವನರಿತು ಉಭಯದ ಗುಟ್ಟು ಕೆಟ್ಟಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುದಕ್ಕೆ ಇದಿರಿಡೆಯಿಲ್ಲ ||

ಇದಲ್ಲವೇ! ಶಕ್ತಿವಿಶಿಷ್ಟಾದ್ವೈತಮತದ ತಿರುಳು. ವೀರಶೈವ ಕರುಳು, ಅದ್ವೈತ ಮತಗಳಿಣಿಕೆಯೊಳು ಆದಿಯ ಬೆರಳು, ಶಾಂತಿ ಸಮುದ್ರದಿಯ ನಂಳು, ಸಕಲ ಲಿಂಗಾಂಗಿಗಳ ಕೊರಳು, ರತ್ನದ ಹರಳು, ಹೀಗಿನ್ನ

ಶಿವಶರಣರ ಗುಡಿಸಲಿಗೆ ಬಸವನಲ್ಲಿರುವ ಜಂಗಮರು ಆತನ ಪರಮಾನ್ನ ವನ್ನು ತ್ಯಜಿಸಿ, ಮಾರಯ್ಯನ ಸತ್ಕಾಯಕವೇ ಪಾಕವಾಗಿರ್ದ ಅಂಬಲಿಯ ಅಮೋಘವಾದ ರುಚಿಯನ್ನು ಒಪ್ಪುತ್ತಾದರೂ ತೆಗೆದುಕೊಳ್ಳದೆ ಬಿಡಲಿಲ್ಲ. ಇಷ್ಟೆ ಅಲ್ಲ. ಬಸವನಲ್ಲಿ ಬಂದು ಮಾರಯ್ಯನ ಅಂಬಲಿಯ ಪ್ರಸಾದ ಮಹಿಮೆಯನ್ನು ಮನವೊಲಿದು ಕೊಂಡಾಡಹತ್ತಿದರು. ಇದನ್ನಾಲಿಸಿದ ಬಸವನು ಇಂಥ ಮಹಾತ್ಮರಿಗೆ ಬಡತನವೇ ? ಎಂದು ಕರುಣಿಸಿ ಒಂದಾ ನೊಂದು ದಿನ ತನ್ನಲ್ಲಿಯ ಸಾವಿರದ, ಎರಡು ಹೊನ್ನ ಜಾಳಿಗೆಗಳನ್ನು ಬಗಲಲ್ಲಿ ಬಚ್ಚಿಟ್ಟುಕೊಂಡು ಮಾರಯ್ಯನ ಗುಡಸಲಿನ ಬಾಗಿಲಿಗೆ ಬಂದು :- ಅಮ್ಮಾ! ನಮ್ಮ ಲಿಂಗಯ್ಯನು ಹಸಿದಿದ್ದಾನೆ ಅಡಿಗೆಯಾಗಿದ್ದರೂ ಇದ್ದ ದ್ದನ್ನು ಎಡೆಮಾಡುವದಾದೀತೇನಮ್ಮಾ! ಎಂದು ನುಡಿಯುವಷ್ಟರಲ್ಲಿ, ಆಗ ಮಹಾದೇವಿಯು ಬಂದ ಬರವನ್ನೂ ನಿಂದ ನಿಲ್ಲವನ್ನೂ ನಿರೀಕ್ಷಿಸಿ: – ಬನ್ನಿ ಸ್ವಾಮಿ ಎಂದು ಪಾದಾರ್ಚನೆ ಮಾಡಿ ಪಾದೋದಕದ ಮಂಡೆಗೆ ಮುಡಿದು ಪ್ರಸಾದ ಪಡೆಯುವ ಸ್ಥಳದಲ್ಲಿ ಮುಹೂರ್ತ ಮಾಡಿಸಿ, ಲಿಂಗಾ ರ್ಚನೆ ಲಿಂಗಾರ್ಪಣೆಗಳಿಗನುವಾದಳು. ಆಗ ಬಸವನು ಶರಣರ ಮಿಕ್ಕ ಪ್ರಸಾದಗೊಂಡು ತಣಿತಣಿದು ಹೋಗುವಾಗ ಮಹಾದೇವಿಗೆ ತಿಳಿಯ ದಂತೆ ತಾನು ತಂದಿರ್ದ ಹೊನ್ನ ಜಾಳಿಗೆಗಳೆರಡನ್ನು ಮಜ್ಜನ ಶಾಲೆಯ ಬುಡದಲ್ಲಿ ಗಡಣಿಸಿ, ತೇಗುತ್ತ ತೃಪ್ತಿಸುಖದೋರುತ್ತ ತನ್ನ ಮಹಾಮನೆಗೆ ದಯಮಾಡಿಸಿದನು.

ಮಧ್ಯಾಹ್ನದ ಸಮಯ. ಮಾರಯ್ಯನು ಭಾರವಾದ ಮೋಳಿಗೆಯ ಬಾಗಿಲ ಮುಂದೊಗೆದು ಗುಡಿಸಲಿಗೆ ಕಾಲಿಡಲು ಮಹಾದೇವಿ ಬಂದು ಪಾದಾರ್ಚನೆಯ ಮಾಡಿ, ತನ್ನಂತರಂಗದ ನಿಃಕಳಂಕ ಮಲ್ಲಿಕಾರ್ಜುನನೇ ಮಾರಯ್ಯನೆಂದು ಆತನಿಗೆ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂದು ಭಾವಿಸಿ ಆತನ ಪಾದೋದಕವನ್ನು ಮಂಡೆಗೆ ಆಧರಿಸಿ ಹಿಗ್ಗನೆ ಹಿಗ್ಗಿ ದಳು. ಬಳಿಕ ಮಾರಯ್ಯನು ಸ್ನಾನ ಮಾಡಿ ಭಕ್ತಿಪೂರ್ವಕ ಜಂಗಮ ಸೇವಾತತ್ಪರನಾಗಿ ಅವರ ಲಿಂಗಾರ್ಚನೆಗೆ ಅಣಿಮಾಡಿ ತಾನೂ ಲಿಂಗಾ ರ್ಚನೆಗೆ ಆರಂಭಿಸಲು ಮಜ್ಜನಶಾಲೆಯ ಬುಡದಲ್ಲಿರುವ ಹೊನ್ನು ಜಾಳಿಗೆ ಗಳೆರಡು ಕಣ್ಣಿಗೆ ಬಿದ್ದವು. ಈ ಜಗಜ್ಜಾರಣಿಯು ಇಲ್ಲೇಕೆ ಬಂದಳು? ಇದನ್ನು ತಂದವರಾರು ? ಎಂದು ಮಹಾದೇವಿಯನ್ನು ಗದ್ದರಿಸಿ ಕೇಳಲು

ಆಕೆಯು ಒಬ್ಬಯ್ಯನು ಇಲ್ಲಿ ಬಂದು ಲಿಂಗ ಸಂತೃಪ್ತಿಗೈದು ಮಾತ್ರ ಹೋದನು. ಉಳಿದ ಸಂಗತಿಯು ತನಗೆ ಗೊತ್ತಿಲ್ಲ, ಬುದ್ಧೀ ಎಂದು ಉತ್ತರವನಿತ್ತಳು. ಆಗ ಸಿಡಿಮಿಡಿಗೊಂಡ ಮಾರಯ್ಯನು ಮನದಲ್ಲಿ ವಿಚಾರಿಸಿ ಈ ಕೃತ್ಯವು ಭಕ್ತಿಭಂಡಾರಿಯಾದ ಬಸವನದೇ ಇರಬೇಕು ಎಂದು ಸಮಾಧಾನಗೊಂಡು ಆ ಎರಡು ಸಾವಿರ ಹೊನ್ನ ಜಾಳಿಗೆಗಳನ್ನು ತನ್ನ ಹತ್ತಿರಿದ್ದ ಜಂಗಮರೀರ್ವರಿಗೆ ಕೊಟ್ಟು ಬಸವನಲ್ಲಿಗೆ ಬಹುಬೇಗಹೋಗಿ ಅಲ್ಲಿರ್ದ ಸರ್ವ ಜಂಗಮಮೂರ್ತಿಗಳನ್ನು ಬರಮಾಡಿಕೊಂಡು ತನ್ನ ಗುಡಿಸಲಿಗೆ ಬರಲು ಮಹಾದೇವಿಯು ಅಷ್ಟರಲ್ಲಿ ಸಿದ್ಧಗೊಳಿಸಿದ ಪಂಚಪಕ್ವಾನ್ನಗಳನ್ನು ಅಲ್ಲಗಳೆಯುವ ಪರಮಪ್ರಸಾದವ ನೋಡಿ ಎಲ್ಲ ಜಂಗಮಮೂರ್ತಗೊಳಿಸಿ ಅವರ ಪಾದೋದಕವ ಹಿಡಿದು ಆ ದಿನ ತಾನು ತಂದಿದ್ದ ಮೋಳಿಗೆಗೆ ಸಿಂಪಿಸಿ, ಒಳಗೆ ಬಂದು ಸರ್ವಜಂಗಮ ತೃಪ್ತಿಗೈದು ನಂತರ ತಾನು ಹೊರಗೆ ಬಂದು ಕಟ್ಟಿಗೆಯು ಹೊರೆಯೇ ಕನಕಾದುದ ಕಂಡು ಪ್ರತಿಯೊಬ್ಬ ಜಂಗಮ ಮೂರ್ತಿಗೆ ಬಂಗಾರದ ತುಣುಕುಗಳನ್ನು ಕಡಿಕಡಿದು ಕೊಟ್ಟು ಅವರ ಪಾದಕ್ಕೆರಗಿ ಆಶೀರ್ವಾದ ಪಡೆದು ಪರಮಾನಂದ ಭರಿತನಾದನು

ಜಂಗಮ ವೃಂದವೆಲ್ಲ ಮಾರಯ್ಯನ ಮಹಾತ್ಮ್ಯೆಗೆ ಮಹಾಚಕಿತರಾಗಿ ಬಸವನಲ್ಲಿಗೆ ಬಂದು, ಮಾರಯ್ಯನ ಪವಾಡ ಮಹಾತ್ಮ್ಯೆಯನ್ನರುಹಲು ಆತನು ನಿಬ್ಬೆರಗುಗೊಂಡು ತನ್ನ ಕೃತಿಗೆ ಪರಮ ಪಶ್ಚಾತ್ತಾಪಪಟ್ಟು ಮಾರಯ್ಯನಲ್ಲಿಗೆ ಬಂದು ಶರಣು ಹಾಕಿ :– ದೇವಾ ನನ್ನ ಅಪರಾಧವನ್ನು ಕ್ಷಮಿಸಬೇಕೆನಲು ಆಗ ಮಾರಯ್ಯನ ಮನ ಕರಗಿ ಹಿಡಿದೆತ್ತಿ ಮುಂದಾಡಿ "ಬಸವೇಶಾ, ಕಾಯಕವೇ ಕೈಲಾಸ, ತನ್ನ ಕೈಯಲಿ ಪರುಷವಿರಲು ಪರರನು ಬೇಡಲೇಕೆ? ಆಚಾರವೇ ಸ್ವರ್ಗ ಅನಾಚಾರವೇ ನರಕ. ಎಂಬ ತಮ್ಮ ನುಡಿಗಳೇ ನಡೆಯಾಗಿರುವ ಈ ಕಲ್ಯಾಣವೆಂಬ ಭೂಕೈಲಾಸದಲ್ಲಿ ಯಾವದರ ಕೊರತೆ? ನೀನೇ ಹೇಳು. ಎಂದು ಮರವಿನ ಮರೆಯನ್ನು ಓರೆ ಮಾಡಲು ಆಗ ಬಸವನು :–

ಆಲಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ, ತನು ಕರಗಿ ನೆರೆವ ಸುಖವ ನಾನೇನೆಂಬೆ? ಕಡೆಗೋಡಿ ಹರಿದವಯ್ಯಾ! ಎನಗಯ್ಯ, ನಯನಾಶ್ರುಜಲಂಗಳು. ನಮ್ಮ ಕೂಡಲಸಂಗನ ಮುಟ್ಟಿ ನೆರೆದ ಸುಖವ ನಾನೇನೆಂಬೆ?॥

ನಾರಿ ಕಾಗಿದ ರುಚಿಗೆ ಮನವೇ ಸಾಕ್ಷಿ ಸಾಲದೆ ಅಯ್ಯ! ಮಾಲೆಗಾರನ ಕೇಳಿ ನನೆ ಅರಳುವುದೆ? ಅಯ್ಯ! ಆಗಮವನಿದಿರಿಂಗೆ ತೋರುವುದು ಆಚಾರವೇ ಅಯ್ಯ! ನಿಮ್ಮ ಕೂಡಲ ಸಂಗನ ಕೂಡಿದ ಕೂಟ, ಕರುಳ ಕಲೆಯನಿದಿರಿಂಗೆ ತೋರುವುದು ಆಚಾರವೇನಯ್ಯ! ಕೂಡಲ ಸಂಗಮ ದೇವಯ! ॥

ಇಂತು ಪ್ರಮಥಾದೀಶನ ವಾಕ್ಯಗಳನಾಲಿಸಿದ ಮಾರಯ್ಯನು :—

ಕೂಟಿಗೆಯು ಕೂಳನುಣಬಂದವರೆಲ್ಲರು ಅಜಾತನ ನಿಲವ ಬಲ್ಲರೇ? ಬೇಟದ ಕಣ್ಣಿನವರು ಸತ್ಸಂಗ ಬಲ್ಲರೇ? ಆಸೆಯೆಂಬ ಕೊಳದಲ್ಲಿದ್ದು ನಿರಾಸೆಯು ನಿರ್ಮನವ ಬಲ್ಲರೇ? ದೋಷದೂರ ನಿರ್ಜಾತ ನೀನೇ ನಿಃಕಳಂಕ ಮಲ್ಲಿಕಾರ್ಜುನಾ ॥

ತನ್ನಂಗವ ತಾ ಬಡಿದುಕೊಂಡು ಇದಿರಿನಲ್ಲಿ ನೋವವ ಕೇಳುವಂತೆ ತನ್ನ ದ್ರವ್ಯವ ತಾನಿಕ್ಕಿ ಪರರುವ ಕೈಯಲ್ಲಿ ಜರೆಯಿಸಿಕೊಂಬವನಂತೆ ವರ್ಮವ ನರಿಯದವನ ಸ್ವಮ್ಮನೆ ಹೆಮ್ಮೆಗೆ ಹುಯಲಿನಲ್ಲಿ ಸಿಕ್ಕಿ ತನ್ನ ತಾ ನರಿಸಿಕೊಂಡಂತಾಯಿತ್ತು, ನಿಃಕಳಂಕ ಮಲ್ಲಿಕಾರ್ಜುನಾ ॥

ಈದ ಪಶುವಿನ ಮೊಲೆಯಲ್ಲಿ ಕೈಯ್ಯನಿಕ್ಕಿದರೆ ಕ್ಷೀರವಲ್ಲದೆ, ಬಂಜೆಯಾವಿನ ಮೊಲೆಯಲ್ಲಿ ಉಂಟೆ? ಇದರಂದವ ತಿಳಿವುದು ಲಿಂಗಾಂಗಿಗಳು. ಹೊತ್ತು ತುಂಬಿದವಳು ತನ್ನನಿತ್ತರಿಸುವ ಬೇನೆಯನರಿವಳು. ಭಕ್ತಿಯುಳ್ಳವರು ಬಲ್ಲರು ನಿಶ್ಚಟದ ನಿಜಾಂಗಿಗಳ. ಇಂತೀ ಸತ್ಯವನರಿಯದೆ ಹೊತ್ತು ಹೊಕ್ಕನಾಗಿ ನುಡಿವ ಮರ್ತ್ಯರಿಗೇಕೆ ನಿಃಕಳಂಕ ಮಲ್ಲಿಕಾರ್ಜುನಾ?

ಉಂಬ ತಳಿಗೆಯು ಬೆಳಗಿವಡೆ ನೊಂದಿತ್ತೇ ಅದು ಎನ್ನುವ ಬೆಳಗಿದರೆಂದು? ಬೆಂದ ಮಡಕೆಯು ತೊಳೆದಡೆ ನೊಂದಿತ್ತೇ ಅದು ಎನ್ನ ಹೊರೆಯ ನೆತ್ತಿದರೆಂದು? ಅಂಥಮಂಧರಂದವ ನುಡಿದೊಡೆ ನೊಂದು ಬಯ್ಯಲೇಕೆ? ಅವರು ನೊಂದಡೂ ನೋಯಲಿ ಹಿಂಗಬೇಕೆಂದೆ ನಿಃಕಳಂಕ ಮಲ್ಲಿಕಾರ್ಜುನಾ ॥

ಇದನ್ನರಿದು ಬಸವಣ್ಣನು :—

ಆತ್ಮಲಿಂಗ, ಪರಮಾತ್ಮ ಜಂಗಮ. ತನು ಮಧ್ಯಪ್ರಸಾದವಾಯಿತ್ತು ನಿಶ್ಚಿಂತ ನಿವಾಸವಾಯಿತ್ತು ಕೂಡಲ ಸಂಗನ ಶರಣನಿಂದ ನಿಶ್ಚಿಂತ ನಿವಾಸವಾಯಿತ್ತು ॥

ಆದ್ಯರ ವಚನವಾದ್ಯರಿಗಾಯಿತ್ತು. ವೇದ್ಯರಿಂಗಲ್ಲದೆ, ಸಾಧ್ಯವಾಗದು ಕೂಡಲಸಂಗಮದೇವಾ! ನಿಮ್ಮ ಅನುಭಾವದಿಂದೆನ್ನ ಭವನಾಸ್ತಿಯಾಯಿತ್ತು.

ಶ್ರೀಬಸವನ ಅವಿರಳಾನಂದಾನುಭವದ ವಚನಗಳ ಕೇಳಿ ತನುಕರಗಿ ಮನ ಉಬ್ಬಿ ಭಾವ ಬಲಿದು ಪುಳಕಂಗೊಂಡು ಆನಂದಾಶ್ರುಗಳುಕ್ಕಿ ಸುರಿ ಸುರಿದು ಪರಿವಂತೆ ವಚನಗಳ ನಿಚಯಗಳು ಬಿಡುವಿಲ್ಲದೆ ನಿಡುನದಿಯಾಗಿ ಹರಿದು, ಹರುಷವನ್ನು ಅಂದಿಂದಿನವರೆಗೂ ಬೀರಹತ್ತಿದವು. ಅವು ಸುರಿಮಳೆಯಂತೆ ಹರಿದು ಹಳ್ಳಾಗಿ, ನದಿಯಾಗಿ, ಸಮುದ್ರವಾದ, ಆದಿಯಲ್ಲಿ ತಟಕೀಸಿ, ತಟಕ್ಕನೆ ಬಿದ್ದ ಅಮೃತಾಂಬುವಿನ ಕಣವಿದು:—

ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಬುದ್ಧಿಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಮನಕ್ಕೆ ವಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಅರುಹಿಗೆ ಯಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಮತಿಗೆ ಓಂಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ನಾದಕ್ಕೆ ಆಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಬಿಂದುವಿಗೆ ಉಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಕಳೆಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ಶಕ್ತಿಗೆ ಸಕಾರವಾಗಿ ಬಂದೆಯಯ್ಯ ಬಸವಣ್ಣ! ಎನ್ನ ವರ್ಚಸ್ಸಿಗೆ ಹಕಾರವಾಗಿ ಬಂದೆಯಯ್ಯ ಬಸವಣ್ಣ! ಇಂತಪ್ಪ ಮಹಾ ಪ್ರಣವಂಗಳೇ ಬಸವಣ್ಣನಾಗಿ, ಆ ಬಸವಣ್ಣನೇ ಮಹಾಪ್ರಣವಂಗಳಾಗಿ ತನ್ನ ಮಠಕ್ಕೆ ತಾನೇ ಬಂದು, ಭಕ್ತಿವಸ್ತುವನಿತ್ತಡೆ ಇವ, ನಾನು ನಿಃಕಳಂಕ ಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿವೆನಯ್ಯ॥

ಭಕ್ತಿವಸ್ತುವನಿತ್ತ ಬಸವಣ್ಣನು ಮಾರಯ್ಯನ ಚರಣ ಕಮಲಕೆರಗಿ ಪರಿಣಾಮಂಗೊಂಡು ಆತನಿಂದ ಅನುಜ್ಞೆಯ ಪಡೆದು ತನ್ನ ಮಹಾಮನೆಗೆ ಮರಳಿ ಹೋದನು.

ಪರಮ ಭಕ್ತಿಯೊಳು ಬೆರೆದಿರ್ದ ನಿಜದಲ್ಲಿ ನಿಂತ ಮಾರಯ್ಯನ ಮುಖದಿಂದ ಹೊರ ಹೊರಟ, ಬಸವನಿತ್ತ ಭಕ್ತಿ ವಸ್ತುಗಳಾದ ಮುತ್ತಿನಂಥ ಸಾವಿರಾರು ವಚನಗಳು ತ್ರಿಕಾಲಾಬಾಧಿತವಾಗಿ ಮಲ್ಲಿಕಾರ್ಜುನನ ಭಕ್ತರೆಂದೆಣಿಸುವ ನಮ್ಮೆಲ್ಲರಿಗೆ ಮಾರಯ್ಯನವರಿತ್ತ ಮಹಾಪ್ರಸಾದದ ವರಪ್ರದಾನವೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಇಂಥ ಮಹಿ

ಮನು ಅರಸೊತ್ತಿಗೆಯನ್ನು ಕಿತ್ತೊಗೆದು ಭೂಕೈಲಾಸನೆನಿಸ ಕಲ್ಯಾಣ
ದೊಳು ಕಟ್ಟಿಗೆಯ ಹೊರೆ ತಂದು ಮಾರುವ ಕಾಯಕವ ಕೈಕೊಂಡು
ನಿಜ ವೀರಶೈವವ ತೋರಿ ಬಟ್ಟಬಯಲಾದ ಕಲ್ಯಾಣದ ಕಟ್ಟಕಡೆಗಿರುವ
ಪರಮ ಸ್ಥಳದೊಳು ಸಜ್ಜೀವಿಯಾಗಿ ಪರಮ ಜೀವನೊಳು ಪರಿಣಮಿಸಿ,
ಶರಣಗಣಂಗಳ ಲಿಂಗೈಕ್ಯದ ವಾರ್ತೆಯ ನಾಲಿಸುತ ಅವರ ತರುವಾಯ
ದೊಳು ತನ್ನಯ ಗವಿಯೊಳು ನೂರಾಇಪ್ಪತ್ತು ವಯಸ್ಸಿನ ಆಯುರಾ
ರೋಗ್ಯವ ತೋರಿ ಸೂರ್ಯನೊಳು ಹೊರಟ ಕಿರಣವು ಸೂರ್ಯನಲ್ಲಿ
ಲೀನವಾದಂತೆ, ಸಮುದ್ರದೊಳು ಉದಯಿಸಿದ ನೊರೆ ತೆರೆಗಳು ಸಮುದ್ರ
ದೊಳು ಸಮರಸವಾದಂತೆ, ತನ್ನ ಭಕ್ತಿಸತಿಯಾದ ಮಹಾದೇವಿಯೊಡನೆ
ತನ್ನ ನಿತ್ಯದ ನಿಬ್ಬೆರಗಿನ ಲಿಂಗೈಕ್ಯದ ಅಂತಿಮ ಸಮಾಧಿಸ್ಥನಾದನು.
ಆ ಕಾಲಕ್ಕೆ ಶಿವಗಣಂಗಳು, ನಾಗಗಣಂಗಳು, ಪ್ರಮಥಗಣಂಗಳು, ಭಕ್ತ
ಗಣಂಗಳು ಗಣಪರ್ವಮಾಡಿ ಉಗ್ಘಳಿಸುತ್ತ ಶಾಸ್ತ್ರೋಕ್ತ ರಚಿಸಿದ ಮಹಾ
ಸಮಾಧಿಯೊಳು ಮುಹೂರ್ತಗೊಳಿಸಿದ ಕುರುಹೂ, ಅವರ ಕಾಯ
ಕದ ಕಟ್ಟಿಗೆಯೊಂದು ಅವರ ಹಸ್ತ ಸ್ಪರ್ಶದಿಂದ ಚಿಗಿತು ಮರವಾಗಿ ನಿಂತ
ಕುರುಹೂ, ಇಂದಿನ ವರೆಗೆ ಮಾರಯ್ಯನ ಉಳಿವು ನಿಲುವುಗಳು ಕಂಡು
ಬರುತ್ತವೆ.

ಇಂತು ಶ್ರೀ ಮೋಳಿಗೆಯ ಮಾರಯ್ಯನ ದಿವ್ಯ ಜೀವಿಯ ನಿಲವು
ಶಿವಾನುಭಾವಿಗಳ ಭಾವದಲ್ಲಿ ಬಂದಂತಾಯಿತು. ಇನ್ನು ಆತನೂ ಆತನ
ರಾಣಿಯೂ ಶಿವಾನುಭವ ಮಂಟಪದಲ್ಲಿ ಉದ್ಘೋಷಿಸಿದ ಷಟ್‌ಸ್ಥಲಾನು
ಭವದ ವಚನ ರತ್ನಗಳ ಮಾಲೆಯನ್ನು ಮುಂದಿರಿಸುವ ಆಶೆ.

ಇರಲಿ; ಮೋಳಿಗೆಯ ಮಾರಯ್ಯ ಮತ್ತು ರಾಣಿ ಮಹಾದೇವಿ
ಯವರ ೮೮೮ ವಚನಗಳ ಸಂಗ್ರಹವೂ, ಮುದ್ದಾದ ಮುನ್ನುಡಿಯೂ,
ನೂತನ ಪುರಾತನರ ಪುಷ್ಪಮಾಲೆಯ ಸದ್ವಾಸನೆಯು ಮೈಗೊಂಡ ಮಾರ
ಯ್ಯನ ಸಚ್ಚರಿತ್ರವನ್ನು ವಿಚಿತ್ರ ಮಾಲೆಯನ್ನಾಗಿ ಹೆಣೆದಿರುವ ಪ್ರಸ್ತಾ
ವನೆಯೂ, ಇವೆಲ್ಲವುಗಳೇ ಒಟ್ಟಾಗಿ ಸೇರಿ ಸ್ವಯಂ ಪ್ರಕಾಶಿತವಾದ
ಪ್ರಕಾಶಕರ ಚಿಜ್ಯೋತಿಯ ಪ್ರಭೆಯೂ ಓದುಗರ ಹೃದಯದೊಳು ಪ್ರತಿ
ಬಿಂಬಿಸಿ, ಅಂತಃಕರಣಗಳು ಆವರಿಸಿ ಪೂಜ್ಯ ಬುದ್ಧಿಯು ಬಲಗೊಂಡು
ಚಿತ್ತ ಕಲೆಯು ಚಿಗಿತು, ಅಂಗಗಳೆಲ್ಲ ನಿರಂಗಗಳಾಗಿ ಚಿಲ್ಲಿಂಗ ಸ್ವರೂಪ
ವನ್ನು ಹೊಂದಿ ಚಿದಾತ್ಮರಲ್ಲಿ ಚಿದಾನಂದವನ್ನುಂಟುಮಾಡುವವು.

ಅನೇಕ ವೀರಶೈವ ಗ್ರಂಥಗಳನ್ನು ಸಂಗ್ರಹಿಸಿ, ಸಂಶೋಧಿಸಿ, ಪ್ರಕಾಶ ಪಡಿಸುವ ಮಹಾತ್ಮರಾದ ರಿಟಾ. ವೀರಭದ್ರಪ್ಪನವರು ಹಾಲಭಾವಿ ಬಿ. ಏ. ಎಲ್. ಎಲ್. ಬಿ. ಸಬ್ ಜಜ್ಜ ಈ ವಚನ ಗ್ರಂಥವನ್ನು ಪ್ರಕಾಶ ಪಡಿಸಿದ ಯಶಶ್ಚಂದ್ರರಿಗೂ ಅವರ ಇಚ್ಛೆಯಂತೆ ವಚನಗಳ ಸಂಗ್ರಹ, ಸಂಶೋಧನ, ಶುದ್ಧೀಕರಣ, ವರ್ಗೀಕರಣಗೈದ ಚಿದಂಶಿಕರಪ್ಪ ಶ್ರೀ ಮಾನ್ಯ ಉತ್ತಂಗಿ ಚನ್ನಪ್ಪನವರಿಗೂ ಕರ್ನಾಟಕದ ಕಾಳಿದಾಸರೂ ಭಾಷಾಭೂಷಣರೂ ವಚನ ವಾಙ್ಮಯದ ಜೀವಾಳವನ್ನು ತಮ್ಮ ಬಾಳು ವೆಯನ್ನು ಮಾಡಿದ ಸಚ್ಚಿದಾನಂದ ನಿತ್ಯ ಪರಿಪೂರ್ಣತೆಯ ಲಿಂಗಾಂಗ ಸಂಗಿಗಳೂ ಆನ, ಪ್ರಬುದ್ಧ ಶೈಲಿಯೊಳು ಪ್ರಸ್ತಾವನೆಯನ್ನು ನಿಚ್ಚಳ ವಾಗಿ ಅಚ್ಚೊತ್ತಿದ ಶಿವವ.ೂರ್ತಿಗಳಪ್ಪ ಶ್ರೀ ಭೂಸನೂರ ಮಠ ಎಮ್. ಏ ಅಧ್ಯಾಪಕ ಬೆಳಗಾಂವ ಕಾಲೇಜ ಇವರಿಗೂ ಅಚ್ಚಳಿಯದ ನಿಚ್ಚಳ ವಾದ ವಂದನೆಗಳನ್ನರ್ಪಿಸುವದಲ್ಲದೆ, ಈಗ್ಗೆ ೨೫ ವರ್ಷಗಳಿಂದ ಶಿವಶರ ಣರ ವಚನ ವಾಙ್ಮಯದ ಬೀಜ ಸ್ವರೂಪವಾದ ವಚನಸಾರಗಳನ್ನು ಬಿತ್ತಿ, ಶಿವಾನುಭವವೆಂಬ ಕೊಡದಿಂದ ನೀರನುಣಿಸಿ, ವಚನ ಭಾಂಡಾರ ವೆಂಬ ವೃಕ್ಷವನ್ನು ಬೆಳೆಯಿಸುತ್ತಿರಲು, ಆದರ ಬೆಳವಣಿಗೆಯು ಬಲಿತು ಹೂವು ಬಿಟ್ಟು ಹಣ್ಣಾದ ಫಲಗಳನು ಹರಿಹರಿದು ಸವಿಗೊಳಿಸುವ ಸಂಧಾನವನಿತ್ತ ಮಹಾತ್ಮರಾದ ರಾ || ಬ || ಹಳಕಟ್ಟಿ ಬಿ ಏ. ಎಲ್. ಎಲ್. ಬಿ. ಯವರಿಗೂ ಅವಿರಳವಾದ ಚಿರವಂದನೆಗಳನರ್ಪಿಸುವ ಲೇಖ ನಿಗೆ ವಿಶ್ರಾಂತಿಯನ್ನೀವ ಶಿವಶರಣರ ಶಿಶು.

ಮತ್ತಂ:— ಕಂದ.

ದೇವ ಧ್ಯಾನದೊಳಿರುವಂ |
ಜೀವನ ಜನನ ಮರಣಗಳ ಜೊತೆಯಂ ಜರಿವ ||
ಸಾವಿನ ಸರಪಳಿ ಪರಿವಂ |
ಪಾವನ ರೂಪಿಂ ಪರತರ ಸುಖಮಂ ಪಡೆವಂ ‖ ೧ ‖

ಕಾಯದ ಕಳವಳ ಕಳೆಯಲು |
ಕಾಯಕ ಕೈಲಾಸವೆಂಬ ಕೃತಿಯಂ ತೋರೈ ||
ಬೇಯುವ ಮನ ಸಂತೈಸಲು |
ಮಾಯಾ ಮರ್ದನ ಶರಣರ ಸೇವೆಯ ಮಾಡೈ ‖ ೨ ‖

ಭವಸಾಗರವಂ ದಾಂಟಲು ।
ಶಿವಸಂಸ್ಕಾರವ ಪಡೆಯುತ ಸದ್ಗುರು ಮುಖದಿಂ ॥
ಶಿವಶರಣರ ಸಂಗದೊಳಂ ।
ನವಲಿಂಗ ಸಕೀಲನರಿದು ನಡೆವುದು ನೋಡೈ ॥ ೩ ॥

ತನುವಂ ಗುರುವಿಗೆ ಮನಸಿನ ।
ನೆನವಂ ಲಿಂಗಕೆ ಧನವನು ಜಂಗಮಕೀಯಲ್ ॥
ತನು ಮನ ಭಾವಂಗಳೊಳಂ ।
ಘನಲಿಂಗ ನೆಲಿಸಿ ನಿರುಪಮ ನಿಜಸುಖಮುಕ್ಕುಂ ॥ ೪ ॥

ವಿಶ್ವದ ತೊರಿಕೆ ತೊರೆದೊಡೆ ।
ವಿಶ್ವಾಧಾರನ ಪರಿಯನರಿವುದತಿಸುಲಭಂ ॥
ವಿಶ್ವಾಸವಿರಲು ಶರಣರ ।
ವಿಶ್ವಾಂತರ್ಯಾಮಿಯು ಬೆಳಗಿನ ಬೆಳಗಿನೊಳೈ ॥ ೫ ॥

**ವಚನ:**— ತನುತ್ರಯ ಮನತ್ರಯ ಭಾವತ್ರಯ ನಾದತ್ರಯ ದೇಹತ್ರಯಂಗಳೊಳು ತೊಳಗಿ ಬೆಳಗುವ ಮಹಾಲಿಂಗದ ಕಳೆಯಂ ಹಸ್ತ ಮಸ್ತಕ ಸಂಯೋಗದಿಂ, ಭಾವಮನದೃಷ್ಟಿಯಿಂ ಅಂಗೈಯೊಳು ಲಿಂಗ ದಂತಿರಿಸುವ ಮಹಾಂತನ ತೋರಿ ಬದುಕಿಸಯ್ಯ ಸಿದ್ಧೇಶ್ವರಾ ॥ ೧ ॥

ಅರುಹಿನ ಕುರುಹುದೋರದಾತ ಗುರುವೇ? ಇಳೆಯಾಧಾರನ ಸುಳಿವು ತಿಳಿಯದಾತ ಗುರುವೆ? ಅಭೇದ್ಯನಭೇದಿಸದಾತ ಗುರುವೇ? ಮನದ ಮಲವ ತೊಳೆಯದಾತ ಗುರುವೇ? ಕಾಮನ ಕಳವಳ ಕಳೆಯದಾತ ಗುರುವೇ? ಮನದ ಮರವೆ ಹರಿಯದಾತ ಗುರುವೇ? ಭಾವದ ಭ್ರಮೆಯು ಬಿಡಿಸದಾತ ಗುರುವೇ? ಹಾಲಿಲ್ಲದ ಹರಿವಾಣ ಹೆತ್ತುಪ್ಪನೀಯಬಲ್ಲುದೇ? ನೀನೇ ಹೇಳಾ ಸಿದ್ಧೇಶ್ವರಾ ॥ ೨ ॥

ಲಿಂಗಾಣತಿಯಿಂದ ಬಂದ ರೂಪು ರುಚಿ ತೃಪ್ತಿ ಪದಾರ್ಥಂಗಳಂ ಮೂಲ ಮಂತ್ರದಿಂ ಗಂಗಾಳದೊಳ್ ಗಡಣಿಸಿ, ತನ್ನ ಗುರುಲಿಂಗ ಜಂಗಮಾರ್ಪಿತ ಮಾಡಬಲ್ಲಾತನೇ ಗಂಗಾಧರನೆಂದ ನಮ್ಮ ಸಿದ್ಧೇಶ್ವರಾ ॥ ೩ ॥

ನೋಳಿಗೆಯ ಮಾರಯ್ಯನ ಮನಗಂಡ ನುಡಿಗಳು ಹಸಿಯ ಗೋಡೆಯೊಳು ಹಳ್ಳವನಿಟ್ಟಂತೆ, ಬಿಸಿಯ ಕಜ್ಜಕ್ಕೆ ಬೆಣ್ಣೆಯ ತೊಡೆದಂತೆ, ಹಸನಾದ ಸೊಸೆಯು ಹೊಸದಾಗಿ ಮನೆಗೆ ಬಂದಂತೆ, ಹಸಿದ ಹಸುಗೂಸು

ಹಡೆದವಳ ಮಗ್ಗುಲಿನ ಮೊಲೆಯನು ಹೀರಿ ಹಿಗ್ಗುವ ತೆರನಂತೆ, ಎನ್ನ ಕರುಷವು ಹಳ್ಳಾಗಿ ಹರಿದು, ನೊಸಲಗಣ್ಣ ತೆರೆದ ಪರಿಯ-ನೇನೆಂದು ಹೇಳಲಯ್ಯ ಸಿದ್ಧೇಶ್ವರಾ ॥ ೪ ॥

ಅರಸೊತ್ತಿಗೆಯ ಅಷ್ಟೈಶ್ವರ್ಯಂಗಳನತಿಗಳೆದು, ರಾಜತೇಜವ ತ್ಯಜಿಸಿ, ರಾರಾಜಿಪ ರಾಜ್ಯಾಸನವ ಮೂಜದೆ ಮಗನಿಗಿತ್ತು, ಭರದಿಂದ ಬಂದು ಹಿಂಬಾಲಿಸಿದ ಭಕ್ತಿ ಸತಿಯನೊಡಗೊಂಡು, ಕಡುಬೆಡಗಿನ, ಕಾಶ್ಮೀರ ಭೂಮಿಯಿಂ ಕಲ್ಯಾಣಕ್ಕೈತಂದು, ಬಸವಾದಿ ಶಿವಶರಣರ ಶ್ರೀಪಾದದೋಳೋಲಾಡಿ, ಅವರೊಕ್ಕುಮಿಕ್ಕುದಂ ಮನವಾರೆ ಉಂಡು, ಅವರ ಆಶೀರ್ವಾದದ ಕಾಯಕವ ಕೈಕೊಂಡು, ಅರುಹು ಆಚಾರ ಕ್ರಿಯೆಯೊಳಿರ್ದು, ಗುರುಲಿಂಗ ಜಂಗಮಾರ್ಚನಾರ್ಪಣಂಗಳಂ ಸಾಗಿಸುತ್ತ ಸಮಯೋಚಿತ ಪ್ರಸಾದವಂಗೈದು, ನಿಜನಿಷ್ಠೆ ನಿಜಾಚಾರದೊಳಿರುತ್ತ ಅನುಭಾವ ಮಂಟಪದೊಳು ನಿಜವಚನಾನುಭವಗೈದು, ಘನಲಿಂಗದೊಳಗಾದ ಶಿವಶಕ್ತಿರೂಪಾದ ಮಾರಯ್ಯ ಮಹಾದೇವಿಯರ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನಯ್ಯ ಸಿದ್ಧೇಶ್ವರಾ ॥ ೫ ॥

---

# ಪೂರ್ವಾಚಾರ್ಯ ಬಸವಣ್ಣನವರು.

(ಲೇಖಕ:—ಶ್ರೀ. ಪು. ಸಿ. ಒಣ್ಯಹಟ್ಟಿ, ಬಿ. ಎ. ಬಿ. ಟಿ. ಬಾಗಲಕೋಟ.)

ಶ್ರೀಕಲ್ಯಾಣದ ಬಸವಣ್ಣನವರು ಇಷ್ಟಲಿಂಗ ಸಹಿತ ಅಷ್ಟಾವರಣ ಷಟ್‌ಸ್ಥಲ ಮತ್ತು ಪಂಚಾಚಾರ ಸಾಧಕರಾದ ಶಿವಶರಣರಿಗೆ ಭಕ್ತಿಮಾರ್ಗ ತೋರಲು ಪೂರ್ವಾಚಾರ್ಯ, ಆದಿದೇಶಿಕರಾಗಿದ್ದಿಲ್ಲವೆ?

ಚಾಮರಸ ಕವಿಯು ತನ್ನ ಪ್ರಭುಲಿಂಗ ಲೀಲೆಯ ಒಂದನೆಯ ಗತಿಯ ಸ್ತೋತ್ರದ ಒಂದು ಪದ್ಯದಲ್ಲಿ ಮುಂದಿನಂತೆ ಹಾಡಿದ್ದಾರೆ.

"ಕಾಯದೊಳು ಗುರುಲಿಂಗ ಜಂಗಮ | ದಾಯತವ ನರಿಯಲ್ಕೆ ಸುಲಭೋಪಾಯದಿಂದಿದಿರಿಟ್ಟು, ಬಾಹ್ಯಸ್ಥಲಕೆ ಕುರುಹಾಗಿ ॥ ದಾಯದೋರಿ ಸಮಸ್ತ ಭಕ್ತನಿಕಾಯವನು ಪಾವನವ ಮಾಡಿದ | ರಾಯ ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ" ॥

ಅದೇ ಪ್ರಭುಲಿಂಗಲೀಲೆಯ ಇನ್ನೊಂದು ಗತಿಯಲ್ಲಿ ಈ ಮುಂದಿನ ಪದ್ಯವಿದೆ.

"ಬಸವ ಮಾಡಿದರಾಯ್ತು ಗುರುನೆಲೆ । ಬಸವ ಮಾಡಿದರಾಯ್ತು ಲಿಂಗವು । ಬಸವ ಮಾಡಿದರಾಯ್ತು ಜಂಗಮವರಿವ ಮಹಿಮರಿಗೆ ॥ ಬಸವ ನಿಂದಧ್ಯಾತ್ಮವೆ ಪಸರಿಸಿತು ಲೋಕದೊಳಂತು ಕಾರಣ । ಬಸವನೆ ಪರ ದೈವವೆನುತಿರ್ದ ಪ್ರಭುರಾಯ ॥"

ಹೀಗೆ ಕವಿಯಾದ ಚಾಮರಸನು ತನ್ನ ಕಾವ್ಯದ ನಾಯಕನಾದ ಪ್ರಭುರಾಯನಿಂದ ಶ್ರೀ ಬಸವಣ್ಣನು ಪರದೈವವೆಂದು ಆದರಪೂರ್ವಕ ಸ್ತುತಿಸಹಚ್ಚಿದ್ದಾನೆ. ಇದರಿಂದ ಕಂಡುಬರುವದೇನಂದರೆ ಬಸವಣ್ಣನವರು ಷಟ್‌ಸ್ಥಲ ಜ್ಞಾನವನ್ನು ಅಳವಡಿಸಿಕೊಂಡಿದ್ದರೂ ಅಧ್ಯಾತ್ಮವನ್ನು ಪಸ ರಿಸಲು ಭಕ್ತಿಯ ಮಹಿಮೆಯನ್ನು ಹಬ್ಬಿಸಲು ಭಕ್ತಿಸ್ಥಲದಲ್ಲಿ ನಿಂತು ಜಂಗಮ ಜ್ಞಾನವರಿತು ಕ್ರಿಯೆಯನ್ನು ಆಚರಿಸಿ ಭಕ್ತಿ ನಡುವಳಿಕೆಯ ಆದಿದೇಶಿಕರಾಗಿದ್ದರೆಂಬುದು ಸ್ಪಷ್ಟವದೆ. ಈ ಬಗ್ಗೆ ಶೂನ್ಯಸಂಪಾದನೆಯು ಚನ್ನಬಸವಣ್ಣನವರ ಸಂಪಾದನೆಯಲ್ಲಿಯ ವಚನಗಳು ಸಾಕ್ಷಿಯಾಗಿವೆ. ಪ್ರಭುದೇವರಿಗೆ ಚನ್ನಬಸವಣ್ಣನವರು ಅಂದದ್ದು.

"ಅನುಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ, ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಂಪ್ರದಾಯದ ಕಂದನು ನೋಡಾ ನೀನು, ಭಕ್ತಿದಳದುಳದಿಂದ ಚನ್ನಸಂಗಮನಾಥನೆಂಬ ಲಿಂಗವನವಗ್ರಹಿಸಿಕೊಂಡೆ ನಾಗಿ ಬಸವಣ್ಣನ ಸಂಪ್ರದಾಯದ ಕಂದನು ನೋಡಾ ನಾನು. ಇಂತು ಇಬ್ಬರಿಗೆಯೂ, ಬಸವಣ್ಣನ ಮಹಾಮನೆಯ ಪ್ರಸಾದ ಒಂದೇ ಕಾಣಾ ಪ್ರಭುವೆ.

ಇದಕ್ಕೆ ಪ್ರಭುದೇವರು ನುಡಿದ ಉತ್ತರಃ—

ಲಿಂಗವಿಡಿದು ಅರಿದರಿವು ಅರಿವಲ್ಲಿ ಗುರುವಿಡಿದು ಅರಿದರಿವು ಅರಿ ವಲ್ಲಿ ಗುರುವಿಡಿದು ಲಿಂಗ ಉಂಟೆಂದು ಕಲ್ಪಿತ, ತನ್ನಿಂದ ತಾನಹುದ ಲ್ಲದೆ ಗುಹೇಶ್ವರ ಲಿಂಗದಲ್ಲಿ ಹಂಗುಹರಿಯದನ್ನಕ್ಕರ, ತಾನಾಗಬಾರದು ಕಾಣಾ ಚನ್ನ ಬಸವಣ್ಣ.

ಹೀಗೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಚನ್ನಬಸವಣ್ಣನ ವರ ಪ್ರತ್ಯುತ್ತರಃ—

ಗುರುವಿಲ್ಲದ ಲಿಂಗ ನಿನಗದೆಲ್ಲಿಯದಯ್ಯಾ? ಕೊಂದೆ ನಿಮ್ಮಯ್ಯನ, ಕೊಂಡೆ ಲಿಂಗವನು. ಅಂದು ನಿನಗೆ ಅನುಮಿಷನು ಗುರುವಾದುದನರಿಯಾ, ಕೂಡಲ ಚನ್ನಸಂಗಯ್ಯನಲ್ಲಿ ಮೂರು ಲೋಕವರಿಯೆ ಅಲ್ಲಮ ವ್ರತಗೇಡಿ.

ಅನುಮಿಷನ ಕೊಂದು, ಲಿಂಗವ ಕೊಂಡಕಾರಣ ನೀನು ಗುರು ದ್ರೋಹಿ ಎಂದು ಚನ್ನಬಸವಣ್ಣನವರು ನುಡಿಯಲು ಇದಕ್ಕೆ ಪ್ರಭು ದೇವರು ನಿರೂಪಿಸಿದ ಪ್ರತ್ಯುತ್ತರಃ—

ಗುರುವಿನ ಪ್ರಾಣ ಲಿಂಗದಲ್ಲಿ ಲೀಯ್ಯವಾದ ಬಳಿಕ ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು ನೋಡಾ. ಇದ್ದಾನೆ ನೋಡಾ ಎನ್ನ ಗುರುವು ಅನುಮಿಷನೆನ್ನ ಕರಸ್ಥಲವಲ್ಲಿ ಇದ್ದಾನೆ ನೋಡಾ. ಎನ್ನ ಗುರುವು ಅನುಮಿಷನೆನ್ನ ಜ್ಞಾನದೊಳಗೆ. ಇದ್ದಾನೆ ನೋಡಾ ಎನ್ನ ಗುರುವಿನ ಗುರುವು ಬಸವಣ್ಣನೆನ್ನ ಕಣ್ಣಮುಂದೆ. ಗುಹೇಶ್ವರ ಸಾಕ್ಷಿಯಾಗಿ ಎನ್ನ ಮೇಲೆ ಗುರುದ್ರೋಹವಿಲ್ಲ ಕಾಣಾ ಚನ್ನಬಸವಣ್ಣ.

ಇದರಿಂದ ಬಸವಣ್ಣನವರು ಪ್ರಭುದೇವರ ಗುರುವಾದ ಅನುಮಿಷನ ಗುರುವಾಗಿದ್ದರೆಂದೂ ತಮ್ಮ ಲಿಂಗ ಸಾಂಪ್ರದಾಯವನ್ನು ಮುಂದುವರಿಸಿದರೆಂದೂ ಕಂಡುಬರುವದಿಲ್ಲವೇ? ಇದೇ ರೀತಿಯಾಗಿ ಬಸವಣ್ಣನವರು ಗುರುಲಿಂಗಜಂಗಮ ಭಕ್ತಿಸಾಂಪ್ರದಾಯಕ್ಕೆ ಆದಿ ದೇಶಿಕರಾಗಿದ್ದ ಬಗ್ಗೆ, ಇನ್ನೂ ಅನೇಕ ಆಧಾರವೆನಿಸುವ ಈ ಮುಂದಿನ ವಿಧಾನಗಳುಂಟು.

(೧) ಪಾಲ್ಕುರಿಕೆಯ ಸೋಮಾರಾಧ್ಯರು (ಕ್ರಿ. ಶ. ೧೧೯೧) ತಮ್ಮ ಗಣಸಹಸ್ರ ಗ್ರಂಥದಲ್ಲಿ ಮುಂದಿನಂತೆ ಅಂದಿದ್ದಾರೆಃ —

"ಶಿವತತ್ವಸರ್ವ ಚೈತನ್ಯಂ ಈಶ ಗುರುಬಸವಲಿಂಗ ಪ್ರಥಮಾಚಾರ್ಯರೆಂದು ವಂದಿಸಿ ನುತಿಸುವೆಂ."

(೨) ಗುರುರಾಜ ಕವಿಯು ತನ್ನ ಗುರುರಾಜ ಚರಿತ್ರೆಯಲ್ಲಿ ಹಾಗು ನೀಲಕಂಠಾಚಾರ್ಯರು ತಮ್ಮ ಆರಾಧ್ಯಚರಿತ್ರೆಯಲ್ಲಿ ಪಂಡಿತಾರಾಧ್ಯರಿಂದ ಮುಂದಿನಂತೆ ಅನಿಸುತ್ತಾರೆಃ —

"ಬಸವೇಂದ್ರನ ತರುವಾಯ ಭೂಮಿಯ ಮೇಲೆ ವೀರಶೈವ ಧರ್ಮವನ್ನು ಸುಸ್ಥಿರಗೊಳಿಸಿ ಮುಂದುವರಿಸುವವರಿನ್ನಾರು? ಅಲ್ಲದೆ— "ವೀರ

ಶೈವಾಚಾರ ವರ್ತನೆಗೆ ಪಿರಿದು ದಿಕ್ಕಿನ್ನಾವನೀ ವೀರಸಮಯಮಂ ಸ್ಥಾಪಿಸುವನಿನ್ನಾವನು ?

(೩) ಮೊಗ್ಗೆಯ ಮಾಯಿದೇವರು ತಮ್ಮ ಶತಕತ್ರಯದಲ್ಲಿ (ಕ್ರಿ. ಶ. ೧೪೭೮) ಬಸವಣ್ಣನವರನ್ನು ಮುಂದಿನಂತೆ ವರ್ಣಿಸುತ್ತಾರೆ: —

" ವೀರಶೈವ ನಿರ್ಣಯ ಪರಮಾವತಾರ ಆದಿದೇಶಿಕ "

(೪) ಮರಿತೊಂಟದಾರ್ಯರು ತಮ್ಮ ಸಿದ್ಧೇಶ್ವರ ಪುರಾಣದಲ್ಲಿ ಬಸವಣ್ಣನವರನ್ನು ಕುರಿತು ಮುಂದಿನಂತೆ ಪ್ರಾರ್ಥಿಸುತ್ತಾರೆ.

" ವರ ವೀರಶೈವವ ನೆಲೆಗೊಳಿಸಿದ ಬಸವನೆಮಗನವರತ ಶಿವ ಭಕ್ತಿಯಂ ಕೊಟ್ಟು ರಕ್ಷಿಸುಗೆ "

(೫) ಕೆಳದಿಯ ಅರಸರಾದ ಬಸವಪ್ಪನಾಯಕರು ತಮ್ಮ ಶಿವತತ್ವ ರತ್ನಾಕರದಲ್ಲಿ ಬಸವೇಶ್ವರರನ್ನು ಕುರಿತು ಮುಂದಿನಂತೆ ಬರೆದಿದ್ದಾರೆ.

"ಭಗವಾನ್ ಬಸವೇಶ್ವರರು ವೀರಶೈವ ಮತವನ್ನು ಸ್ಥಾಪಿಸಿ ಪ್ರಕಾಶಗೊಳಿಸಿದರು."

(೬) ಮರಿ ತೋಂಟದಾರ್ಯರು ಮುಂದಿನಂತೆ ಅಂದಿದ್ದಾರೆ.

"ವೀರಶೈವ ಅಪ್ರಾಕೃತ ಅಷ್ಟಾವರಣ ಪಂಚಾಚಾರ ಸ್ಥಾಪನವೇ ಕೇವಲ ಉದ್ದೇಶವುಳ್ಳವರಾಗಿ ಪರಮೇಶ್ವರನು ಜ್ಞಾನಸಾರವಾಗಿ ನಂದೀಶ್ವರರವತಾರರಾದ ಬಸವೇಶ್ವರರು" ಮುಂತಾಗಿ

ಇಂತು ಬಸವೇಶ್ವರರು ಇಷ್ಟಲಿಂಗ ಸಹಿತ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ವಿಶಿಷ್ಟ ವರ್ಣಾಶ್ರಮ ಪಂಚಸೂತಕ ರಹಿತ ಜಾತಿಭೇದವಿಲ್ಲದ ಸಮತಾಭಾವದ ವೀರಶೈವ ಮತ ಪ್ರವರ್ತಕರಲ್ಲವೇ?

ಆದರೆ ೨೮ ಶಿವಾಗಮಗಳು ಬಹು ಪುರಾತನಕಾಲದವಿದ್ದು ೫ ನೆಯ ಶತಮಾನದ ಶಿಲಾಶಾಸನದಲ್ಲಿ ವಿವರಿಸಲ್ಪಟ್ಟಿವೆ. ಇಂದಿನ ವೀರಶೈವ ಧರ್ಮಕ್ಕೆ ಈ ಶೈವಾಗಮಗಳು ಆಧಾರ ಗ್ರಂಥಗಳಾಗಿವೆ ಎಂದು ಕೆಲವರು ಪ್ರತಿಪಾದಿಸುತ್ತಾರೆ. ನಿಜವಾಗಿ ಸೂಕ್ಷ್ಮ ರೀತಿಯಿಂದ ಪರಿಶೀಲಿಸಲು ಶೈವ ಮತ್ತು ವೀರಶೈವ ಧರ್ಮಗಳಿಗೆ ಶಿವಾಧಿಷ್ಠಾನದ ಹೊರ್ತು ಉಳಿದೆಲ್ಲ ಬಗೆಗಳಿಂದ ಭಿನ್ನವಾಗಿವೆ. ವೀರಶೈವರಿಗಿದ್ದಂತೆ ಶೈವರಿಗೆ ಅಷ್ಟಾವರಣ ಷಟ್‌ಸ್ಥಲ ಪಂಚಾಚಾರ ಮುಂತಾದ ಸಾಧನಗಳಾವವೂ ಇಲ್ಲ. ಆದರೆ

ವೀರಶೈವರಿಗಿಲ್ಲದ ಪಂಚಸೂತಕಗಳು, ಸ್ಥಾವರಲಿಂಗ ಪೂಜೆ, ವರ್ಣಾಶ್ರಮ ಗಳು, ಯಜ್ಞಯಾಗಾದಿಗಳು. ಜಾತಿಭೇದ ಹುಟ್ಟು ಜನ್ಮವಾರಾದಿಗಳು ಇದ್ದು ಇವುಗಳನ್ನು ಶೈವರು ಮನ್ನಿಸಿ ಆಚರಿಸುತ್ತಾರೆ. ಆದ್ದರಿಂದ ಶೈವಾಗಮಗಳು ವೀರಶೈವರಿಗೆ ಮಾನ್ಯವಾದ ಆಧಾರ ಗ್ರಂಥಗಳಾಗಲಾರವು. ಈ ಶೈವಾಗಮಗಳ ಬಗ್ಗೆ ಡಾ. ನಂದೀಮಠರ ವೀರಶೈವ ಕೈಪಿಡಿ ಗ್ರಂಥ ದಲ್ಲಿ ಮುಂದಿನ ಪ್ರತಿಪಾದನೆಯುಂಟು. "ಉಪಲಬ್ಧವಿದ್ದ ಶೈವಾಗಮಗ ಳಲ್ಲಿ ವೀರಶೈವ ಧರ್ಮದ ಬಗ್ಗೆ ಅಥವಾ ಷಟ್‌ಸ್ಥಲ ಸಿದ್ಧಾಂತದ ಬಗ್ಗೆ ಅನೇಕ ಉಲ್ಲೇಖಗಳಿಲ್ಲ. ಅಲ್ಲದೆ ದೊರೆತಿರುವ ತೀರ ಸ್ವಲ್ಪ ಭಾಗಗಳೂ ಕೂಡ ವೀರಶೈವ ಷಟ್‌ಸ್ಥಲ ಧರ್ಮವನ್ನು ಆ ಶೈವಾಗಮಗಳು ಉಪ ದೇಶಿಸುತ್ತವೆಂಬ ವಿಚಾರ ಸರಣಿಯನ್ನು ಎತ್ತಿ ಹಿಡಿಯುವದಿಲ್ಲ. ಆದ್ದ ರಿಂದ ವೀರಶೈವ ಧರ್ಮಕ್ಕೆ ಶೈವಾಗಮಗಳು ಎಷ್ಟರ ಮಟ್ಟಿಗೆ ಆಧಾರ ಗ್ರಂಥಗಳಾಗಿವೆ ಎಂಬ ಬಗ್ಗೆ ಶಂಕಿಸಬೇಕಾಗುತ್ತದೆ. ಈ ಶಂಕಾಪರಿ ಹಾರಾರ್ಥವಾಗಿ ಶೈವಾಗಮಗಳ ಪೂರ್ವಾರ್ಧ ಭಾಗಗಳು ಶೈವ ಸಿದ್ಧಾಂತ ವನ್ನೂ ಉತ್ತರಾರ್ಧ ಭಾಗಗಳು ವೀರಶೈವ ಸಿದ್ಧಾಂತವನ್ನೂ ನಿರೂಪಿ ಸುತ್ತವೆಂಬ ಪ್ರತೀತಿಯುಂಟಾಗಿರುವದು. ಇದು ಎಷ್ಟರ ಮಟ್ಟಿಗೆ ಸಮ ರ್ಥನೀಯವೆಂಬುದನ್ನು ಹೇಳಲಿಕ್ಕೆ ಬರುವಂತಿಲ್ಲ." ಎಂದು ಡಾ. ನಂದೀ ಮಠರು ತಮ್ಮ ಕೈಪಿಡಿ ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಈ ಪ್ರತೀತಿ ಬಗ್ಗೆ ಇರುವ ಶಂಕೆಯನ್ನು ಪ್ರೊಫೇಸರ್ ಎಂ. ಆರ್. ಸಾಖರೆ. ಎಂ. ಎ. ಅವರು ತಮ್ಮ ಲಿಂಗಧಾರಣ ಚಂದ್ರಿಕೆಯ ಇಂಗ್ಲೀಷ ಉಪೋದ್ಘಾತದಲ್ಲಿ ಮುಂದಿನ ರೀತಿಯಲ್ಲಿ ಪರಿಹರಿಸಿದ್ದಾರೆ. ಶೈವಾಗಮಗಳು ಕೇವಲ ೨೮ ಇದ್ದರೂ ಈ ಆಗಮಗಳು ಬರಬರುತ್ತ ಇತ್ತಿತ್ತಲಾಗಿ ಉತ್ತರ ಭಾಗಗಳಾಗಿ ಸೇರಿಸಲ್ಪಟ್ಟು ವಿಸ್ತರಿಸಲ್ಪಟ್ಟಿವೆ. ಉದಾಹರಣಾರ್ಥವಾಗಿ ಮೊಗ್ಗೆಯ ಮಾಯಿದೇವನಿಂದ (ಕ್ರಿ. ಶ. ೧೪೫೦) ಬರೆಯಲ್ಪಟ್ಟ ಅನುಭವ ಸೂತ್ರ ಸಂಸ್ಕೃತ ಗ್ರಂಥವು ವಾತುಲೋತ್ತರ ಆಗಮವಾಗಿ ಸೇರಿಸಲ್ಪಟ್ಟಿದೆ. ಅಲ್ಲದೆ ಶಿವಶರಣ ಪ್ರಮಥರ ವರ್ಣನೆ ಹಾಗು ಪ್ರಶಂಸನೆಯೂ ಶೈವಾಗಮಗಳ ಉತ್ತರ ಭಾಗಗಳಾಗಿ ಬೆಳೆಸ ಲ್ಪಟ್ಟಿವೆ ಎಂದು ಆಧಾರ ಪೂರ್ವಕವಾಗಿ ಕೈ. ವಾ. ಪ್ರೋ. ಸಾಖರೆಯ ವರು ಚನ್ನಾಗಿ ತಮ್ಮ ಗ್ರಂಥದಲ್ಲಿ ತೋರಿಸಿಕೊಟ್ಟಿದ್ದಾರೆ. ಈ ರೀತಿ

ಯಾಗಿ ವೀರಶೈವ ಷಟ್‌ಸ್ಥಲ ಮಾರ್ಗವು ಶೈವಾಗಮಗಳ ಉತ್ತರ ಭಾಗ ಗಳಾಗಿ ಇತ್ತಿತ್ತಲಾಗಿ ಸೇರಿಸಲ್ಪಟ್ಟಿದ್ದರಿಂದ ನಿಜವಾಗಿಯೂ. ಷಟ್‌ಸ್ಥಲ ಮಾರ್ಗವು ಶಿವಶರಣರಾದ ಪ್ರಮಥರಿಂದಲೇ ಪೂರ್ವದ ವೇದಾಗಮೋಪನಿಷತ್ತುಗಳ ಸಾರರೂಪವಾಗಿ ಅದರಲ್ಲಿಯೂ ಸಾಧನ ಮಾರ್ಗ ಪ್ರಧಾನವಾಗಿ ಕೇವಲ ಸ್ವಾನುಭವದಿಂದ ಕಂಡುಹಿಡಿದಮೇಲೆ ನುಡಿದು ನಿರೂಪಿಸಲ್ಪಟ್ಟಿದ್ದಾಗಿದೆ.

ಈ ಬಗೆಯಿಂದ ವೀರಶೈವ ಷಟ್‌ಸ್ಥಲ ಮಾರ್ಗವು ಪ್ರಥಮತಃ ಕನ್ನಡದಲ್ಲಿಯೇ ಪ್ರತಿಪಾದಿಸಲ್ಪಟ್ಟ ಶಿವಶರಣರ ಸ್ವಾನುಭವ ಪೂರ್ಣ ವಚನಶಾಸ್ತ್ರವಾಗಿದೆ. ಈ ಷಟ್‌ಸ್ಥಲ ಸಿದ್ಧಾಂತವು ಸಂಸ್ಕೃತದಲ್ಲಿ ಬರೆಯಲ್ಪಟ್ಟ ಮೊದಲನೆಯ ಗ್ರಂಥವೆಂದರೆ ಶಿವಯೋಗಿ ಶಿವಾಚಾರ್ಯ (ಕ್ರಿ. ಶ. ೧೩೦೦) ಕೃತ ಸಿದ್ಧಾಂತ ಶಿಖಾಮಣಿಯು. ತದನಂತರ ವೀರಶೈವ ಧರ್ಮ ಗ್ರಂಥಗಳು ಸಂಸ್ಕೃತದಲ್ಲಿ ಅನೇಕ ರಚಿಸಲ್ಪಟ್ಟಿವೆ. ಆದರೆ ಕೆಲವರ ಅಭಿಪ್ರಾಯದಂತೆ ಬಸವಾದಿ ಪ್ರಮಥರ ಪೂರ್ವದಲ್ಲಿ ಬಹು ಕಾಲದಿಂದಲೂ ಅಷ್ಟಾವರಣ ಯುಕ್ತ ಷಟ್‌ಸ್ಥಲ ಸಿದ್ಧಾಂತಿಗಳಾದ ವೀರಶೈವರಿದ್ದದ್ದಾದರೆ ಈಗಿನ ವಿರಕ್ತ ಜಂಗಮರಿಗೆ ಅಲ್ಲಮ ಪ್ರಭುರಾಯನು ಆದಿಪುರುಷನೇಕೆ? ತತ್ಪೂರ್ವದಲ್ಲಿ ಬಾಹ್ಯ ಸ್ಥಲಕ್ಕೆ ಕುರುಹಾಗಿ ಜಂಗಮ ಸ್ಥಾನವಿಲ್ಲವೇಕೆ? ಇಲ್ಲದಿದ್ದ ಪಕ್ಷದಲ್ಲಿ ಪ್ರಭುರಾಯನಿಂದ ಹಿಡಿದು ಈಗಿನ ವಿರಕ್ತರು ಕೇವಲ ಆಗಂತುಕರಾಗುವದಿಲ್ಲವೇ? ಈ ರೀತಿಯಾಗಿ ಅನವಸ್ಥೆಯುಂಟಾಗುವದು. ಆದ್ದರಿಂದ ತತ್ಪೂರ್ವದಲ್ಲಿ ಶೈವ ಪಂಗಡಗಳಾದ ಪಾಶುಪತರು ಲಕುಲೀಶರು ಕಾಳಾಮುಖರು ಮುಂತಾದವರು ಶೈವ ಪದ್ಧತಿಯಿಂದ ಇದ್ದರೆಂಬುವದು ಸಮಂಜಸವಾದ ಸಂಗತಿಯಾಗುವದಿಲ್ಲವೇ? ಹೀಗೆ ಅಪರಿಹಾರ್ಯವಾಗಿ ಐತಿಹಾಸಿಕ ಸಂಗತಿಗಳನ್ನು ಒಪ್ಪಿಕೊಳ್ಳದೆ ಪೌರಾಣಿಕ ರೀತಿಯಿಂದ ತ್ರೇತಾಯುಗದ ರಾಮ, ರಾವಣ, ವಿಭೀಷಣ, ಅಗಸ್ತ್ಯ ಮುನಿಗಳ ಕಾಲದಲ್ಲಿ ರೇಣುಕಾಚಾರ್ಯರು ಇಂದಿನ ಅಷ್ಟಾವರಣ ಯುಕ್ತ ವೀರಶೈವ ಧರ್ಮವನ್ನು ಅಗಸ್ತ್ಯ ಮುನಿಗೆ ಬೋಧಿಸಿ ವಿಭೀಷಣನಿಂದ ಮೂರು ಕೋಟಿ ಸ್ಥಾವರ ಲಿಂಗಗಳನ್ನು ಅರ್ಥಾತ್ ಶೈವರಿಂದ ಪೂಜಿಸಲ್ಪಡತಕ್ಕ ಲಿಂಗಗಳನ್ನು ಸ್ಥಾಪಿಸಿದರೆಂಬುವದು ಹೇಗೆ ನಂಬಲರ್ಹವಾದ ಸಂಗತಿಯಾಗುವದು? ಅದರಂತೆ ದ್ವಾಪರಯುಗದಲ್ಲಿ ಪಾಂಡವರಿಂದ ಅತಿಥಿ ಸತ್ಕಾರವನ್ನು

ಸ್ವೀಕರಿಸಿದ ದುರ್ವಾಸ ಮುನಿಯು ಶೈವನಲ್ಲದೆ ವೀರಶೈವ ಜಂಗಮನು ಹೇಗಾಗಬಲ್ಲನು ? ಈ ರೀತಿಯ ನಂಬಲರ್ಹವಲ್ಲದ ವಿಧಾನಗಳನ್ನು ದೊಡ್ಡ ಸಭೆಗಳಲ್ಲಿಯೂ ಪ್ರವಚನಗಳಲ್ಲಿಯೂ, ಲೇಖಗಳಲ್ಲಿಯೂ, ಸಿದ್ಧಾಂತ ಶಿಖಾಮಣಿಯಂಥ ಗ್ರಂಥಗಳಲ್ಲಿಯೂ ಪ್ರತಿಪಾದಿಸುವದು ಅಜ್ಞ ಭಕ್ತರುಗಳ ಅಂಧ ಶ್ರದ್ಧೆಯ ದುರುಪಯೋಗವಲ್ಲವೇ ? ಈ ಪ್ರಕಾರ ಅಧಿಕಾರ ಸ್ಥಾನದಲ್ಲಿರುವ ಗುರು, ಜಂಗಮ, ಶಾಸ್ತ್ರಿಗಳು ಐತಿಹಾಸಿಕ ಸಂಗತಿಗಳನ್ನು ವಿಕೃತಗೊಳಿಸಿ ಕೇವಲ ಶ್ರದ್ಧೆಯಮೇಲೆ ಅವಲಂಬಿಸಿದ ಅಜ್ಞ ಭಕ್ತರ ಜ್ಞಾನವನ್ನು ನಿವಾರಿಸುವದರ ಬದಲಾಗಿ ಅವರ ಅಜ್ಞಾನವನ್ನು ಮತ್ತಿಷ್ಟು ದೃಢಗೊಳಿಸಿ ವಂಚನೆಯಿಂದ ಅಜ್ಞಾನದ ಲಾಭ ಪಡೆದಂತೆ ಆಗುವದಿಲ್ಲವೇ ? ಅಂಧ ಶ್ರದ್ಧೆ ಮೂಢ ಭಕ್ತಿಗಳಿಂದ ಸಮಾಜದ ಸರ್ವೋದಯ ಹೇಗಾದೀತು ? ಸುಜ್ಞರು ಇದನ್ನು ಲಕ್ಷಿಸಿ ಸರ್ವರ ಹಿತವನ್ನು ಬಯಸಿ ಸಮಾಜದ ಉದ್ಧಾರವನ್ನು ಸಾಧಿಸುವಂತೆ ಆಗಲಿ ಎಂದು ಹಾರೈಸುವಾ- ತಿಳಿವಷ್ಟರ ಮಟ್ಟಿಗೆ ಬರೆಯಲಾಗಿದೆ. ಹೆಚ್ಚಿನ ಅಂಶಗಳೇನಾದರೂ ಇದ್ದಲ್ಲಿ ಬಲ್ಲವರು ಪ್ರಕಟಿಸಿದಲ್ಲಿ ಕೃತಜ್ಞತಾ ಪೂರ್ವಕ ತಿಳಿದುಕೊಳ್ಳಲಾಗುವದು.

---

## ವೀರಶೈವವು ಕರ್ನಾಟಕ ಧರ್ಮವು.

(ಲೇಖಕ:— ರಾ॥ ಬ॥ ಫ. ಗು. ಹಳಕಟ್ಟಿ, ವಿಜಾಪುರ.)

ವೀರಶೈವ ಧರ್ಮವು ಪುರಾತನವಾದುದೆಂತಲೂ ಅದು ಈಗಿನ ಸ್ವರೂಪದಲ್ಲಿಯೇ ಹಿಂದಿನ ಕಾಲದಲ್ಲಿಯೂ ಕೂಡ ಇದ್ದಿತೆಂತಲೂ ಬಹುಜನರ ತಿಳಿವಳಿಕೆಯುಂಟು. ಆದರೆ ಯಾವ ಧರ್ಮವಾದರೂ ಕೂಡ ಈ ಪ್ರಕಾರ ಒಂದೇ ರೀತಿಯುಳ್ಳದಾಗಿ ಯಾವಾಗಲೂ ಇರುವದಿಲ್ಲ. ಅದರಲ್ಲಿ ಪರಿಸ್ಥಿತಿಗೆ ಅನುಸಾರವಾಗಿ ಕಾಲಕಾಲಕ್ಕೆ ಬದಲಾವಣೆಗಳಾಗುತ್ತವೆ. ವೇದಕಾಲದಲ್ಲಿ ಹಿಂದೂ ಧರ್ಮದ ಸ್ವರೂಪವು ಇದ್ದಂತೆ ಉಪ

ನಿಷತ್ಕಾಲದಲ್ಲಿ ಇರಲಿಲ್ಲ. ಮುಂದೆ ಈ ಧರ್ಮದ ಸ್ವರೂಪು ಪೌರಾಣಿಕ ಕಾಲದಲ್ಲಿ ಉಳಿಯಲಿಲ್ಲ. ಪೌರಾಣಿಕಕಾಲದ ಹಿಂದೂಧರ್ಮದಲ್ಲಿಯಾ ದರೂ ಪುನಃ ಅನೇಕ ಬದಲಾವಣೆಗಳಾದವು. ಹೀಗೆ ಬದಲಾವಣೆ ಗಳು ಆಗುತ್ತ ಬರುವದು ಸ್ವಭಾವಿಕವಾಗಿದೆ. ಇದು ಆ ಧರ್ಮದ ಜೀವಂತತನದ ದ್ಯೋತಕವಾಗಿರುತ್ತದೆ.

ವೀರಶೈವ ಧರ್ಮದಲ್ಲಿಯೂ ಕೂಡ ಇದೇ ಪ್ರಕಾರ ಕಾಲಕಾಲಕ್ಕೆ ಬದಲಾವಣೆಗಳಾಗುತ್ತ ಬಂದಿವೆ. ಒಂದುಕಾಲದಲ್ಲಿ ಶೈವಧರ್ಮದಲ್ಲಿ ರುವ ಆಚರಣೆಗಳು ಅದರಲ್ಲಿ ಇದ್ದದ್ದಲ್ಲದೆ ಬ್ರಾಹ್ಮಣ ಧರ್ಮದಲ್ಲಿಯ ಆಚರಣೆಗಳೂ ಕೂಡ ಅದರಲ್ಲಿ ಮಿಶ್ರವಾಗಿದ್ದವು. ಅದರ ಈ ಸ್ವರೂಪು ಅದರಲ್ಲಿ ಯಾವಾಗಲೂ ಇರಲಿಲ್ಲ. ಬಸವಾದಿ ಪ್ರಮುಖರಕಾಲದಲ್ಲಿ ವೀರ ಶೈವ ಧರ್ಮದಲ್ಲಿ ಒಂದು ಕ್ರಾಂತಿಯುಂಟಾಯಿತು. ಅದಕ್ಕೆ ಆಗ ಒಂದು ಹೊಸ ಸ್ವರೂಪು ಪ್ರಾಪ್ತವಾಯಿತು. ಆಗ ಅದು ಒಂದು ವಿಶಾಲ ವಾದ ವಿಸ್ತೃತವಾದ ಧರ್ಮವಾಯಿತು. ಈ ಕಾಲಕ್ಕೆ ಕರ್ನಾಟಕದಲ್ಲಿ ಪ್ರಚಲಿತವಿದ್ದ ಧರ್ಮತತ್ವಗಳಲ್ಲಿ ಮತ್ತು ಆಚಾರಗಳಲ್ಲಿ ಯಾವವು ಉತ್ತಮವಾದವುಗಳೆಂದು ಆ ಕಾಲದ ಶಿವಶರಣರಿಗೆ ತೋರಿದವೋ ಅವುಗಳನ್ನೆಲ್ಲ ಅವರು ವೀರಶೈವ ಧರ್ಮದಲ್ಲಿ ಸೇರ್ಪಡೆ ಮಾಡಿದ್ದು ಕಂಡುಬರುತ್ತದೆ. ಇದರ ಮೂಲಕ ಅದು ನಾಡಿನಲ್ಲಿ ಒಂದು ಪ್ರಬಲ ಧರ್ಮವಾಯಿತು ಅದಕ್ಕೆ ಒಂದು ವ್ಯಾಪಕ ಸ್ವರೂಪು ಪ್ರಾಪ್ತವಾ ಯಿತು ಮತ್ತು ಅದನ್ನು ಎಲ್ಲ ಪಂಗಡದವರು ಅನುಸರಿಸಹತ್ತಿದರು. ನಾವು ಬಸವೇಶ್ವರನ ಕಾಲದಲ್ಲಿ ಆಗಿಹೋದ ಶಿವಶರಣರ ಚರಿತ್ರೆಗ ಳನ್ನು ಪ್ರಸಿದ್ಧಮಾಡುತ್ತ ಬಂದಿದ್ದು ಅವುಗಳ ಮೇಲಿಂದ ಮೇಲಿನ ಸಂಗತಿ ಗಳು ಸ್ಪಷ್ಟವಾಗುವಂತೆ ಇವೆ.

ವೀರಶೈವ ಧರ್ಮವು ಬ್ರಾಹ್ಮಣ ವಿರೋಧೀ ಧರ್ಮವೆಂದು ಬಹು ಜನರು ತಿಳಿದಿರುತ್ತಾರೆ. ಆದರೆ ಈ ತಿಳವಳಿಕೆಯು ತಪ್ಪು ಇರುತ್ತದೆಂಬುದು ಶಿವಶರಣರ ಚರಿತ್ರೆಗಳಿಂದ ಕಂಡುಬರುತ್ತದೆ. ಬಸವೇಶ್ವರನು ಮೊದಲು ಬ್ರಾಹ್ಮಣನಿದ್ದು ಯಜ್ಞೋಪವೀತವನ್ನು ಧಾರಣ ಮಾಡಲಿಕ್ಕೆ ಒಪ್ಪದೇ ಹೋಗಲು ವೀರಶೈವ ಧರ್ಮವನ್ನು ಅವನು ಸ್ಥಾಪಿಸಿದನೆಂಬ ತಿಳಿವಳಿ

ಕೆಯು ಈಗಲೂ ಕೂಡ ಪ್ರಚಲಿತವಿರುತ್ತದೆ. ಆದರೆ ನಿಜ ಸ್ಥಿತಿಯು ಹೀಗಿರುವದಿಲ್ಲ.

ಹನ್ನೊಂದನೆಯ ಶತಮಾನದ ಮಧ್ಯ ಕಾಲದಲ್ಲಿ ಅಂದರೆ ಬಸವೇಶ್ವರನಿಗಿಂತಲೂ ನೂರು ವರ್ಷ ಮೊದಲು ಶಂಕರದಾಸಿಮಯ್ಯನೆಂಬ ಶಿವಶರಣನು ಉತ್ಪನ್ನನಾಗಿ ಚಾಲುಕ್ಯ ಜಯಸಿಂಹರಾಜನ ಆಸ್ಥಾನದಲ್ಲಿ ಪರವಾದಿಗಳೊಡನೆ ವಾದ ವಿವಾದ ಮಾಡಿ ವೀರಶೈವ ಧರ್ಮದ ಶ್ರೇಷ್ಠತೆಯನ್ನು ಪ್ರಸ್ಥಾಪಿಸಿದ್ದು ತಿಳಿದುಬರುತ್ತದೆ. ಆದರೆ ಇವನು ಮೊದಲು ಗಂಗಾಧರ ಭಟ್ಟನೆಂಬ ಹೆಸರಿನ ಬ್ರಾಹ್ಮಣನಾಗಿದ್ದನು. ಅವನು ಮುಂದೆ ವೀರಶೈವ ಧರ್ಮವನ್ನು ಸ್ವೀಕರಿಸಿ ಅದರ ತತ್ವಗಳನ್ನು ಅನೇಕ ಕಡೆಗೆ ಪ್ರಸಾರಪಡಿಸಿದನು.

ಈಗ ಕಲಬುರ್ಗಿ ಜಿಲ್ಹೆಯಲ್ಲಿರುವ ಆಲಂದಿಯಲ್ಲಿ ಏಕಾಂತದ ರಾಮಯ್ಯನೆಂಬ ಶಿವಶರಣನು ಉದಿಸಿ ಧಾರವಾಡ ಜಿಲ್ಹೆಯಲ್ಲಿಯ ದಕ್ಷಿಣ ಭಾಗದಲ್ಲಿ ವೀರಶೈವ ಧರ್ಮವನ್ನು ನೆಲೆಗೊಳಿಸಿದನು. ಇವನು ಬ್ರಾಹ್ಮಣನಾಗಿದ್ದನು.

ವೀರಶೈವರ ಪಂಚಾಚಾರಗಳಲ್ಲೊಬ್ಬನಾದ ಪಂಡಿತಾರಾಧ್ಯನು ಬ್ರಾಹ್ಮಣನಾಗಿದ್ದನು. ಅವನು ಆಂಧ್ರ ದೇಶದಲ್ಲಿ ವೀರಶೈವ ಮತೋದ್ಧಾರ ಕಾರ್ಯಗಳನ್ನು ಮಾಡಿದನು.

ಅವನ ತರುವಾಯ ಆಂಧ್ರದೇಶದಲ್ಲಿ ವೇಮನಾರಾಧ್ಯ ಮತ್ತು ಪಾಲ್ಕುರಿಕೆ ಸೋಮಾರಾಧ್ಯ ಇವರು ಉತ್ಪನ್ನರಾಗಿ ವೀರಶೈವ ಧರ್ಮವನ್ನು ಪ್ರಸಾರಪಡಿಸಿದರು. ಇವರು ಸಹ ಬ್ರಾಹ್ಮಣರಾಗಿದ್ದರು.

ಶಿವಲೆಂಕ ಮಂಚಣ್ಣನು ಹೆಚ್ಚಿನ ತರಗತಿಯ ವಚನಕಾರನಿದ್ದಾನೆ. ಅವನು ಸಹ ಬ್ರಾಹ್ಮಣನಾಗಿದ್ದಾನೆ ಬಹುರೂಪಿ ಚೌಡಯ್ಯನು ಬಹುಜನ ಶೈವರನ್ನು ಒಡಗೊಂಡು ವೀರಶೈವ ಧರ್ಮವನ್ನು ಪ್ರಸಾರಪಡಿಸಿದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಅವನು ಬಹುಜನ ಶೈವ ಬ್ರಾಹ್ಮಣರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು.

ಬಿಬ್ಬಿ ಬಾಚಯ್ಯ, ಅಮ್ಮುಗಿ, ಗುಪ್ತ ಮಂಚಣ್ಣ, ಕೆಂಭಾವಿ ಭೋಗಣ್ಣ, ಮಧುವರಸ ಇವರೆಲ್ಲರೂ ಬ್ರಾಹ್ಮಣರಾಗಿದ್ದಾರೆ. ಆದರೆ ಅವರೆಲ್ಲರೂ ಮೊದಲು ಬ್ರಾಹ್ಮಣ ಧರ್ಮವನ್ನು ಅನುಸರಿಸುತ್ತಿದ್ದರೂ ಹಿಂದುಗಡೆ ಅವರು ಶಿವಾನುಭವದ ತತ್ವಗಳನ್ನು ತಿಳಿದವರಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಅವರ ಕಾರ್ಯಗಳ ಮೂಲಕ ನಾಡಿನಲ್ಲಿ ವೀರಶೈವ ಧರ್ಮದ ಮಹತ್ವವು ಬೆಳೆಯಲಿಕ್ಕೆ ಕಾರಣವಾಯಿತು.

ಹೀಗೆ ಬ್ರಾಹ್ಮಣ ಸಮಾಜವಷ್ಟೇ ಅಲ್ಲ ಇತರ ಸಮಾಜದವರೂ ಕೂಡ ವೀರಶೈವ ಧರ್ಮವನ್ನು ಅನುಸರಿಸಿ ಅದರ ಪ್ರಸಾರ ಮಾಡಿದ್ದು ಕಂಡುಬರುತ್ತದೆ.

ಬಹು ಜನ ಕೈಗಾರಿಕೆಯವರು ವೀರಶೈವ ಧರ್ಮದ ಅನುಯಾಯಿಗಳಾದರು. ಒಕ್ಕಲತನ ಮಾಡುವ ಒಕ್ಕಲಿಗ ಮುದ್ದಯ್ಯ, ಇಳಿಹಾಳ ಬೊಮ್ಮಯ್ಯ, ಇವರು ಒಕ್ಕಲಿಗರಾಗಿ ಶ್ರೇಷ್ಠ ಶಿವಶರಣರೆಂದು ಪ್ರಸಿದ್ಧಿಯನ್ನು ಹೊಂದಿದ್ದಾರೆ.

ಮಡಿವಾಳ ಮಾಚಿದೇವನು ಅಗಸರವನು. ಅಂಬಿಗರ ಚೌಡಯ್ಯನು ಅಂಬಿಗನು, ದೇವರ ದಾಸಿಮಯ್ಯನು ನೇಗೆಯುವನು. ಕುಂಬಾರ ಗುಂಡಯ್ಯನು ಕುಂಬಾರನು, ನುಲಿಯ ಚಂದಯ್ಯನು ಹಗ್ಗ ಹೊಸೆಯುವವನು. ಹಡಪದಪ್ಪಣ್ಣನು ನಾವಲಿಗನು. ಗೊಲ್ಲಾಳನು ಕುರಿ ಕಾಯುವವನು. ಹೀಗೆ ಅನೇಕ ಉದ್ಯೋಗಸ್ಥರು ಮತ್ತು ಕೈಗಾರಿಕೆಯವರು ವೀರಶೈವ ಧರ್ಮವನ್ನು ಅನುಸರಿಸುವವರಾದರು.

ವರದಾನಿ ಗುಡ್ಡಮ್ಮ ಮತ್ತು ಹಾವಿನಹಾಳ ಕಲ್ಲಯ್ಯ ಈ ಉಭಯತರು ಅಕ್ಕಸಾಲಿಗರು. ಈ ಉಭಯತರು ವೀರಶೈವ ಧರ್ಮತತ್ವಗಳನ್ನು ಬಹುಕಡೆಗೆ ಪ್ರಸಾರಪಡಿಸಿದ್ದಾರೆ. ಅವರು ಅತ್ಯುಚ್ಚ ತರಗತಿಯ ವಚನಕಾರರೂ ಶಿವಶರಣರೂ ಎಂದು ಪ್ರಸಿದ್ಧರಾಗಿದ್ದಾರೆ.

ಪುಲಿಗೆರೆಯ ಆದಯ್ಯ, ಸೊಡ್ಡಳ ಬಾಚರಸ, ಮತ್ತು ಬಳ್ಳೇಶ ಮಲ್ಲಯ್ಯ ಇವರು ವ್ಯಾಪಾರಸ್ಥರಿದ್ದಾರೆ. ಅವರಲ್ಲಿ ಕೆಲವರು ವಚನಕಾರರಿದ್ದಾರೆ. ಅವರೆಲ್ಲರು ಶ್ರೇಷ್ಠ ಶಿವಾನುಭವಿಗಳು.

ಇದರಂತೆ ಬಹುಜನ ಅಸ್ಪೃಶ್ಯರು ಸಹ ವೀರಶೈವ ಧರ್ಮವನ್ನು ಪರಿಪಾಲಿಸುತ್ತ ಅದರ ಮಹತ್ವವನ್ನು ಹೆಚ್ಚಿಸಿದ್ದಾರೆ. ಮಾದರ ಚನ್ನಯ್ಯ ಹರಳಯ್ಯ, ಡೋಹರ ಕಕ್ಕಯ್ಯ, ಶಿವನಾಗಮಯ್ಯ, ಧೂಳಯ್ಯ, ನಾವದಿಗೆಯ ಗುಡ್ಡವ್ವ ಇವರೆಲ್ಲರು ಅಸ್ಪೃಶ್ಯರಾಗಿದ್ದು ಶಿವಶರಣರಲ್ಲಿ ಬಹಳ ಪ್ರಸಿದ್ಧಿಯನ್ನು ಹೊಂದಿರುತ್ತಾರೆ. ಇವರಲ್ಲಿ ವಚನಕಾರರೂ ಇದ್ದಾರೆ.

ಹೀಗೆ ಕರ್ನಾಟಕದಲ್ಲಿ ವೀರಶೈವ ಧರ್ಮವು ಎಲ್ಲ ಸಮಾಜಗಳಲ್ಲಿ ಪಸರಿಸಿದ್ದು ಕಂಡುಬರುತ್ತದೆ ಕರ್ನಾಟಕವು ಈ ಕಾಲಕ್ಕೆ ಸಂಸ್ಕೃತಿಯಲ್ಲಿ ಬಹು ಹೆಸರಾದ ದೇಶವಾಗಿತ್ತು. ಚಾಲುಕ್ಯ ವಿಕ್ರಮಾದಿತ್ಯ ಹೊಯಿಸಳ ವಿಷ್ಣುವರ್ಧನ, ಚಾಲುಕ್ಯ ತೈಲಪ, ಮುಂತಾದ ರಾಜರು ಕರ್ನಾಟಕದಲ್ಲಿ ಮಾತ್ರವಲ್ಲ. ಆಗಿನ ಇಡೀ ಭಾರತದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದವರಾಗಿದ್ದರು. ಅವರ ಕಾಲದಲ್ಲಿ ಅತ್ಯಂತ ವರ್ಚಸ್ಸುಳ್ಳ ಧಾರ್ಮಿಕ ವರ್ಗಗಳೆಂದು ಹೆಸರು ಪಡೆದ ಜೈನರು, ಬ್ರಾಹ್ಮಣರು ಶೈವರು ಕಾಳಾಮುಖರು ಪಾಶುಪತರು ಶಾಕ್ತರು ಯೋಗವಿದ್ಯಾಪ್ರವೀಣರು, ಸಿದ್ಧಿಗಳನ್ನು ಸಾಧಿಸಿದ ಸಿದ್ಧರು ಆಗಹೋಗಿದ್ದು ಇವರೆಲ್ಲರೂ ಶಿವಶರಣರು ಪ್ರಸಾರಪಡಿಸಿದ ವೀರಶೈವ ಧರ್ಮಾಚಾರಗಳನ್ನು ಅವಲಂಬಿಸಿದವರಾದರು. ಯಾಕೆಂದರೆ ಈ ಇತರ ಧರ್ಮಗಳಲ್ಲಿ ಯಾವ ತತ್ವಗಳು ಶ್ರೇಷ್ಠವೆಂದು ತಿಳಿಯಲ್ಪಟ್ಟಿದ್ದವೋ ಅವುಗಳನ್ನೆಲ್ಲ ಶಿವಶರಣರು ತಮ್ಮ ಷಟ್‌ಸ್ಥಲ ಮಾರ್ಗದಲ್ಲಿ ಸಮಾವೇಶ ಮಾಡಿಕೊಂಡು ಅವುಗಳನ್ನು ಎಲ್ಲ ಸಮಾಜಗಳಲ್ಲಿ ಮತ್ತು ಜಾತಿಯವರಲ್ಲಿ ಪ್ರಸಾರಪಡಿಸಿದರು.

ವೀರಶೈವ ಧರ್ಮದವರಲ್ಲಿರುವ ಅಹಿಂಸಾ ತತ್ವವು ಜೈನ ಧರ್ಮದವರಿಗೆ ಪ್ರಿಯವಾದುದಾಗಿರುತ್ತದೆ. ಲಿಂಗಾಂಗ ಸಾಮರಸ್ಯದ ತತ್ವಗಳು ಬ್ರಾಹ್ಮಣರ ಅದ್ವೈತ ಮಾರ್ಗವನ್ನು ಅನುಸರಿಸುತ್ತವೆ. ವಚನಶಾಸ್ತ್ರದಲ್ಲಿಯ ಕರಣ ಹಸಿಕೆಯಲ್ಲಿ ಕಂಡುಬರುವ ವಿವೇಚನೆಗಳು ಸಾಂಖ್ಯರ ಮಾರ್ಗವನ್ನು ಹೋಲುತ್ತವೆ. ಶಿವಶರಣರು ಅನುಸರಿಸುವ ತ್ರಿಲಿಂಗಗಳ ಅನುಸಂಧಾನಗಳು ಯೋಗಾಭ್ಯಾಸಿಗಳ ರೀತಿಗಳನ್ನು ಹೋಲುತ್ತವೆ. ಶಿವಶರಣರ ವಿಧಿವಿಧಾನಗಳಲ್ಲಿ ವೈಷ್ಣವರ ಭಕ್ತ್ಯಾಚಾರಗಳು ಇರುವದು ಕಂಡುಬರುತ್ತದೆ. ಶಾಕ್ತರ ತತ್ವಗಳು ಶಿವಶರಣರು ಅಂಗೀಕರಿ

ಸಿರುವ ಮಂತ್ರ ವಿಧಾನಗಳಲ್ಲಿ ತೋರುತ್ತವೆ. ಹೀಗೆ ಹಿಂದುಸ್ಥಾನದಲ್ಲಿ ಖ್ಯಾತಿಯನ್ನು ಪಡೆದ ಧರ್ಮಗಳಲ್ಲಿ ಕಂಡುಬರುವ ಉಚ್ಚತತ್ವಗಳು ವೀರಶೈವ ಮಾರ್ಗದಲ್ಲಿ ಇರುವದು ಕಂಡುಬರುತ್ತದೆ.)

ಮೇಲಿನ ಕಾರಣಗಳ ಮೂಲಕ ವೀರಶೈವ ಧರ್ಮವು ಕೆಲವೊಂದು ವಿಶಿಷ್ಟ ಧರ್ಮ ಅಥವಾ ಜಾತಿ ಅಥವಾ ಪಂಥ ಅಥವಾ ಸಮಾಜದ ವರದು. ಇರದೆ ಅದು ಕರ್ನಾಟಕದ ಸರ್ವ ಸಾಮಾನ್ಯ ಧರ್ಮವಾಗಿ ರುತ್ತದೆಂದು ಹೇಳಬಹುದು. ಅದರ ವ್ಯಾಪ್ತಿಯು ನಾಡಿನ ಇಡೀ ಜನಾಂಗವನ್ನು ಒಳಕೊಂಡಿರುತ್ತದೆ ಹೀಗೆ ಅದು ಒಂದು ವ್ಯಾಪಕ ವಾದ ಸರ್ವ ಸಾಮಾನ್ಯ ಧರ್ಮವಾಗಿರುತ್ತದೆ. ಅದು ಕೆಲವೊಂದು ಪಂಗಡಕ್ಕೆ ಸೇರಿದ ವಿಶಿಷ್ಟ ಧರ್ಮವಲ್ಲ

ಇದರ ನಿಜ ಸ್ವರೂಪ ಹೀಗಿದ್ದರೂ ವೀರಶೈವ ಸಮಾಜದಲ್ಲಿಯು ಕೆಲ ಪಂಗಡದವರು ಅದರ ಕ್ಷೇತ್ರವನ್ನು ಅಕುಂಚಿತ ಮಾಡಲು ಬಗೆ ದರು. ಈಗಲೂ ಬಗೆಯುತ್ತಾರೆ ಅವರು ಹೀಗೆ ಒಂದುಕಾಲದಲ್ಲಿ ಬಹಳ ಪ್ರಯತ್ನಿಸಿದರು. ಇದರಿಂದ ಸಮಾಜದಲ್ಲಿ ಒಡಕುಗಳುಂಟಾದವು ಅನೇಕ ಅನಾಹುತಗಳಾದವು. ಇದರಿಂದ ಬಹುಜನರು ವೀರಶೈವ ಧರ್ಮವನ್ನು ತ್ಯಜಿಸಿದರು. ಅನೇಕರು ಅಲಿಂಗಿಗಳಾದರು. ಇವರ ಘಾತುಕ ಪರಿ ಣಾಮಗಳನ್ನು ಈಗಲೂ ಕೂಡ ಸಮಾಜದಲ್ಲಿ ಕಾಣಬಹುದು. ಈ ಸ್ಥಿತಿಯು ಮೈಸೂರ ಪ್ರಾಂತದಲ್ಲಿ ಮಾತ್ರವಲ್ಲ, ಉತ್ತರ ಕರ್ನಾಟಕ ದಲ್ಲಿಯೂ ಕೂಡ ಇರುವದು ಕಂಡುಬರುತ್ತದೆ

ಆದರೆ ಈ ಪರಿಸ್ಥಿತಿಯು ಶಿವಾನುಭವ ಪತ್ರಿಕೆಯಲ್ಲಿ ವಚನಶಾಸ್ತ್ರವು ಪ್ರಸಾರವಾಗಹತ್ತಿದಂದಿನಿಂದ ದೂರಾಗಹತ್ತಿರುತ್ತದೆ ಮಧ್ಯದಲ್ಲಿ ಉಂಟಾದ ಅಕುಂಚಿತ ವಿಚಾರಗಳು ಮೆಲ್ಲನೆ ಈಗ ಸಡಿಲಾಗಹತ್ತಿವೆ. ಸಮಾಜದಲ್ಲಿ ಮೊದಲಿನಂತೆ ಒಕ್ಕಟ್ಟು ಪರಸ್ಪರ ಸ್ನೇಹ ಸೌಹಾರ್ದಗಳು ಉಂಟಾಗುವ ಚಿನ್ಹಗಳು ಕಂಡುಬರಹತ್ತಿವೆ. ಶಿವಾನುಭವ ಪತ್ರಿಕೆಯಲ್ಲಿ ವಚನಶಾಸ್ತ್ರವು ಪ್ರಕಟವಾಗಹತ್ತಿದಂದಿನಿಂದ ಒಂದು ಸಾಮಾಜಿಕ ಕ್ರಾಂತಿಯು ಉಂಟಾಗ ಹತ್ತಿದೆಂದು ನಾವು ನಿರ್ಭಯವಾದವಾಗಿ ಹೇಳಬಹುದು.

---

# ವೀರಶೈವ ಸಂಘಟನೆ

(ಸಂಪಾದಕರು)

— ೬೦೩ —

ಶಿವಾನುಭವ ಪತ್ರಿಕೆಯನ್ನು ಪ್ರಾರಂಭಿಸಿ ಮುಂದಿನ ಜಾನೇವರಿ ತಿಂಗಳಿಗೆ ಅದಕ್ಕೆ ೨೫ ವರ್ಷಗಳು ಪೂರ್ತಿಯಾಗುವವು. ಇದರ ಮೂಲಕ ಬಸವಾದಿ ಪ್ರಮಥರ ವಚನ ಗ್ರಂಥಗಳು ಮತ್ತು ಮಹಾಕವಿ ಹರಿಹರನ ಅನೇಕ ರಗಳೆಗಳು ಇವುಗಳಲ್ಲದೆ ವೀರಶೈವ ಸಂಸ್ಕೃತಿಯ ಮೇಲೆ ಪ್ರಕಾಶ ವನ್ನು ಕೆಡಹುವ ಶಿವಶರಣರ ಚರಿತ್ರಗಳ ಮೂರು ಭಾಗಗಳು, ವಚನ ಶಾಸ್ತ್ರಸಾರದ ಐದು ದೊಡ್ಡ ಗ್ರಂಥಗಳು, ಕೊಡಗು, ಬೀಳಗಿ, ಕೆಳದಿ. ಹಾಗಲವಾಡಿ ಕೊಕ್ಕಟನೂರು ( ಶಿರಸಂಗಿ ) ಮೊದಲಾದ ರಾಜಮನೆ ತನಗಳ ಇತಿಹಾಸಗಳು ಹೀಗೆ ಸುಮಾರು ಎಂಭತ್ತು ಗ್ರಂಥಗಳನ್ನು ನಾವು ಪ್ರಸಿದ್ಧ ಪಡಿಸಿದೆವು.

ಈ ಪ್ರಕಾರ ಈ ಪತ್ರಿಕೆಯು ಇಪ್ಪತ್ತೈದು ವರ್ಷಗಳ ವರೆಗೆ ಅವ್ಯಾ ಹತವಾಗಿ ಕಾರ್ಯ ಮಾಡುತ್ತ ಬಂದಿರುತ್ತದೆ. ಇದೇ ವರ್ಷದ ಡಿಸೆಂಬರ ಅಂತ್ಯಕ್ಕೆ ಅದಕ್ಕೆ ಇಪ್ಪತ್ತೈದು ವರ್ಷಗಳು ಪೂರ್ತಿಯಾಗಿ ೧೯೫೨ನೆಯ ಜಾನೇವರಿಯಿಂದ ಅದರ ೨೬ನೆಯ ವರ್ಷವು ಪ್ರಾರಂಭವಾಗುತ್ತದೆ. ಜಾನೇವರಿ ೨೬ ನೇ ತಾರೀಖಿಗೆ ಭಾರತದ ಸ್ವಾತಂತ್ರ್ಯ ದಿನವು ಪ್ರಾರಂಭವಾಗುತ್ತದೆ. ಆದ್ದರಿಂದ ಆ ಕಾಲದಲ್ಲಿಯೇ ಪತ್ರಿಕೆಯು ರಜತ ಮಹೋತ್ಸವವನ್ನು ನೆರವೇರಿಸಬೇಕೆಂದು ಪತ್ರಿಕೆಯ ಹಿತೇಚ್ಛುಗಳು ನಮಗೆ ಸೂಚಿಸುತ್ತಲಿದ್ದಾರೆ. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.

ಆದರೆ ಯಾವ ಪ್ರತಿಫಲವನ್ನು ಅಪೇಕ್ಷಿಸದೆ ಕಾರ್ಯವನ್ನು ಕಾಯಕ ವೆಂದು ತಿಳಿದು ಪ್ರಯತ್ನಿಸುವದೇ ಶಿವಾನುಭವದ ರೀತಿಯಾಗಿರುತ್ತದೆ. ಹೀಗೆ ಮಾಡಿದ ಕಾರ್ಯಗಳಿಗೆ ಶಾಶ್ವತ ಫಲಗಳು ದೊರಕುವವೆಂಬ ತಿಳುವಳಿಕೆ ಇದೆ. ಇದು ನಿಃಸಂದೇಹವಾದದ್ದು. ಆದರೆ ಇದರೊಡನೆ ಜನಸಹಾಯವೂ ಧನದ ಬೆಂಬಲವೂ ದೊರಕಿದಲ್ಲಿ ಇಂಥ ಕಾರ್ಯಗಳು ಬೇಗನೇ ಸಿದ್ಧಿಸುವದರಲ್ಲಿ ಅವ ಸಂದೇಹವಿರಲಾರದು. ಬಸವೇಶ್ವರನಿಗೆ ನಿಷ್ಕಾಮ ಸಮಾಜ ಸೇವಾ ಬುದ್ಧಿಯು ಇದ್ದಿತೆಂಬುದು ಅವನ ವಚನ

ಗಳಿಂದ ಸ್ಪಷ್ಟವಾಗುತ್ತದೆ. ಆದರೆ ಈ ಕಾರ್ಯದಲ್ಲಿ ಅವನಿಗೆ ಆಡಳಿತೆಯ ಅನುಕೂಲತೆಗಳೂ ದ್ರವ್ಯಬಲವೂ ಇದ್ದದರಿಂದ ಅವನಿಂದ ಶಾಶ್ವತವಾದ ಮಹತ್ತರ ಕಾರ್ಯಗಳಾದವು.

ನಾವು ಶಿವಾನುಭವ ಪತ್ರಿಕೆಯನ್ನು ಪ್ರಸಿದ್ಧಿಸುವ ಕಾರ್ಯವನ್ನು ಮೊದಲು ಕೈಕೊಂಡಾಗ ಸಮಾಜದಲ್ಲಿ ಪ್ರತಿಗಾಮೀ ಶಕ್ತಿಗಳು ಬಹು ಪ್ರಬಲವಾಗಿದ್ದವು. ವೈದಿಕ ಮತದ ಬ್ರಾಹ್ಮಣ ಧರ್ಮದ ಪದ್ಧತಿಗಳೇ ಹೆಚ್ಚಿನವೆಂಬ ತಿಳಿವಳಿಕೆಗಳು ಸಮಾಜದಲ್ಲಿ ಉಂಟಾಗಿದ್ದವು. ಇದರಿಂದ ಈ ತತ್ವಗಳನ್ನು ಪ್ರತಿಪಾದಿಸುವ ಪತ್ರಿಕೆಗಳಿಗೆ, ಗ್ರಂಥಗಳಿಗೆ ಮತ್ತು ಸಭೆಗಳಿಗೆ ಪುರಸ್ಕಾರವು ದೊರೆಯುತ್ತಿತ್ತು. ಅಲ್ಲದೆ ಆಗ ಬಸವಾದಿ ಪ್ರಮಥರ ತತ್ವಗಳು ಧರ್ಮಾಭಿವೃದ್ಧಿಯನ್ನು ಮಾಡುವದರ ಬದಲು ಸಮಾಜಕ್ಕೆ ಕ್ಷೀಣತೆಯನ್ನು ಉಂಟುಮಾಡಿದವೆಂಬ ವಿಚಾರಗಳು ಯಾವಾಗಲೂ ಪ್ರಕಟವಾಗುತ್ತಿದ್ದವು. ಅನೇಕ ವಿದ್ವಾಂಸರು ಬಸವೇಶ್ವರನು ನೀಚ ಜನರನ್ನೂ ಪುಂಡುಗಾರರನ್ನೂ ಕಲ್ಯಾಣದಲ್ಲಿ ನೆರೆಯಿಸಿ ಅವರ ಸಹಾಯದಿಂದ ರಾಜನನ್ನು ಕೊಂದುಹಾಕಿ ರಾಜ್ಯಾಧಿಕಾರದ ಸೂತ್ರಗಳನ್ನು ತನ್ನ ಕಯ್ಯಲ್ಲಿ ತೆಗೆದುಕೊಳ್ಳುವ ಅಭಿಲಾಷೆಯುಳ್ಳವನಾಗಿದ್ದನೆಂದು ವಿಧಾನಗಳು ಪತ್ರಿಕೆಗಳಲ್ಲಿ ಸ್ವಾತಂತ್ರವಾಗಿ ಪ್ರಕಟವಾಗುತ್ತಿದ್ದವು. ಈ ಪುಂಡಗಾರರು ಉಚ್ಚ ವಚನಕಾರರೆಂಬುದು ಜನರಿಗೆ ಗೊತ್ತಿರಲಿಲ್ಲ. ಇಂಥ ಲೇಖಗಳನ್ನು ಪ್ರಕಟಿಸಿದ ಶುಭೋದಯ ಎಂಬ ಹೆಸರಿನ ವಾರಪತ್ರಿಕೆಯ ಮೇಲೆ ಕೈ. ವಾ. ಸಿದ್ಧರಾಮಪ್ಪಾ ಪಾವಟೆಯವರು ಮಾನಹಾನಿ ಫಿರ್ಯಾದಿಯನ್ನು ಗ್ರಾಂಡ ಸುಮಾರಿನಲ್ಲಿ ಧಾರವಾಡ ಕೋರ್ಟಿನಲ್ಲಿ ಮಾಡಿದರು. ಆದರೆ ವೀರಶೈವರ ಪುರಾಣ ಗ್ರಂಥಗಳಲ್ಲಿ ದೊರಕುವ ಆಧಾರಗಳನ್ನು ಉದಹರಿಸಿ ಆರೋಪಿಗಳು ತಮ್ಮ ಸಮರ್ಥನೆ ಮಾಡಿಕೊಂಡದ್ದರಿಂದ ಈ ಫಿರ್ಯಾದಿಯು ತೆಗೆದು ಹಾಕಲ್ಪಟ್ಟಿತು. ಈ ಖಟ್ಲೆಯಲ್ಲಿ ವೀರಶೈವ ಸಮಾಜದ ಗಣ್ಯ ವ್ಯಕ್ತಿಗಳು ಸಾಕ್ಷಿದಾರರಾಗಿದ್ದರು. ಇದರಲ್ಲಿ ಕಡೆಗೆ ಆರೋಪಿಯು ನಿರಪರಾಧಿಯೆಂದು ನಿರ್ಣಯವಾಯಿತು ! !

ಈ ಕಾಲದಲ್ಲಿ ವೀರಶೈವರಲ್ಲಿ ವರ್ಣಾಶ್ರಮಗಳು ಇವೆ ಎಂದು ಬಹಿರಂಗವಾಗಿ ವೀರಶೈವ ವಿದ್ವಾಂಸರಿಂದಲೇ ಸಾರಲ್ಪಡುತ್ತಿತ್ತು. ಬನವಾಸಿ

ಸಂಘಕೇಶ್ವರ ದೇವಾಲಯದ ವ್ಯಾಜ್ಯದಲ್ಲಿ ವೀರಶೈವರಲ್ಲಿ ವರ್ಣಾಶ್ರಮ ಗಳು ಇವೆ ಎಂತಲೂ ವೀರಶೈವರು ಈ ವರ್ಣಗಳಲ್ಲಿ ಬ್ರಾಹ್ಮಣ ವರ್ಣ ದವರೆಂತಲೂ ವೀರಶೈವ ಸಮಾಜದಲ್ಲಿ ಇಂತಿಂಥ ಜಾತಿಯವರು ಬ್ರಾಹ್ಮ ಣರು, ಇಂತಿಂಥವರು ಕ್ಷತ್ರಿಯವರು, ಇವರು ವೈಶ್ಯರು, ಇವರು ಶೂದ್ರರು ಎಂದು ವಿಭಾಗಗಳನ್ನು ಮುಖ್ಯ ಸಾಕ್ಷಿದಾರರು ಮಾಡಿ ತಮ್ಮ ಸಾಕ್ಷಿ ಗಳಲ್ಲಿ ಹೇಳಿದ್ದು ಕಂಡುಬಂದಿದೆ.

ಮುಂದೆ ೧೯೩೨ರಲ್ಲಿ ಧಾರವಾಡದಲ್ಲಿ ವೀರಶೈವ ಮಹಾಸಭೆಯು ಈ ಪತ್ರಿಕೆಯ ಸಂಪಾದಕರ ಅಧ್ಯಕ್ಷತೆಯಲ್ಲಿ ಕೂಡಿದಾಗ ವೀರಶೈವರಲ್ಲಿ ಜಾತಿಭೇದಗಳಿವೆಯೋ ಹೇಗೆ ಎಂಬ ವಿಷಯವು ವಿಷಯನಿಯಾಮಕ ಕಮಿಟಿಯಲ್ಲಿ ಚರ್ಚೆಗೆ ಬಂದಿತು. ಆಗ ವೀರಶೈವರಲ್ಲಿ ವರ್ಣಗಳಿವೆ, ಎಂದು ಅನೇಕ ಪ್ರಮುಖ ಸಭಾಸದವರು ಪ್ರತಿಪಾದಿಸಿದ್ದು ಕಂಡುಬಂದಿ ರುತ್ತವೆ.

ಶಿವಾನುಭವ ಪತ್ರಿಕೆಯು ೧೯೨೫ರಲ್ಲಿ ವಚನ ವಾಙ್ಮಯವನ್ನು ಪ್ರಕಟಮಾಡುವ ಕಾರ್ಯವನ್ನು ಮೊದಲು ಕೈಕೊಂಡಿತು. ಮುಂದೆ ಅದಕ್ಕೆ ನಾಲ್ಕಾರು ವರ್ಷಗಳು ಆಗಿಹೋದರೂ ಕೂಡ ಪ್ರಮಥರ ತತ್ವಗಳ ಪರಿಚಯವು ಸಮಾಜದಲ್ಲಿ ಏನೂ ಇರಲಿಲ್ಲ. ಈ ಕಾಲದಲ್ಲಿ ಈ ಪತ್ರಿ ಕೆಯು ಮಾಡುತ್ತಿದ್ದ ಕಾರ್ಯಗಳನ್ನು ಯಾರು ಗಣಿಸಿರಲಿಲ್ಲ. ಮಠಾಧಿ ಪತಿಗಳು ಈ ಪತ್ರಿಕೆಯನ್ನು ಸಾಶಂಕದೃಷ್ಟಿಯಿಂದ ನೋಡುತ್ತಬಂದರು. ಪತ್ರಿಕೆಯಲ್ಲಿ ವೀರಶೈವ ಸಮಾಜದಲ್ಲಿ ಭೇದವಿಭೇದಗಳು ಇರುವದಿಲ್ಲ ವೆಂಬ ವಾಙ್ಮಯವನ್ನು ಅದು ಪ್ರಕಟಿಸುತ್ತ ಬಂದಿದ್ದರಿಂದ ವೀರಶೈವ ಧನಿಕ ವರ್ಗದವರಿಂದಲೂ ಅದಕ್ಕೆ ಎಷ್ಟು ಮಾತ್ರವೂ ಸಹಾಯವು ದೊರಕಲಿಲ್ಲ.

ಆದರೂ ಕೂಡ ಕನ್ನಡ ವಚನವಾಙ್ಮಯದ ಮಹತ್ವವನ್ನು ಶಿವಾನು ಭವ ಪತ್ರಿಕೆಯು ಕಂಡುಹಿಡಿದು ಅದನ್ನು ಪ್ರಸಿದ್ಧಿಸುತ್ತ ಬಂದಿತು. ಈ ಕಾಲಕ್ಕೆ ವಚನವಾಙ್ಮಯವನ್ನು ಪುರಸ್ಕರಿಸಿದವರು ಬ್ರಾಹ್ಮಣ ಸಮಾಜದ ವಾಙ್ಮಯ ಪ್ರೇಮಿಗಳಿದ್ದಾರೆ. ಅವರಲ್ಲಿ ಶ್ರೀ. ಶ್ರೀನಿವಾಸ ಮೂರ್ತಿಗಳು

ದಿವಂಗತ ಬಿ. ಎಮ್. ಶ್ರೀಕಂಠಯ್ಯನವರು, ಶ್ರೀ. ರಂಗರಾವ ದಿವಾಕರರು, ದಿವಂಗತ ಬೆನಗಲ್ಲ ರಾಮರಾಯರು, ಶ್ರೀ ವೆಂಕಟನಾರಾಯಣಪ್ಪನವರು, ಶ್ರೀ. ವೆಂಕಣ್ಣಯ್ಯನವರು ಇವರೇ ಮುಖ್ಯರಾಗಿದ್ದಾರೆ. ಇವರಿಗೋಸ್ಕರ ನಾವು ಅತ್ಯಂತ ಆಭಾರಿಯಾಗಿದ್ದೇವೆ.

ಈ ಕಠಿಣ ಪರಿಸ್ಥಿತಿಯನ್ನು ಎದುರಿಸುತ್ತ ಶಿವಾನುಭವ ಪತ್ರಿಕೆಯು ಬಿಟ್ಟುಬಿಡದೆ ಈ ವರೆಗೂ ಅನೇಕ ವಚನಗ್ರಂಥಗಳನ್ನೂ ರಗಳೆಗಳನ್ನೂ ಪ್ರಕಟಿಸುತ್ತ ಬಂದಿತು. ಇವುಗಳಲ್ಲಿ ಕೆಲವು ಗ್ರಂಥಗಳು ಮೈಸೂರು ಮತ್ತು ಮುಂಬಯಿ ವಿಶ್ವವಿದ್ಯಾಲಯಗಳಲ್ಲಿ ಕೆಲವು ಮಹನೀಯರ ಸಹಾನುಭೂತಿಯ ಮೂಲಕ ಪಠ್ಯಪುಸ್ತಕಗಳಾಗಿ ಉಪಯೋಗಿಸಲ್ಪಡಹತ್ತಿದವು. ಅಂದಿನಿಂದ ವಚನವಾಙ್ಮಯದ ಮಹತ್ವವು ಕರ್ನಾಟಕಸ್ಥರ ನಿದರ್ಶನಕ್ಕೆ ಬರಹತ್ತಿತು. ಈಚೀಚೆಗೆ ಬಸವಾದಿ ಪ್ರಮಥರ ವಾಙ್ಮಯಕ್ಕೆ ಒಂದು ಮಹತ್ವದ ಸ್ಥಾನವು ಪ್ರಾಪ್ತವಾಗಹತ್ತಿರುತ್ತದೆ. ಈ ಸ್ಥಿತಿಯುಂಟಾದುದಕ್ಕೆ ಬಸವಾದಿ ಪ್ರಮಥರ ವಾಙ್ಮಯ ಪುರಸ್ಕರ್ತರು ಹರ್ಷಪಡಬೇಕಾಗಿ ಬಂದಿದೆ.

ಹೀಗೆ ವಚನ ವಾಙ್ಮಯದ ಅಭಿವೃದ್ಧಿಯ ಸಂಕ್ಷಿಪ್ತ ವಿವರಣೆಯಿದೆ. ಈ ಅವಧಿಯಲ್ಲಿ ಶಿವಾನುಭವಪತ್ರಿಕೆಗೆ ಅನೇಕ ಕಷ್ಟನಷ್ಟಗಳುಂಟಾದವು. ಅವುಗಳೊಳಗಿಂದ ಅದು ಇನ್ನೂ ಮುಕ್ತವಾಗಿಲ್ಲ. ಆದರೆ ಕಡೆಗೆ ಆದರ ಪ್ರಯತ್ನಗಳಿಗೆ ಯಶಸ್ಸು ಪ್ರಾಪ್ತವಾಗಬಹುದೆಂಬುದರ ಬಗ್ಗೆ ಸುಚಿಹ್ನಗಳು ತಲೆದೋರಹತ್ತಿವೆ.

ವಚನವಾಙ್ಮಯ ಪ್ರಸಾರ ಕಾರ್ಯಕ್ಕೋಸ್ಕರ ಕೇವೊಂದು ಸಂಘಟನೆಯು ಅವಶ್ಯವೆಂದು ನಮಗೆ ತೋರಹತ್ತಿತು. ಆದ್ದರಿಂದ ಶಿವಾನುಭವ ಸಂಘಗಳನ್ನು ಸ್ಥಾಪಿಸಬೇಕೆಂದು ನಾವು ಏಳೆಂಟು ವರ್ಷಗಳ ಹಿಂದೆ ಇದೇ ಪತ್ರಿಕೆಯಲ್ಲಿ ಸೂಚಿಸಿದೆವು. ಪತ್ರಿಕೆಯ ವರ್ಗಣಿದಾರರು ಈ ನಮ್ಮ ವಿಚಾರವನ್ನು ಲಕ್ಷಿಸಿ ಅನೇಕ ಕಡೆಗೆ ಶಿವಾನುಭವ ಸಂಘಗಳನ್ನು ಆರಂಭಿಸಿದರು. ಈ ಸಮಯದಲ್ಲಿ ಬೇರೆ ಬೇರೆ ಕಡೆಗೆ ಸುಮಾರು ೧೫೦ ಸಂಘಗಳು ಸ್ಥಾಪಿತವಾಗಿರಬೇಕು. ಮುಂದೆ ಅವುಗಳನ್ನೆಲ್ಲ ಕೆಲ

ವೊಂದು ಸಂಘಟನೆಯಲ್ಲಿ ಸಮಾವೇಶ ಮಾಡಬೇಕೆಂದು ಪ್ರಯತ್ನ ಮಾಡ ಹತ್ತಿದೆವು. ಅಂದರೆ ಈ ಸಂಘಗಳ ಪ್ರತಿನಿಧಿಗಳನ್ನು ಒಂದೆಡೆಗೆ ಬರ ಮಾಡಿಕೊಂಡು ಅವರ ಒಂದು ಮಾಧ್ಯವರ್ತೀ ಸಂಘವನ್ನು ಸ್ಥಾಪಿಸುವದೇ ನಮ್ಮ ಮುಖ್ಯ ಉದ್ದೇಶವಾಗಿತ್ತು. ಆದರೆ ಅಷ್ಟರಲ್ಲಿ ಈ ಕಾರ್ಯವನ್ನು ತಾವು ಮಾಡುವೆನೆಂದು ಕೆಲವು ಗಣ್ಯವ್ಯಕ್ತಿಗಳೂ ಸ್ವಾಮಿಗಳೂ ಮುಂದಾ ದ್ದರಿಂದ ಮತ್ತು ಅವರು ಈ ಕಾರ್ಯವನ್ನು ಸುಲಭವಾಗಿ ಮಾಡಬಹು ದೆಂದು ನಮಗೆ ತೋರಿದ್ದರಿಂದ ನಾವು ಈ ಪ್ರಯತ್ನವನ್ನು ಅಲ್ಲಿಯೇ ನಿಲ್ಲಿಸಬೇಕಾಯಿತು.

ಆದರೆ ಮುಂದೆ ಈ ಪ್ರಯತ್ನಕ್ಕೋಸ್ಕರ ಯಾವ ಸಂಘಟನೆಯು ಸಮಾಜದಲ್ಲಿ ಉಂಟಾಗಲಿಲ್ಲ. ಇದು ಬಹು ವಿಷಾದಕರವಾದದ್ದು. ಈಚೆಗೆ ಅನೇಕರು ಬಹಿರಂಗ ಸಭಾಕಾರ್ಯಗಳನ್ನು ಮಾತ್ರ ಅಲ್ಲಲ್ಲಿ ಜರಗಿಸುತ್ತ ಲಿದ್ದಾರೆ. ಆದರೆ ಇವುಗಳಿಗೆ ಸಂಘಟನೆ ಇಲ್ಲ. ಸತತ ಕಾರ್ಯಗಳು ನಡೆಯುವಂತೆ ವ್ಯವಸ್ಥೆ ಇಲ್ಲ. ಆದ್ದರಿಂದ ಅವು ಫಲಕಾರಿಯಾಗಿರುವದಿಲ್ಲ.

ಭಾರತದಲ್ಲಿ ಅನೇಕ ಮಹತ್ವದ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಘಟನೆಗಳು ಇವೆ. ಅವುಗಳ ರೀತಿಯನ್ನು ವೀರಶೈವರು ಈ ಕಾಲಕ್ಕೆ ಅನುಸರಿಸುವದು ಅವಶ್ಯವಿದೆ. ಸ್ವಾಮಿ ವಿವೇಕಾನಂದರು ವೇದಾಂತ ಮಾರ್ಗವನ್ನು ಪ್ರಚಾರಪಡಿಸಿದರು ಮುಂದೆ ಅವರ ಅನುಯಾಯಿಗಳು ಅವರ ಹೆಸರಿನಿಂದ ರಾಮಕೃಷ್ಣ ಮಿಶನ್ನನ್ನು ಸ್ಥಾಪಿಸಿದರು. ಆರ್ಯ ಸಮಾಜದವರು ತಮಗೆ ಆಧಾರ ಗ್ರಂಥವಾಗಿರುವ ಸತ್ಯಾರ್ಥ ಪ್ರಕಾ ಶಿಕೆಯ ತತ್ವಗಳನ್ನು ಪ್ರಚಾರ ಮಾಡಲು ತಮ್ಮ ಆರ್ಯ ಸಮಾಜ ವನ್ನು ಸ್ಥಾಪಿಸಿದರು. ಅದರ ಪ್ರಚಾರಕರು ಭಾರತದಲ್ಲಿ ಎಲ್ಲ ಕಡೆಗೂ ಅದರ ತತ್ವಗಳನ್ನು ಹರಡುತ್ತ ಸಂಚಾರ ಮಾಡುತ್ತಲಿದ್ದಾರೆ ರವೀಂದ್ರ ನಾಥ ಟಗೋರರವರು ಪ್ರಕಟಿಸಿದ ವಾಙ್ಮಯವನ್ನು ಪ್ರಸಾರಪಡಿಸಲು ಶಾಂತಿನಿಕೇತನವು ಸ್ಥಾಪಿತವಾಗಿರುತ್ತದೆ. ಅದು ಈಚೆಗೆ ಒಂದು ವಿಶ್ವ ವಿದ್ಯಾಲಯವಾಗಿ ನಿರ್ಮಾಣವಾಗಿರುತ್ತದೆ. ಇವರಂತೆಯೇ ಅರವಿಂದ ಘೋಷರವರು ಒಂದು ಮಹತ್ವದ ವಾಙ್ಮಯವನ್ನು ಉಂಟುಮಾಡಿದರು. ಅದನ್ನು ಪ್ರಚಾರಪಡಿಸುವದಕ್ಕೋಸ್ಕರ ಒಂದು ಜಾಗತಿಕ ವಿಶ್ವವಿದ್ಯಾ

ಲಯದಲ್ಲಿ ಸ್ಥಾಪಿತವಾಗಿರುತ್ತದೆ. ಈ ಮಹಾನುಭಾವರು ಪ್ರಕಟಿಸಿದ ವಾಙ್ಮಯದಷ್ಟೆಯೇ ಶಿವಾನುಭವವು ೨೫ ವರ್ಷಗಳಿಂದಲೂ ಪ್ರಕಟಿಸುತ್ತ ಬಂದ ವಚನ ವಾಙ್ಮಯದ ವಿಸ್ತಾರವಿರುತ್ತದೆ. ಅದರ ವಿಸ್ತಾರವು ಅತ್ಯಂತ ದೊಡ್ಡದಾಗಿದೆ. ಈ ವಾಙ್ಮಯವು ಕಡಿಮೆಯದಲ್ಲ. ಇದು ಯಾವ ಜಾಗತಿಕ ವಾಙ್ಮಯವನ್ನು ಸರಿಗಟ್ಟುವಂಥದಿದೆ. ಆದರೆ ಇದಕ್ಕೆ ಜನತೆಯ ಬೆಂಬಲವಿಲ್ಲ. ಜನತೆಯು ಅತ್ಯಂತ ಅಜ್ಞಸ್ಥಿತಿಯಲ್ಲಿ ಇದೆ. ಅದಕ್ಕೆ ಸಂಘಟನೆಯು ಅವಶ್ಯವಾಗಿ ಬೇಕಾಗಿರುತ್ತದೆ. ಈ ದೃಷ್ಟಿಯಿಂದ ವೀರಶೈವ ಸಮಾಜವು ಮುಂದೆ ಪ್ರಯತ್ನಿಸುವದೆಂದು ನಾವು ಭಾವಿಸಿದ್ದೇವೆ.

ಈ ದೃಷ್ಟಿಯಿಂದ ನಾವು ಕೆಲವು ಸೂಚನೆಗಳನ್ನು ಇಲ್ಲಿ ಮಾಡಲು ಉದ್ದೇಶಿಸಿದ್ದೇವೆ.

ವೀರಶೈವ ಸಮಾಜವು ಅತ್ಯಂತ ಅಜ್ಞ ಸಮಾಜವಾಗಿದೆ. ಅದರ ಲಕ್ಷವು ಶಿವಶರಣರ ವಾಙ್ಮಯಕ್ಕೆ ಇನ್ನೂ ಸಾಕಷ್ಟು ಹತ್ತಿಕೊಂಡಿಲ್ಲ. ಈ ವಾಙ್ಮಯದ ಅರಿವು ಅವರಲ್ಲಿ ಬಹುಜನರಿಗೆ ಇರುವದಿಲ್ಲ. ೧೦೦ ರಲ್ಲಿ ೯೯ ಜನರಿಗೆ ಅದರ ತಿಳಿವಳಿಕೆ ಇಲ್ಲ. ಈಗಿನ ವೀರಶೈವ ಸುಶಿಕ್ಷಿತರಾದರೂ ರಾಜಕೀಯ ಮೊದಲಾದ ಅನೇಕತರದ ಆಂದೋಲನಗಳಲ್ಲಿ ತೊಡಕಿಕೊಂಡು ಶಿವಶರಣರ ವಾಙ್ಮಯವನ್ನು ದುರ್ಲಕ್ಷಿಸುತ್ತಲಿದ್ದಾರೆ. ಆದ್ದರಿಂದ ಈ ವರ್ಗದವರ ಮೂಲಕ ಸಮಾಜದಲ್ಲಿ ಸಂಘಟನೆಯಾಗುವದು ಕಠಿಣವೆನಿಸುತ್ತದೆ

ಶಿವಶರಣರ ವಾಙ್ಮಯವು ಅತ್ಯಂತ ಉದಾರ ವಿಚಾರವುಳ್ಳದಾಗಿದೆ. ಅದು ಸಮಾಜದಲ್ಲಿ ಪರಸ್ಪರ ಭೇದಭಾವಗಳನ್ನು ಅಂಗೀಕರಿಸುವದಿಲ್ಲ. ಆದರೆ ಈಗಿನ ಧಾರ್ಮಿಕ ಮತ್ತು ಧನಿಕ ವರ್ಗಗಳಿಗೆ ಈ ತತ್ವಗಳು ಇನ್ನೂ ಸಮಪಡುವದಿಲ್ಲ. ಈ ಸಮಾಜಗಳು ಅಂಥ ಉದಾರ ಭಾವವನ್ನು ತಾಳಿಲ್ಲ. ಈ ತತ್ವಗಳು ತಮ್ಮ ಹಿತಸಂಬಂಧಕ್ಕೆ ಎಲ್ಲಿ ಆತಂಕ ತರುವವೋ ಎಂಬ ಸಾಶಂಕವೃತ್ತಿಯನ್ನು ಅವು ತಾಳಿರುತ್ತವೆ.

ವಚನ ವಾಙ್ಮಯವನ್ನು ಪರಿಶೀಲಿಸುವಂಥ ವಿದ್ಯಾವಂತರು ಈಗೀಗ ಉಂಟಾಗಹತ್ತಿದ್ದಾರೆಂಬುದು ನಿಜವು. ಆದರೆ ಅವರಲ್ಲಿ ಪರಸ್ಪರ ಮಾತ್ಸರ್ಯ

ಭಾವಗಳು ಅನೇಕತರದ ಒಡಕುಗಳು ಉಂಟಾಗಿರುತ್ತವೆ. ಇದರಿಂದ ವೀರಶೈವ ಸಂಘಟನೆಯು ಕಠಿಣವಾಗಹತ್ತಿದೆ

ಈ ಸ್ಥಿತಿಯನ್ನು ನಾವು ಲಕ್ಷಿಸಿ ಬಹಳ ದಿವಸಗಳ ಹಿಂದಿಯೇ ನಾವು ಗ್ರಾಮಾಂತರಗಳಲ್ಲಿ ಶಿವಾನುಭವ ಸಂಘಗಳನ್ನು ಸ್ಥಾಪಿಸಬೇಕೆಂದು ಸೂಚಿಸಿದೆವು- ಈಗಲಾದರೂ ಇದೇ ಮುಖ್ಯ ಉಪಾಯವಾಗಿದೆ. ಇದರಿಂದ ನಿಜವಾದ ಕಾರ್ಯಕರ್ತರು ಮುಂದೆ ಬರಹತ್ತುವರು. ಈಗ ಇದೇ ಮಾರ್ಗವನ್ನು ನಾವು ಅನುಸರಿಸುತ್ತ ಹೋಗುವದು ಯೋಗ್ಯವೆಂದು ತೋರುತ್ತದೆ. ಇಂಥ ಸಂಘಗಳ ಮೂಲಕ ಮುಂದೆ ಬಲವಾದ ಸಂಘಟನೆಯಾಗಬಹುದು. ಈ ಪದ್ಧತಿಯನ್ನು ನಾವು ಅನುಸರಿಸಿದಲ್ಲಿ ಅಂತಃಕರಣಪೂರ್ವಕವಾಗಿ ಪ್ರಯತ್ನಿಸುವ ಕಾರ್ಯಕರ್ತರು ಮುಂದೆ ಬರಬಹುದು. ಇಂಥ ಸಂಘಗಳು ಯಾವ ತಾಲೂಕು ಅಥವಾ ಜಿಲ್ಹೆಗಳಲ್ಲಿ ಹೆಚ್ಚಾಗಿ ಉಂಟಾಗುತ್ತವೋ? ಅಲ್ಲಿ ಅವುಗಳ ಪ್ರತಿನಿಧಿಗಳನ್ನೊಳಕೊಂಡ ಒಂದು ಮಂಡಲವನ್ನು ಸ್ಥಾಪಿಸುತ್ತ ಹೋಗಬೇಕು. ಈ ಪ್ರಕಾರ ಅಲ್ಲಲ್ಲಿ ಜಿಲ್ಹಾ ಮತ್ತು ಪ್ರಾಂತಿಕ ಮಂಡಳಗಳನ್ನು ಉಂಟುಮಾಡಿದಲ್ಲಿ ಒಂದು ಬಲವಾದ ಸಂಘಟನೆಯು ಸಮಾಜದಲ್ಲಿ ಉಂಟಾಗಬಹುದು. ಈ ಮುಂದೆ ಈ ದಿಶೆಯಿಂದ ಪ್ರಯತ್ನಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ.

ಹೀಗೆ ನಿರ್ಮಾಣವಾದ ಸಂಸ್ಥೆಯವರು ವಚನವಾಙ್ಮಯ ಪ್ರಚಾರವನ್ನೇ ತಮ್ಮ ಮುಖ್ಯ ಧ್ಯೇಯವಾಗಿ ಇಟ್ಟುಕೊಳ್ಳಬೇಕು. ಈ ಕಾರ್ಯವನ್ನು ಮಾಡಲಿಕ್ಕೆ ಪ್ರತಿಯೊಂದು ತಾಲ್ಲೂಕು ಮತ್ತು ಜಿಲ್ಹೆಗಳಲ್ಲಿ ಸ್ವಯಂಸೇವಕರು ಮುಂದೆ ಬರಬೇಕು. ಅವರು ತಮ್ಮೊಳಗೆ ಒಕ್ಕಟ್ಟನ್ನು ಉಂಟುಮಾಡಿಕೊಳ್ಳಬೇಕು. ಅವರು ಇದರಲ್ಲಿ ಯಾರದಾರಿಯನ್ನು ಕಾಯಬಾರದು

ಈ ಸ್ವಯಂಸೇವಕರು ವಚನವಾಙ್ಮಯವನ್ನು ಅನೇಕ ರೀತಿಯಿಂದ ಪ್ರಚಾರ ಮಾಡಲು ಅವರಿಗೆ ಅವಕಾಶವಿದೆ. ವಚನಗ್ರಂಥಗಳು ಶಿವಾನುಭವ ಗ್ರಂಥಮಾಲೆಯಲ್ಲಿ ಇನ್ನೂ ದೊರಕುತ್ತವೆ. ಈ ಮಾಲೆಯಲ್ಲಿಯು ಅನೇಕ ಗ್ರಂಥಗಳು ೨೫ ವರ್ಷಗಳ ದೀರ್ಘಕಾಲದಲ್ಲಿ ಕಡಿಮೆಯಾಗುತ್ತ ಬಂದಿವೆ. ಆದರೂ ಇದ್ದವುಗಳು ಪ್ರಚಾರ ಕಾರ್ಯದಲ್ಲಿ ಉಪಯುಕ್ತ

ವಾದವುಗಳು ಇವೆ. ಶಿವಾನುಭವ ಪತ್ರಿಕೆಯಲ್ಲಿ ಶಿವಾನುಭವದ ತತ್ವಗಳು ಸಾಮಾನ್ಯ ಜನರಿಗೆ ತಿಳಿಯುವಂತೆ ಅದರಲ್ಲಿ ಆವಶ್ಯಕ ಬದಲಾವಣೆಗಳನ್ನು ನಾವು ಮುಂದಿನ ವರ್ಷದಿಂದ ಮಾಡಲಿರುವೆವು. ಈ ಪತ್ರಿಕೆಯು ಎಲ್ಲ ಕಡೆಗೂ ಪ್ರಸಾರವಾಗುವಂತೆ ಎಲ್ಲರೂ ಪ್ರಯತ್ನಿಸಬೇಕು. ವಚನಗಾಯನ, ವಚನಪಠಣ, ವಚನಸ್ಪರ್ಧೆ, ಶಿವಶರಣರ ಏಕಾಂಕ ನಾಟಕಗಳು, ಉಪನ್ಯಾಸಗಳು, ವಚನಕಾರರ ತತ್ವಪ್ರತಿಪಾದನೆಗಳು ಎಲ್ಲ ಕಡೆಗೂ ಬಲವಾಗಿ ಸಾಗಬೇಕು. ಈ ಕಾರ್ಯಗಳನ್ನು ಶಿವಾನುಭವ ಸಂಘಗಳ ದ್ವಾರಾ ಮಾಡಹತ್ತಬೇಕು. ಇದರಿಂದ ಸಮಾಜದಲ್ಲಿ ಒಂದು ಬಲವಾದ ಸಂಸ್ಥೆಯು ಸ್ವಲ್ಪ ದಿವಸಗಳಲ್ಲಿ ಆಗುವದೆಂದು ನಾವು ಭರವಸೆ ತಾಳಿದ್ದೇವೆ.

---

# ಆರುವಿನ ಮಾರಿತಂದೆಗಳ

## ವಚನಗಳು

### (೧) ಪರಮಾತ್ಮನ ಅರಿವು

**ವಿವರಣೆ:—** ಪರಮಾತ್ಮನು ಜಗತ್ತಿನಲ್ಲೆಲ್ಲ ವ್ಯಾಪಿಸಿರುತ್ತಾನೆ. ಆದರೆ ಅವನು ತನ್ನನರಿದವರ ಹೃದಯದಲ್ಲಿ ಮಾತ್ರ ಇದ್ದು ಅವರನ್ನು ಪ್ರೇರಣೆ ಮಾಡುತ್ತಾನೆಯೇ ಹೊರತು ಉಳಿದವರಲ್ಲಿ ಕಾಣಿಸಿಕೊಂಬುವದಿಲ್ಲ. (೧) ಅನೇಕರು ಮನುಷ್ಯನು ಅಂಗವನ್ನಳಿದ ಬಳಿಕ ಪರಮಾತ್ಮನನ್ನು ಕಾಣಬೇಕೆಂದು ತಿಳಿಯುತ್ತಾರೆ. ಆದರೆ ಇದು ನಿಜವಾದುದಲ್ಲ. ತನ್ನ ಅಂಗದಲ್ಲಿಯೇ ಲಿಂಗವನ್ನು ಕಾಣಬೇಕು. ಆದರೆ ಹೀಗೆ ಕಾಣುವಲ್ಲಿ ಅರಿವುದೂ ಮರೆವುದೂ ಇವುಗಳ ಸಂದನ್ನು ತೀಡು ವರ್ತಿಸಿದಲ್ಲಿ ಪರಮಾತ್ಮನ ಬೆಳಗು ಕಾಂಬುವುದು (೨) ಅದರಂತೆಯೇ ಪರಮಾತ್ಮನ ಆದಿ, ಮಧ್ಯ ಅವಸಾನ ಎಂಬ ಭೇದವನ್ನು ಮಾಡಿಕೊಂಡರೂ ಅವನು ಕಾಣಲಾರನು. ಅವನನ್ನು ಅರಿಯುವಲ್ಲಿ ಹೀಗೆ ಭೇದಭಾವಮಾಡಲು ಬರಲಾರದು. (೩) ಆದರೆ ಜ್ಞಾನವುಳ್ಳವನಾಗಿ ಭಕ್ತನು ಶರಣುಹೊಕ್ಕು ಮರವೆಯನ್ನು ಬಿಟ್ಟು ಬಿಡಬೇಕು. (೪) ತನ್ನ ಅರಿವೆಯ ಮೂಲಕ ಮಲವನ್ನು ಬಿಟ್ಟು ಆಚರಿಸಬೇಕು. ಈ ವಿಚಾರಗಳು ವೇದಾಂತಿಗಳಲ್ಲಿಯೂ ಸಿದ್ಧಾಂತಿಗಳಲ್ಲಿಯೂ ಒಂದೇ ಇವೆ. (೫) ಎಂದು ವಚನಕಾರನು ಹೇಳಿ ಅಹಂಕಾರವನ್ನು ದೂರಮಾಡಿ, ಸುಜ್ಞಾನದಿಂದ ಜೀವಭಾವವನ್ನು ನಿವೃತ್ತಿಮಾಡಿ, ಗುರುಕಾರುಣ್ಯದಿಂದ ಸರ್ವಾಂಗಲಿಂಗ ಸಂಬಂಧಿಯಾಗಬೇಕೆಂದು ಕಡೆಗೆ ಬೋಧಿಸಿದ್ದಾನೆ.

#### ವಚನಗಳು

೧. ಸಿದ್ಧರಸ ಲೇಸೆಂದಡೆ ತಾನಿದ್ದ ಕುಡಿಕೆ ಹೇಮವಾದುದಿಲ್ಲ. ಲೋಹಕ್ಕಲ್ಲದೆ ವೇಧಿಪುದಿಲ್ಲ. ವಸ್ತು ಸರ್ವದಲ್ಲಿ ಸಂಪೂರ್ಣವಾಗಿರ್ದಡೇನು? ತನ್ನನರಿವರ ಹೃದಯದಲಲ್ಲದೆ ಇರ ಸದಾಶಿವಮೂರ್ತಿಲಿಂಗದ ಇರವು.

೨. ಅಂಗವ ಮರೆದು ಲಿಂಗವನರಿಯಬೇಕೆಂಬರು. ಕರಣಂಗಳರತು ಘನಲಿಂಗವನರಿಯಬೇಕೆಂಬರು. ಅದು ನಾ ಸಿಕ್ಕಿದ ತಡೆ ಕೇಳಿರಣ್ಣಾ. ಆಕಾರ ಬಯಲಾದಡೆ ಮುಗಿಲು ರೂಪ ತೋರಿ ಅಳಿವ ಪು ಇನ್ನೆಂತೋ? ನಕ್ಷತ್ರ ಚಂದ್ರ ಸೂರ್ಯಾದಿಗಳು ಗ್ರಹ ಪ್ರವರ್ತನವಹ ಪರಿ ಇನ್ನೆಂತೋ? ಅದು ಕಾರಣದಲ್ಲಂಗವಿದ್ದಂತೆ ಲಿಂಗವನರಿಯಬೇಕು. ಕರಣಂಗಳಿದ್ದಂತೆ ಘನಲಿಂಗವ ಭೇದಿಸಬೇಕು. ಹೀಗಲ್ಲದೆ ಮರೆದರಿಯಲಿಲ್ಲ; ಅರಿದು ಮರೆಯಲಿಲ್ಲ. ಈ ಉಭಯದ ಸಂದಿಯಲ್ಲಿ ಬೆಳಗು ತೋರುತ್ತಿದೆ ಸದಾಶಿವಮೂರ್ತಿಲಿಂಗದಲ್ಲಿ.

ಅರತು=ಬತ್ತಿ, ನಾಶವಾಗಿ; ತಡೆ=ಪ್ರತಿಬಂಧ

೩. ಆದಿ ಮಧ್ಯಾವಸಾನವನರಿಯಬೇಕೆಂಬರು. ಆದಿಯಲ್ಲಿ ನಿಂದು ಮಧ್ಯದಲ್ಲಿ ಕಂಡು ಅವಸಾನದಲ್ಲಿ ಅರಿಯಬೇಕೆಂಬರು. ಅರಿವುದೊಂದೋ ಮೂರೋ ಎಂದಲ್ಲಿ ನಿಂದಿತ್ತು. ನಿಂದುದ ಕಳೆದು ಸಂದ ಹರಿ ಸದಾಶಿವಮೂರ್ತಿಲಿಂಗವನರಿವುದಕ್ಕೆ.

೪. ಕೆಯಿ ಬೆಳೆವಲ್ಲಿ ಸರಿಗೆ ಮುನಿವರಲ್ಲದೆ ಬೆಳೆಗೆ ಮುನಿವರೇ ಅಯ್ಯ? ಅರಿದಂಗವ ತಾಳಿದವರಲ್ಲಿ ಮರವೆಗೆ ಮುನಿವರಲ್ಲದೆ ಅರಿವಿಗೆ ಮುನಿವರುಂಟೇ ಅಯ್ಯ? ಖುಲ್ಲ ಆವಿಂಗೆ ಕಾಲ ಕಟ್ಟುವರಲ್ಲದೆ ಮೊಲೆಗೆ ಕಟ್ಟಿದರುಂಟೆ ಅಯ್ಯ? ಗುರುವಾದಡಾಗಲಿ, ಲಿಂಗವಾದಡಾಗಲಿ, ಜಂಗಮವಾದಡಾಗಲಿ, ಅರಿವಿಂಗೆ ಶರಣು, ಮರವಿಂಗೆ ಮಥನವ ಮಾಡಬಲ್ಲರೆ. ಅದು ನೀವು ಕೊಟ್ಟ ಅರಿವಿನ ಸಾರನಿರಲು ಸದಾಶಿವಮೂರ್ತಿಲಿಂಗದ ಬರವು.

ಕೆಯಿ=ಹೊಲ; ಸರಿ=ಮಳೆ;

೫. ವೇದವೇದಾಂತಂಗಳಿಂದ, ಸಿದ್ಧಿಸಿದ್ಧಾಂತಂಗಳಿಂದ ಎಲ್ಲಿ ನೋಡಿದರೂ ವಿಚಾರ ಒಂದೇ ಭೇದ. ಅರಿದಲ್ಲಿ ಮಲಕ್ಕೆ ಹೊರಗು. ಮರೆತಲ್ಲಿ ಮಲಕ್ಕೊಳಗು. ಅರಿವು ಮರವು ನಿಂದಲ್ಲಿ ಸದಾಶಿವ ಮೂರ್ತಿ ಲಿಂಗದ ಬೆಳಗು.

೬. ಬ್ರಹ್ಮಾಂಡದ ಧರೆಯ ಮೇಲೆ ಆರೆಬಿರಿದಿನ ಮಂತಣದ ಗಿರಿ ಹುಟ್ಟಿತ್ತು. ಆ ದುರ್ಗಕ್ಕೆ ಮೂವರು ಧೊರೆಗಳು ಹುಟ್ಟಿದರು. ಒಬ್ಬ

ನರಪತಿ, ಒಬ್ಬ ಸುರಪತಿ, ಒಬ್ಬ ಸಿರಿಮುರಿಗೊಡೆಯು. ಮೂವರ ದುರ್ಗ ಒಂದೇಯಾಗಿ ಸಂದೇಹಕ್ಕೀಡಾಗುತ್ತಿದೆ. ಸದಾಶಿವ ಮೂರ್ತಿಲಿಂಗಸಂಗ ವಾಗಿಯಲ್ಲದೆಯಾಗದು.

ಟೀಕು:— ಆ ಪ್ರಪಂಚ ಬ್ರಹ್ಮಾಂಡದಿಂದುದಯವಾದ ಪೃಥ್ವಿಯಂಶದ ತನುವೆಂಬುದೀಗ ಬ್ರಹ್ಮಾಂಡದ ಧರೆಯ ಮೇಲೆ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಆರಿಗೂ ಸಾಧ್ಯವಲ್ಲದ ಭಿನ್ನಭಾವ ಯುಕ್ತವಾದ ಹಂಕಾರವೆಂಬ ಗಿರಿ ಹುಟ್ಟಿತ್ತೆಂಬುದೀಗ ಅರಿಬಿರಿದಿನ ಮಂತಣದ ಗಿರಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪಹಂಕಾರವೆಂಬ ದುರ್ಗಕ್ಕೆ ಜೀವತ್ರಯಂಗಳೇ ಕರ್ತರಾಗಿಹರೆಂಬುದೀಗ ಆ ದುರ್ಗಕ್ಕೆ ಮೂವರು ಧೊರೆಗಳು ಹುಟ್ಟಿದರು ಎಂಬ ಶಬ್ದಕ್ಕರ್ಥ. ಕರ್ಮೇಂದ್ರಿಯಂಗಳ ವ್ಯವಹಾರಕ್ಕೆ ಕರ್ತನಾಗಿಹನು ವಿಶ್ವನೆಂಬುದೀಗ ಒಬ್ಬ ನರಪತಿ ಎಂಬ ಶಬ್ಧಕ್ಕರ್ಥ. ಜ್ಞಾನೇಂದ್ರಿಯಂಗಳ ವ್ಯವಹಾರಕ್ಕೆ ಕರ್ತನಾಗಿಹನು ತೈಜಸನೆಂಬುದೀಗ ಒಬ್ಬ ಸುರಪತಿ ಎಂಬ ಶಬ್ದಕ್ಕರ್ಥ. ತಾಪತ್ರಯಾಗ್ನಿಸಂಬಂಧವಾದ ಮಾಯಾ ಭೋಗಕ್ಕೆ ಕರ್ತನಾಗಿಹನು ಪ್ರಾಜ್ಞನೆಂಬುದೀಗ ಒಬ್ಬ ಸಿರಿ ಮುರಿಗೊಡೆಯನೆಂಬ ಶಬ್ಧಕ್ಕರ್ಥ. ಆ ಜೀವತ್ರಯಂಗಳಿಗೆ ಆಧಾರವಾದ ಅಹಂಕಾರವೆಂಬ ದುರ್ಗ ಒಂದೇಯಾಗಿ ಜೀವಭಾವದ ಸಂಕಲ್ಪಕ್ಕೊಳಗಾಗುತ್ತಿಹುದೆಂಬುದೀಗ ಮೂವರ ದುರ್ಗ ಒಂದೇಯಾಗಿ ಸಂದೇಹಕ್ಕೀಡಾಗುತ್ತಿದೆ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯದಿಂ ಜೀವಭಾವ ನಿವೃತ್ತಿ ಮಾಡಿ ಶ್ರೀಗುರುಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧಿಯಾದ ಶರಣಂಗಲ್ಲದೆ ಅಹಂಕಾರವಳಿದು ನಿರಹಂಕಾರವಾಗಬೇಕೆಂಬುದೀಗ ಸದಾಶಿವಮೂರ್ತಿ ಲಿಂಗಸಂಗವಾಗಿಯಲ್ಲದೆಯಾಗದು ಎಂಬ ಶಬ್ದಕ್ಕರ್ಥ.

## (೨) ಮಾಯೆಯನ್ನು ದೂರಮಾಡುವುದು.

**ವಿವರಣೆ:—** ಮಾಯೆಯು ಭೇದಭಾವವನ್ನು ಹುಟ್ಟಿಸುತ್ತದೆ. ಈ ಭೇದಭಾವವಡಗಲು ಪರಮಾತ್ಮಲಿಂಗವು ಪ್ರಕಾಶಿಸಹತ್ತುತ್ತದೆ. (೭) ಇಂಥ ಮಾಯೆಯನ್ನು ದೂರಮಾಡುವದು ಜೀವನ ಮುಖ್ಯ ಕರ್ತವ್ಯವು. ಸುಜ್ಞಾನ ಪ್ರಕಾಶದಿಂದಲೇ ಈ ಮಾಯೆಯು ಸಂಹಾರವಾಗುವದು. (೮) ಆದರೆ ಮನುಷ್ಯನ ದೇಹದಲ್ಲಿ ಮನಸ್ಸೆಂಬುದಿದ್ದು ಅದು ಅಜ್ಞಾನದ ಕಡೆಗೆ ಅವನನ್ನು ಹೊರಳಿಸುತ್ತದೆ. ಆದರೆ ಸುಜ್ಞಾನೋದಯವಾಗಲು ಮನೋವರ್ತನೆಯಲ್ಲಿ ಚಿದ್ಬಿಂದುವು ಪ್ರಭಾವಿಸುತ್ತದೆ. ಅದು ಪ್ರಪಂಚವನ್ನು ನಿವೃತ್ತಿಮಾಡಿ ಮನವನ್ನು ಅವಗ್ರಹಿಸುತ್ತದೆ. ಆದರೆ ಇದು ಗುರುಕಾರುಣ್ಯದಿಂದ ಪ್ರಾಪ್ತವಾಗುತ್ತದೆ. (೯-೧೧) ಈ ಮಾಯೆಯನ್ನು ಹೋಗಲಾಡಿಸುವದು ಬಹು ದುಸ್ತರವಾದದ್ದು. ಬ್ರಹ್ಮ, ವಿಷ್ಣು ರುದ್ರರೆಲ್ಲರೂ ಅದರ ಪಾಶಕ್ಕೆ ಒಳಗಾಗಿರುವರು (೧೪)

೭. ಸಕಲವೆಂಬನ್ನಕ್ಕ ನಿಃಕಲ ಉಂಟು. ನಿಃಕಲವೆಂಬುದು ನಾಮ ರೂಪು. ಅದೆಂತೆಂದೊಡೆ ತ್ರಿವಿಧವ ಕೂಡಿ ಬೆಳಗುವ ಜ್ಯೋತಿಯ ಒಡವೆ ಘಟವಾಗಿ ಬೆಳಗೆ ಪ್ರಾಣವಾಗಿ ತೋರುವದನ್ನಕ್ಕ ಮಾಯಾಸಂಗವಾಗಿಹುದು. ಅದರ ಬೆಡಗಡಗೆ ಸದಾಶಿವಮೂರ್ತಿ ಲಿಂಗವು ನಿರ್ಮಾಯ.

೮. ಕೊಂಬಿನ ಮೇಲಣ ಹಕ್ಕಿಯು ಆಕಾಶದ ಮೇಲಣ ಗಿಡಗ ಹಿಡಿಯಿತ್ತು. ಕೊಂಬು ಹಕ್ಕಿಯು ಕೂಡದೆ ಗಿಡಗನ ಕಡಿಯಿತ್ತು. ಹಕ್ಕಿಯು ಗಿಡಗನ ಕೂಡೆ ಕಡಿವ ಕೊಂಬ ಚಿಟ್ಟೆಯ ಮರಿ ನುಂಗಿತ್ತು ಸದಾಶಿವಮೂರ್ತಿ ಲಿಂಗವನರಿಯಿತ್ತು.

ಟೀಕು:— ಶಿವಜ್ಞಾನೋದಯವಾದ ಶರಣನ ಶಿವಭಾವದಲ್ಲಿ ಸನ್ನಿಹಿತ ವಾಗಿರ್ಪ ಪರಮಾತ್ಮನೆಂಬುದೀಗ ಕೊಂಬಿನ ಮೇಲಣ ಹಕ್ಕಿ ಎಂಬ ಶಬ್ದಕ್ಕರ್ಥ. ಆತ್ಮಾಕಾಶದಲ್ಲಿರ್ಪ ಮಾಯೆಯು ಆ ಪರಮಾತ್ಮನನುಗ್ರಹಿಸಿತ್ತೆಂಬುದೀಗ ಆಕಾಶದ ಮೇಲಣ ಗಿಡಗ ಹಿಡಿಯಿತ್ತೆಂಬ ಶಬ್ದಕ್ಕರ್ಥ; ಆ ಶಿವಭಾವವು ಪರಮಾತ್ಮನೆಂಬ ಪಕ್ಷಿಯು ಮಾಯೆಗೆ ಕೂಡದೆ ಎಂಬುದೀಗ ಕೊಂಬು ಹಕ್ಕಿಯ ಕೂಡದೆ ಎಂಬ ಶಬ್ದಕ್ಕರ್ಥ. ಆ ಶಿವಭಾವವು ಮಾಯೆಯ ಸಂಹರಿಸಿತ್ತೆಂಬುದೀಗ ಗಿಡಗನ ಕಡಿಯಿತ್ತೆಂಬ ಶಬ್ದ

ಕ್ಕರ್ಥ. ಆ ಪರಮಾತ್ಮನೆಂಬ ಪಕ್ಷಿಯನು ಮಾಯೆ ಎಂಬ ಗಿಡಗನು ಆ ಸಕಲ ಪ್ರಪಂಚ ನಿವೃತ್ತಿಯ ಮಾಡುವ ಶಿವಭಾವವನು ಸೂಕ್ಷ್ಮವಾದ ಚಿತ್ತಿನಿಂದುದಿಸಿದ ಸುಜ್ಞಾನ ಪ್ರಕಾಶವನವಗ್ರಹಿಸಿತ್ತೆಂಬುದೀಗ ಹಕ್ಕಿಯು ಗಿಡಗನ ಕೊಡೆ ಕಡಿವ ಕೋಂಬ ಚಿಟ್ಟೆಯು ಮರಿ ನುಂಗಿತ್ತು ಸದಾಶಿವ ಮೂರ್ತಿಲಿಂಗವನರಿಯಿತ್ತೆಂಬ ಶಬ್ದಕ್ಕರ್ಥ.

೯. ಧರೆಯ ಹಾವು ಆಕಾಶದೊಳಗಣ ಕಪ್ಪೆ ಒಡಗೂಡಿ ಊರಸೆಯಾಗಿ ಹಾವು ಗಾರುಡವ ನುಂಗಿ ಕಪ್ಪೆ ಹಿಡಿವ ಜೋಗಿಯ ನುಂಗಿತ್ತು. ಮತ್ತೆ ಕಪ್ಪೆಗೆ ಸರ್ಪಗೆ ವಿರೋಧವಾಗಿ ಕಪ್ಪೆ ಜೋಗಿಯನುಗುಳಿ ಘಟ ಸರ್ಪನ ನುಂಗಿತ್ತು. ಕಪ್ಪೆಯ ವಿಷ ತಾಗಿ ಜೋಗಿ ಮತ್ತನಾದ. ಇಂತೀ ಭೇದದಿಂದಿರವು ತಾನೆ ಸದಾಶಿವಮೂರ್ತಿಲಿಂಗವು ತಾನು ತಾನೆ.

ಟೀಕು — ಪಂಚಭೂತಾಶ್ರಯವಾದ ದೇಹದಲ್ಲಿರ್ದ ಮನಸ್ಸೆಂಬುದೀಗ ಧರೆಯ ಹಾವು ಎಂಬ ಶಬ್ದಕ್ಕರ್ಥ. ಆತ್ಮಾಕಾಶದಲ್ಲಿರ್ದ ಅಜ್ಞಾನ ಸ್ವರೂಪಿಣಿಯಾದ ಮಾಯೆಯೆಂಬುದೀಗ ಆಕಾಶದೊಳಗಣ ಕಪ್ಪೆ ಎಂಬ ಶಬ್ದಕ್ಕರ್ಥ. ಅಂತಪ್ಪ ಮನ ಮಾಯೆ ಎರಡೂ ದೇಹದಲ್ಲಿ ಒಂದೇ ಸ್ವರೂಪಿನಿಂದಿರುತ್ತಿಹವೆಂಬುದೀಗ ಒಡಗೂಡಿ ಊರಸೆಯಾಗಿ ಎಂಬ ಶಬ್ದಕ್ಕರ್ಥ ಅಂತಪ್ಪ ಮನಸ್ಸನು ಆಹ್ವಾನಿಸಿ ಹಿಡಿಯಬೇಕೆಂಬ ಭಿನ್ನ ಜ್ಞಾನಿಗಳ ಸರ್ವಾಂಗವನು ಸಂಕಲ್ಪ ಭಾವದಿಂದವಗ್ರಹಿಸಿತ್ತೆಂಬುದೀಗ ಹಾವು ಗಾರುಡವ ನುಂಗಿ ಎಂಬ ಶಬ್ದಕ್ಕರ್ಥ. ಆ ಮಾಯೆ ಮನವ ಆಹ್ವಾನಿಸಿ ಹಿಡಿಯಬೇಕೆಂಬ ಖಂಡಿತ ಜ್ಞಾನಿಗಳ ತಾನೇ ಅವಗ್ರಹಿಸಿತ್ತೆಂಬುದೀಗ ಕಪ್ಪೆ ಹಿಡಿವ ಜೋಗಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡದಲ್ಲಿ ಸುಜ್ಞಾನೋದಯವಾಗಲು ಆ ಮಾಯೆಯುಳಿದು ನಿವೃತ್ತಿಮುಖದಿಂ ಚಿದ್ಬಿಂದುವೆ ಪ್ರಭಾವಿಸಿ ಮನೋವರ್ತನೆಯ ನಿವೃತ್ತಿ ಮಾಡಿತ್ತೆಂಬುದೀಗ ಮತ್ತೆ ಕಪ್ಪೆಗೆ ಸರ್ಪಗೆ ವಿರೋಧವಾಗಿ ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಚಿದ್ಬಿಂದು ಶಂಕಾವಿಷ ಸಂಬಂಧಿಯಪ್ಪ ಜೀವನ ಪ್ರಪಂಚಿನಿಂ ಬೇರ್ಪಡಿಸಿತ್ತೆಂಬುದೀಗ ಕಪ್ಪೆ ಜೋಗಿಯ ನುಗಳಿ ಎಂಬ ಶಬ್ದಕ್ಕರ್ಥ. ಆ ಜೀವಭಾವ ಪ್ರಪಂಚ ನಿವೃತ್ತಿಮಾಡಿದ ಚಿದ್ಬಿಂದುಪ್ರಕಾಶವು ಮನವನವಗ್ರಹಿಸಿತ್ತೆಂಬುದೀಗ ಸರ್ಪನ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಪರಮಶಾಂತಿಯ ಚಿದ್ಬಿಂದುವಿನಲ್ಲಿರ್ದ ಚಿದಮೃತ ರಸವೆ ಶ್ರೀಗುರು ಕಾರುಣ್ಯದಿಂ ಸತ್ಕ್ರಿಯಾಲಿಂಗವಾಗಿ ಬಂದು

ಶರಣನ ಸರ್ವಾಂಗವಲ್ಲಿ ನಷ್ಟವಾಗಲು ಆ ಸಜ್ಜೀವನು ಚಿದ್ಘನಲಿಂಗದಲ್ಲಿ ಪರಮುಕ್ತಿಯಾದನೆಂಬುದೀಗ ಕಪ್ಪೆಯು ವಿಷ ತಾಗಿ ಜೋಗಿ ಪಾತ್ರ ನಾದ ಇಂತೀ ಭೇದದಿಂದಿರವು ತಾನೆ ಸದಾಶಿವಮೂರ್ತಿ ಲಿಂಗವು ತಾನು ತಾನೇ ಎಂಬ ಶಬ್ದಕ್ಕರ್ಥ.

೧೦. ನಾ ತೋಡಿದ ಬಾವಿಯಲ್ಲಿ ದುಂಡುಕ ಭೇಕ ಒಂದೇ ಆಗಿ ರ್ದವು. ದುಂಡುಕ ಹಸಿದು ಭೇಕನ ನುಂಗಿತ್ತು. ಭೇಕ ಸಾಯದೆ ದುಂಡುಕನ ಕರುಳು ತಿಂದು ಒಣಗಲಾಗಿ ಅಂಗ ಬಿಗಿದು ಭೇಕನಲ್ಲಿಯೇ ಸತ್ತಿತ್ತು ಎನ್ನ ಭಾವಿ ಕೆಟ್ಟಿತ್ತು. ಸದಾಶಿವಮೂರ್ತಿಲಿಂಗದ ಕುರುಹ ಡಗಿತ್ತು.

ಟೀಕು:— ಆತ್ಮಂಗೆ ದೇಹ ಸಂಬಂಧವಾದಲ್ಲಿ ಸಂಸಾರ ವಿಷಯ ರಸ ಕೂಪವನುಂಟುಮಾಡಿಕೊಂಡನೆಂಬುದೀಗ ನಾ ತೋಡಿದ ಬಾವಿ ಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ತನುವೆಂಬ ಕೂಪದ ಮಧ್ಯದಲ್ಲಿ ಶಂಕಾ ವಿಷಯ ಸಂಬಂಧಿಯಪ್ಪ ಜೀವನು ಪರಮ ಶಾಂತಿಯ ಬಿಂದು ಅಡಗಿರುತ್ತಿಹುದೆಂಬುದೀಗ ದುಂಡುಕ ಭೇಕ ಒಂದೇ ಆಗಿದ್ದವು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಆ ತೃಷ್ಣೆಯಿಂದ ಆ ಪರಮಶಾಂತಿಯ ಬಿಂದುವನವಗ್ರಹಿಸಿತ್ತೆಂಬುದೀಗ ದುಂಡುಕ ಹಸಿದು ಭೇಕವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವನವಗ್ರಹಿಸಲು ಆ ಪರಮ ಶಾಂತಿಯ ಬಿಂದು ಮರವೆಯಿಂ ನಷ್ಟವಾಗದೆಂಬುದೀಗ ಭೇಕ ಸಾಯದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಜ್ಞಾನೋದಯವಾಗಲು ಆ ಜೀವನ ಸಕಲ ಕರಂಗಳನು ಆ ಪರಮ ಶಾಂತಿಯ ಬಿಂದುವೇ ಅವಗ್ರಹಿಸಿತ್ತೆಂಬುದೀಗ ದುಂಡುಕನ ಕರುಳ ತಿಂದು ಎಂಬ ಶಬ್ದಕ್ಕರ್ಥ. ಆ ಪರಮ ಶಾಂತಿಯ ಬಿಂದು ಅವಗ್ರಹಿಸಲು ಜೀವಭಾವವಳಿದು ಸಂಸಾರ ವಿಷಯ ರಸವರತು ಹೋಯಿತ್ತೆಂಬುದೀಗ ದುಂಡುಕನ ಸತ್ತು ಒಣಗಲಾಗಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸವರತು ಹೋದಲ್ಲಿ ತನ್ನ ನಿಜವಪ್ಪ ಪರಬ್ರಹ್ಮದಲ್ಲಿ ಕೂಡಬೇಕೆಂದು ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಅಂಗದಲ್ಲಿ ಲಿಂಗ ಸಂಬಂಧವ ಮಾಡಲು ಪಂಚಾಚಾರವಿಡಿದಾಚರಿಸಿ ದೇಹಭಾವ ನಷ್ಟ

ವಾಗಿ! ಆತ್ಮನ ಮಹಾಘನದಲ್ಲಿಯೇ ಸಮರಸವಾದನೆಂಬುದೀಗ ಅಂಗಬಿಗಿದು ಭೇಕನಲ್ಲಿಯು ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತು ಆತ್ಮನು ಲಿಂಗದಲ್ಲಿ ಸಮರಸೈಕ್ಯವಾಗಲು ವಿಷಯ ರೂಪ ನಷ್ಟವಾಗಿ ಲಿಂಗ ಶರಣನೆಂಬ ಭಯ ಭಾವವಡಗಿಹೋಯಿತ್ತೆಂಬುದೀಗ ಎನ್ನ ಬಾವಿ ಕೆಟ್ಟಿತ್ತು ಸದಾಶಿವ ಮೂರ್ತಿ ಲಿಂಗದ ಕುರುಹಡಗಿತ್ತು ಎಂಬ ಶಬ್ಧಕ್ಕರ್ಥ.

೧೧. ಉರಿಯ ಮಡುವಿನಲ್ಲಿ ಒಂದು ಜಲದ ಕುಸುಮ ಹುಟ್ಟಿತ್ತು. ಹರಿಸುರ ಬ್ರಹ್ಮಾದಿಗಳಿಗೆ ವಶವಲ್ಲ ನೋಡಾ. ಆ ಕುಸುಮದ ಎಸಳಿನ ಕೂಟಸ್ಥಲದಲ್ಲಿ ಕಪ್ಪು, ನಡುಮಧ್ಯದಲ್ಲಿ ತಮ ಕಪೋತ ವರ್ಣ, ಅದರ ತುದಿಯಲ್ಲಿ ನಾನಾವರ್ಣದ ಛಾಯೆ ಕೂಡಿ ಅಳಿವುತ್ತಿಹುದು. ಆ ಹೂವ ಒಂದೇ ಭೇದದಲ್ಲಿ ಕಿತ್ತು ಸದಾಶಿವ ಮೂರ್ತಿಲಿಂಗದ ಪಾದದಲ್ಲಿರಿಸಲಾಗಿ ಪದಕ್ಕೆ ಹೊರಗೊಂದು ಮುಕುಟದ ಮೇಲೇರಿತ್ತು. ಇದ ಬಲ್ಲವರಾರು ಚೋದ್ಯವ ಹೇಳರಣ್ಣಾ.

ಟೀಕು: – ತಾಪತ್ರಯಾಗ್ನಿ ಸಂಬಂಧವಾದ ಸಂಸಾರ ವಿಷಯ ರಸದ ಘಾತವ ಕಾಣಬಾರದೆಂಬುದೀಗ ಉರಿಯ ಮಡುವಿನಲ್ಲಿ ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಸಂಚಲರೂಪವಾದ ಮನೋ ಕುಸುಮ ಹುಟ್ಟಿತ್ತೆಂಬುದೀಗ ಒಂದು ಜಲದ ಕುಸುಮ ಹುಟ್ಟಿತ್ತೆಂಬ ಶಬ್ಧಕ್ಕರ್ಥ. ಅಂತಪ್ಪ ಮನೋ ಪ್ರಕೃತಿಯ ನಿಲಿಸಿಹನೆಂದೊಡೆ ಬ್ರಹ್ಮ ವಿಷ್ಣು ಮೊದಲಾದ ಸಮಸ್ತ ದೇವತೆಗಳಿಗೆ ಅಸಾಧ್ಯವೆಂಬುದೀಗ ಹರಿ ಸುರ ಬ್ರಹ್ಮಾದಿಗಳಿಗೆ ವಶವಲ್ಲ ನೋಡಾ ಎಂಬ ಶಬ್ದಕ್ಕರ್ಥ. ಆ ಮನೋ ಕುಸುಮದ ಎಸಳೆಂದೊಡೆ ಇಂದ್ರಿಯಂಗಳು, ಅಂತಪ್ಪ ಇಂದ್ರಿಯಂಗಳನೊಳಗೊಂಡಿರ್ಪ ಸ್ಥೂಲ ದೇಹವೆಲ್ಲ ಅಜ್ಞಾನಮಯವಾಗಿಹುದೆಂಬುದೀಗ ಆ ಕುಸುಮದ ಎಸಳಿನ ಕೂಟಸ್ಥಲದಲ್ಲಿ ಕಪ್ಪು ಎಂಬ ಶಬ್ದಕ್ಕರ್ಥ. ಆ ಮನಸ್ಸು ಸೂಕ್ಷ್ಮದೇಹದಲ್ಲಿ ಮರವೆಯನೆಯ್ದಿ ಷಡ್ವರ್ಣ ಸ್ವರೂಪವಾಗಿಹುದೆಂಬುದೀಗ ನಡುಮಧ್ಯದಲ್ಲಿ ತಮ ಕಪೋತ ವರ್ಣವೆಂಬ ಶಬ್ದಕ್ಕರ್ಥ. ಕಾರಣ ದೇಹದಗ್ರದಲ್ಲಿ ಆ ಮನಸ್ಸು ಸಕಲ ಕರಣಂಗಳ ವ್ಯವಹಾರದಲ್ಲಿ ಕೂಡಿ ಪ್ರಪಂಚಿನಲ್ಲಿ ಲಯವಾಗುತ್ತಿಹುದೆಂಬುದೀಗ ಅದರ ತುದಿಯಲ್ಲಿ ನಾನಾ ಛಾಯೆ ಕೂಡಿ ಅಳಿವುತ್ತಿಹುದೆಂಬ ಶಬ್ದಕ್ಕರ್ಥ. ಅಂತಪ್ಪ ಮನೋಮಧ್ಯದಲ್ಲಿ ಶಿವಕೃಪೆಯಿಂದ ಸುಜ್ಞಾನ ಪ್ರಕಾಶವಾ

ಗಲು ಅಂತಪ್ಪ ಸುಜ್ಞಾನ ಪ್ರಕಾಶದಿಂ ಮನೋವರ್ತನೆಯಿದು ಸದ್ಭಾ ಸನ ಸ್ವರೂಪವನೆಯ್ದಲು ಆ ಪುಷ್ಪವ ಕೃತನಿಶ್ಚಯ ಹಸ್ತದಲ್ಲಿ ಪಿಡಿದು ಸತ್ಕ್ರಿಯಾ ಸ್ವರೂಪವಾದ ಇಷ್ಟಲಿಂಗದಲ್ಲಿ ಸಮರ್ಪಿಸುತ್ತಿರ್ದನೆಂಬುದೀಗ ಆ ಹೂವ ಒಂದೇ ಭೇದದಲ್ಲಿ ಕಿತ್ತು ಸದಾಶಿವ ಮೂರ್ತಿಲಿಂಗದ ಪಾದದಲ್ಲಿರಿಸಲಾಗಿ ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ಸಂಬಂಧವಾದ ಉನ್ಮನಿತತ್ವ ಸ್ವರೂಪವಾದ ಮನಸ್ಸು ಚತುರ್ವಿಧ ಖಂಡಿತ ಪದವ ಮುಟ್ಟದೆ ಜ್ಞಾನ ಸ್ವರೂಪವಾದ ಪರಶಿವ ತತ್ವದಲ್ಲಿ ನಿವೃತ್ತಿಯಾಯಿತ್ತೆಂಬುದೀಗ ಪದಕ್ಕೆ ಹೊರಗೆಂದು ಮಕುಟದ ಮೇಲೇರಿತ್ತು. ಇದ ಬಲ್ಲವರಾರು ಚೋದ್ಯವ ಹೇಳಿರಣ್ಣಾ ಎಂಬ ಶಬ್ದಕ್ಕರ್ಥ.

೧೭. ಅಂಧಕಾರವೆಂಬ ಮನೆಯ ಬಾಗಿಲಲ್ಲಿ ಅಂಗದ ಕರಡಿಯ ಕಟ್ಟಿ, ಮೂರಂಗದ ಕೋಡಗಯೋಡಿಸಿ ಕಾಡುತ್ತಿದೆ. ಮೀರಿದನೆಂಬುವರೆಲ್ಲರು ಕರಡಿಯ ನಿಲಿಸಿ ನಿನ್ನಲ್ಲಿ ಸತ್ತು ಕೋಡಗದ ಚೇಷ್ಟೆಯಲ್ಲಿ ಸಿಕ್ಕಬೇಡ. ನಿಮುಗಾರೂಢದ ಮಾತು. ಇಂತಿವ ಮೀರಿ ನಿಂದವಂಗಲ್ಲದೆ ಸದಾಶಿವ ಮೂರ್ತಿ ಲಿಂಗವಿಲ್ಲ.

ಟೀಕು:— ಅಜ್ಞಾನ ಸಂಬಂಧವಾದ ದೇಹವೆಂಬುದೀಗ ಅಂಧಕಾರವೆಂಬ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಆ ದೇಹವನಾಶ್ರೈಸಿಕೊಂಡಿರ್ಪ ಇಂದ್ರಿಯ ದ್ವಾರಂಗಳಲ್ಲಿ ಎಂಬುದೀಗ ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವನಾಶ್ರೈಸಿಕೊಂಡಿರ್ಪ ಮಾಯೆ ಭವಪಾಶದಲ್ಲಿ ಬಿಗಿವಡೆದಿತ್ತಿಹಳೆಂಬುದೀಗ ಅಂಗದ ಕರಡಿ ಕಟ್ಟಿ ಎಂಬ ಶಬ್ದಕ್ಕರ್ಥ. ಆ ತನುತ್ರಯಂಗಳ ವ್ಯವಹಾರದಲ್ಲಿ ಸಿಕ್ಕಿರ್ದ ಮನಸ್ಸು ಆ ಮಾಯಾವಶಗತರಾಗಿರ್ಪ ಜೀವರ ಹಾಸ್ಯಕ್ರೀಡು ಮಾಡಿ ಕಾಡುತ್ತಿಹುದೆಂಬುದೀಗ ಮೂರಂಗದ ಕೋಡಗಯೋಡಿಸಿ ಕಾಡುತ್ತಿದೆ ಎಂಬ ಶಬ್ದಕ್ಕರ್ಥ- ಆ ಸಂಕಲ್ಪಸ್ವರೂಪವಾದ ಮನೋವರ್ತನೆಯ ನಿಲಿಸಿಹನೆಂಬ ಒಣ ವಾಗದ್ವೈತಿಗಳೆಲ್ಲರೂ ಮಾಯಾ ಪ್ರಪಂಚಿನ ಸುಖಕ್ಕೆ ಸಿಲ್ಕಿ ಲಯವಾಗಿ ಹೋದರೆಂಬುದೀಗ ಮೀರಿದನೆಂಬುವರೆಲ್ಲರೂ ಕರಡಿಯ ನಿಲಿಸಿ ನಿನ್ನಲ್ಲಿ ಸತ್ತು ಎಂಬ ಶಬ್ದಕ್ಕರ್ಥ- ಆ ಮನೋವರ್ತನೆಯಲ್ಲಿ ಸಿಕ್ಕಿರ್ಪ ಅದ್ವೈತ ಜ್ಞಾನಿಗಳು ಇಲ್ಲದ ಪರಬ್ರಹ್ಮವನುಂಟು ಮಾಡಿಕೊಂಡು ನುಡಿಯುತ್ತಿಹರು. ಅದು ಸಲ್ಲದೆಂಬುದೀಗ ಕೋಡಗದ ಚೇಷ್ಟೆಯಲ್ಲಿ ಸಿಕ್ಕಬೇಡ, ನಿಮುಗಾರೂಢದ ಮಾತು ಎಂಬ ಶಬ್ದ

ದ್ವಾರದಲ್ಲಿ ಪುಟವನು ಇಟ್ಟು ಷಡು ಚಕ್ರ ಆಧಾರಾದಿ ಆಜ್ಞಾಂತ್ಯ
ವಾದ ಆರು ಚಕ್ರಗಳ ವರ್ಮವನು ತಿಳಿಯದೆ ಆ ಷಡು ಚಕ್ರಂ
ಗಳಲ್ಲಿರುವ ಕಮಲ ದಳ ಪ್ರಣವ ಕರ್ಣಿಕಾ ಪ್ರಣವು ಲಿಂಗಂಗಳನು
ಅರಿಯದೆ ಅಧೋ ದ್ವಾರದಲ್ಲಿ, ಗುದಸ್ಥಾನದಲ್ಲಿ ಶಿವ ನೆಮ್ಮಿಕೊಂಡಿರು
ವದು ತಲೆಯು ನಿಟ್ಟುಕೊಂಡು ಮಲ ಭಕ್ಷಿಯಾಗಿರುವದು. ಇದು ಮಾಯಾ
ಶಕ್ತಿಯೆಂಬ ಈ ಕುಂಡಲಿಯು ಸರ್ಪನು ಬಾಲ ಮೇಲಾಗಿ ತಲೆ ಕೆಳ
ಗಾಗಿ ಮಲಗ್ರಾಸಿಯಾಗಿರುವಂತಹದ್ದು ಲೌಕಿಕರ್ಗೆ ಸಹಜ. ಲೌಕಿಕ
ವರ್ತನೆಯುಳ್ಳ ಮನುಜರಿಗೆ ಈ ಕುಂಡಲಿಯು ಮಾಯಾ ಶಕ್ತಿಯು
ತಲೆ ಕೆಳಗಾಗಿರುವದೇ ಯಥಾರ್ಥವು. ಧರ್ಮ ಸ್ವರೂಪರೆನಿಪ ಸತ್ಯ
ವಚನ ಭೂತ ದಯೆ ಹಿಂಸಾರಹಿತನಾಗಿ ಮಂತ್ರ ಸ್ಮರಣೆ ಲಿಂಗ ದೇಹಿ
ಅಂತರಂಗದ ಪ್ರಾಣಲಿಂಗ ಸಂಬಂಧಿಗಳೆನಿಸುವ ನಿರ್ಮಲ ಚಿದಾತ್ಮ
ಮಲ ಮಾಯಾ ಕರ್ಮವಿಲ್ಲದ ಜ್ಞಾನಾತ್ಮ ಸ್ವರೂಪರಾದಂಥ ಶಿವ ಶರಣ
ಪರಶಿವನ ಸದಾ ಅಂತರಂಗದಲ್ಲಿ ಆರಾಧಿಸುವ ಹರ ಶರಣನು ಊರ್ಧ್ವಕ್ಕೆ
ಶಿರವ ಮೊದಲಧೋ ಮುಖವಾಗಿರ್ದ ಕುಂಡಲಿಯನು ಮೇಲು ಮುಖ
ವನು ಮಾಡಿ ಅಧೋಮುಖ ಊರ್ಧ್ವ ಮುಖವೆಂದಡೆ ಲೌಕಿಕ ವರ್ತನವೇ
ಅಧೋಮುಖವೆನಿಸುವುದು. ಪಾರಮಾರ್ಥನಾದ ಶಿವ ಶರಣನ ಆಚ
ರಣೆಯೇ ಊರ್ಧ್ವಮುಖವೆನಿಸುವದೆಂದರಿದು ಸುಮ್ಮಾನದಿಂದೆತ್ತಿ ನಾನು
ಅಧೋಮುಖದಿಂದೆ ಮಲಹಾರಿಯಾಗಿ ನಿಂಯಕ್ಕೆ ಪ್ರಾಪ್ತಿಯಾದ ಜೀವನು
ನಾನು ಹಿಂದೆ ಏಸು ಕಾಲ ಸುಕೃತವ ಮಾಡಿರ್ದೆನೋ ಎನಗೆ ಶ್ರೀ ಗುರು
ಕೃಪೆಯಿಂದೂರ್ಧ್ವ ಮುಖ ಪ್ರಾಪ್ತಿಯಾಯಿತ್ತೆಂಬ ಕುತೂಹಲದಿಂ ಶಿವಾ
ಚಾರ ಮುಖದಿಂ ಮುಖವನೆತ್ತಿ ಷಡು ಬ್ರಹ್ಮವ ಯಜಿಸುತ್ತ ಆಚಾರಾದಿ
ಮಹಾಲಿಂಗಾಂತ್ಯವಾದ ಆರು ಲಿಂಗಂಗಳನು ಆಯಾಯ ಮಂತ್ರ ಶಕ್ತಿ
ಭಕ್ತಿಯ ಭೇದದಿಂದ ಪೂಜೆಯ ಮಾಡುತ್ತ ಬ್ರಹ್ಮರಂಧ್ರದಲ್ಲಿ ಮೊಗವಿಟ್ಟು
ಬ್ರಹ್ಮರಂಧ್ರ ಚಕ್ರದಲ್ಲಿರ್ಪ ನಿಃಕಲ ಲಿಂಗವನಾರಾಧಿಸಿ ತನ್ನ ಮುಖ
ವನಾ ಲಿಂಗದ ಚರಣಾರವಿಂದದಲ್ಲಿಟ್ಟು ಕುಂಡಲಿ ಮಾಯಾ ಶಕ್ತಿ
ಯೆಂಬಾ ಗುಣವಳಿದು ಲಿಂಗದೇಹಿ ಜ್ಞಾನ ಶಕ್ತಿಯೆಂಬ ಚಿದೋರುಗನು
ಉಪರಿ ಅಲ್ಲಿಂ ಮೇಲಿರುವ ಶಿಖಾಚಕ್ರ ಪಶ್ಚಿಮಚಕ್ರ ಅಣು ಚಕ್ರದಲ್ಲಿರು
ವಂಥ ಲಿಂಗಗಳು ಆ ಚಕ್ರದಲ್ಲಿರುವ ಶೂನ್ಯ ಬ್ರಹ್ಮ ನಿರಂಜನ ಬ್ರಹ್ಮ
ನಿರವಯ ಬ್ರಹ್ಮವನ್ನು ಅರಿವುತ್ತಿಹುದು ಧ್ಯಾನಾರ್ಚನೆಗಳಿಂದೆ ತಿಳಿದು
ನೋಡುತ್ತಿಹುದೆಂಬರ್ಥ.

**ಪದ:—** ಇದನರಿಯದವಗೆ ಭವಬಂಧ ಇವನರಿವವಗೆ । ಸದಮಲದ ಮೋಕ್ಷವಿದು ದಶಚಕ್ರದೊಳಗಿರುವ । ಪದುಮ ಪ್ರಣವಾದಿ ಲಿಂಗಯೋಗ ಮಂತ್ರಧ್ಯಾನವಿದುವೆ ಸರ್ವಜ್ಞತ್ವವೂ ॥ ಇದು ಪರಬ್ರಹ್ಮವಿದುವೆಂದರಿದು ಪರಿಪೂರ್ಣಮನ । ಒದಗಿ ಸರ್ವಾವಸ್ಥೆಯೊಳಗೆ ಮಂತ್ರ ಸ್ಮರಣೆ । ವಿಧಿಸುತಿಹ ಶರಣ ತಾ ಪರಬ್ರಹ್ಮದೊಳಗೈಕ್ಯಯಿದಕೆ ದೃಷ್ಟವಿದೆಂತೆನೇ ॥

**ಟೀಕು:** - ಇದನರಿದವಗೆ ಈ ಜ್ಞಾನ ದರ್ಪಣ ಭೇದವನರಿಯದವಗೆ ಭವಬಂಧ, ಇಹಲೋಕದೊಳಗೆ ಬಂದು ಎಂಬತ್ತುನಾಲ್ಕುಲಕ್ಷ ಜೀವರಾಶಿಯೊಳಗೆ ಪುಟ್ಟಿ ಉಣ್ಣದೂಟವನುಂಡು ಕೊಳಬಾರದ ದಾನವ ಕೊಂಡು ಮಾಡಬಾರದ ಕರ್ಮವ ಮಾಡಿ, ೩೬೦ ವ್ಯಾಧಿಗಳಿಂದ ಬಾಧೆಯ ಬಟ್ಟು ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಪಾಶದಿಂ ಕಟ್ಟುವಡೆದು ಅಸ್ಥಿ ಮಾಂಸ ಶ್ರೋಣಿತ ಚರ್ಮ ನರಂಗಳೆಂಬ ಶಕ್ತಿಮಾಸೆಯೊಳ್ ಸಿಲುಕಿ ಭವಾರಣ್ಯದೊಳಗೆ ತೊಳಲಿ ಬಳಲುವದೇ ಭವಬಂಧವೆನಿಕುಂ. ಇವನರಿದವಗೆ ಪೂರ್ವೋಕ್ತ ಪ್ರಾಣಲಿಂಗ ಲಕ್ಷಣವನರಿದಾರಾಧಿಸುವ ಶರಣಂಗೆ ಸದಮಲದ ಮೋಕ್ಷ ಜನನ ಮರಣಂಗಳನಳಿದು ಸದಾನಂದ ನಿರ್ಮಲ ಪರಬ್ರಹ್ಮದೊಳ್ ಸಮರಸವಪ್ಪ ಮುಕ್ತಿಯು, ಇದು ಈ ಪ್ರಾಣಲಿಂಗಂಗಳು ದಶಚಕ್ರದೊಳಗಿರುವ ಆಧಾರಾದ್ಯಣುವಾಂತ್ಯವಾದ ಹತ್ತು ಚಕ್ರಂಗಳಲ್ಲಿರುವ ಪದುಮ ತಾವರೆಯ ಕಮಲಂಗಳ ಪ್ರಣವಾದಿ ಆ ಕಮಲಗಳಲ್ಲಿರುವ ದಳ ಪ್ರಣವ ಕರ್ಣಿಕಾ ಕಮಲದಲ್ಲಿರುವ ಲಿಂಗ ಆ ಪರವಸ್ತುವೇ ಯೋಗ ಮಂತ್ರ. ಆ ಪ್ರಣವಂಗಳಲ್ಲಿರ್ಪ ಅಕ್ಷರಂಗಳೇ ಪರಬ್ರಹ್ಮಸ್ವರೂಪವೆಂದು ಧ್ಯಾನ ಆ ಮಂತ್ರಲಿಂಗಂಗಳನೇ ಅಂತರಂಗದಲ್ಲಿ ಧ್ಯಾನಿಪುದೇ ಇದುವೇ ಸರ್ವಜ್ಞತ್ವವು. ಈ ಮಂತ್ರ ಲಿಂಗಂಗಳನೇ ಸರ್ವಕಾಲ ಚಿಂತಿಪುದೇ ಸರ್ವಜ್ಞತ್ವವೆನಿಪುದು. ಮತ್ತಂ ತಮಲ್ಲದೆ ಈ ಮಂತ್ರ ಲಿಂಗಂಗಳೇ ಪರಬ್ರಹ್ಮಸ್ವರೂಪವೆಂದು ತಿಳಿದು ಇದೇ ವಸ್ತುವೆಂದು ನಿರ್ಧರಿಸಿ ಪರಿಪೂರ್ಣ ಮನ ಈ ಬ್ರಹ್ಮವು ತನ್ನ ಸರ್ವಾಂಗದಲ್ಲಿ ಕಿಸ್ಕಿಂಧವಾಯುವಾಗಿ ತುಂಬಿಕೊಂಡಿರುವದೆಂಬುದು ಮನದಲ್ಲಿ ನಿಶ್ಚೈಸಿ ಒದಗಿ ಒಪ್ಪಚ್ಚಿಯಾದಡೂ ತೆರಪುಗೊಡದೆ ಬರುವಂಥ ಸರ್ವಾವಸ್ಥೆಯೊಳಗೆ ಸುಖದುಃಖ ಜಾಗ್ರತ್ ಸ್ವಪ್ನ ಸುಷುಪ್ತಿ ಮುಂತಾದೆಲ್ಲಾವಸ್ಥೆಯೊಳಗೂ ಮಂತ್ರಸ್ಮರಣೆ ಮಂತ್ರ ಲಿಂಗಂಗಳನೇ ಸ್ತೋತ್ರವ ಮಾಡಿ ವಿಧಿಸುತಿಹ ಚಕ್ರಂಗಳೇ ಪೀಠವಾಗಿ

ಕಿಂಜಲ್ಕಗಳಲ್ಲಿರುವ ಕೋಣೆಗಳೇ ಗರ್ಭಗೃಹವಾಗಿ ಬೀಜ ಪ್ರಣವುಂಗಳೇ ಲಿಂಗಂಗಳಾಗಿ ಜ್ಞಾನ ಜಲದಲ್ಲಿ ಮಜ್ಜನಕೆರೆದು ದಳಂಗಳೇ ಪುಷ್ಪ ಮಾಲಿಕೆಗಳಾಗಿ ದಳಪ್ರಣವುಂಗಳೇ ಮಂತ್ರಂಗಳಾಗಿ ವರ್ಣಗಳೇ ಬೆಳಗಿನಾರತಿಯಾಗಿ ಜ್ಞಾನೇಂದ್ರಿಯಗಳೆಂಬ ಷಡ್ವಿಧ ವಿಷಯವೆಂಬ ಪಂಚಾಮೃತ ಪದಾರ್ಥವನು ಷಟ್ಕರಣಗಳೆಂಬ ಹಸ್ತದಿಂ ಪೂಜಿಸಿ ಅರ್ಪಿಸುವಂಥ ಶರಣ ತಾ ಇಂತಪ್ಪ ಮಹಾತ್ಮನು ತಾನೆ ಪರಬ್ರಹ್ಮದೊಳಗೈಕ್ಯ ನಿರವಯ ಲಿಂಗಂಗಳೊಳಗೆ ಬೆರೆವನು. ಇದಕ್ಕೆ ದೃಷ್ಟವದೆಂತೆಂದೆನೆ, ಆ ನಿರವಯ ಲಿಂಗಗಳೊಳಗೆ ಬೆರೆವನು. ಆ ನಿರವಯ ವಸ್ತುವಿನೊಳಗೆ ಶರಣನು ಬೆರೆದನೆಂಬುದಕ್ಕೆ ಉಪಮಾನವೆಂತೆಂದೊಡೆ ಮುಂದೆ ಹೇಳಲ್ಪಡುವದೆಂಬರ್ಥ.

**ಸಾಕ್ಷಿಃ — ಶ್ಲೋ.**-ಷಡಕ್ಷರ ಸಮಾಖ್ಯಾತಂ ಷಡಾನನ ಸಮನ್ವಿತಂ ಷಡ್ಭೇದಂ ತು ನ ಜಾನಾತಿ ಪೂಜಾ ನಿಃಫಲಂ ಭವೇತ್ ॥

**ತಾತ್ಪರ್ಯಃ** — ಷಡಕ್ಷರಂಗಳು ನನ್ನ ಆರು ಮುಖಂಗಳಲ್ಲಿ ಕೂಡಿಹವೆಂಬ ಭೇದವನು ಅವನು ಅರಿಯನು ಅವನು ಮಾಡಿದುದೆಲ್ಲವು ನಿಃಫಲವೆಂದು ಈಶವಾಕ್ಯ ಸಾರುತ್ತಿಹುದೆಂಬರ್ಥ ॥೨೪॥

---

**ಪದಃ—** ಕಾದ ಕಬ್ಬುನ ನೀರನುಂಡಂತೆ ಲೋಹ ಸೋಂ। ಕಿದ ಪರುಷ ಕನಕಮಯವಾದಂತೆ ತಿಮಿರವುಂ । ಆ ದಿನಪನೊಳಕೊಂಡ ಪರಿಯಂತೆ ಅಗ್ನಿಯೊಳು ತೀವಿರುವ ಕರ್ಪೂರನೋಲು ॥ ಪಾದಾದಿ ಮಸ್ತಕಾಂತ್ಯ ದೊಳಿರ್ಪ ದಶಚಕ್ರ ವಾದಿಯಾದಖಿಳಷಡು ಲಿಂಗವನರ್ಚಿಸುವ ಶರಣ । ಭೇದವಿಲ್ಲದೆ ಪರ ಬ್ರಹ್ಮದೊಳಗೈಕ್ಯ ವೆಂದೋದುವುದು ಲಿಂಗಾಗಮಾ ॥

**ಟೀಕು ಃ**- ಕಾದ ಕಬ್ಬಿಣವನು ಹಸಿಯ ಕಬ್ಬಿಣವನು ಅಗ್ನಿಯೊಳಿಟ್ಟು ಕಾಸಲು ನೀರನುಂಡಂತೆ ಆ ಕಾದ ಕಬ್ಬಿಣವು ನೀರ ಕುಡಿದಂತೆ ಲೋಹ ಸೋಂಕಿದ ಪರುಷ ಕನಕಮಯವಾದಂತೆ ಪಂಚ ಲೋಹಂಗಳು ಆ ಪರುಷ ಸೋಂಕಲೊಡನೆ ಸುವರ್ಣ ಮಯವಾದ ಹಾಗೆ ಆ ತಿಮಿರವುಂ ಅಂಧಕಾರವಾದ ಕತ್ತಲೆಯನು ಆ ದಿನಪನೊಳಗೊಂಡ

ಷರಿಯಂತೆ ಸೂರ್ಯನ ಪ್ರಕಾಶವು ಒಳಕೊಂಡಂತೆ ಆ ಕತ್ತಲೆಯನು ಸೂರ್ಯನ ಪ್ರಕಾಶವೇ ಆವರಿಸಿಕೊಂಡು ಪ್ರಕಾಶಮಯವಾದ ಹಾಗೆ ಅಗ್ನಿಯೊಳಗೆ ಅನಲನೊಳಗೆ ತೀವಿರುವ ತುಂಬಿಕೊಂಡಿರುವಂಥ ಕರ್ಪುರ ದೊಲು ಕರ್ಪುರದೊಳಗೆ ಅಗ್ನಿಯು ತುಂಬಿಕೊಂಡಂತೆ ಆ ಕರ್ಪುರ ಸಂಗವಾದಗ್ನಿಯು ಬಯಲಾಗಿ ಹೋಗುವಂತೆ ಎಂಬ ದೃಷ್ಟಾಂತದಂತೆ, ಕಬ್ಬಿಣವೆಂಬ ದೇಹದಲ್ಲಿ ಲಿಂಗವೆಂಬ ಅಗ್ನಿಯು ವೇಧಿಸಿ ನೀರೆಂಬ ಪ್ರಪಂಚ ವಿಷಯ ಪದಾರ್ಥವನು ಆ ಶರಣನಂತರಂದಲ್ಲಿರುವ ಲಿಂಗವೇ ಸ್ವೀಕರಿಸುತ್ತಿಹುದು. ಮತ್ತಂ ಪಂಚಲೋಹವೆಂಬ ಪಂಚ ಭೂತಾತ್ಮಕ ವಾದ ಶರಣನ ದೇಹವನು ಪರುಷವೆಂಬ ಪಂಚಲಿಂಗಂಗಳು ಬಂದು ಸೋಂಕಲೊಡನೆ ಆ ಪಂಚ ಭೂತಾತ್ಮವೆಂಬ ದೇಹಗುಣವನಳಿದು ಸುವರ್ಣವೆಂಬ ಲಿಂಗ ದೇಹವಾಯಿತ್ತು. ಮತ್ತಂ ತಿಮಿರವೆಂಬ ಅಜ್ಞಾನ ಮಾನವಗೆ ಗುರು ಕಾರಣ್ಯವೆಂಬ ಚಿತ್ಸೂರ್ಯನು ಅಂತರಂಗದಲ್ಲಿ ಪ್ರಾಣ ಲಿಂಗವಾಗಿ ಪ್ರಕಾಶಿಸಲು ಆ ಅಜ್ಞಾನವೆಲ್ಲವು ಹರಿದು ಸುಜ್ಞಾನ ರೂಪ ವಾದ ಲಿಂಗ ಪ್ರಕಾಶವೇಯಾದ ಶರಣನಾಗಿ ಆ ಪ್ರಕಾಶದಲ್ಲಿಯೇ ಬೆರೆವ ನೆಂಬರ್ಥ. ಚಿದಗ್ನಿಯೆಂಬ ಲಿಂಗದಲ್ಲಿ ಕರ್ಪುರವೆಂಬ ಶರಣನು ಆ ಲಿಂಗವೇ ಒಂದು ಒಡಲಾಗಿ ಆ ಶರಣನು ಆ ಲಿಂಗದಲ್ಲಿ ಕೂದುಗಲು ಆ ಲಿಂಗದ ಸಂಪರ್ಕದಿಂದ ಲಿಂಗವೇಯಹನು. ಪಾದಾದಿ ಮಸ್ತಕಾಂತ್ಯದೊಳಿರ್ಪ ದಶ ಚಕ್ರಪಾದವೇ ಮುಂತಾಗಿ ಶಿರವೇ ಕಡೆಯಾದ ಸರ್ವಾಂಗದೊಳ ಗಿರುವ ಆಧಾರಾದಿ ಅಣುವಾಂತ್ಯವಾದ ಹತ್ತು ಸುದರ್ಶನಂಗಳಿಗೆ ಆದಿಯಾದಖಿಳ ಷಡುಲಿಂಗ ಆಚಾರಾದಿ ನಿರವಯಾಂತ್ಯಲಿಂಗಗಳನು ಅರ್ಚಿಸುವ ಶರಣ ಹಿಂದೆ ಹೇಳಲ್ಪಟ್ಟ ಕ್ರಮದಿಂ ಪೂಜಿಸುವಂಥ ಮಹಾ ಕ್ಮನು ಭೇದವಿಲ್ಲದೆ ಲಿಂಗ ಬೇರೆ ಶರಣ ಬೇರೆಂಬ ಹೊರೆಗಾಣಿಸದೆ ಪರಬ್ರಹ್ಮದೊಳೈಕ್ಯವೆಂದು ಆ ಪರವಸ್ತುವಿನಲ್ಲಿಯೇ ಶರಣ ಲೀಯವಾಗು ವನೆಂದು ಓದುವದು ಲಿಂಗಾಗಮವು, ಶಿವಾಗಮ ಪುರಾಣಂಗಳಲ್ಲಿ ಉಸು ರುತ್ತಿಹುದೆಂಬರ್ಥ.

**ಸಾಕ್ಷಿ:**– ಶ್ಲೋ. ಸರ್ಪ ದಷ್ಟಸ್ಯ ಯದ್ದೇಹಂ ತದ್ದೇಹಂ ವಿಷ ದೇಹವತ್ ॥ ಲಿಂಗ ದಷ್ಟಸ್ಯ ಯದ್ದೇಹಂ ತದ್ದೇಹಂ ಲಿಂಗದೇಹವತ್ ॥೧॥

**ತಾತ್ಪರ್ಯ:**— ಸರ್ಪ ಕಚ್ಚಿದ ಶರೀರವೆಲ್ಲ ವಿಷ ವೇಧಿಸಿ ವಿಷ ಮಯವಾದಂತೆ ಲಿಂಗ ಸೋಂಕಿದ ಶರೀರವೆಲ್ಲವು ಲಿಂಗ ದೇಹವಹುದೆಂಬ ತಾತ್ಪರ್ಯ ॥ ೨ ॥

**ಪದ**: – ಗಂಗು ಗತ್ತರಿಯ ನಾಚಯ್ಯಗಳ ಚರಣಾಬ್ಜ । ತೊಂಡ ನೆಂದೆನಿಪ ಕರಿ ಬಸವ ರಾಜನ ಹೃದಯ । ಪುಂಡರೀಕದೊಳೂಗೆದ ಚನ್ನ ವೀರನು ಬಸವ ದಂಡನಾಥನ ಕೃಪೆಯೊಳು ॥ ಕೊಂಡಾಡಿದೀ ಸಪ್ತ ವಿಂಶತಿ ಪದಂಗಳನು । ಪಿಂಡದೊಳು ಪ್ರಣಮ ಲಿಂಗವ ನರ್ಚಿಸುವ ಶರಣ । ಉಂಡು ಉಪವಾಸಿ ಬಳಸಿಯೆ ಬ್ರಹ್ಮಚಾರಿಯಖಂಡ ಬ್ರಹ್ಮ ದೊಳೈಕ್ಯವೂ ||

**ಟೀಕು**:- ಗಂಡುಗತ್ತರಿಯ ನಾಚಯ್ಯಗಳ ಬಸವೇಶ್ವರ ಮುಂತಾದ ಏಳುನೂರೆಪ್ಪತ್ತು ಅಮರಗಣ ಸಂಕುಲದೊಳಗೆ ಗಂಡುಗತ್ತರಿಯ ನಾಚಯ್ಯಗಳೆಂಬುವ ಶಿವಶರಣನ ಚರಣಾಬ್ಜ. ಆ ನಾಚಯ್ಯಗಳ ಶ್ರೀ ಪಾದ ಕಮಲಗಳ ತೊಂಡನೆಂದೆನಿಪ ಗೋವು ಗುಲಾಮಲೆಂಕ ನೆಂದೆನಿಸಿ ಕೊಂಬಂಥ ಕರಿಬಸವರಾಜನ ಹೃದಯ. ಆ ನಾಚಯ್ಯಗಳ ಬಿರಿದನು ಹೊತ್ತು ಮೆರೆವಂಥ ಗಂಡುಗತ್ತರಿಯ ಕರಿಬಸವ ದೇವರೆಂಬಾತನ ಹೃದಯ ಪುಂಡರೀಕದೊಳಗೆ ಜನಿಸಿದಂಥ ಚನ್ನವೀರನು ಚನ್ನವೀರ ದೇವರೆಂಬಾತನು ಬಸವದಂಡ ನಾಥನ ಕೃಪೆಯೊಳು ದ್ವಿತೀಯ ಶಂಭುವಾದಾ ಬಸವೇಶ್ವರ ಸ್ವಾಮಿಯವರ ಕಟಾಕ್ಷೆಯಿಂದೆ ಕೊಂಡಾಡಿದೀ ಸಪ್ತ ವಿಶಂತಿ ಪದಂಗಳನು ಶರಣ ಜನಂಗಳು ಅಂತರಂಗದಲ್ಲಾರಾಧಿಸುವಂಥ ಸಕೀಲಂಗಳನು ಪದ ಸ್ವರೂಪಿನಿಂ ಉಗ್ಗಡಿಸಿ ಹೇಳಿದ ಈ ಇಪ್ಪತ್ತೇಳು ಪದಂಗಳನು ಪಿಂಡ ದೊಳು ಈ ಶರೀರದೊಳಗೆ ಪ್ರಣಮದಳ ಪ್ರಣಮ ಕರ್ಣಿಕಾ ಪ್ರಣಮ ಷಡಕ್ಷರ ಪ್ರಣಮಯುಕ್ತವಾಗಿ ಲಿಂಗವ ಆಚಾರಾದಿ ನಿರವಯಾಂತ್ಯವಾದ ಹತ್ತು ಲಿಂಗಂಗಳನು ಅರ್ಚಿಸುವ ಶರಣ ಅಂಗ, ಲಿಂಗ, ಹಸ್ತ, ಮುಖ ಪದಾರ್ಥ, ಪ್ರಸಾದನೆಂಬ ಷಡ್ವಿಧ ಸಕೀಲಂಗಳಿಂದೆ ಪೂಜಿಸುವ ಶಿವ ಶರಣನು ಉಂಡು ಉಪವಾಸಿ ಆ ಶರಣನು ಆರೋಗಿಸುವುದೆಲ್ಲವು ಲಿಂಗವೇಯಾದುದಾಗಿ ಆನೆಂಬ ಭಾವವಿಲ್ಲದರಿಂ ಉಂಡು ಉಪವಾಸಿ ಬಳಸಿಯುಂ ಬ್ರಹ್ಮಚಾರಿ ಅಂಗಕ್ಕೆ ಸೋಂಕಿದ ಸ್ಪರ್ಶನ ಪದಾರ್ಥವೆಲ್ಲವು ಜಂಗಮಲಿಂಗದ ಮುಖದಿಂದೆಲ್ಲ ಲಿಂಗಗಳಿಗೂ ತೃಪ್ತಿಯಾಗುವದಾಗಿ ಆದೆಲ್ಲಾ ಲಿಂಗಾಚಾರವೆನಿಸಿತೆಂಬರ್ಥ. ಅಖಂಡ ಬ್ರಹ್ಮದೊಳೈಕ್ಯವು ಅನಂತ ಕೋಟಿ ಚತುರ್ದಶ ಭುವನ ಬ್ರಹ್ಮಾಂಡಗಳ ಕೊಂಡು ಅಡಿ ಮುಡಿ ಒಡಲ ಘಾತವೆಂಬಖಂಡಿತವಿಲ್ಲದ ಮಂಡಲಾಕಾರವನುಳ್ಳ ಅದ್ವಿತೀಯ ವಾದ ಮಹಾಘನಲಿಂಗದಲ್ಲಿ ಇಂತಪ್ಪ ಶರಣನು ಬಯಲೊಳ್ ಬಯಲು ಬೆರೆದಂತೆ ಸಮರಸವಹನೆಂಬರ್ಥ

**ಸಾಕ್ಷಿ:— ಶ್ಲೋ॥** ಲಿಂಗಮಧ್ಯೆ ಜಗತ್ಸರ್ವಂ ತ್ರೈಲೋಕ್ಯಂ ಸಚ ರಾಚರಂ । ಲಿಂಗ ಬಾಹ್ಯ ಪರಂ ನಾಸ್ತಿ ತಸ್ಮಾತ್ ಲಿಂಗಪ್ರಪೂಜಯೇತ್ ॥

**ತಾತ್ಪರ್ಯ:—** ಹದಿನಾಲ್ಕು ಲೋಕಂಗಳು ಸ್ವರ್ಗ ಮರ್ತ್ಯ ಪಾತಾಳವೆಂಬ ತ್ರಿಲೋಕಂಗಳು ಖೇಚರ ಭೂಚರ ಸ್ಥಾವರಾದಿಗಳೆಲ್ಲವು ಆ ಪರ ಬ್ರಹ್ಮದ ಗರ್ಭದ ಮಧ್ಯದಲ್ಲಿಯೇ ಇರುವವು. ಲಿಂಗದಿಂ ಹೊರಗಾದುದೇನೂ ಇಲ್ಲವಾದ ಕಾರಣ ಅಂತಪ್ಪ ಲಿಂಗವನ್ನೇ ಮೋಕ್ಷಾರ್ಥಿಗಳು ಪೂಜಿಸಬೇಕೆಂಬ ತಾತ್ಪರ್ಯ ॥೨೬।

---

**ಪದ:—** ಪರಮ ಪತಿವ್ರತೆಯ ಪುರುಷನು ಮುನಿದು ದುರ್ಜನರೊಳಿರಿಸೆ ಪುರುಷನ ಚಿಂತೆಯಲ್ಲದನ್ಯವನರಿಯ । ದಿರಲರಿದು ತತ್ಪುರುಷನೈತಂದು ಮೋಹಿಸುವ ಪರಿಯಂತೆ ಎನ್ನ ನೀನೂ ॥ ಶರಿರಕರಣಂಗಳೆಂಬರಿಗಳೊಳಿರಿಸೆ ನಿನ್ನಯ ಪದದ । ಸ್ಮರಣೆ ಧ್ಯಾನದೊಳರ್ಚಿಸುತಿರ್ಪ ಕಿಂಕರನ । ಚರಣ ಕಮಲದೊಳು ಇಂಬಿಟ್ಟು ಸಲಹುವುದೆನ್ನ ಗುರುಗುಹೇಶ್ವರ ಲಿಂಗವೇ ॥

**ಟೀಕು:—** ಪರಮ ಉತ್ಕೃಷ್ಟವಾದಂಥ ಪತಿವ್ರತೆಯ ಕಂಭ ಕುಂಭ ಸಾಕ್ಷಿಯಾಗಿ ದೇವಭಕ್ತರುಗಳು ಶಂಗ ಗಂಟಿಕ್ಕಿ ಕೊಂಡಂಥಾ ಪುರುಷನಲ್ಲದೆ ಪರಪುರುಷರ ನಿರಾಕರಿಸಿ ಪುರುಷ ಭಕ್ತಿಯಲ್ಲಿಯೇ ನೈಷ್ಠೆಯುಳ್ಳ ಕುಲ ಸ್ತ್ರೀಯಳನು ಪುರುಷನು ಮುನಿದು ಒಂದಾನೊಂದು ವೇಳೆ ಆ ಸ್ತ್ರೀಯಳ ಮನ ಧರ್ಮವ ನೋಡುವೆನೆಂದು ಮನಸ್ತಾಪವಂ ಮಾಡಿ ದುರ್ಜನರೊಳಿರಿಸೆ ಲಿಂಗ ಬಾಹ್ಯರಾದ ಭವಿಜನರ ಸಮೂಹ ಮಧ್ಯದಲ್ಲಿ ಸ್ಥಾಪನವಂ ಮಾಡಲು ಪುರುಷನ ಮೇಲಣ ಮಮತೆಯ ಬಿಡದೆ ಸುಸಕರ ಕುಬೋಧೆಗೊಳಪಡದೆ ತನ್ನ ಪುರುಷನು ಮುನಿದು ತಿರಸ್ಕರಿಸಿದನೆಂದಾಕ್ಷೇಪವಿಲ್ಲದೆ ಆ ಪುರುಷನ ವ್ಯಸನದಿಂದ ಅನ್ಯವನರಿಯದಿರಲು ತನ್ನ ಪುರುಷನ ಭಕ್ತಿಯೊಂದಲ್ಲದೆ ಅನ್ಯವ್ರತವನ್ನು ಅರಿಯದೇ ಇರುತ್ತಿರಲು ಅರಿದು ಆ ಪುರುಷನು ತನ್ನ ಸ್ತ್ರೀಯಳ ಗುಣಧರ್ಮವ ತಿಳಿದು ತತ್ಪುರುಷನೈತಂದು ಆ ಪುರುಷನು ತನ್ನ ಸ್ತ್ರೀಯಳಿದ್ದೆಡೆಗೆ ಬಂದು ಮೋಹಿಸುವ ಪರಿಯಂತೆ ತೆರ್ಕೆಚುಂಬನ ಮಮತೆಯಂ ಮಾಡುವಂತೆ ಎನ್ನ ನೀನು ಆ ಪುರುಷರ ನಡೆಯಂತೆ ಎಲೆ ಪರಶಿವನೆ ಶರಣಸತಿ ಲಿಂಗಪತಿ ಎಂಬ ಪ್ರಮಾಣ

ಮುಂತಾಗಿ ನೀನೆ ಪತಿ ಆನೇ ಸತಿಯಾಗಿರ್ದಲ್ಲಿ ಎನ್ನ ಗುಣಾಗುಣಂಗಳನು ನೋಡಲೋಸುಗ ಎನ್ನನು ನೀನು ಶರೀರ ಅಸ್ಥಿ ಮಾಂಸ ಚರ್ಮವೆಂಬ ಸೆರೆಮನೆಯೊಳಗೆ ಕರಣ ಚತುಃಕರಣಗಳೆಂಬ ಅರಿಗಳೊಳು ತ್ರಿವಿಧಾವಸ್ಥೆ ಪಂಚಭೂತ ಷಡ್ವರ್ಗ ಸಪ್ತ ವ್ಯಸನ ಅಷ್ಟಮದಂಗಳೆಂಬಾ ವೈರಿಗಳ ಸಮೂಹದಲ್ಲಿ ಇರಿಸೆ ಎಲೆ ಪರಶಿವನೆ ಇಂತಿವರೊಳಗೆನ್ನನು ಹುಟ್ಟಿಸಿದಡೆಯೂ ನಿನ್ನಯ ಪಾದ ಸ್ಮರಣೆ ಧ್ಯಾನದೊಳಿರ್ಪ ಎಲೆ ಪರಶಿವನೇ ನಿಮ್ಮಯ ಮೃದುಲ ಪದ್ಮಂಗಳ ಸ್ಮರಣೆ ಷಡಕ್ಷರಿಯ ಮಂತ್ರಸ್ತೋತ್ರ ಕ್ರಿಯಾಜ್ಞಾನಾಚಾರಂಗಳಿಂದೆ ಇಷ್ಟ ಪ್ರಾಣ ಭಾವ ಲಿಂಗಂಗಳ ನಾರಾಧಿಸುವ ಕಿಂಕರನ ಇಂತಪ್ಪ ಭಕ್ತಿಯುಕ್ತ ಶರಣರ ಪಾದಸೇವಕನ ಚರಣ ಕಮಲದೊಳು ಪಾದದ್ವಯ ಕಮಲಂಗಳೊಳಗೆ ಇಂಬಿಟ್ಟು ಎನ್ನ ಗುಣ ದೋಷವನು ಲೆಕ್ಕಿಸದೆ ಕೈತಿಟ್ಟುಕೊಂಡು ಸಲಹುವುದೆನ್ನ ಎನ್ನನು ಭವಾರಣ್ಯವೆಂಬ ಜನನ ಮರಣಕ್ಕೆ ಕಳುಹದೆ ನಿಮ್ಮ ಪಾದಾರವಿಂದದಲ್ಲಿಯೇ ರಕ್ಷಣ್ಯವ ಮಾಡುವುದು. ಗುರು ನವಲಿಂಗಗಳಿಗೆ ಶ್ರೇಷ್ಠವಾದಂಥ ಗುಹೇಶ್ವರ ಲಿಂಗವೇ ಶರಣಸಂತರಂಗದಲ್ಲಿರ್ಪ ನವಚಕ್ರಂಗಳೆಂಬಾ ನವ ಗುಹೆಯೊಳಗೆ ಚೈತನ್ಯ ಸ್ವರೂಪನಾಗಿ ನವಲಿಂಗಂಗಳೆಂಬ ಪೆಸರಿನಿಂದ ಇರುತಿರ್ಪಂಥ ನಿರವಯ ಪರಬ್ರಹ್ಮನೇ ಎಂದು ಶರಣನು ಪ್ರಾರ್ಥನಂಗೆಯ್ಯುತ್ತಿಹನೆಂಬರ್ಥ.

ಸಾಕ್ಷಿಃ—ಶ್ಲೋ॥ ಹೃದಯಂ ಹೃದಯಶ್ಚೈವ । ಸ್ತೋತ್ರಂ ಸ್ತೋತ್ರಸ್ಯ ಸರ್ವದಾ ॥ ಸ್ಪರ್ಶನಂ ಸ್ಪರ್ಶನಂ ಚೈವ । ದೃಷ್ಟ್ವಾ ದೃಷ್ಟಿ ತಥೈವಚ । ಜಿಹ್ವಾಯ ಪೀತ ಜಿಹ್ವಾಚ॥ ಘ್ರಾಣೇನ ಘ್ರಾಣಮೇವಚ ಏಕೈಕಂ ಪ್ರಣಮಾಖ್ಯಾತಂ ಇತ್ಯೇತೇ ಸಹ ವರ್ತನಾಂ.

**ಟೀಕು**— ತನ್ನ ಹೃದಯುವೇ ಲಿಂಗದ ಹೃದಯ, ತನ್ನ ಸ್ತೋತ್ರವೇ ಲಿಂಗದ ಸ್ತೋತ್ರ, ತನ್ನ ಸ್ಪರ್ಶನವೇ ಲಿಂಗದ ದೃಷ್ಟಿ, ತನ್ನ ಜಿಹ್ವೆಯೇ ಲಿಂಗದ ಜಿಹ್ವೆ, ತನ್ನ ನಾಸಿಕವೇ ಲಿಂಗದ ನಾಸಿಕ, ಇವೆಲ್ಲವು ಲಿಂಗದಾಶ್ರಯವೆಂಬ ಭಾವವು ಸಹವರ್ತಿಯೆನಿಪುದಾಗಿ ಬಂದಕ್ಕೊಂದು ಪ್ರಾಣವೆಂದು ಈಶ್ವರನು ಹೇಳಿದನೆಂಬರ್ಥ.

ಶ್ಲೋ॥ ನಾಹಂ ವಸಾಮಿ ಕೈಲಾಸೆ । ನ ಮೇರು ನ ಚ ಮಂದರೆ ॥ ಮದ್ಭಕ್ತಾಃ ಯತ್ರ ತಿಷ್ಠಂತಿ ತತ್ರ । ತಿಷ್ಠಾಮಿ ಪಾರ್ವತಿ ॥

**ಟೀಕು:-** ಎಲೆ ಪಾರ್ವತಿ ನಾನು ಕೈಲಾಸದಲ್ಲಿಹುದಿಲ್ಲ. ಮೇರು ಪರ್ವತದಲ್ಲಿರೆನು. ಮಂದರ ಪರ್ವತದಲ್ಲಿಲ್ಲ ನನ್ನ ಭಕ್ತರೆಲ್ಲಿಹರು ಅಲ್ಲಿಯೇ ನಾನಿರ್ಪೆನೆಂದು ಈಶ್ವರನು ಪಾರ್ವತಿದೇವಿಯರಿಗೆ ಹೇಳಿದನೆಂಬರ್ಥ ॥ ೨೭ ॥

ಇತಿ ಪ್ರಾಣಲಿಂಗ ಧ್ಯಾನ ದರ್ಪಣ ಚಾರಿತ್ರ

**ಸಮಾಪ್ತ.**

## ಮಂಗಳಾರತಿ ಪದ

ಜಯ ಮಂಗಲಂ ನಿತ್ಯ ಶುಭ ಮಂಗಲಂ
ಜಯ ಜಯತು ಜಗದ ದಿಶ್ರೀಗುರು
ದೇವಗೆ ಜಯ ॥

ಆದಿಚಕ್ರದ ಚತುರ್ದಳ ಮಧ್ಯದ ನಕಾರ ಪ್ರಣವು ಪೀಠದ ಮೇಲೆ। ಆರವತ್ತುಕೋಟಿ ಚಂದ್ರಸೂರ್ಯರ ಪ್ರಕಾಶದಿಂ ಬೆಳಗುವ ಆಚಾರಲಿಂಗಕ್ಕೆ ಜಯ ॥ ೧ ॥

ಅನಾದಿ ಚಕ್ರದ ಷಡ್ದಳಮಧ್ಯದ ಮಕಾರ ಪ್ರಣವು ಪೀಠದ ಮೇಲೆ। ಎಪ್ಪತ್ತುಕೋಟಿ ಚಂದ್ರಸೂರ್ಯರ ಪ್ರಕಾಶದಿಂ ಬೆಳಗುವ ಗುರು ಲಿಂಗಕ್ಕೆ ಜಯ ॥ ೨ ॥

ಸುರಾಳ ಚಕ್ರದ ದಶದಳ ಮಧ್ಯದ ಶಿಕಾರ ಪ್ರಣವು ಪೀಠದ ಮೇಲೆ। ಎಂಭತ್ತುಕೋಟಿ ಚಂದ್ರಸೂರ್ಯರ ಪ್ರಕಾಶದಿಂ ಬೆಳಗುವ ಶಿವಲಿಂಗಕ್ಕೆ ಜಯ ॥೩॥

ನಿರಾಳಚಕ್ರದ ದ್ವಾದಶದಳ ಮಧ್ಯದ ವಕಾರ ಪ್ರಣವುಪೀಠದ ಮೇಲೆ। ತೊಂಭತ್ತುಕೋಟಿ ಚಂದ್ರಸೂರ್ಯರ ಪ್ರಕಾಶದಿಂ ಬೆಳಗುವ ಜಂಗಮಲಿಂಗಕ್ಕೆ ಜಯ ॥೪॥

ಶೂನ್ಯಚಕ್ರದ ಷೋಡಶದಳ ಮಧ್ಯದ ಯಕಾರ ಪ್ರಣವು ಪೀಠದ ಮೇಲೆ। ಶತಕೋಟಿ ಚಂದ್ರಸೂರ್ಯರ ಪ್ರಕಾಶದಿಂ ಬೆಳಗುವ ಪ್ರಸಾದ ಲಿಂಗಕ್ಕೆ ಜಯ ॥೫॥

ತೈಲದೊಳಗಣ ತಿಲದಂತೆ ಕ್ಷೀರದೊಳಗುಣ ಘೃತದಂತೆ ಪುಷ್ಪದೊಳಗಣ ಪರಿಮಳದಂತೆ ಎಪ್ಪತ್ತೆರಡು ಸಾವಿರ ನಾಡಿಗಳೆಲ್ಲವ ಶಿವನ ಬೆರಸಿ ಅಡಗಿನಿಂದ ನಿಲವ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

---

## ಅಮೃತ ಧಾರಣೆ

ಓಂಕಾರ ಕಳಸದೊಳಗಿಹ ಅಮೃತವನುಂಡರೆ ಕಾಲ ಕಲ್ಪಿತವಿಲ್ಲದೆ ಶಿವ ತಾನೆಯಾಗಿಹನು ಕಾಣಾ ಕೂಡಲ ಸಂಗಮ ದೇವಾ.

ಷೋಡಶ ಕಳೆಗಳೊಳಗಿಹ ಅಮೃತವನುಂಡರೆ ಪರಿಪೂರ್ಣವಾಗಿಹನು ಕಾಣಾ ಅಪ್ರಮಾಣ ಕೂಡಲ ಸಂಗಮ ದೇವಾ.

ಜ್ಞಾನ ಪ್ರಕಾಶವಾಗಿಹ ಮಹಾ ಜ್ಯೋತಿ ಎಂಬ ಅಮೃತವನುಂಡರೆ ಹಸಿವು ತೃಷೆಗಳಡಗಿ ಆನಂದ ಸ್ವರೂಪವಾಗಿಹನು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

---

## ಅಧಾರ ಧಾರಣೆ

ಪ್ರಾಣವೇ ಪೀಠಿಕೆಯಾಗಿ ಶಿವನೆಂಬ ಶಿವಲಿಂಗವ ನೆಲೆಗೊಳಿಸಿ ಅರ್ಪಿಸಿ ಭೇದವಿಲ್ಲದೆ ಬೆರೆವುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಆಧಾರದೊಳಗೆ ಅರಿದು ಶಿವನ ಮನವೇ ಆಲಯ ಪ್ರಾಣವೇ ಪೀಠಿಕೆಯಾಗಿ ಶಿವನೆಂಬ ಶಿವಲಿಂಗವ ನೆಲೆಗೊಳಿಸಿ ಅರ್ಪಿಸಿ ಭೇದವಿಲ್ಲದೆ ಬೆರಿಸುವದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಬಿಂದುವೇ ಪೀಠ, ನಾದವೇ ಲಿಂಗ, ಕಳೆಯೇ ಪೂಜೆಯಾಗಿ ಅರ್ಪಿಸುವುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಓಂಕಾರವೇ ಪೀಠ, ಅಕಾರವೇ ಕಂಠ, ಉಕಾರವೇ ಗಣ ಪೀಠ ವಾಗಿ ಆ ಮೇಗಣ ಪೀಠದ ಮೇಲಿಹ ಬಟುವೇ ಮಕಾರ. ಆ ಬಟುವಿನೊಳಗಣ ಗಣಿಯೇ ಬಿಂದು, ಬಿಂದುವಿನೊಳಗಣ ನಾದವೇ ಲಿಂಗ ಮೂಲಾಕ್ಷರದಲ್ಲಿ ಮಹಾಲಿಂಗ ಸೂಕ್ಷ್ಮವಾಗಿಹುದ. ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಓಂಕಾರವೆಂಬ ಪೀಠದ ಮೇಲೆ ನಿಶ್ಶಬ್ದವೆಂಬ ಲಿಂಗವ ನೆಲೆಗೊಳಿಸಿ ನಿರಾಳಮಯದಲ್ಲಿ ನಿಂದು ನಿರಾಳವಾಗಿಹುದೀ ಪೂಜೆ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

### ವಾಯುಧಾರಣೆ

( ಇಲ್ಲಿ ಮೂಲ ಗ್ರಂಥದ ಪುಟಗಳು ಕಳೆದು ಹೋಗಿವೆ )

× × × × ×

ಅಗ್ನಿಧಾರಣೆ ನಾಡಿಧಾರಣೆ ವಾಯುಧಾರಣೆ ಅಮೃತ ಧಾರಣೆ ಆಧಾರ ಧಾರಣೆ ಎಂಬ ಪಂಚ ಧಾರಣೆಯುಂ ಮಾಡಿ ತನ್ನಿಂದ ತಾನೇ ತಿಳಿದು ಇನ್ನು ಆತ್ಮಯೋಗಿಯಾಗಿ ಇರಬಾರದೆಂದು ಭ್ರಮರನು ಸದ್ಭಾವನೆಯುಳ್ಳ ಪುಷ್ಪದ ಹಾಗೆ ಅರಸುವುವು. ಹಾಗೆ ಆತ್ಮಯೋಗಿ ಸದ್ಗುರುವ ನರಸಿಕಂಡು ಅವರ ಕಾರುಣ್ಯವ ಪಡೆವೆನೆಂದು ಬಹನು ಕಾಣಾ ಅಪ್ರಮಾಣ ಕೂಡಲ ಸಂಗಮ ದೇವಾ.

---

## ಅಷ್ಟಾಂಗ ಶಿವಯೋಗ.

ಹಿಂಸೆಯನತಿಗಳೆದು ಅನ್ಯ ದೈವವ ಬಿಡುವ ಅನ್ಯ ಕರ್ಮವನಾಚರಿಸದಿಹ ಪರಧನ ಪರಸ್ತ್ರೀ ವರ್ಜಿತ ಈ ಐದು ಯಮಯೋಗ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಬ್ರಹ್ಮಚಾರಿಯಾಗಿಹ, ನಿರಪೇಕ್ಷೆಯಾಗಿಹ, ಧನಾಪೇಕ್ಷೆ ಇಲ್ಲದಿಹ ಆಗಮವಿಡಿದು ಆಚರಿಸುತಿಹ, ಗುರು ತತ್ವ ಪರತತ್ವದ ಸ್ವರೂಪಂಗಳ

ನರಿದಿಹ, ಈ ಐದು ನಿಯಮುಯೋಗ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ವಜ್ರಾಸನ, ಪದ್ಮಾಸನ, ಸ್ವಸ್ತಿಕಾಸನ, ಗೋಮುಖಾಸನ, ಕುಕ್ಕುಟಾಸನ, ಅರ್ಧಾಸನ, ಮಂಡುಕಾಸನ, ಸಿಂಹಾಸನ, ಚಂದ್ರಾಸನ, ಸುಖಾಸನ, ಈ ಹತ್ತು ಆಸನ ಯೋಗ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಇಂದ್ರಿಯಂಗಳಿಗೆ ಒಡೆಯನಹಂತಹ ಮನಸ್ಸನು ಆ ಮನಸ್ಸಿಗೆ ಒಡೆಯನಂತಹ ಪವನ ಆ ಮನ ಪವನಂಗಳಂ ಸಮಾನಂ ಕೊಂಡು ಇಂದ್ರಿಯಂಗಳನು ಸೂಸಲಿಯ್ಯದೆ ಸ್ಥಿರಚಿತ್ತನಾಗಿಹುದೇ ಪ್ರತ್ಯಾಹಾರ ಯೋಗ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಆ ಶ್ರೀಗುರು ಶಿವತತ್ವ ಭಾವ ಸ್ಥಲಕ್ಕೆ ತಂದ. ಆ ಭಾವಸ್ಥಲದ ಲಿಂಗವ ಮನಸ್ಥಲಕ್ಕೆ ತಂದ. ಆ ಮನಸ್ಥಲದ ಲಿಂಗವ ದೃಷ್ಟಿ ಸ್ಥಲಕ್ಕೆ ತಂದ. ಆ ದೃಷ್ಟಿಸ್ಥಲದ ಲಿಂಗವ ಕರಸ್ಥಲಕ್ಕೆ ತಂದ. ಆ ಕರಸ್ಥಲದ ಮೂರ್ತಿಯ ಧ್ಯಾನಿಸುವುದೇ ಧ್ಯಾನಯೋಗ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಆ ಧ್ಯಾನವನೆಚ್ಚರಿದಿಹುದೀಗ ಅಂತಃಕರಣ ಚತುಷ್ಟಯಂಗಳು ಸುಸ್ಥಿರವಾಗಿಹುದೇ ಸಮಾಧಿ ಯೋಗ ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

---

## ಸಮಾಧಿ.

(೧) ಅಯ್ಯಾ ಲಿಂಗಾಂಗ ಸಮರಸ ಹೇಗುಂಟೆಂದಡೆ ಸುಚಿತ್ತ ಕಮಲ ಮೊದಲಾಗಿ ಆಯಾಯ ಕರಸ್ಥಲದಲ್ಲಿ ಮೂರ್ತಿಗೊಂಡಿರುವ ಸುಜ್ಞಾನ ಜಂಗಮ ಸ್ವರೂಪನಾದ ಇಷ್ಟ ಮಹಾಲಿಂಗದ ಗರ್ಭದಲ್ಲಿ ತನ್ನಂಗವ ಬಿಟ್ಟು ಎರಡು ನೇತ್ರ ಒಂದಾದ ಲಲಾಟ ನೇತ್ರವೆಂಬ

ಭಗ ನೇತ್ರದಲ್ಲಿ ಇಷ್ಟಲಿಂಗವೆಂಬ ಗುಹ್ಯವನು ಮುಳುಗಿಸುವದೀಗ ಲಿಂಗಾಂಗ ಸಂಗ ಸಮರಸವು ನೋಡಾ. ಆ ಇಷ್ಟ ಮಹಾಲಿಂಗ ನೇತ್ರ ದರ್ಪಣದಲ್ಲಿ ಪ್ರತಿಬಿಂಬವಾಗಿ ಮನೋನೇತ್ರಕ್ಕೆ ಒಂದೆರಡಾಗಿ ಕಾಣಲ್ಪಡುವದೀಗ ಪ್ರಾಣಲಿಂಗವು. ಆ ಪ್ರಾಣಲಿಂಗ. ಹಸ್ತಂಗಳೆಂಬ ಎರಡರಲ್ಲಿ ನೇತ್ರದ್ವಯುವೆಂಬ ಕುಚಂಗಳೆರಡು ಹಿಡಿದುದೀಗ ಲಿಂಗಾಂಗ ಸಂಗ ಸಮರಸವು. ರೂಪು ರೇಖೆ ವಿಭ್ರಮ ವಿಲಾಸ ಕಳಾ ಲಾವಣ್ಯ ಸ್ವರೂಪವಾದ ಪರಶಿವ ಬ್ರಹ್ಮ ಮೂರ್ತಿಯ ಮುದ್ದು ಮುಖದ ಆಧಾರ ದಲ್ಲಿ ಓಂಕಾರ ಪ್ರಣವನಾದಾಮೃತವ ತಾ ಚುಂಬನ ಮಾಡಲ್ಕೆ ಚಿತ್ ಶಕ್ತಿ ಸ್ವರೂಪಮಪ್ಪ ತನ್ನ ಮುದ್ದು ಮುಖದ ಆಧಾರದಲ್ಲಿ ಹುಟ್ಟಿದ ನಕಾರಾದಿ ಪಂಚ ಪ್ರಣವಂಗಳು ಆ ಪಂಚ ಬ್ರಹ್ಮ ಚುಂಬನವ ಮಾಡ ಲಿಕ್ಕೆ ಇದು ಲಿಂಗಾಂಗ ಸಂಗ ಸಮರಸವು. ಇದು ಶರಣ ಸತಿ ಲಿಂಗ ಪತಿ ನ್ಯಾಯವು. ಇದು ಶ್ರೀ ತಸುವ ಲಿಂಗಕ್ಕರ್ಪಿಸುವ ಕ್ರಮವು. ತನ್ನಲ್ಲಿ ತನ್ನ ತೋರಿ ನನ್ನಲ್ಲಿ ತನ್ನ ತೋರಿದನಾಗಿ ನಾನು ನೀನೆಂಬುದು ಇಲ್ಲ, ನಾನೆಂಬುದಿಲ್ಲ. ತಾನೇ ತಾನಾದುದು. ಬಯಲು ಬಯಲ ಕೂಡಿದ ಹಾಗೆ ಮಾತು ಮಾತ ಕಲಿವಹಾಗೆ ಪರಶಿವ ಲಿಂಗದಲ್ಲಿ ನಿಜದೃಷ್ಟಿ ಕಂಗೊಂಡ ವೇಳೆ ಗುಹ್ಯಕ್ಕೆ ಗುಹ್ಯ ಗೋಪ್ಯಕ್ಕೆ ಗೋಪ್ಯ ರಹಸ್ಯಕ್ಕೆ ರಹಸ್ಯ, ಇದ ಗುಹೇಶ್ವರನೇ ಬಲ್ಲನಲ್ಲದೆ ಕಣ್ಣಾಗೆಟ್ಟಣ್ಣಗಳೆತ್ತ ಬಲ್ಲರು ನೋಡಾ.

(೨) ಅಯ್ಯಾ ಎರಡು ನೇತ್ರವು ಒಂದಾದ ಭಾಳ ನೇತ್ರವು ಇಷ್ಟಲಿಂಗ ಗೋಳಕಕ್ಕೆ ಕೂಟ ಒಂದು ಲಿಂಗ ಎರಡಾದ ಪ್ರಾಣಲಿಂಗ ಸ್ಥಳಂಗಳಿಗೆ ಎರಡು ನೇತ್ರವು ಕುಚವ ಹಿಡಿಯಲಿಕ್ಕೆ ಈ ಕುಚವೆರಡು ಗುಹ್ಯ ಒಂದು ಇದು ತ್ರಿಕೂಟವೆಂಬ ಹೆಸರಾಯಿತ್ತು. ಆ ತ್ರಿಕೂಟ ಶಾಂಭವಪುರ ಮಧ್ಯವಲ್ಲಿ ಘನ ಮಹಾ ನಿಷ್ಕಳ ಜ್ಯೋತಿರ್ಲಿಂಗವು ತಾನು ಏಕ ಸಮರಸ ವಾದಬಳಿಕ ತನುತ್ರಯ ವಿಕಾರವ ಹೊದ್ದಲಾ ಗದು. ಇಂತು ಹರ ಗುರು ವಾಕ್ಯವ ಮೀರಿ ಹೊದ್ದಿವಡೆ ಮೀಸಲ ಓಗರವ ನಾಯಿ ಮುಟ್ಟಿದಂತೆ ಆಯಿತ್ತು. ಆ ಆತ್ಮ ಪದಾರ್ಥವು ಲಿಂಗಕ್ಕೆ ಸಲ್ಲದು. ಅವರು ಮಾಡುವ ಉಪಚಾರಗಳು ಲಿಂಗಕ್ಕೆ ಸಲ್ಲದು. ಅವರ ತೆರನೆಂತಾಯಿತ್ತೆಂಪಡೆ ಜನ್ಮ ದರಿದ್ರನು ನಿಕ್ಷೇಪವ ಕಂಡು ಹೋಗಲಾ

ಡಿಸಿ ದಿಗಿಲು ಬಿದ್ದು ಸತ್ತಂತಾಯಿತ್ತು. ಅಂಥ ನಿರ್ಭಾಗ್ಯನ ದುರ್ಮರಣವ ಕಂಡು ನಮ್ಮ ಶರಣರು ಅನಾಚಾರ ಅಕ್ರಿಯೆ ಅಜ್ಞಾನಗಳ ಹೊದ್ದದೆ ಸರ್ವಾಂಗವ ನಿಜ ಗುರು ಲಿಂಗ ಜಂಗಮದಲ್ಲಿ ನಿಕ್ಷೇಪವ ಮಾಡಿ ಅವಿರಳಾನಂದದಿಂದ ನಿರಾಳವಾಗಿ ಮನ್ಮಥ ರತಿ ಎಂಬ ಜಡಪಾಶದಲ್ಲಿ ಬೀಳದೆ ಅಕ್ಷಯ ಸುಖಿಗಳಾದರು ನೋಡಾ ಗುಹೇಶ್ವರ ಲಿಂಗದಲ್ಲಿ.

(೩) ಅಯ್ಯಾ ಅವಸ್ಥಾತ್ರಯವ ಬಿಟ್ಟು ಇಷ್ಟಲಿಂಗದ ಗರ್ಭದಲ್ಲಿ ಕಾಯವ ನಿಕ್ಷೇಪವ ಮಾಡಿದ ಬಳಿಕ ಕಾಲನ ಭಯವಿಲ್ಲ. ಆ ಏಕಾಂತ ವಾಸ ಜ್ಯೋತಿರ್ಲಿಂಗ ಸಂಧಾನದಿಂದ ಸಮರಸವಾಗಲು ಕರ್ಮದ ಭಯವಿಲ್ಲ. ತ್ರಿವಿಧಾಂಗ ತ್ರಿವಿಧ ಲಿಂಗಾರ್ಪಿತದಿಂದ ಸಂಧಿಸಿದ ಬಳಿಕ ಕಾಲ ಕಾಮ ಕರ್ಮಂಗಳ ತಾ ಮುಟ್ಟ ನಿಲ್ಲದೆ ವಿಷಯ ಸುಖಕ್ಕೆ ಮೆಚ್ಚಿ ಆ ಮೂವರ ಕಾಲಕೆಳಗೆ ತಾವು ಬಿದ್ದು ಮಹಾ ದುಃಖಕ್ಕೆ ಒಳಗಾದರು. ಆ ವಿಷಗಾಳಿ ಮಹಾ ಕೆಟ್ಟದು. ಅದೆಂತೆಂದೊಡೆ ಆ ವಿಷಗಾಳಿ ಸೋಂಕಲು ಹರಿ ಹತ್ತು ಭವವನೆತ್ತಿದ. ಅಜನ ಶಿರ ಹೋಯಿತ್ತು. ಇಂದ್ರನ ಮೈ ಕೆಟ್ಟಿತ್ತು, ಚಂದ್ರನು ಕ್ಷಯರೋಗಿಯಾದನು. ದಿನಕರನ ನೇತ್ರ ಹೋಯಿತ್ತು. ಮುನೀಂದ್ರರು ಮರುಳಾಗಿ ಹೋದರು. ಮನು ಮಾಂಧಾತೃಗಳು ಮಂದಮತಿಗಳಾದರು. ದೇವ ದಾನವ ಮಾನವರು ಮಡಿದು ಹೋದರು. ಅದ ನೋಡಿ ಕಂಡು ಕೇಳಿ ನಮ್ಮ ಶರಣರು ವಿಷಗಾಳಿ ತಮ್ಮನ್ನು ಸೋಂಕದಂತೆ ಶಾಂಭವ ಪುರದ ಮಧ್ಯದಲ್ಲಿ ನಿಂದು ನಿರ್ಣಯವೆಂಬ ಶಸ್ತ್ರದಿಂದೆ ವಿಷಗಾಳಿಯ ಭೇದಿಸಿ ನಿಜಾಚರಣೆಯಲ್ಲಿ ನಿಂದು ಅಕ್ಷಯ ಸುಖಿಗಳಾದರು ನೋಡಾ ಗುಹೇಶ್ವರ ಲಿಂಗದಲ್ಲಿ ಸಿದ್ಧರಾಮಯ್ಯ ಎಂದು ಪ್ರಭು ಸ್ವಾಮಿಗಳು ನಿರೂಪವ ಕೊಡುತಿರ್ದರು ನೋಡಾ ಸಂಗನ ಬಸವೇಶ್ವರಾ.

(೪) ಗುರುತತ್ವದಲ್ಲಿ ಹುಟ್ಟಿ ಶಿವತತ್ವದಲ್ಲಿ ಬೆಳೆದು ಪರತತ್ವದಲ್ಲಿ ಮಗ್ನವಾದ ಶರಣಂಗೆ ಕಾಯವಳಿದು ನಿರ್ವಯಲಾದಡೇನು? ಕಾಯ ಸಮಾಧಿ, ಕರಣಸಮಾಧಿ, ಭಾವಸಮಾಧಿಯನೆಯ್ದ ಬಲ್ಲರೆ ಅದು ನಿಜ ಸಮಾಧಿ ಕೇಳಾ ಸಿದ್ಧರಾಮಯ್ಯ.

(೫) ಸ್ವಸ್ಥಾನ ಸ್ವಸ್ಥಿರದನುಪಮ ಮಂಟಪದೊಳಗೆ ನಿತ್ಯನಿರಂಜನ ಪ್ರಭೆಯು ಬೆಳಗು ಶಿವಯೋಗದನುಭಾವ ಏಕಾರ್ಥವಾಗಿ ಗುಹೇಶ್ವರಾ ನಿಮ್ಮ ಶರಣನು ಉಪಮಾತೀತವಾಗಿರ್ದನು.

(೬) ಜಗದಗಲ ಮಂಟಪಕ್ಕೆ ಮುಗಿಲಗಲ ಮೇಲುಕಟ್ಟಿನಲ್ಲಿ ವಿಚಿತ್ರವ ನೋಡುತ್ತೆ ನೋಡುತ್ತೆ ಧ್ಯಾನ ವಿಶ್ರಾಂತಿಯಲ್ಲಿ ದಿಟ ದಿಟ ವೆಂಬುದೊಂದು ದರುಶನವ ನೋಡುತ್ತ ಗಗನ ಗಂಭೀರದಲ್ಲಿ ಉದಯ ವಾಯಿತ್ತ ಕಂಡೆ ಗುಹೇಶ್ವರ ಲಿಂಗವು ತಾನಾಗಿ.

(೭) ವಿಳು ತಾಳದ ಮೇಲೆ ಕೇಳುವ ಸುನಾದ ಸ್ಥೂಲಸೂಕ್ಷ್ಮ ಕೈಲಾಸದ ರಭಸ ಗಂಗೆ ವಾಳುಕಸಮು ರುದ್ರರ ತಿಂಥಿಣಿ, ಗಗನ ಗಂಭೀ ರದ ಶಿವಸ್ತುತಿಯು ನೋಡಾ. ನೋಡಲು ಪಿಂಡ ಬ್ರಹ್ಮಾಂಡವಾಯಿತ್ತು ಅಖಂಡಿತ ನಿರಾಳ ಗುಹೇಶ್ವರಾ.

(೮) ಬಂದು ಬಾರದು, ಹೊಂದಿಯೂ ಹೊಂದದು, ನಿಂದು ನಿಲ್ಲದು. ಪರಿಯ ನೋಡಾ. ಅಖಂಡಿತ ಚರಿತ ಏನೇನೆಂದುಪಮಿಸುವೆ? ನವಖಂಡ ಪೃಥ್ವಿಯನೊಳಕೊಂಡ ಬಯಲು ಅಗಮ್ಯ ಸಂಯೋಗದ ಸಮಾಧಿಯಲ್ಲಿ ಗುಹೇಶ್ವರ ಲಿಂಗವನೇನೆಂದುಪಮಿಸುವೆ?

(೯) ಆಕಾಶವ ಮುಟ್ಟದು. ಎಡೆಯುಲ್ಲೊಂದು ರೂಪಿಲ್ಲ. ಭಾವ ವೆಂಬ ಜ್ಞಾನವೇ ನಿವಾಸ, ನಿಲವೇ ಭಿತ್ತಿ, ನಿರಹಂಕಾರವೇ ಶಿಖರ, ಮಹದಹಂಕಾರವೇ ಶೃಂಗಾರ ಕಳಸ. ಸಹಸ್ರ ಪತ್ರದ ನವ ಕಮಲವೇ ಸಿಂಹಾಸನ. ನಿತ್ಯವೇ ಮಲಗು. ನಿಜವೆಂಬ ವಿಸ್ತಾರದಲ್ಲಿ ನಿತ್ಯ ನಿರಾಳ ವೆಂಬ ಮಹಾ ಘನವು ಬಂದು ಮೂರ್ತಿಗೊಳಲು ಕಾಯದ ಕಣ್ಣೆ ಕಾಣ ಬಾರದು. ಮನದ ಮುಂದೆ ಅಳವಡದು. ಭಾವದ ಬಗೆಗೆ ಮೈದೋ ರದು. ಬಸವಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾ ದಕ್ಕೆ ನಮೋ ನಮೋ ಎಂಬೆನು.

(೧೦) ಎನ್ನ ಗಂಡ ಬರಬೇಕೆಂದು ಆನು ಎನ್ನಂತ ರಂಗವೆಂಬ ಮನೆಯ ತೆರಹುಮಾಡಿ ಅಷ್ಟದಳವೆಂಬ ಓವರಿಯೊಳಗೆ ನಿಜನಿವಾಸ